ಅಂತರ ಭಾರತೀಯ ಪುಸ್ತಕ ಮಾಲೆ

ಕಥಾ ಭಾರತೀ

# ಉರ್ದು ಕಥೆಗಳು

(ಭಾಗ—1)

ಕೃಷ್ಣ ಚಂದರ್
ರಾಜೇಂದ್ರಸಿಂಗ್ ಬೇಡಿ
ಇಸ್ಮತ್ ಚುಗ್ತಾಯಿ

ಅನುವಾದ:
ಬಸವರಾಜ ಪುರಾಣಿಕ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮೊದಲ ಮುದ್ರಣ: 1973 (ಶಕ 1895)
ದ್ವಿತೀಯ ಮುದ್ರಣ: 1991 (ಶಕ 1912)

ರೂ. **20.00**

*Original Title in Urdu* : URDU AFSANE

*by* Krishna Chander, Rajender Singh Bedi and Ismat Chugtai

*Kannada Translation* : URDU KATHEGALU (BHAGA-1)

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ 110 016,
ಇವರಿಂದ ಪ್ರಕಟಿತ

# ಮುನ್ನುಡಿ

ಉರ್ದೂ ಸಾಹಿತ್ಯದ ಮೂರು ಪ್ರಮುಖ ಸೆಲೆಗಳಿವೆ—ಸಂಸ್ಕೃತ ಮತ್ತು ಪ್ರಾಕೃತದ ಸೆಲೆ, ಅರಬ್ಬಿ ಮತ್ತು ಫಾರ್ಸಿಯ ಸೆಲೆ ಮತ್ತು ಇಂಗ್ಲಿಷ್ ಹಾಗು ಇತರ ಯುರೋಪಿಯನ್ ಭಾಷೆಗಳ ಸೆಲೆಗಳು. ಉರ್ದೂ ಸಾಹಿತ್ಯದ ಏಷ್ಯಾ ಖಂಡದ ಪರಂಪರೆಯಲ್ಲಿ, ಜಾನಪದ ಕತೆಗಳ, ಸಾಹಿತ್ಯಾತ್ಮಕ ಚರಿತ್ರೆಗಳ ಮತ್ತು ಮಹಾಕಾವ್ಯಗಳಲ್ಲಿ ಹರಡಿಕೊಂಡಿರುವ ಆಖ್ಯಾಯಿಕೆಗಳ ಮಧ್ಯೆ ಮಧ್ಯೆ ಸಣ್ಣ ಸಣ್ಣ ಕತೆಗಳ ಅಮೂಲ್ಯವಾದ ಸಂಪತ್ತು ದೊರೆಯುತ್ತದೆ.

ಜೀವನ ಮತ್ತು ಸಾಹಿತ್ಯಗಳಲ್ಲಿ ಸಂಪ್ರದಾಯಗಳ ಹಾಗು ಹೊಸ ಪರಿವರ್ತನೆಗಳ ಒಂದು ಅನುಕ್ರಮವು ದೊರೆಯುತ್ತದೆ. ಇವೆರಡರ ನಡುವೆ ಒಮ್ಮೆ ತಿಕ್ಕಾಟ ನಡೆಯುತ್ತದೆ, ಮತ್ತೊಮ್ಮೆ ಸೇರಿಕೆ ಮತ್ತು ಹೊಂದಿಕೆಗಳು ಕಂಡುಬರುತ್ತವೆ. ಈಗಿನ ಉರ್ದೂ ಸಣ್ಣ ಕತೆಗಳ ನಿಧಿಯು ಹಳೆಯ ಸಂಪ್ರದಾಯಗಳ ಮತ್ತು ಹೊಸ ಪರಿವರ್ತನೆಗಳ ಐಶ್ವರ್ಯದಿಂದ ತುಂಬಿದೆ.

ನಾವು ಸಂಶೋಧಕ ದೃಷ್ಟಿಯನ್ನು ದೂರದವರೆಗೆ ಬೀರಿದರೆ ನಮಗೊಂದು ಅಂಶವು ಕಂಡುಬರುತ್ತದೆ: ಕ್ರಿ. ಶ. 1857ರ ಮೊದಲು ಕೂಡ, ಉತ್ತರ ಮತ್ತು ದಕ್ಷಿಣ ಹಿಂದೂಸ್ತಾನಗಳ ಪ್ರಮುಖ ಸ್ಥಳಗಳಿಂದ ಪ್ರಕಟವಾಗುತ್ತಿದ್ದ ವಾರಪತ್ರಿಕೆಗಳಲ್ಲಿ ಸುದ್ದಿಗಳಿಗೂ ಕೂಡ ಕತೆಯ ರೂಪವನ್ನು ಕೊಡಲಾಗುತ್ತಿತ್ತು ಮತ್ತು ಆಗಾಗ ಸಣ್ಣ ಪುಟ್ಟ ಕತೆಗಳನ್ನು ಕೂಡ ಪ್ರಕಟಿಸಲಾಗುತ್ತಿತ್ತು. ಈ ಕ್ಷೇತ್ರದಲ್ಲಿ ಮಾಸ್ಟರ್ ರಾಮ ಚಂದರ್ ದೆಹಲ್ವಿ, ಎಡಿಟರ್ "ಫವಾಯಿದುನ್ ನಾಜರೀನ್" ಅವರ ಸಾಹಿತ್ಯ ಸೇವೆಗಳ ಹಿರಿಮೆ ಬಹಳ ದೊಡ್ಡದು.

ಇಪ್ಪತ್ತನೆಯ ಶತಮಾನದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಪ್ರಕಟವಾದ ಸಣ್ಣ ಕತೆಗಳು, ಉರ್ದೂ ಸಣ್ಣ ಕತೆಗಳ ರೂಪ-ರೇಷೆ, ಶಿಲ್ಪ-ಕೌಶಲ ಮತ್ತು ಯೋಜನೆ-ರಚನೆಗಳ ಮೇಲೆ, ಸ್ಪಷ್ಟವಾದ ರೀತಿಯಲ್ಲಿ ಪ್ರಭಾವ ಬೀರಿವೆ. ಈ ಶತಮಾನದ ಪ್ರಾರಂಭದಲ್ಲಿ ರೊಮ್ಯಾಂಟಿಸಿಜಮ್‌ನ ಪ್ರಬಲತೆ ಇತ್ತು. ಮೊದಲನೆಯದಾಗಿ, ಪಶ್ಚಿಮದಲ್ಲಿಯೂ ರೊಮ್ಯಾಂಟಿಕ್ ಪ್ರವೃತ್ತಿಗೆ ಮೊದಲು ಖ್ಯಾತಿಯು ಪ್ರಾಪ್ತವಾಯಿತು ಮತ್ತು ಅದರ ಪ್ರಭಾವವು ಉರ್ದೂ ಸಣ್ಣ ಕತೆಗಳ ಮೇಲೆ ಬಿದ್ದಿತು. ಎರಡನೆಯ ಅಂಶವೆಂದರೆ ಉರ್ದೂ ಸಾಹಿತ್ಯದ ಸಾಮಾನ್ಯ ಪ್ರವೃತ್ತಿಯು ಮತ್ತು ವಿಶೇಷವಾಗಿ ಆಖ್ಯಾಯಿಕೆ ಮತ್ತು ಕಥೆಗಳ ಒಲವು ರೊಮ್ಯಾಂಟಿಕ್ ಇರುತ್ತದೆ. ರೊಮ್ಯಾಂಟಿಸಿಜಮ್‌ದ ನಂತರ ಯುರೋಪ್‌ದಲ್ಲಿ ಕೂಡ ವಾಸ್ತವವಾದದ ಪ್ರವೃತ್ತಿಯು ಆರಂಭವಾಯಿತು ಮತ್ತು ಉರ್ದೂ ಕಥಾ ಜಗತ್ತಿನ ಮೇಲೆಯೂ ಅದರ ಪ್ರಭಾವ ಬಿದ್ದಿತು. ವಾಸ್ತವವಾದವು ರೊಮ್ಯಾಂಟಿಸಿಜಮ್‌ಅನ್ನು ತಪ್ಪು ಅಕ್ಷರದಂತೆ ಅಳಿಸಿಬಿಟ್ಟಿತು ಎಂಬ ಮಾತು

ನಿಜವಲ್ಲ. ಇಪ್ಪತ್ತನೆಯ ಶತಮಾನದಲ್ಲಿ ಬಹಳ ಸಮಯದವರೆಗೆ ರೊಮ್ಯಾಂಟಿಸಿಜಮ್ ಹಾಗು ವಾಸ್ತವವಾದಗಳ ಧಾರೆಗಳು ಜೊತೆಜೊತೆಗೆ ಸಮಾಂತರವಾಗಿ ಹರಿಯುತ್ತಿದ್ದವು. ಕೆಲವು ಸಲ ಒಂದು ಪ್ರವೃತ್ತಿಯು ಇನ್ನೊಂದು ಪ್ರವೃತ್ತಿಯ ಮೇಲೆ ಪ್ರಭಾವವನ್ನು ಬೀರಿದ್ದೂ ಉಂಟು.

ಸಾಹಿತ್ಯ ಮತ್ತು ಜೀವನಗಳ ಮಧ್ಯೆ ದಾಟಿಹೋಗಲು ಅಸಾಧ್ಯವಾದ ಕಬ್ಬಿಣದ ಗೋಡೆಗಳು ಇರುವದಿಲ್ಲ. ಕಲಾವಿದನು ಅನುಭವದ ಆಳಗಳಲ್ಲಿ ಮುಳುಗಿದರೆ ಅಲ್ಲಿ ರೊಮ್ಯಾಂಟಿಸಿಜಮ್‌ನ ಹೊಸ ಗಹನತೆ ಮತ್ತು ಹೊಸ ವಿಚಾರಗಳು ದೊರೆಯುತ್ತವೆ ಎಂಬ ಒಂದು ದೃಷ್ಟಿಯನ್ನು ವಿಶಾಲಗೊಳಿಸುವ ಅಂಶವೂ ಇದೆ. ವಾಸ್ತವಿಕತೆಗಳ ಆಳವಾದ ಸ್ತರಗಳು ತಮ್ಮೊಳಗೆ ರೊಮ್ಯಾಂಟಿಕ್ ಮತ್ತು ಆಶ್ಚರ್ಯಕಾರಿ ಶಕ್ತಿಗಳನ್ನು ತುಂಬಿಕೊಂಡಿರುತ್ತವೆ ಮತ್ತು ಈ ಹೊಸ ಪ್ರಕಟನೆಯು ಓದುಗರ ರೊಮ್ಯಾಂಟಿಕ ಅನುಭವಗಳನ್ನು ಜಾಗೃತಗೊಳಿಸುತ್ತದೆ. ಇದೇ ರೀತಿ ರೊಮ್ಯಾಂಟಿಸಿಜಮ್ ಜೀವನದ ಒಂದು ನಿಶ್ಚಲವಾದ ವಾಸ್ತವಿಕತೆಯಾಗಿದೆ. ಓರ್ವ ವಿಶಾಲ ದೃಷ್ಟಿಯ ಕಲಾವಿದನು ರೊಮ್ಯಾಂಟಿಸಿಜಮ್‌ದ ಲೋಕದಲ್ಲಿ ವಾಸ್ತವಿಕತೆಗಳ ವೈಭವವನ್ನು ಕಾಣುತ್ತಾನೆ ಮತ್ತು ತೋರಿಸುತ್ತಾನೆ.

ಉರ್ದೂ ಸಣ್ಣ ಕಥಾ-ಲೇಖನದ ಜಗತ್ತನ್ನು ಇನ್ನೊಂದು ಮಹತ್ವದ, ಜಾಗತಿಕ ಆಂದೋಲನವು ಪ್ರಭಾವಿತ ಮಾಡಿದೆ. ಇದಕ್ಕೆ ಪ್ರಗತಿಶೀಲ ಆಂದೋಲನವೆನ್ನುತ್ತಾರೆ. ನಿಜ ಹೇಳಬೇಕೆಂದರೆ ಜಾಗತಿಕ ಸಾಹಿತ್ಯದಲ್ಲಿ ಈ ಆಂದೋಲನದ ಪ್ರಾರಂಭವು ರಶಿಯಾದ ಕ್ರಾಂತಿಯ ಮೊದಲೇ ಆಗಿತ್ತು. ರಶಿಯನ್, ಫ್ರೆಂಚ್, ಇಂಗ್ಲಿಷ್ ಮತ್ತು ಉರ್ದೂ ಸಾಹಿತ್ಯಗಳಲ್ಲಿ ನಮಗೆ ಕ್ರಿ. ಶ. 1918ರ ಮೊದಲೇ ಪ್ರಗತಿಶೀಲತೆಯ ಪ್ರವೃತ್ತಿಗಳು ಸಿಗುತ್ತವೆ. ಆದರೆ ಪ್ರಗತಿಶೀಲ ಆಂದೋಲನದ ಶಾಸ್ತ್ರೋಕ್ತ ರೂಪ-ಲಕ್ಷಣಗಳು ರಶಿಯಾದಲ್ಲಿಯ ಕಮ್ಯುನಿಜಮ್‌ದ ಕ್ರಾಂತಿಯ ನಂತರವೇ ಬೆಳೆದವು ಎಂಬುದರಲ್ಲಿ ಕೂಡ ಯಾವ ಸಂಶಯವು ಇಲ್ಲ. ಈ ಆಂದೋಲನದ ಮುಖಂಡರು ಶೋಧಕ, ಸಾಮಾಜಿಕ, ಕ್ರಾಂತಿಕಾರಕ ವಾಸ್ತವವಾದವನ್ನು ಸಾಹಿತ್ಯಕ್ಕೆ ಆವಶ್ಯಕವೆಂದು ನಿಶ್ಚಿತಗೊಳಿಸಿದರು. ಉರ್ದೂ ಸಣ್ಣ ಕತೆಗಳಲ್ಲಿ ಈ ಆಂದೋಲನದ ಧ್ವನಿಯು ಪೂರ್ತಿ ಸಂಭ್ರಮದಿಂದ ಕ್ರಿ. ಶ. 1936ರಿಂದ ಕೇಳಿಸಹತ್ತಿತು ಮತ್ತು ಇಂದಿನವರೆಗು ಪ್ರಗತಿಶೀಲ ಕತೆಗಾರರು ತಮ್ಮ ಸೃಜನಾತ್ಮಕ ಕಾರ್ಯವನ್ನು ಜಾರಿಯಲ್ಲಿ ಇಟ್ಟಿದ್ದಾರೆ. ಆದರೆ ಕ್ರಿ. ಶ. 1936ರಿಂದ 1947ರವರೆಗೆ ಪ್ರಗತಿಶೀಲತೆಯ ಬಹಳಷ್ಟು ಹಸುರು ಪಯಿರು ಬೆಳೆಯಿತು. ಈ ಅವಧಿಯಲ್ಲಿ ಮತ್ತು ಆ ನಂತರ ಆಂದೋಲನಕ್ಕೆ ವಿವಿಧ ದಿಕ್ಕುಗಳಿಂದ ವಿರೋಧಗಳು ಕೂಡ ಕಂಡುಬಂದವು.

ಪ್ರಗತಿಶೀಲ ಆಂದೋಲನದಲ್ಲಿ ಸೇರಿದ ಎಲ್ಲ ಕತೆಗಾರರು ಕಮ್ಯುನಿಸ್ಟ್ ಅಥವಾ

ಟ್ರೇಡ್ ಯೂನಿಯುನಿಜಮ್‌ದ ವಿಚಾರಗಳನ್ನು ಹೊಂದಿದ್ದಿಲ್ಲ. ಉರ್ದೂ ಪ್ರಗತಿಶೀಲತೆಯ ಸ್ಪೆಕ್ಟ್ರಂ (spectrum) ಹೊಸ ಹೊಸ ಬಣ್ಣಗಳ ವಸ್ತುವಾಗಿತ್ತು. ಆದರೆ ನಾವು ಪ್ರಗತಿಶೀಲ ಸಾಹಿತಿಗಳ ಮತ್ತು ಕವಿಗಳ ಮಧ್ಯೆ ಕೆಲವು ಸಾಮಾನ್ಯ ಮೌಲ್ಯಗಳನ್ನು ಕೂಡ ಕಾಣುತ್ತೇವೆ. ಒಂದು ಮೂಲ ತತ್ವದ ವಿವರಣೆಯಂತು ಮೊದಲೇ ಆಗಿದೆ. ಅದರ ಹೊರ್ತಾಗಿ ನಮ್ಮ ಪ್ರಗತಿಶೀಲ ಸಾಹಿತಿಗಳು ಮತ್ತು ಕವಿಗಳು ರಾಷ್ಟ್ರಪ್ರೇಮಿ, ಸ್ವಾತಂತ್ರ್ಯಪ್ರೇಮಿ, ಸರ್ವಾಧಿಕಾರತ್ವ-ವಿರೋಧಿ ಮತ್ತು ಫ್ಯಾಸಿಜಮ್-ವಿರೋಧಿಗಳಾಗಿದ್ದರು. ಇದೇ ಪ್ರಭಾವವು ನಮ್ಮ ಉರ್ದೂ ಕತೆಗಾರರ ಮೇಲೆಯೂ ಉಂಟಾಗಿತ್ತು.

ಪ್ರಗತಿಶೀಲತೆಯ ಉಚ್ಛ್ರಾಯ ಕಾಲದಲ್ಲಿಯ ಉರ್ದೂ ಕಥಾ ಲೇಖನದಲ್ಲಿ ಮನೋವಿಶ್ಲೇಷಣೆಯ ಗಾಢವಾದ ಪ್ರವೃತ್ತಿಯು ಕೂಡ ಹೊರಹೊಮ್ಮಿತು. ಬಳಿಕ ಮನೋವಿಶ್ಲೇಷಣೆಯ ಪ್ರವೃತ್ತಿಯು ಸಂಕೇತಗಳ ಜೊತೆ ಸೇರಿ "ನವ್ಯತೆ"ಯ ಮತ್ತೊಂದು ಪ್ರವೃತ್ತಿಯನ್ನು ಹುಟ್ಟಿಸಿತು. "ನವ್ಯತೆ"ಯು ಒಂದು ಸೀಮೆಯ ವರೆಗೆ ಪ್ರಗತಿಶೀಲತೆಯ ದುಸ್ಸಹ ಗುಂಪುಗಾರಿಕೆಗಳ ಪ್ರತಿಕ್ರಿಯೆಯೂ ಆಗಿದೆ. ಪ್ರಸ್ತುತ ತರುಣ ಉರ್ದೂ ಕತೆಗಾರರ ಒಂದು ದೊಡ್ಡ ಸಂಖ್ಯೆಯು "ನವ್ಯತೆ"ಯ ಬಗ್ಗೆ ಅತಿಯಾಗಿ ಮೋಹಿತವಾಗಿದೆ. ಆದರೆ ಇತ್ತೀಚೆಗೆ ನಾವು ಉರ್ದೂ ಕಥಾ ಲೇಖನದಲ್ಲಿ ಮೇಲೆ ಉಲ್ಲೇಖಿಸಿದ ಪ್ರವೃತ್ತಿಗಳ ಮತ್ತು ಅಂದೋಲಗಳ ಸೃಜನಾತ್ಮಕ ಮಾದರಿಗಳನ್ನು ಕೂಡ ನೋಡುತ್ತಲಿದ್ದೇವೆ.

ಉರ್ದೂ ಕಥಾ ಲೇಖನದ ಪ್ರಾತಿನಿಧಿಕ ಕಲಾವಿದರ ಮಾಲಿಕೆಯಲ್ಲಿ ನಾವು ಸಜಾದ್ ಹೈದರ್ ಎಲ್ದರಮ್, ನಿಯಾಜ್ ಫತೆಹಪುರಿ, ಲತೀಫ್ ಅಹಮದ್ ಅಕ್ಬರಾಬಾದಿ, ಹಿಜಾಬ್ ಇಮ್ತಿಯಾಜ ಅಲಿ ತಾಜ್, ಮಜನೂನ್ ಗೋರಖಪುರಿ, ಮಿರ್ಜಾ ಅದೀಬ್, ಕುರ್ರತುಲ್-ಐನ್-ಹೈದರ್ ಮುಂತಾದವರ ಹೆಸರು ಕಂಡು ಬರುತ್ತವೆ. ಇವರ ಹೊರ್ತಾಗಿ ಇನ್ನೂ ಶ್ರೇಷ್ಠ ಕತೆಗಾರರು ರೊಮ್ಯಾಂಟಿಕ್ ಪದ್ಧತಿಯಲ್ಲಿ ಬರೆಯುತ್ತಲಿದ್ದಾರೆ. ವಾಸ್ತವವಾದದ ಕಾರವಾನದ ಸರ್ದಾರರು ಪ್ರೇಮಚಂದ ಅವರಾಗಿದ್ದಾರೆ. ಅವರ ಜೊತೆಜೊತೆಗೆ ಸುದರ್ಶನ, ಅಜಂ ಕರೇವಿ, ಆಲಿ ಅಬ್ಬಾಸ್ ಹುಸೇನಿ ಮತ್ತು ಅನೇಕ ಒಳ್ಳೆಯ ಕತೆಗಾರರು ಉರ್ದೂ ಜಗತ್ತಿನಲ್ಲಿ ಅರಳಿದರು. ವಾಸ್ತವವಾದದ ಅಂದೋಲನವು ರೊಮ್ಯಾಂಟಿಕ್ ಲೇಖಕರನ್ನು ಕೂಡ ಪ್ರಭಾವಿತಗೊಳಿಸಿತು ಮತ್ತು ಅವರಲ್ಲಿ ಎಷ್ಟೋ ಜನರು ಒಂದಿಲ್ಲ ಒಂದು ಮಿತಿಯವರೆಗೆ ಸಾಮಾಜಿಕ ವಾಸ್ತವವಾದದತ್ತ ಒಲಿದರು—ಎಂಬುದು ಕುತೂಹಲ ಕಾರಕ ವಿಷಯುವಾಗಿದೆ. ವಾಸ್ತವವಾದದ ಪ್ರೇಮಚಂದರು ಜಿಜ್ಞಾಸೆಯ ದೃಷ್ಟಿಯಿಂದ ಪ್ರಗತಿಶೀಲ ಅಂದೋಲನದಲ್ಲಿ ಸಹಕರಿಸಹತ್ತಿದರು. ಪ್ರೇಮಚಂದ್ ಮತ್ತು ಆಲಿ ಅಬ್ಬಾಸ್ ಹುಸೇನಿ ಇವರ ಶ್ರೇಷ್ಠ ಕತೆಗಳು, ಈ ಇಬ್ಬರೂ ಕಲಾವಿದರು ಪ್ರಗತಿ

ಶೀಲತೆಯ ಧಾರೆಯಲ್ಲಿಯು ಕೂಡ ತಮ್ಮ ಕಲೆಯ ನೌಕೆಗಳನ್ನು ನಡೆಯಿಸಿದರೆಂಬ ಮಾತನ್ನು ಸಿದ್ಧಮಾಡುತ್ತವೆ.

ಉರ್ದೂ ಕಥಾ ಲೋಕದಲ್ಲಿ ಪ್ರಗತಿಶೀಲ ಅಂದೋಲನವು ಅನೇಕ ಒಳ್ಳೆಯ ಕಲಾವಿದರನ್ನು ಹುಟ್ಟಿಸಿತು. ಉದಾಹರಣೆಗೆ, ಸಾದತ್ ಹಸನ್ ಮಂಟೊ, ಅಕ್ತರ್ ಹುಸೇನ್ ರಾಯಪುರಿ, ರಷೀದ್ ಜಹಾನ್, ಕೃಷ್ಣ ಚಂದರ್, ರಾಜೇಂದ್ರಸಿಂಗ್ ಬೇಡಿ, ಇಸ್ಮತ್ ಚುಗ್ತಾಯಿ, ಅಹಮದ್ ನದೀಮ್ ಕಾಸ್ಮಿ, ಮಮತಾಜ ಮುಫ್ತಿ, ಹಯಾತುಲ್ಲಾ ಅನ್‌ಸಾರಿ ಮುಂತಾದವರು. ಅದರ ಅತಿರಿಕ್ತ ಪ್ರಗತಿಶೀಲ ಅಂದೋಲನದ ಉಚ್ಛ್ರಾಯ ಕಾಲದಲ್ಲಿ ಪ್ರಗತಿಶೀಲತೆಯು ಕೇವಲ ಉರ್ದೂ ಸಾಹಿತ್ಯ ಮತ್ತು ಕಾವ್ಯಗಳ ಮೇಲೆ ಕವಿದದ್ದಷ್ಟೇ ಅಲ್ಲ, ನನ್ನ ತಿಳುವಳಿಕೆಯ ಪ್ರಕಾರ ಇತರ ಭಾರತೀಯ ಭಾಷೆಗಳ ಸಾಹಿತ್ಯ ಮತ್ತು ಕಾವ್ಯಗಳ ಭೂಮಿಯ ಮೇಲೆಯೂ ಪ್ರಗತಿಶೀಲ ಮೋಡಗಳು ಕವಿದು ಮಳೆಗರೆದವು.

ಸಾಹಿತ್ಯ ಮತ್ತು ಜೀವನದಲ್ಲಿ ಪ್ರವೃತ್ತಿಗಳ ಅವಧಿ ಮತ್ತು ಪಂಥಗಳ ನಿರ್ದಿಷ್ಟ ಮತ್ತು ಕಠಿನವಾದ ಸೀಮೆಗಳನ್ನು ಸ್ಥಾಪಿಸಲು ಸಾಧ್ಯವಿಲ್ಲ. ನನ್ನ ಅಭಿಪ್ರಾಯದಲ್ಲಿ, ಉರ್ದೂ ಕಥಾ ರಚನೆಯಲ್ಲಿ ಮನೋವಿಶ್ಲೇಷಣೆ-ಒಂದು ಮಿತಿಯವರೆಗೆ "ನವ್ಯತೆ"ಯ-ಅಂದೋಲನವು, ಪ್ರಗತಿಶೀಲತೆಯ ಉಚ್ಛ್ರಾಯ ಕಾಲದಲ್ಲಿಯೇ ಪ್ರಾರಂಭವಾಗಿತ್ತು. ಅಷ್ಟೇ ಅಲ್ಲದೆ, ಎಷ್ಟೋ ಪ್ರಮುಖ ಪ್ರಗತಿಶೀಲ ಕತೆಗಾರರು ಮಾನವನ ಮನೋವ್ಯಾಪಾರದ ಪದರು ಮತ್ತು ಕೋನಗಳ ಮೇಲೆ ವಿಚಾರ ಪ್ರಚೋದಕ ಬೆಳಕು ಬೀರಹತ್ತಿದ್ದರು. ಈ ಸಂದರ್ಭದಲ್ಲಿ ರಾಜೇಂದ್ರಸಿಂಗ್ ಬೇಡಿ, ಸಾದತ್ ಹಸನ್ ಮಂಟೊ, ಕೃಷ್ಣ ಚಂದ್ರ, ಇಸ್ಮತ್ ಚುಗ್ತಾಯಿ ಮತ್ತು ಮಮತಾಜ ಮುಫ್ತಿ ಇವರ ಕತೆಗಳು ಮನೋವಿಶ್ಲೇಷಣೆಯ ಶ್ರೇಷ್ಠ ಕೃತಿಗಳೆಂದು ಹೇಳಬಹುದು. ಮನೋವಿಶ್ಲೇಷಣೆಯ ವಿಶೇಷ ಅಂದೋಲನದ ನಾಯಕರು ಹಸನ್ ಅಸ್ಕರಿ ಮತ್ತು ಮುಹ್‌ಸನ್ ಅಜೀಮ್ ಆಬಾದಿ ಅವರು. ಹಸನ್ ಅಸ್ಕರಿಯವರು ನಿಗೂಢ ಪ್ರಜ್ಞೆಯಿಂದ ಹೊರಬೀಳುವ ಅಲೆಗಳನ್ನು ಪ್ರಜ್ಞೆಯ ಸ್ತರದ ಮೇಲೆ ಸೂಕ್ಷ್ಮ ರೀತಿಯಲ್ಲಿ ವ್ಯಕ್ತಮಾಡುತ್ತಾರೆ. "ಹರಾಂಜಾದಿ" ಕತೆಯು ಇದರ ಉತ್ಕೃಷ್ಟ ನಿದರ್ಶನವಾಗಿದೆ. ಆದರೆ ಮುಹಸನ್ ಅಜೀಂ ಆಬಾದಿ ಅವರು ಮಾನಸಿಕ ಪ್ರಶ್ನೆಗಳನ್ನು ಕತೆಯ ಶೀರ್ಷಕವನ್ನಾಗಿ ಮಾಡಿ ಕತೆಯನ್ನು ಬರೆಯುತ್ತಾರೆ. ಅವರ ಪ್ರಸಿದ್ಧ ಕತೆ, "ಅನೋಖಿ ಮುಸ್ಕುರಾಹಟ್" ಪ್ರಾತಿನಿಧಿಕ ಸ್ಥಾನವನ್ನು ಪಡೆದಿದೆ. ಅದು ಷಾಹದ್ ಅಹಮದ್ ದೆಹಲ್ವಿ ಅವರು ಸಂಪಾದಿಸಿದ "ರೇಜಾ-ಎ-ಮೀನಾ"ದ ಒಂದು ಪ್ರಮುಖ ಕತೆಯಾಗಿದೆ. ಹಾಗೆ ನೋಡಿದರೆ ಕುರ್ರತುಲ್-ಐನ್-ಹೈದರ್ ಅವರ ಪ್ರಾರಂಭಿಕ ಕತೆಗಳಲ್ಲಿ ಕೂಡ ನಿಗೂಢ ಪ್ರಜ್ಞೆ ಮತ್ತು ಪ್ರಜ್ಞೆಗಳ ಅಲೆಗಳ ಪ್ರಾಕೃತಿಕ ಅಸಂಬದ್ಧತೆ ಕಂಡು ಬರುತ್ತದೆ. ಆದರೆ ಅವು ಆ ಮರುಳಿನಿಂದ ಅರುವನ್ನು (ಅರಿವನ್ನು) ಮೂಡಿಸುತ್ತವೆ.

ಕತೆಗಾರನು ಪ್ರಾಪಂಚಿಕ ಮತ್ತು ಮಾನಸಿಕ—ಎರಡೂ ಜಗತ್ತುಗಳಲ್ಲಿ ಸಾಕಷ್ಟು ನಿಷ್ಣಾತನಾಗಿದ್ದುಕೊಂಡು, ಸ್ವಭಾವ ನಿರೂಪಣೆ, ಘಟನೆಗಳ ಅಭಿವ್ಯಕ್ತಿ ಮತ್ತು ಸನ್ನಿವೇಶಗಳ ರಚನೆಗಳಲ್ಲಿ ಆ ಅನುಭವವನ್ನು ಕಲಾತ್ಮಕವಾಗಿ ಉಪಯೋಗಿಸಿಕೊಂಡಾಗ ಮಾತ್ರ ಅವನು ಯಶಸ್ವಿಯಾಗುತ್ತಾನೆ ಎಂಬ ವಿಷಯವು ಸ್ಪಷ್ಟವಾಗಿದೆ. ನನ್ನ ದೃಷ್ಟಿಯಲ್ಲಿ ರಾಜೇಂದ್ರಸಿಂಗ್ ಬೇಡಿಯವರಿಗೆ ಮನೋವಿಶ್ಲೇಷಣೆಯ ಉಚ್ಚ-ತಮ ಕಲೆಯು ಸಾಧಿಸಿದೆ. ಅವರು ಮನೋವ್ಯಾಪಾರಗಳನ್ನು ಕಲಾತ್ಮಕ ದೃಷ್ಟಿಯಿಂದ ಬಳಸಿಕೊಳ್ಳುತ್ತಾರೆ. ಹಾಂ, ಅವರ ಒಂದೆರಡು ಕತೆಗಳಲ್ಲಿ ಸ್ವಲ್ಪ ಶಿಥಿಲತೆ ಉಳಿದುಕೊಂಡಿದೆ. ಮುಹಸನ್ ಅಜೀಂ ಆಬಾದಿಯವರ ಕಲೆಯಲ್ಲಿ ಅವರ ಮನಶ್ಶಾಸ್ತ್ರದ ಜ್ಞಾನವು ಅನೇಕ ಸಲ ಮೇಲುಗೈಯಾಗಿರುತ್ತದೆ. ಆದರೆ ಮಂಟೊ, ಮಮತಾಜ್ ಮುಫ್ತಿ, ಕೃಷ್ಣ ಚಂದ್ರ ಮತ್ತು ಇಸ್ಮತ್ ಚುಗ್ತಾಯಿ ಇವರು ಬೀಳುವದು ಏಳುವದು ಬಹಳ ಕಡಮೆ.

ಅವಗಾಹನೆಯಲ್ಲಿರುವ ಸಂಕಲನದಲ್ಲಿ ಕೃಷ್ಣ ಚಂದರ್ ಬೇಡಿ ಮತ್ತು ಇಸ್ಮತ್ ಇವರ ಕತೆಗಳು ಸೇರಿವೆ. ಆದ್ದರಿಂದ ಅವರ ಬಗ್ಗೆ ನಾನು ಇನ್ನಿಷ್ಟು ವಿವರವಾಗಿ ಹೇಳಬಯಸುತ್ತೇನೆ. ಅದಕ್ಕೂ ಮೊದಲು, ಇತರ ಶ್ರೇಷ್ಠ ಕಲಾವಿದರ ಸೃಜನಾತ್ಮಕ ಶಕ್ತಿಯು ಮೃತವೂ ಆಗಿಲ್ಲ; ಅಲ್ಲದೆ ಅವರ ಪರಂಪರೆಯ ಗಾಢವಾದ ಪ್ರಭಾವಗಳು ಉರ್ದೂ ಕಥಾ-ಲೇಖನದ ಜಗತ್ತಿನಿಂದ ಅಳಿಸಿಯೂ ಹೋಗಿಲ್ಲ—ಎಂದು ನಾನು ಹೇಳಬಯಸುತ್ತೇನೆ. ಇಂದು ಕೂಡ, ಹೊಚ್ಚಹೊಸತನ, ಹೆಚ್ಚಳ ಮತ್ತು ವ್ಯಕ್ತಿತ್ವಗಳನ್ನು ಪ್ರಕಟಮಾಡುತ್ತ ಕುರ್ರತುಲ್-ಐನ್-ಹೈದರ್, ಖಾಜಿ ಅಬ್ದುಸ್ ಸತ್ತಾರ್, ಗಿಯಾಷ ಅಹಮದ್ ಗದ್ದಿ, ಅಬ್ಬಾಸ ಅಹಮದ್ ಗದ್ದಿ ಮತ್ತು ಅನೇಕ ಹೊಸಬರಾದ ಒಳ್ಳೆಯ ಕತೆಗಾರರು ಉರ್ದೂ ಕಥಾಕೋಶಕ್ಕೆ ಅತ್ಯಮೂಲ್ಯವಾದ ಕೊಡುಗೆಯನ್ನು ಸಲ್ಲಿಸುತ್ತಿದ್ದಾರೆ. ನವ್ಯತೆಯ ಪಂಥದಲ್ಲಿಯು ಕೂಡ ಕೆಲವು ಒಳ್ಳೆಯ ಕತೆಗಾರರು ಅರಳುತ್ತಿದ್ದಾರೆ. ಅವರು ಸಾಂಕೇತಿಕ ಮತ್ತು ವಿಶ್ಲೇಷಣಾತ್ಮಕವಾದ ಕತೆಗಳನ್ನು ಹೊಸಹೊಸ ತಂತ್ರಗಳಲ್ಲಿ ಮತ್ತು ಶೈಲಿಗಳಲ್ಲಿ ಬರೆಯುತ್ತಿದ್ದಾರೆ.

ಕೃಷ್ಣ ಚಂದರ ಅಧಿಕ ಕತೆಗಳನ್ನು ಬರೆದಿದ್ದಾರೆ. ಅವರ ಪ್ರಾರಂಭಿಕ ಕತೆಗಳು ರೊಮ್ಯಾಂಟಿಸಿಜಮ್‌ನಲ್ಲಿ ಮುಳುಗಿಬಿಟ್ಟಿವೆ. ಆದರೆ ಪ್ರಾರಂಭದಲ್ಲಿಯೂ, ಈ ರೊಮ್ಯಾಂಟಿಕ್ ಪದ್ಧತಿಯ ಕಲಾವಿದನು ವಾಸ್ತವಿಕತೆಯ ಮೇಲೆಯೂ ಆಳವಾದ ದೃಷ್ಟಿಯನ್ನು ಇಟ್ಟಿದ್ದನೆಂಬುದು ಸ್ಪಷ್ಟವಾಗಿ ಕಾಣಿಸುತ್ತದೆ. ಉತ್ಕೃಷ್ಟರಾದ ಮತ್ತು ಸಮರ್ಥರಾದ ಲೇಖಕರು ರೊಮ್ಯಾಂಟಿಕ್ ಮತ್ತು ವಾಸ್ತವಿಕತೆಗಳ ಸಂಘಟನೆ ಮತ್ತು ಸಂಯೋಜನೆಯಿಂದ ಸಾಹಿತ್ಯದಲ್ಲಿ ಚಮತ್ಕಾರಗಳನ್ನು ಮಾಡಬಲ್ಲರೆಂಬುದು ನನ್ನ ವಿಚಾರವಾಗಿದೆ.

ಕೃಷ್ಣ ಚಂದರ್ ಕೇವಲ ಉರ್ದೂ ಭಾಷೆಯ ಪ್ರಖ್ಯಾತ ಕತೆಗಾರರಷ್ಟೇ ಅಲ್ಲ,

ಅವರ ಕತೆಗಳ ಒಂದು ದೊಡ್ಡ ಸಂಖ್ಯೆಯು ಶ್ರೇಷ್ಠ ಶ್ರೇಣಿಯಲ್ಲಿ ಗಣಿಸಲು ಅರ್ಹವಾಗಿದೆ. ಕೃಷ್ಣ ಚಂದರ ಅತಿಕೋಮಲ ಸ್ವಭಾವದ, ಸ್ವಪ್ನಶೀಲ, ಮಾನವ ಪ್ರೇಮ ಮತ್ತು ವಾಸ್ತವಿಕತೆಯ ಪರಿಚಿತರಾದ ಕತೆಗಾರರಿರುವರು. ಅವರ ಶೈಲಿಯಲ್ಲಿ ಓಘವಿದೆ. ಅದರಲ್ಲಿ ಮಾಧುರ್ಯ, ಬೆಳಕು ಮತ್ತು ಸುವಾಸನೆಗಳು ಇವೆ. ಆದರೆ ಅವು ಜೀವನದ ಚಲುಮೆಗಳ ಪ್ರತಿಬಿಂಬವನ್ನು ಕೂಡ ಉತ್ತಮ ರೀತಿಯಲ್ಲಿ ರಚಿಸುತ್ತವೆ.

ರಾಜೇಂದ್ರಸಿಂಗ್ ಬೇಡಿಯವರ ಕಲೆಯು ಅತ್ಯಂತ ಕತ್ತಿದ್ದು ಮತ್ತು ಸಜಲವಾದದ್ದು. ಅವರ ಕತೆಗಳಲ್ಲಿ ಗಾಂಭೀರ್ಯ ಮತ್ತು ಗಹನತೆಗಳು ಕಂಡುಬರುತ್ತವೆ. ಅವರು ಕೂಡ ಉಚ್ಚ ಮಟ್ಟದ ವಾಸ್ತವವಾದಿಗಳು. ಆದರೆ ಅವರ ಪ್ರಗತಿಶೀಲ ಮತ್ತು ಮಾನವ ಪ್ರೇಮಗಳ ವಾಸ್ತವಿಕತಾ ಪ್ರವೃತ್ತಿಯು ಕಲೆಯ ಸೀಸೆಯೊಳಗಿಂದ ಮದ್ಯದ ಬಟ್ಟಲನ್ನು ಕರಗಿಸುವಂಥ ಮದಿರೆಯಾಗಿ ಹೊರಬೀಳುತ್ತದೆ. ಬೇಡಿಯವರ ಕತೆಗಳ ಶೈಲಿ ಅವರ ವ್ಯಕ್ತಿತ್ವ ಮತ್ತು ಮನೋಭಾವಗಳಿಗೆ ಅನುಗುಣವಾಗಿದೆ. ಅವರು ಮನೋವಿಶ್ಲೇಷಣೆಯನ್ನು ಬಹಳ ಕಲಾತ್ಮಕವಾಗಿ ಮಾಡುತ್ತಾರೆ. ಕೃಷ್ಣ ಚಂದರ ಅವರ ಶೈಲಿಯು ಬೇಡಿಯವರ ಶೈಲಿಗಿಂತ ಭಿನ್ನವಾಗಿದೆ. ಆದರೆ ಎರಡೂ ಶೈಲಿಗಳು ಕತೆಯ ವಿಷಯ ಹಾಗು ಮನೋಭಾವಗಳಿಂದ ಒಂದೇ ಶ್ರುತಿಯ ಆವಶ್ಯಕತೆಗಳನ್ನು ಪೂರ್ತಿಗೊಳಿಸುತ್ತವೆ.

ಇಸ್ಮತ್ ಚುಗ್ತಾಯಿ ಅವರು ಕೂಡ ಉಚ್ಚಮಟ್ಟದ ಕತೆಗಾರ್ತಿಯಾಗಿದ್ದಾರೆ. ಅವರು ಉರ್ದೂ ಸಾಹಿತ್ಯಕ್ಕೆ ಅತ್ಯಂತ ಶ್ರೇಷ್ಠ ಕತೆಗಳನ್ನು ನೀಡಿದ್ದಾರೆ. ಅವರ ಸಾಮಾಜಿಕ ನಿರೀಕ್ಷಣೆಯು ಬಹಳ ಆಳವಾಗಿರುತ್ತದೆ. ಅವರು ಮನೋವೈಜ್ಞಾನಿಕ ಪ್ರಶ್ನೆಗಳಿಂದಲೂ ಪರಿಚಿತರಿದ್ದಾರೆ. ಅವರ ಶೈಲಿಯಲ್ಲಿ ಹೆಚ್ಚು ವೈಯಕ್ತಿಕತೆಯು ಕಂಡುಬರುತ್ತದೆ. ಅವರು ಹೆಂಗಸರ ಭಾಷೆಯನ್ನು ಬಳಸುವದರಲ್ಲಿ ಉಪಮಾತೀತರು.

ಕೃಷ್ಣ ಚಂದರ, ಬೇಡಿ ಮತ್ತು ಇಸ್ಮತ್ ಅವರು ಉರ್ದೂ ಕಥಾ ಲೋಕದ ಮಗಮಗಿಸುವ ಹೂಗಳು. ಅವರ ಶ್ರೇಷ್ಠ ಕತೆಗಳ ಆಯ್ಕೆಯಲ್ಲಿ ಅಭಿಪ್ರಾಯ-ಭೇದ ಉದ್ಭವಿಸುವ ಸಾಧ್ಯತೆಯಿದೆ. ಅದೇನೇ ಇರಲಿ, ಈ ಸಂಕಲನದ ಸಣ್ಣ ಕತೆಗಳು ಉರ್ದೂ ಭಾಷೆಯ ಮುವ್ವರು ಶ್ರೇಷ್ಠ ಕಲಾವಿದರ ಪ್ರಥಮ ಶ್ರೇಣಿಯ ಕತೆಗಳಾಗಿವೆ.

ಅಖ್ತರ್ ಒರೆನ್ವಿ

# ಪರಿವಿಡಿ

# ಲೇಖಕರ ಪರಿಚಯ

## ಕೃಷ್ಣ ಚಂದರ್

ಕೃಷ್ಣ ಚಂದರ್ ಅವರು ಉರ್ದು ಭಾಷೆಯ ಪ್ರಸಿದ್ಧ ಕಥೆಗಾರರು. ಅವರ ಕಥೆಗಳ ಪೈಕಿ ಅನೇಕವು ಉತ್ಕೃಷ್ಟ ಕಥೆಗಳೆಂದು ಮನ್ನಣೆ ಪಡೆದಿವೆ. ಜೀವನದಲ್ಲಿ ನಂಬಿಕೆ ಮತ್ತು ಮಾನವ ಸಹಾನುಭೂತಿ ಇವರ ಕಥೆಗಳಲ್ಲಿ ಕಂಡುಬರುವ ಮುಖ್ಯ ಲಕ್ಷಣಗಳು. ಇವರ ಶೈಲಿ ಬಿಗಿಯಾಗಿದ್ದು ನಿರಂತರವಾಗಿ ಪ್ರವಹಿಸುತ್ತದೆ. ಇದರಲ್ಲಿ ಸಿಹಿ, ಬೆಳಕು ಹಾಗೂ ಸುಗಂಧ ಕಂಡುಬರುತ್ತದೆ. ಜೀವನದ ಕಹಿ ಅನುಭವ ಗಳನ್ನೂ ಸಹ ಅವರು ಅಷ್ಟೇ ಸತ್ವಪೂರ್ಣವಾಗಿ ಚಿತ್ರಿಸಬಲ್ಲರು.

## ರಾಜೇಂದ್ರಸಿಂಗ್ ಬೇಡಿ

ರಾಜೇಂದ್ರಸಿಂಗ್ ಬೇಡಿಯುವರೂ ಸಹ ಉರ್ದು ಭಾಷೆಯ ಒಬ್ಬ ಮಹತ್ವಪೂರ್ಣ ಕಥೆಗಾರರಾಗಿದ್ದಾರೆ. ಅವರ ಕಲೆ ಅಲಂಕಾರಪೂರ್ಣವಾದುದು ಮತ್ತು ಕಥೆಗಳು ಮಹತ್ವಪೂರ್ಣವಾದುವು. ಅವರ ಕಥೆಗಳು, ಶೈಲಿ ಹಾಗೂ ಸ್ವಭಾವ ವಾಸ್ತವಿಕತೆಗೆ ಸಮೀಪವಾಗಿವೆ. ಮಾನವನ ವಾಸ್ತವಿಕ ಜೀವನದ ಚಿತ್ರಣ ಅದ್ಭುತವಾಗಿರುತ್ತದೆ.

## ಇಸ್ಮತ್ ಚುಗ್ತಾಯಿ

ಇಸ್ಮತ್ ಚುಗ್ತಾಯಿ ಒಬ್ಬ ಅಗ್ರಗಣ್ಯ ಕಥೆಗಾರರು. ಈಕೆ ಉರ್ದು ಭಾಷೆಯಲ್ಲಿ ಅನೇಕ ಉತ್ತಮ ಕಥೆಗಳನ್ನು ಬರೆದಿದ್ದಾರೆ. ಮಾನವ ಜೀವನದ ಬಗ್ಗೆ ಇವರು ಆಳವಾಗಿ ಅಧ್ಯಯನ ಮಾಡಿರುವರಲ್ಲದೆ ಮನೋವಿಜ್ಞಾನದ ಬಗ್ಗೆ ಸಾಕಷ್ಟು ತಿಳಿದು ಕೊಂಡಿದ್ದಾರೆ ಇವರ ಶೈಲಿ ಬಹಳ ರಮ್ಯವಾಗಿದ್ದು ಹೆಂಗಸರ ನಡೆ-ನುಡಿ, ಆಚಾರ-ವಿಚಾರಗಳನ್ನು ಚಿತ್ರಿಸುವಲ್ಲಿ ಸಾಟಿ ಇಲ್ಲವಾಗಿದ್ದಾರೆ.

ಕೃಷ್ಣ ಚಂದರ್, ರಾಜೇಂದ್ರಸಿಂಗ್ ಬೇಡಿ ಮತ್ತು ಇಸ್ಮತ್ ಚುಗ್ತಾಯಿ ಉರ್ದು ಕಥಾ ಪ್ರಪಂಚದ ಸುಂದರ ಪುಷ್ಪಗಳಾಗಿದ್ದಾರೆ. ಈ ಸಂಗ್ರಹದಲ್ಲಿ ಸೇರಿಸಿರುವ ಈ ಮೂರು ಮಹಾಕಲಾಕಾರರ ಕಥೆಗಳು ಉರ್ದು ಭಾಷೆಯ ಹಾಗೂ ಸಾಹಿತ್ಯದ ಪ್ರತಿಬಿಂಬವಾಗಿವೆ.

# ಪೂರ್ಣಿಮೆಯ ರಾತ್ರಿ

ಏಪ್ರಿಲ್ ತಿಂಗಳು. ಬಾದಾಮಿ ಗಿಡದ ರೆಂಬೆಗಳ ತುಂಬೆಲ್ಲ ಹೂವೇ ಹೂವು. ಹವೆಯಲ್ಲಿ ಹಿಮಗಡ್ಡೆಯಂಥ ಚಳಿಯಿದ್ದರೂ ಕೂಡ ವಸಂತ ಋತುವಿನಂತಹ ಸೌಂದರ್ಯವು ತಲೆದೋರಿತ್ತು. ಉನ್ನತ ಉನ್ನತ ಶಿಖರಗಳ ಕೆಳಗೆ ಮಕಮಲ್‌ದಂಥ ದೂಬ್‌ಹುಲ್ಲಿನ ಮೇಲೆ ಅಲ್ಲಲ್ಲಿ ಹಿಮಗಡ್ಡೆಯ ತುಣುಕುಗಳು ಶ್ವೇತ ಪುಷ್ಪಗಳ ಹಾಗೆ ಅರಳಿದ್ದು ಕಂಡುಬರುತ್ತಿದ್ದವು. ಮುಂದಿನ ತಿಂಗಳವರೆಗೆ ಈ ಶ್ವೇತ ಪುಷ್ಪಗಳು ಇದೇ ದೂಬ್‌ದಲ್ಲಿ ಸೇರಿಬಿಡುವವು ಹಾಗೂ ದೂಬ್ ಹುಲ್ಲಿನ ಬಣ್ಣವು ದಟ್ಟ ಹಸಿರಾಗುವುದು. ಬಾದಾಮಿಯ ಟೊಂಗೆಗಳ ಮೇಲೆ ಹಸಿರು-ಹಸಿರಾದ ಬಾದಾಮಿಗಳು ಪುಖರಾಜದ ಹರಳುಗಳ ಹಾಗೆ ಥಳಥಳಿಸಹತ್ತುವವು. ನೀಲಿ ನೀಲಿಯಾದ ಪರ್ವತಗಳ ಮುಖಗಳ ಮೇಲಿಂದ ಮಂಜು ಚೆದುರುತ್ತ ಹೋಗುವದು. ಹಾಗು ಈ ಸರೋವರದ ಸೇತುವೆಯ ಆಚೆಯ ಕಾಲುದಾರಿಯ ಧೂಳು ಕೋಮಲ ಕುರಿಗಳ ಚಿರಪರಿಚಿತ "ಬಾ-ಆ"ದಿಂದ ಸ್ವರಕಂಪಿತವಾಗುವದು. ನಂತರ ಈ ಉನ್ನತ ಶಿಖರಗಳ ಕೆಳಗೆ ಕುರುಬರು ಕುರಿಗಳ ಮೈಮೇಲೆ ಶರದೃತುವಿಗೆ ಬೆಳೆದ ದಪ್ಪವಾದ ಉಣ್ಣೆಯನ್ನು ಕತ್ತರಿಸುತ್ತ ಹೋಗುವರು ಮತ್ತು ಗೀತೆಗಳನ್ನು ಹಾಡುತ್ತಲಿರುವರು.

ಆದರೆ ಇನ್ನೂ ಏಪ್ರಿಲ್ ತಿಂಗಳು. ಇನ್ನೂ ಶಿಖರಗಳ ಮೇಲೆ ಎಲೆಗಳು ಮೊಳಕೆಯೊಡೆದಿಲ್ಲ. ಇನ್ನೂ ಪರ್ವತಗಳ ಮೇಲೆ ಹಿಮಗಡ್ಡೆಯ ಮಂಜು ಇದೆ. ಇನ್ನೂ ಕಾಲುದಾರಿಯ ಎದೆಯು ಕುರಿಗಳ ಸ್ವರದಿಂದ ಝೇಂಕೃತಗೊಂಡಿಲ್ಲ. ಇನ್ನೂ ಸಮಲದ ಸರೋವರದ ಮೇಲೆ ಕಮಲದ ದೀಪಗಳು ಹೊತ್ತಿಕೊಂಡಿಲ್ಲ. ಸರೋವರದ ದಟ್ಟ ಹಸಿರು ವರ್ಣದ ನೀರು ತನ್ನ ಎದೆಯೊಳಗೆ ವಸಂತ ಋತುವಿನ ಆಗಮನವಾಗುತ್ತಲೆ ಒಮ್ಮಿಂದೊಮ್ಮೆಲೆ ತನ್ನ ಸ್ತರದಲ್ಲಿ ಒಂದು ಸರಳ, ಮೃದುಲ ನಗೆಯ ಹಾಗೆ ಅರಳುವ ಲಕ್ಷೋಪಲಕ್ಷ ರೂಪಗಳನ್ನು ಅಡಗಿಸಿಕೊಂಡಿತ್ತು. ಸೇತುವೆಯ ದಂಡೆಗುಂಟ ಬಾದಾಮಿ ಗಿಡಗಳ ಟೊಂಗೆಗಳ ಮೇಲೆ ನೊಗ್ಗುಗಳು ಮಿಂಚಹತ್ತಿದ್ದವು. ಏಪ್ರಿಲ್ ತಿಂಗಳ ಕೊನೆಯ ರಾತ್ರಿಯಲ್ಲಿ—ಅಂದು ಬಾದಾಮಿ ಹೂಗಳು ಎಚ್ಚರಗೊಂಡು, ಅರಳಿ, ವಸಂತ ಋತುವಿನ ಸೂಚಕವಾಗಿ ನೀರಿನಲ್ಲಿ ತಮ್ಮ ನೌಕೆಗಳನ್ನು ತೇಲಿಸುತ್ತವೆ—ಹೂವುಗಳ ಪುಟ್ಟ ಪುಟ್ಟ ಗೃಹ-ನೌಕೆಗಳು ನೀರಿನ ಸ್ತರದ ಮೇಲೆ ನೃತ್ಯಮಾಡುತ್ತ ವಸಂತ ಋತುವಿನ ಪ್ರತೀಕ್ಷೆಯಲ್ಲಿವೆ.

ಸೇತುವೆಯ ಮೇಲಿನ ಕಂಬಕ್ಕೊರಗಿ ನಾನು ಸಾಕಷ್ಟು ಸಮಯದಿಂದ ಅವಳ

ನಿರೀಕ್ಷೆ ಮಾಡುತ್ತಲಿದ್ದೆ. ಮೂರನೆಯ ಪ್ರಹರ ಕಳೆದು ಸಂಜೆ ಆಗಿತ್ತು. ಭುಲ್ಲರ್ ಸರೋವರಕ್ಕೆ ಹೋಗುವ ಹೌಸ್-ಬೋಟ್‌ಗಳು ಸೇತುವೆಯ ಕಲ್ಲಿನ ಕಮಾನುಗಳ ಮಧ್ಯದಿಂದ ಹಾಯ್ದು ಹೋಗಿದ್ದವು. ಮತ್ತು ಈಗ ಅವು ಕ್ಷಿತಿಜದ ರೇಖೆಯಮೇಲೆ ಕಾಗದದ ನೌಕೆಗಳ ಹಾಗೆ ಅಶಕ್ತ ಮತ್ತು ಅಸಹಾಯಕವಾಗಿ ಕಾಣಿಸುತ್ತಿದ್ದವು. ಸಂಜೆಯ ಕೆಂಬೆಳಗು ಕೆಂಪಿನಿಂದ ಕಪ್ಪುಗೊಳ್ಳಹತ್ತಿತು. ಕಾಲುದಾರಿಯು ಸಹ ಬಾದಾಮಿ ಗಿಡಗಳ ಸಾಲುಗಳ ಮುಸುಕಿನಲ್ಲಿ ಮಲಗಿಕೊಂಡಿತು. ನಂತರ ರಾತ್ರಿಯ ನೀರವತೆಯಲ್ಲಿ ಮೊದಲ ತಾರೆ ಯಾವದೋ ಪಥಿಕನ ಗೀತದಂತೆ ಮಿಣುಕಿತು. ವಾಯುವಿನ ಶೀತಲತೆಯು ಅಸಹ್ಯವಾಗುತ್ತ ನಡೆಯಿತು ಮತ್ತು ಮೂಗಿನ ಹೊರಳೆಗಳು ಅದರ ಹಿಮದಂಥ ಸ್ಪರ್ಶದಿಂದ ನಿಶ್ಚೇಷ್ಟವಾದವು.

ಆ ನಂತರ ಚಂದ್ರೋದಯವಾಯಿತು.

ಆ ನಂತರ ಅವಳು ಬಂದಳು.

ಬೇಗ ಬೇಗ ಹೆಜ್ಜೆ ಇಡುತ್ತ, ಅಲ್ಲ ಕಾಲುದಾರಿಯ ಇಳಿಜಾರಿನ ಮೇಲೆ ಓಡುತ್ತ ಅವಳು ಸರಿಯಾಗಿ ನನ್ನ ಸಮೀಪಕ್ಕೆ ಬಂದು ನಿಂತಳು. ನಂತರ ಮೆಲ್ಲಗೆ, " ಹಾಯ್ ! " ಅಂದಳು.

ಅವಳ ಶ್ವಾಸೋಚ್ಛ್ವಾಸವು ತೀವ್ರತೆಯಿಂದ ನಡೆದಿತ್ತು. ಮಧ್ಯದಲ್ಲಿ ತಡೆಯುತ್ತಿತ್ತು. ಪುನಃ ತೀವ್ರತೆಯಿಂದ ನಡೆಯುತ್ತಿತ್ತು. ಅವಳು ನನ್ನ ಭುಜವನ್ನು ತನ್ನ ಬೆರಳುಗಳಿಂದ ಸ್ಪರ್ಶಿಸಿದಳು ಮತ್ತು ತನ್ನ ತಲೆಯನ್ನು ಅಲ್ಲಿ ಇಟ್ಟಳು. ಅವಳ ಕಪ್ಪು ಕೇಶದ ದಟ್ಟವಾದ ಅರಣ್ಯವು ನನ್ನ ಆತ್ಮದ ಒಳಗೆ ದೂರದವರೆಗೆ ಹರಡುತ್ತ ನಡೆಯಿತು. ಬಳಿಕ ನಾನು ಅವಳನ್ನು ಕೇಳಿದೆ :

" ಮೂರನೆಯ ಪ್ರಹರದಿಂದ ನಿನ್ನ ದಾರಿ ಕಾಯುತ್ತಿರುವೆನು."

ಅವಳು ನಕ್ಕು ಹೇಳಿದಳು : " ಈಗ ರಾತ್ರಿಯಾಗಿದೆ. ಬಹಳ ಒಳ್ಳೆಯ ರಾತ್ರಿ ಇದು."

ಅವಳು ತನ್ನ ಕೋಮಲವಾದ, ಪುಟ್ಟ ಕೈಯನ್ನು ನನ್ನ ಇನ್ನೊಂದು ಭುಜದ ಮೇಲೆ ಇಟ್ಟಳು...., ಬಾದಾಮಿಯ ಹೂವು ಜೊಂಪಿಟ್ಟ ಒಂದು ರೆಂಬೆ ಬಾಗಿ ನನ್ನ ಭುಜದ ಮೇಲೆ ಒರಗಿದ ಹಾಗೆ.

ಸಾಕಷ್ಟು ಹೊತ್ತು ಅವಳು ಸುಮ್ಮನಿದ್ದಳು. ಸಾಕಷ್ಟು ಹೊತ್ತು ನಾನು ಕೂಡ ಸುಮ್ಮನಿದ್ದೆ. ನಂತರ ಅವಳು ತನ್ನಷ್ಟಕ್ಕೆ ತಾನೆ ನಕ್ಕಳು. ಬಳಿಕ ಹೇಳಿದಳು : "ನನಗೆ ಅಂಜಿಕೆ ಆಗುತ್ತದೆಂದು ಹೇಳಿದ್ದರಿಂದ ನನ್ನ ಅಬ್ಬಾ ಕಾಲುದಾರಿಯ ತಿರುವಿನ ತನಕ ನನ್ನ ಜೊತೆ ಬಂದಿದ್ದರು. ಇಂದು ನಾನು ನನ್ನ ಗೆಳತಿ ರಾಜ್ಜೆಯ ಮನೆಯಲ್ಲಿ ಮಲಗಬೇಕಾಗಿದೆ, ಮಲಗುವದಿಲ್ಲ ಜಾಗರಣೆ ಮಾಡಬೇಕು. ಯಾಕೆಂದರೆ ಬಾದಾಮಿಯ ಮೊದಲ ಹೂವುಗಳ ಸಂತೋಷದಲ್ಲಿ ನಾವೆಲ್ಲ ಗೆಳತಿಯರು ಇಡೀ

ರಾತ್ರಿ ಜಾಗರಣೆ ಮಾಡಿ ಹಾಡುವೆವು. ಇದಕ್ಕಾಗಿಯೆ ಮೂರನೆಯ ಪ್ರಹರದಿಂದ ಈ ಕಡೆ ಬರುವ ತಯಾರಿಯನ್ನು ಮಾಡುತ್ತಲಿದ್ದೆ. ಆದರೆ ದನದ ಹಕ್ಕೆಯನ್ನು ಹಸನು ಮಾಡುವದಿತ್ತು. ಮತ್ತು ನಿನ್ನೆ ಒಗೆದಿದ್ದ ಈ ಉಡುಪು ಇನ್ನೂ ಒಣಗಿರಲಿಲ್ಲ. ಇದನ್ನು ಬೆಂಕಿಯ ಮೇಲೆ ಒಣಗಿಸಿದೆ. ಮತ್ತು ಅಮ್ಮಾ ಅಡವಿಯಿಂದ ಕಟ್ಟಿಗೆ ತರಲು ಹೋಗಿದ್ದಳು. ಇನ್ನೂ ಬಂದಿರಲಿಲ್ಲ. ಆಕೆ ಬರದವರೆಗೆ ನಾನು ಮುಸುಕಿನ ಜೋಳದ ತೆನೆ, ಒಣಗಿದ ಖುಬಾನಿ ಮತ್ತು ಜರದಾಲೂ ಹಣ್ಣುಗಳನ್ನು ನಿಮಗೆ ತರಲು ಹೇಗೆ ಸಾಧ್ಯವಿತ್ತು? ನೋಡಿ, ಇವೆಲ್ಲವನ್ನು ನಿಮಗೆ ತಂದಿದ್ದೇನೆ. ನೀವಂತು ನಿಜವಾಗಿಯೂ ಮುನಿದುಕೊಂಡಿರುವಿರಿ. ನನ್ನ ಕಡೆ ನೋಡಿ, ನಾನು ಬಂದಿದ್ದೇನೆ. ಇಂದು ಪೂರ್ಣಿಮೆಯ ರಾತ್ರಿ. ಬನ್ನಿ, ದಂಡೆಗೆ ಕಟ್ಟಿರುವ ನಾವೆಯನ್ನು ಬಿಚ್ಚಿ ಸರೋವರದಲ್ಲಿ ಅಲೆಯೋಣ." ಅವಳು ನನ್ನ ಕಣ್ಣುಗಳಲ್ಲಿ ಇಣುಕಿ ನೋಡಿದಳು. ನಾನು, ಪ್ರೇಮ ಮತ್ತು ಆಶ್ಚರ್ಯಗಳಲ್ಲಿ ಮುಳುಗಿದ ಅವಳ ಕಣ್ಣಾಲಿಗಳತ್ತ ನೋಡಿದೆ. ಅವುಗಳಲ್ಲಿ ಚಂದ್ರನು ಹೊಳೆಯುತ್ತಿದ್ದ. ಮತ್ತು ಆ ಚಂದ್ರನು ನನಗೆ ಈ ರೀತಿ ಹೇಳುತ್ತಿದ್ದ—"ಹೋಗು, ನಾವೆಯನ್ನು ಬಿಚ್ಚಿ ಸರೋವರದಲ್ಲಿ ಅಲೆದಾಡು. ಇಂದು ಬಾದಾಮಿಯ ಪ್ರಥಮ ಪುಷ್ಪೋತ್ಸವವಿದೆ. ಈ ದಿನ ಅವಳು ನಿನಗಾಗಿ ತನ್ನ ಗೆಳತಿಯರು, ತನ್ನ ತಂದೆ, ತನ್ನ ಪುಟ್ಟ ತಂಗಿ, ತನ್ನ ಅಣ್ಣ—ಎಲ್ಲರನ್ನೂ ವಂಚಿಸಿದ್ದಾಳೆ. ಇಂದು ಪೂರ್ಣಿಮೆಯ ರಾತ್ರಿ. ಬಾದಾಮಿಯ ಶ್ವೇತ ಮತ್ತು ಶೀತಲ ಹೂವುಗಳು ಹಿಮಗಡ್ಡೆಯ ಕೆನ್ನೆಗಳ ಹಾಗೆ ನಾಲ್ಕೂ ಸಿಟ್ಟಿನಲ್ಲಿ ಹಬ್ಬಿಕೊಂಡಿವೆ. ಕಾಶ್ಮೀರದ ಗೀತೆಯು ಅವಳ ಎದೆಗಳಲ್ಲಿ, ಮಗುವಿನ ಹಾಲಿನಂತೆ, ಹೊರಹೊಮ್ಮಿವೆ. ನೀನು ಅವಳ ಕತ್ತಿನಲ್ಲಿ ಮುತ್ತಿನ ಆ ಏಳು ಎಳೆಗಳ ಹಾರವನ್ನು ನೋಡಿದೆಯಾ? ಈ ಕೆಂಪು ಏಳು ಎಳೆ ಹಾರವನ್ನು ಅವಳ ಕೊರಳಲ್ಲಿ ಹಾಕಿ, ಈ ರೀತಿ ಹೇಳಲಾಗಿದೆ—'ನೀನು ಈ ದಿನ ಇಡೀ ರಾತ್ರಿ ಜಾಗರಣೆ ಮಾಡುವೆ. ಕಾಶ್ಮೀರದ ವಸಂತ ಋತುವಿನ ಮೊದಲ ರಾತ್ರಿಯಾದ ಇಂದು ಬೆಳದಿಂಗಳಲ್ಲಿ ಕೇಸರಿಯ ಹೂವು ಅರಳಿದ ಹಾಗೆ, ಕಾಶ್ಮೀರದ ಗೀತೆಗಳು ನಿನ್ನ ಕಂಠದಿಂದ ಅರಳುವುವು. ಇಕೊ, ಈ ಏಳು-ಎಳೆ ಹಾರವನ್ನು ಧರಿಸಿಕೊ.'"

ಚಂದ್ರನು ಇವೆಲ್ಲವನ್ನೂ ಅವಳ ಆಶ್ಚರ್ಯಭರಿತ ಕಣ್ಣಾಲಿಗಳ ಮುಖಾಂತರ ಇಣುಕಿ ನೋಡಿದ. ನಂತರ ಏಕಾಏಕಿ ಯಾವುದೋ ಗಿಡದಲ್ಲಿ ಬುಲ್‌ಬುಲ್ ಪಕ್ಷಿ ಕೂಗಿತು. ದೂರದಲ್ಲಿನ ನೌಕೆಗಳಲ್ಲಿ ದೀಪಗಳು ಬೆಳಗಹತ್ತಿದವು. ಶಿಖರಗಳಾಚೆಯ ಗ್ರಾಮದಲ್ಲಿ ಗೀತೆಗಳ ಮಧ್ಯಮ ಸ್ವರವು ಹೊರಹೊಮ್ಮಿತು. ಗೀತೆ ಮತ್ತು ಮಕ್ಕಳ ಅಟ್ಟಹಾಸವು, ಗಂಡಸರ ಭಾರವಾದ ಧ್ವನಿಗಳು ಮತ್ತು ಮಕ್ಕಳ ಮಧುರ ಚೀತ್ಕಾರಗಳು. ಮಾಳಿಗೆಗಳಿಂದ ಬಮುಕಿನ ಮೆಲ್ಲಮೆಲ್ಲಗೆ ಏಳುತ್ತಿದ್ದ ಹೊಗೆ ಮತ್ತು ಸಂಜೆಯ ಊಟದ ಕಂಪು. ಮೀನ ಮತ್ತು ಅನ್ನ, ಕಡಮ್ ಅದರ ಪಲ್ಯದ

ಮೃದುಲ ಮತ್ತು ಉಪ್ಪಿನ ರುಚಿ. ಹಾಗು ಪೂರ್ಣಿಮೆಯ ರಾತ್ರಿಯ ಪೂರ್ಣ ಯೌವನವು. ನನ್ನ ಕೋಪವನ್ನು ತೊಳೆದುಹಾಕಿತು. ನಾನು ಅವಳ ಕೈಯನ್ನು ನನ್ನ ಕೈಯಲ್ಲಿ ತೆಗೆದುಕೊಂಡು, " ಬಾ, ಸರೋವರಕ್ಕೆ ಹೋಗೋಣ " ಎಂದೆ.

ಸೇತುವೆಯನ್ನು ದಾಟ ಆಯಿತು. ಕಾಲುದಾರಿ ಸವೆಯಿತು. ಬಾದಾಮಿ ಗಿಡಗಳ ಸಾಲುಗಳು ಕೊನೆಗೊಂಡವು. ಸರೋವರದ ಕೆಳ ಪ್ರದೇಶವು ಕಳೆಯಿತು. ಈಗ ನಾವು ಸರೋವರದ ದಂಡೆಯ ಮೇಲೆ ಸಾಗುತ್ತಿದ್ದೆವು. ಪೊದೆಗಳಲ್ಲಿ ಕಪ್ಪೆ ಚರ್‌ಗುಡುತ್ತಿದ್ದವು. ಕಪ್ಪೆ, ಜೀರುಂಡೆ ಮತ್ತು ಜಲಚರಗಳ ಜಿಗಿದಾಟದ ಸದ್ದಿನಲ್ಲಿಯೂ ಒಂದು ಸಂಗೀತವಿತ್ತು. ಒಂದು ಸ್ವಪ್ನಮಯ ವಾತಾವರಣದಲ್ಲಿ ಒರಗಿದ್ದ ಸರೋವರದ ಮಧ್ಯದಲ್ಲಿ ಚಂದ್ರನ ನೌಕೆಯು ಪ್ರೇಮಿಯ ಪ್ರತೀಕ್ಷೆಯಲ್ಲಿ ನಿಶ್ಚೇಷ್ಟ ಮತ್ತು ಮೌನಗೊಂಡು ನಿಂತಿತ್ತು—ಸಾವಿರಾರು ವರ್ಷಗಳಿಂದ ಇದೇ ರೀತಿ ನಿಂತಿತ್ತು. ನನ್ನ ಮತ್ತು ಅವಳ ಪ್ರೇಮದ ಪ್ರತೀಕ್ಷೆಯಲ್ಲಿ, ನಿನ್ನ ಮತ್ತು ನಿನ್ನ ಪ್ರೇಮಿಯ ಮುಗುಳುನಗೆಯ ಪ್ರತೀಕ್ಷೆಯಲ್ಲಿ, ಮಾನವನನ್ನು ಬಯಸುವ ಮಾನವನ ಆಕಾಂಕ್ಷೆಯ ಪ್ರತೀಕ್ಷೆಯಲ್ಲಿ. ಈ ಪೂರ್ಣಿಮೆಯ ಸುಂದರ ನಿರ್ಮಲ ರಾತ್ರಿಯು, ಯಾವಳೊ ಕುಮಾರಿಯ ಅಸ್ಪರ್ಶಿತ ಶರೀರದ ಹಾಗೆ, ಪ್ರೇಮದ ಪವಿತ್ರ ಸ್ಪರ್ಶದ ಪ್ರತೀಕ್ಷೆಯಲ್ಲಿತ್ತು.

ನಾವೆಯನ್ನು ಸರೋವರದ ದಂಡೆಯ ಮೇಲೆಯೇ ಬೆಳೆದ ಖೂಬಾನಿ ಗಿಡಕ್ಕೆ ಕಟ್ಟಲಾಗಿತ್ತು. ಅಲ್ಲಿ ಭೂಮಿಯು ಬಹಳ ಮೃದು ಇತ್ತು. ಬೆಳದಿಂಗಳು ಎಲೆಗಳ ಮರೆಯಿಂದ ಸೂಸಿ ಸೂಸಿ ಬರುತ್ತಿತ್ತು. ಕಪ್ಪೆಗಳು ಮಂದ ಮಂದವಾಗಿ ಹಾಡುತ್ತಿದ್ದವು. ಸರೋವರದ ನೀರು ಪದೇ ಪದೇ ದಂಡೆಯನ್ನು ಮುತ್ತಿಡುತ್ತಿತ್ತು ಮತ್ತು ಪದೇ ಪದೇ ಅದರ ಚುಂಬನಗಳ ಸ್ವರವು ನಮ್ಮ ಕಿವಿಯಲ್ಲಿ ಬೀಳುತ್ತಿತ್ತು. ನಾನು ಎರಡು ಕೈಗಳನ್ನು ಅವಳ ಸೊಂಟದ ಸುತ್ತಲೂ ಹಾಕಿ ಅವಳನ್ನು ಗಾಢವಾಗಿ ಆಲಂಗಿಸಿದೆ. ಸರೋವರದ ನೀರು ಪದೇ ಪದೇ ದಂಡೆಯನ್ನು ಚುಂಬಿಸುತ್ತಿತ್ತು. ಮೊದಲು ನಾನು ಅವಳ ಕಣ್ಣು ಚುಂಬಿಸಿದೆ. ಸರೋವರದ ಸ್ತರದಲ್ಲಿ ಲಕ್ಷೋಪಲಕ್ಷ ಕಮಲಗಳು ಅರಳಿದವು. ನಂತರ ನಾನು ಅವಳ ಕೆನ್ನೆಗೆ ಮುತ್ತಿಟ್ಟೆ. ನಿರ್ಮಲ ವಾಯುವಿನ ಸೆಳೆತಗಳು ಒಮ್ಮೆಲೆ ಎತ್ತರಕ್ಕೇರಿ ನೂರಾರು ಗೀತೆಗಳನ್ನು ಹಾಡಹತ್ತಿದವು. ಬಳಿಕ ನಾನು ಅವಳ ತುಟಿಯನ್ನು ಚುಂಬಿಸಿದೆ. ಲಕ್ಷಗಟ್ಟಲೆ ಮಂದಿರಗಳಲ್ಲಿ, ಮಸೀದೆಗಳಲ್ಲಿ ಹಾಗು ಚರ್ಚ್‌ಗಳಲ್ಲಿ ಪ್ರಾರ್ಥನೆಗಳ ಗದ್ದಲವೆದ್ದಿತು. ಮತ್ತು ಭೂಮಿಯ ಹೂಗಳು, ಆಕಾಶದ ತಾರೆಗಳು ಮತ್ತು ವಾಯುವಿನಲ್ಲಿ ಹಾರಾಡುವ ಗರುಡಗಳು—ಎಲ್ಲ ಸೇರಿ ಕುಣಿಯಹತ್ತಿದವು. ಬಳಿಕ ನಾನು ಅವಳ ಗದ್ದವನ್ನು ಚುಂಬಿಸಿದೆ. ನಂತರ ಅವಳ ಕುತ್ತಿಗೆಗೆ ಮುತ್ತಿಟ್ಟೆ. ಕಮಲಗಳು ಮೊಗ್ಗೆಗಳ ಹಾಗೆ, ಅರಳಲು ಮತ್ತು ಮುದುಡಲು ಆರಂಭಿಸಿದವು. ಗೀತೆಗಳು ಹೊರಹೊಮ್ಮಿ ಮೌನ

ವಾಗುತ್ತ ನಡೆದವು. ಮತ್ತು ನೃತ್ಯವು ಮಂದಗೊಳ್ಳುತ್ತ-ಗೊಳ್ಳುತ್ತ ನಿಂತಿತು. ಈಗ ಅದೇ ಕಪ್ಪೆಗಳ ಧ್ವನಿ ಇತ್ತು. ಅದೇ ಸರೋವರದ ಮೃದುಲ ಮೃದುಲ ಚುಂಬನ. ಮತ್ತು ಯಾವದೊ ವ್ಯಕ್ತಿ ಎದೆಗೆ ಹತ್ತಿಕೊಂಡು ಬಿಕ್ಕುತ್ತಲಿತ್ತು.

ನಾನು ಮೆಲ್ಲಗೆ ನಾವೆಯನ್ನು ಬಿಚ್ಚಿದೆ. ಅವಳು ನಾವೆಯಲ್ಲಿ ಕುಳಿತಳು. ನಾನು ಹುಟ್ಟನ್ನು ಕೈಯಲ್ಲಿ ತೆಗೆದುಕೊಂಡೆ. ಮತ್ತು ನಾವೆಯನ್ನು ಸೇಕರ್ ಸರೋವರದ ಮಧ್ಯೆ ತೆಗೆದುಕೊಂಡು ಹೋದೆ. ಇಲ್ಲಿ ನಾವೆ ತಂತಾನೆ ನಿಂತುಬಿಟ್ಟಿತು. ಅತ್ತ ತೇಲುತ್ತಿರಲಿಲ್ಲ, ಮತ್ತು ಇತ್ತಲೂ ಇಲ್ಲ. ನಾನು ಹುಟ್ಟನ್ನು ನಾವೆಯಲ್ಲಿ ಇರಿಸಿದೆ. ಅವಳು ಗಂಟು ಬಿಚ್ಚಿದಳು. ಅದರಲ್ಲಿಂದ ಜರದಾಲೂ ತೆಗೆದು ನನಗೆ ಕೊಟ್ಟಳು ಮತ್ತು ತಾನೂ ತಿನ್ನಹತ್ತಿದಳು.

ಜರದಾಲೂ ಒಣಗಿದ್ದವು. ಮತ್ತು ಹುಳಿ-ಸಿಹಿಯಾಗಿದ್ದವು..

"ಇವು ಕಳೆದ ವಸಂತದವು"—ಅವಳು ಅಂದಳು.

ನಾನು ಜರದಾಲೂ ತಿನ್ನುತ್ತಲಿದ್ದೆ ಹಾಗು ಅವಳತ್ತ ನೋಡುತ್ತಲಿದ್ದೆ.

"ಕಳೆದ ವಸಂತದಲ್ಲಿ ನೀವು ಇರಲಿಲ್ಲ"—ಅವಳು ಮೆಲ್ಲಗೆ ಅಂದಳು.

ಹಿಂದಿನ ವಸಂತದಲ್ಲಿ ನಾನು ಇರಲಿಲ್ಲ. ಜರದಾಲೂ ಗಿಡವು ಜೊಂಪಿಟ್ಟಿತ್ತು. ಟೊಂಗೆಯನ್ನು ಸ್ವಲ್ಪ ಅಲ್ಲಾಡಿಸಿದರೆ ಸಾಕು, ಹೂವು ಮುತ್ತುಗಳ ಹಾಗೆ ಉದುರಿ ಚೆಲ್ಲಾಪಿಲ್ಲಿಯಾಗುತ್ತಿದ್ದವು. ಹೋದ ವಸಂತದಲ್ಲಿ ನಾನು ಇರಲಿಲ್ಲ. ಜರದಾಲೂ ಗಿಡಕ್ಕೆ ಹಣ್ಣು ಮೆತ್ತಿತ್ತು. ಹಸಿರುಹಸಿರಾದ ಜರದಾಲೂಗಳು. ಉಪ್ಪು-ಖಾರ ಗಳನ್ನು ಹಚ್ಚಿಕೊಂಡು ತಿನ್ನಲಾಗುತ್ತಿದ್ದ ಜರದಾಲೂ ಲೆಕ್ಕವಿಲ್ಲದಷ್ಟು ನಾಲಿಗೆಗಳನ್ನು ಸೀ-ಸೀ ಮಾಡುತ್ತಿದ್ದವು ಮತ್ತು ಮೂಗು ಸೋರುತ್ತಿದ್ದವು. ಆದರೂ ಕೂಡ ಹುಳಿ ಯಾದ ಜರದಾಲೂಗಳನ್ನು ತಿನ್ನಲಾಗುತ್ತಿತ್ತು. ಕಳೆದ ವಸಂತದಲ್ಲಿ ನಾನು ಇರಲಿಲ್ಲ. ಹಸಿರು ಜರದಾಲೂ ಪಕ್ವವಾಗಿ ಹಳದಿ, ಹೊಂಬಣ್ಣ ಮತ್ತು ಕೆಂಪು ಆಗುತ್ತ ಹೋದವು. ಮತ್ತು ಟೊಂಗೆ ಟೊಂಗೆಗಳಲ್ಲಿ ಪ್ರಸನ್ನತೆಯ ಕೆಂಪು ಹೂವುಗಳು ಜೀಕವಾಡುತ್ತಿದ್ದವು.. ಪ್ರಸನ್ನತೆ ತುಂಬಿದ ಕಣ್ಣುಗಳು, ಹೊಳೆಯುತ್ತಿದ್ದ ಸರಳವಾದ ಕಣ್ಣುಗಳು, ಅವುಗಳು ಜೀಕವಾಡುವದನ್ನು ನೋಡಿ ಕುಣಿದಂತೆ ಮಾಡುತ್ತಿದ್ದವು. ಹೋದ ವಸಂತದಲ್ಲಿ ನಾನು ಇರಲಿಲ್ಲ. ಸುಂದರವಾದ ಕೈಗಳು ಕೆಂಪುಕೆಂಪಾದ ಜರದಾಲೂಗಳನ್ನು ಒಟ್ಟುಗೂಡಿಸಿದವು. ಸುಂದರವಾದ ತುಟಿಗಳು ಅವುಗಳ ರಸ ವನ್ನು ಸವಿದವು ಮತ್ತು ಸುಂದರವಾದ ಕೈಗಳು ಅವುಗಳನ್ನು ತಮ್ಮ ಮನೆಯ ಮಾಳಿಗೆಯ ಮೇಲೆ ಒಯ್ದು ಒಣಗಲು ಹರವಿದವು. ಈ ಜರದಾಲೂಗಳು ಒಣಗಿದ ನಂತರ, ಒಂದು ವಸಂತವು ಕಳೆದುಹೋಗಿ ಇನ್ನೊಂದು ವಸಂತವು ಪದಾರ್ಪಣ ಮಾಡುತ್ತಿರಲು ನಾನು ಬರುತ್ತೇನೆ ಮತ್ತು ಅವುಗಳ ಸ್ವಾದದಿಂದ ಪ್ರಸನ್ನಗೊಳ್ಳು ತ್ತೇನೆ.

ಜರದಾಲೂ ತಿಂದು ನಾವು ಒಣಗಿದ ಖೂಬಾನಿಗಳನ್ನು ತಿಂದೆವು. ಖೂಬಾನಿಗಳು ಮೊದಲಿಗೆ ಅಷ್ಟು ಸಿಹಿ ಅನಿಸಲಿಲ್ಲ. ಆದರೆ ಬಾಯಿಯಲ್ಲಿಯ ಲಾಲಾರಸದಲ್ಲಿ ಬೆರೆತನಂತರ ಜೇನು-ಸಕ್ಕರೆಯ ರುಚಿಯನ್ನು ಕೊಡುತ್ತಿದ್ದವು.

"ಮೆತ್ತಮೆತ್ತಗೆ ಬಹಳ ಸಿಹಿಯಾಗಿ ಇವೆ, ಇವು"—ನಾನು ಹೇಳಿದೆ.

ಅವಳು ಹಲ್ಲುಗಳಿಂದ ಒಂದು ಗೊರಟವನ್ನು ಕಡಿದು ಖೂಬಾನಿಯ ಬೀಜವನ್ನು ಹೊರತೆಗೆದು ನನಗೆ ಕೊಟ್ಟಳು, "ತಿನ್ನಿರಿ."

ಬೀಜವು ಬಾದಾಮಿಯ ಹಾಗೆ ಸಿಹಿಯಾಗಿತ್ತು.

"ಇಂಥ ಖೂಬಾನಿಗಳನ್ನು ನಾನು ಎಂದೂ ತಿಂದಿಲ್ಲ"—ಅವಳು ಅಂದಳು—"ಇವು ನಮ್ಮ ಅಂಗಳದಲ್ಲಿರುವ ಗಿಡದ್ದು. ನಮ್ಮಲ್ಲಿ ಖೂಬಾನಿಯ ಒಂದೇ ಗಿಡವಿದೆ. ಆದರೆ ಎಷ್ಟು ದೊಡ್ಡ ಮತ್ತು ಎಷ್ಟು ಸಿಹಿಯಾದ ಖೂಬಾನಿಗಳನ್ನು ಬಿಡುತ್ತದೆಂದರೆ, ಅದರ ಬಗ್ಗೆ ನಾನೇನು ಹೇಳಲಿ? ಖೂಬಾನಿ ಪಕ್ವವಾದ ನಂತರ ನನ್ನ ಎಲ್ಲ ಗೆಳತಿಯರು ಸೇರಿ, ಖೂಬಾನಿಗಳನ್ನು ತಿನಿಸಲು ಕೇಳುತ್ತಾರೆ. ಕಳೆದ ವಸಂತದಲ್ಲಿ...."

ನಾನು ಯೋಚಿಸಿದೆ: ಕಳೆದ ವಸಂತದಲ್ಲಿ ನಾನು ಇರಲಿಲ್ಲ. ಆದರೆ ಖೂಬಾನಿಯ ಗಿಡವು ಅಂಗಳದಲ್ಲಿ ಇದೇ ರೀತಿ ನಿಂತಿತ್ತು. ಕಳೆದ ವಸಂತದಲ್ಲಿ ಅದು ಕೋಮಲ ಕೋಮಲವಾದ ಎಲೆಗಳಿಂದ ತುಂಬಿಹೋಗಿತ್ತು. ಆಮೇಲೆ ಅದರಲ್ಲಿ ಅಪಕ್ವ ಖೂಬಾನಿಗಳ ಹಸಿರಾದ ಮತ್ತು ಎಣ್ಣು ಳ್ಳ ಹಣ್ಣುಗಳು ಬಿಟ್ಟಿದ್ದವು. ಈಗಲೂ ಅದರಲ್ಲಿ ಅಪಕ್ವ ಖೂಬಾನಿಗಳು ಹುಟ್ಟಿದ್ದವು. ಈ ಅಪಕ್ವ ಹುಳಿಯಾದ ಹಣ್ಣು ಮಧ್ಯಾಹ್ನದ ಊಟದ ಜೊತೆ ಚಟ್ನಿಯ ಕೆಲಸ ಕೊಡುತ್ತಿದ್ದವು. ಕಳೆದ ವಸಂತದಲ್ಲಿ ನಾನು ಇರಲಿಲ್ಲ. ಆದರೆ ಈ ಖೂಬಾನಿಗಳಲ್ಲಿ ಗೊರಟಗಳು ಹುಟ್ಟಿಕೊಂಡಿದ್ದವು. ಮತ್ತು ಖೂಬಾನಿಗಳು ಬಣ್ಣ ಮತ್ತು ಸ್ವಾದಗಳಲ್ಲಿ ಹಸಿರಾದ ಖೂಬಾನಿಗಳನ್ನು ಸೋಲಿಸು ತ್ತಿದ್ದವು. ಕಳೆದ ವಸಂತದಲ್ಲಿ ನಾನು ಇರಲಿಲ್ಲ. ಆದರೆ, ಬಣ್ಣದಲ್ಲಿ ಕಾಶ್ಮೀರದ ಯುವತಿಯರ ಹಾಗೆ ಸುಂದರ ಮತ್ತು ಅಷ್ಟೇ ರಸಮಯವಾಗಿದ್ದ ಈ ಕೆಂಪು ಖೂಬಾನಿಗಳು ಹಸಿರು ಎಲೆಗಳ ಝುಮಕಿಗಳಿಂದ ಇಣುಕುತ್ತಿದ್ದ ಹಾಗೆ ಕಾಣಿಸು ತ್ತಿದ್ದವು. ಬಳಿಕ, ನಿಶ್ಚಿಂತ, ಮುಗ್ಧ ಹುಡುಗಿಯರು ಅಂಗಳದಲ್ಲಿ ಕುಣಿಯಲಾರಂಭಿಸಿ ದರು. ಮತ್ತು ತಮ್ಮನು ಗಿಡವನ್ನು ಏರಿ ಖೂಬಾನಿಗಳನ್ನು ಕಿತ್ತು ಕಿತ್ತು ತನ್ನ ಅಕ್ಕನ ಗೆಳತಿಯರಿಗೆಂದು ಚೆಲ್ಲಹತ್ತಿದನು. ಎಷ್ಟು ಸಿಹಿಯಾಗಿ ಇದ್ದವು ಆ ಕಳೆದ ವಸಂತದ ರಸತುಂಬಿದ ಖೂಬಾನಿಗಳು....ನಾನು ಇಲ್ಲದಿದ್ದಾಗ...ಖೂಬಾನಿಗಳನ್ನು ತಿಂದು ಅವಳು ಮುಸುಕಿನ ಜೋಳದ ತೆನೆಯನ್ನು ಹೊರತೆಗೆದಳು. ಎಂಥ ಮಣ್ಣಿನ ವಾಸನೆಯಂತಹ ಸುಗಂಧವಿತ್ತು....ಹೊಂಬಣ್ಣ ಬರುವವರೆಗೆ ಸುಡಲ್ಪಟ್ಟ ತೆನೆ ಹಾಗು ಮುತ್ತುಗಳಂತಹ ಕಾಂತಿಯನ್ನು ಹೊಂದಿದ ಕುರುಂ ಕುರುಂ ಕಾಳುಗಳು

ಮತ್ತು ಎಷ್ಟು ಸಿಹಿ.

"ಇವು ಮಿಶ್ರ-ತಳಿಯ ಮುಸುಕಿನ ಜೋಳದ ತೆನೆಗಳು"—ಅವಳು ಅಂದಳು.

"ಅಳತೆ ಮೀರಿ ಸಿಹಿಯಾಗಿವೆ"—ನಾನು ತೆನೆಯನ್ನು ತಿನ್ನುತ್ತ ಹೇಳಿದೆ.

"ಕಳೆದ ಫಸಲಿನವುಗಳನ್ನು ಹಾಲಿನ ಕೊಡದಲ್ಲಿಟ್ಟಿದ್ದೆ, ಅಮ್ಮನ ಕಣ್ಣು ತಪ್ಪಿಸಿ" —ಅವಳು ಹೇಳಿದಳು.

ನಾನು ಒಂದು ಕಡೆಯಿಂದ ತೆನೆಯನ್ನು ತಿಂದು, ಕಾಳುಗಳ ಕೆಲವು ಪಂಕ್ತಿಗಳನ್ನು ಬಿಟ್ಟಿದ್ದೆ. ನಂತರ ಅವಳು ಅದೇ ಸ್ಥಳದಿಂದ ತಿಂದು ಉಳಿಸಿದ ಕಾಳುಗಳನ್ನು ಮತ್ತೆ ನಾನು ತಿನ್ನಹತ್ತಿದೆ. ಇದೇ ಪ್ರಕಾರ ನಾವಿಬ್ಬರೂ ಒಂದೇ ತೆನೆಯನ್ನು ತಿನ್ನುತ್ತಲಿದ್ದೆವು. ಆಗ ನಾನು ಯೋಚಿಸಿದೆ. ಈ ಮಿಶ್ರ ತಳಿಯ ಮುಸುಕಿನ ಜೋಳದ ತೆನೆಗಳು ಎಷ್ಟು ಸಿಹಿ ಇವೆ. ಕಳೆದ ಫಸಲಿನ ತೆನೆಗಳು. ಆಗ ನೀನು ಇದ್ದೆ ಆದರೆ ನಾನು ಇರಲಿಲ್ಲ. ಆಗ ನಿನ್ನ ತಂದೆ ನೇಗಿಲು ಹೊಡೆದಿದ್ದ, ಹೊಲಗಳಲ್ಲಿ ಮಡಿಮಾಡಿದ್ದ, ಬೀಜಗಳನ್ನು ಬಿತ್ತಿದ್ದ, ಮೋಡಗಳು ನೀರು ಕೊಟ್ಟಿದ್ದವು. ಭೂದೇವಿಯು ಹಸಿರು ಬಣ್ಣದ ಸಣ್ಣ ಸಣ್ಣ ಸಸಿಗಳನ್ನು ನೀಡಿದಳು. ಅವುಗಳಲ್ಲಿಯ ಕಸ-ಕಳೆ ತೆಗೆಯುವದನ್ನು ನೀನು ಮಾಡಿದ್ದೆ. ನಂತರ ಸಸಿಗಳು ದೊಡ್ಡವಾದವು. ಅವುಗಳ ತಲೆಗಳ ಮೇಲೆ ತುರಾಯಿಗಳು ಬಂದಿದ್ದವು ಮತ್ತು ಅವು ಗಾಳಿಯಲ್ಲಿ ನೆಗೆದಾಡಹತ್ತಿದ್ದವು. ಮುಸುಕಿನ ಜೋಳದ ಸಸಿಗಳ ಮೇಲೆ, ಹಸಿರು ಕಾಳುಗಳು ಎಷ್ಟು ಕೋಮಲ ತ್ವಚೆಯನ್ನು ಪಡೆದಿದ್ದವೆಂದರೆ ಅದರ ಮೇಲೆ ಒಂದಿನಿತು ಉಗುರು ತಾಕಿಸಿದರೆ ಸಾಕು, ಹಾಲು ಹೊರಗೆ ಬರುತ್ತಿತ್ತು. ಇಂಥ ಮೃದುಲ ಮತ್ತು ನಾಜೂಕಾದ ತೆನೆಗಳನ್ನು ಈ ಧರಿತ್ರಿಯು ಮೊಳಕೆಸಿತ್ತು. ಆಗ ನಾನು ಇದ್ದಿರಲಿಲ್ಲ. ನಂತರ ಈ ತೆನೆಗಳು ಬಲಿತು ಪುಷ್ಟವಾದವು. ಅವುಗಳ ರಸವು ಪಕ್ವಗೊಂಡಿತು. ಈಗ ಉಗುರು ತಾಕಿಸಿದರೆ ಏನೂ ಆಗುತ್ತಿರಲಿಲ್ಲ. ತಮ್ಮ ಉಗುರು ಮುರಿದುಹೋಗುವ ಭಯವಿತ್ತು. ತೆನೆಗಳ ಹಾಲುಗಾಳು ಮೊದಲು ಹಳದಿ ಇದ್ದದ್ದು, ಈಗ ಹೊಂಬಣ್ಣಕ್ಕೆ ತಿರುಗಿ ಅಂತ್ಯದಲ್ಲಿ ಕಪ್ಪಾಗುತ್ತ ಹೋದವು ಗೋವಿನ ಜೋಳದ ತೆನೆಗಳ ಬಣ್ಣವು ಭೂಮಿಯ ಹಾಗೆ ಬೂದಿ ಬಣ್ಣವಾಗುತ್ತ ಹೋಯಿತು....ನಾನು ಆಗಲೂ ಕೂಡ ಬಂದಿದ್ದಿಲ್ಲ. ನಂತರ ಹೊಲಗಳಲ್ಲಿ ಕಣಗಳು ಎದ್ದವು. ಕಣಗಳಲ್ಲಿ ಎತ್ತು ತುಳಿದವು. ತೆನೆಗಳಿಂದ ಕಾಳು ಬೇರೆಯಾಯಿತು. ನೀನು ನಿನ್ನ ಗೆಳತಿಯರ ಜೊತೆ ಪ್ರೇಮದ ಗೀತೆಗಳನ್ನು ಹಾಡಿದೆ. ಸ್ವಲ್ಪ ತೆನೆಗಳನ್ನು ಅಡಗಿಸಿಕೊಂಡು ಸುಟ್ಟು ಬೇರೆ ಇಟ್ಟುಕೊಂಡಿದ್ದೆ. ಆಗ ನಾನು ಇದ್ದಿರಲಿಲ್ಲ. ಧರಿತ್ರಿ ಇತ್ತು. ಬೆಳೆ ಇತ್ತು. ಪ್ರೇಮದ ಗೀತೆಗಳಿದ್ದವು. ಬೆಂಕಿಯ ಮೇಲೆ ಸುಟ್ಟ ತೆನೆಗಳು ಇದ್ದವು. ಆದರೆ ನಾನು ಇದ್ದಿರಲಿಲ್ಲ.

ನಾನು ಪ್ರಸನ್ನತೆಯಿಂದ ಅವಳತ್ತ ನೋಡಿ "ಇಂದು ಪೂರ್ಣಿಮೆಯ ರಾತ್ರಿಯಲ್ಲಿ

ಪ್ರತಿಯೊಂದು ಮಾತು ಪೂರ್ತಿಗೊಂಡ ಹಾಗಿದೆ. ನಿನ್ನೆಯತನಕ ಪೂರ್ಣವಾಗಿರಲಿಲ್ಲ. ಆದರೆ ಇಂದು ಪೂರ್ಣವಾಗಿವೆ" ಎಂದು ಹೇಳಿದೆ.

ಅವಳು ತಲೆಯನ್ನು ನನ್ನ ಬಾಯಿಗೆ ಹಚ್ಚಿದಳು. ಅವಳ ತುಟಿಗಳ ಬಿಸಿ ಬಿಸಿಯಾದ ಸಹಜ ಸ್ಪರ್ಶವು ಈವರೆಗೂ ತಲೆಯ ಮೇಲೆ ಇತ್ತು.

"ನಾನು ನಿನ್ನನ್ನು ಚುಂಬಿಸಲೆ?"—ನಾನು ಕೇಳಿದೆ.

"ಹುಶ್! ನಾವೆ ಮುಳುಗೀತು"—ಅವಳು ಅಂದಳು.

"ಹಾಗಾದರೆ, ಏನು ಮಾಡೋಣ?"—ನಾನು ಕೇಳಿದೆ.

"ನಾವೆ ಮುಳುಗಲಿ ಬಿಡಿ"—ಅವಳು ಅಂದಳು.

ಆ ಪೂರ್ಣಿಮೆಯ ರಾತ್ರಿಯನ್ನು ನಾನು ಈವರೆಗೂ ಮರೆತಿಲ್ಲ. ನನ್ನ ಪ್ರಾಯವು ಈಗ ಎಪ್ಪತ್ತು ವರ್ಷಗಳಷ್ಟು ಇದೆ. ಆದರೆ ಆ ಪೂರ್ಣಿಮೆಯ ರಾತ್ರಿಯು ನನ್ನ ನೆನಪಿನಲ್ಲಿ ಅದು, ನಿನ್ನೆ ತಾನೆ ಬಂದಿತ್ತು ಎನ್ನುವ ಹಾಗೆ ಮಿಂಚುತ್ತಿದೆ. ಇಂಥ ಪವಿತ್ರ ಪ್ರೇಮವನ್ನು ನಾನು ಈವರೆಗೂ ಮಾಡಿರಲಿಕ್ಕಿಲ್ಲ. ಅವಳು ಕೂಡ ಮಾಡಿರಲಿಕ್ಕಿಲ್ಲ. ಆ ಪೂರ್ಣಿಮೆಯ ರಾತ್ರಿಯಲ್ಲಿ, ನಮ್ಮಿಬ್ಬರನ್ನು ಒಗ್ಗೂಡಿಸಿ, ಅವಳು ಆ ಬಳಿಕ ಮನೆಗೆ ಹೋಗದಂತೆ ಮಾಡುವ ಜಾದೂ ಶಕ್ತಿ ಇತ್ತು. ಅದೇ ರಾತ್ರಿ, ಅವಳು ನನ್ನ ಜೊತೆ ಓಡಿಬಂದಳು. ನಾವು ಐದು-ಆರು ದಿನ ಪ್ರೇಮದಲ್ಲಿ ಮೈಮರೆತು, ಮಕ್ಕಳ ಹಾಗೆ ಅರಣ್ಯದಲ್ಲಿ ನದಿ-ಹಳ್ಳಗಳ ದಂಡೆಯ ಮೇಲೆ ಅಖರೋಟ ಗಿಡಗಳ ನೆರಳಿನ ಕೆಳಗೆ ಅತ್ತಿತ್ತ ಅಲೆಯುತ್ತಲಿದ್ದೆವು. ಆಮೇಲೆ ನಾನು ಅದೇ ಸರೋವರದ ದಂಡೆಯ ಮೇಲೆ ಒಂದು ಚಿಕ್ಕದಾದ ಮನೆಯನ್ನು ಕೊಂಡುಕೊಂಡೆ. ಅದರಲ್ಲಿ ನಾವಿಬ್ಬರೂ ಇರತೊಡಗಿದೆವು. ಸುಮಾರು ಒಂದು ತಿಂಗಳ ನಂತರ ನಾನು ಶ್ರೀನಗರಕ್ಕೆ ಹೋದೆ. ಮೂರನೆಯ ದಿನ ಹಿಂದಿರುಗುವುದಾಗಿ ಅವಳಿಗೆ ಹೇಳಿ ಹೋದೆ. ಮೂರನೆಯ ದಿನ ನಾನು ಮರಳಿದೆ. ಆದರೆ ಕಂಡದ್ದೇನು? —ಅವಳು ಓರ್ವ ತರುಣನ ಜೊತೆ ತಲ್ಲೀನಳಾಗಿ ಮಾತನಾಡುತ್ತಿದ್ದಾಳೆ. ಅವರಿಬ್ಬರೂ ಒಂದೇ ತಾಟಿನಲ್ಲಿ ಊಟಮಾಡುತ್ತಿದ್ದಾರೆ. ಒಬ್ಬರು ಇನ್ನೊಬ್ಬರ ಬಾಯಲ್ಲಿ ತುತ್ತು ಹಾಕುತ್ತಾ ನಗುತ್ತಿದ್ದಾರೆ. ನಾನು ಅವರನ್ನು ನೋಡಿದೆ. ಆದರೆ ಅವರು ನನ್ನನ್ನು ನೋಡಲಿಲ್ಲ. ತಮ್ಮ ಸರಸದಲ್ಲಿ ಮೈಮರೆತಿದ್ದ ಅವರು ಬೇರೆಡೆ ನೋಡಲೇ ಇಲ್ಲ. ನಾನು ಯೋಚಿಸಿದೆ: ಇವನು ಹಿಂದಿನ ವಸಂತ ಅಥವಾ ಅದಕ್ಕೂ ಹಿಂದಿನ ವಸಂತದ ಪ್ರೇಮಿ ಇರಬಹುದೇ? ಆಗ ನಾನು ಇದ್ದಿರಲಿಲ್ಲ. ಬಹುಶಃ ಮುಂದೆ ಇನ್ನೂ ಎಷ್ಟೋ ಇಂಥ ವಸಂತಗಳು ಬರಬಹುದು. ಎಷ್ಟೋ ಪೂರ್ಣಿಮೆಯ ರಾತ್ರಿಗಳು ಬರಬಹುದು—ಆಗ ಪ್ರೇಮವು ಓರ್ವ ಲಂಪಟ ಸ್ತ್ರೀಯ ಹಾಗೆ ಸ್ವೇಚ್ಛೆಯಿಂದ ನಗ್ನಗೊಂಡು ನೃತ್ಯಮಾಡುವುದು. ಇಂದು ನನ್ನ ಮನೆಯಲ್ಲಿ ಶಿಶಿರವು ಬಂದಿದೆ, ಪ್ರತಿ ವಸಂತದ ನಂತರ ಬರುವ ಹಾಗೆ. ಈಗ ನನಗೆ ಇಲ್ಲಿ

ಏನು ಕೆಲಸ? ಈ ಯೋಚನೆಯಲ್ಲಿ ಅವರನ್ನು ಭೆಟ್ಟಿಯಾಗದೇ ನಾನು ಹಿಂದಿರುಗಿದೆ. ನಂತರ ನನ್ನ ಮೊದಲ ವಸಂತವನ್ನು ನಾನು ಎಂದೂ ಭೆಟ್ಟಿಯಾಗಲಿಲ್ಲ.

ಈಗ ನಲವತ್ತೆಂಟು ವರ್ಷಗಳ ಮೇಲೆ ಮರಳಿ ಬಂದಿದ್ದೇನೆ. ನನ್ನ ಗಂಡುಮಕ್ಕಳು ನನ್ನ ಜೊತೆ ಇದ್ದಾರೆ. ನನ್ನ ಹೆಂಡತಿ ಸತ್ತಿದ್ದಾಳೆ. ಆದರೆ ನನ್ನ ಗಂಡುಮಕ್ಕಳ ಹೆಂಡಂದಿರು ಮತ್ತು ಅವರ ಮಕ್ಕಳು ನನ್ನ ಸಂಗಡ ಇದ್ದಾರೆ. ನಾವೆಲ್ಲರೂ ವಿಹಾರ ಮಾಡುತ್ತ ಮಾಡುತ್ತ ಸಮಲ್ ಸರೋವರದ ಕಡೆಗೆ ಬಂದಿದ್ದೆವು. ಅದೇ ಏಪ್ರಿಲ್ ತಿಂಗಳು. ಮೂರನೆಯ ಪ್ರಹರದಿಂದ ಸಂಜೆಯಾಗಿದೆ. ನಾನು ಸಾಕಷ್ಟು ಸಮಯದಿಂದ ಸೇತುವೆಯ ದಂಡೆಯ ಮೇಲೆ ನಿಂತುಕೊಂಡು ಬಾದಾಮಿಯ ಗಿಡಗಳ ಪಂಕ್ತಿಗಳನ್ನು ನೋಡುತ್ತಲಿದ್ದೇನೆ. ಶೀತಲ ವಾಯುವಿನಲ್ಲಿ ಬಿಳಿಯ ಹೂಗಳ ಗೊಂಚಲುಗಳು ಹೊಯ್ದಾಡುತ್ತಲಿವೆ. ಕಾಲುದಾರಿಯ ಧೂಳಿನ ಮೇಲೆ ಯಾರದೋ ಪರಿಚಿತವಾದ ಹೆಜ್ಜೆಗಳ ಯಾವ ಧ್ವನಿಯೂ ಕೇಳಿಬರುತ್ತಿಲ್ಲ. ಓರ್ವ ಸುಂದರಿಯು ಕೈಯಲ್ಲಿ ಚಿಕ್ಕದೊಂದು ಗಂಟನ್ನು ಅಮುಕಿ ಹಿಡಿದು ಸೇತುವೆಯ ಮೇಲಿಂದ ಓಡುತ್ತ ಹೋಗುತ್ತಾಳೆ ಮತ್ತು ನನ್ನ ಮನಸ್ಸು ಧಸಕ್ ಎನ್ನುತ್ತಿದೆ. ದೂರದ ಶಿಖರಗಳಾಚೆಯ ಹಳ್ಳಿಯಲ್ಲಿನ ಮಹಿಳೆಯೊಬ್ಬಳು ತನ್ನ ಪತಿಯನ್ನು ಕೂಗುತ್ತಿದ್ದಾಳೆ. ಅವಳು ಅವನನ್ನು ಊಟಕ್ಕೆ ಕರೆಯುತ್ತಿದ್ದಾಳೆ. ಎಲ್ಲಿಂದಲೊ ಒಂದು ಬಾಗಿಲು ಮುಚ್ಚಿದ ಸದ್ದು ಕೇಳಿಬರುತ್ತದೆ. ಮತ್ತು ಒಂದು ಅಳುತ್ತಿದ್ದ ಮಗು ತಟ್ಟನೆ ಸುಮ್ಮನಾಗುತ್ತದೆ. ಮಾಳಿಗೆಗಳಿಂದ ಹೊಗೆ ಹೋಗುತ್ತಲಿದೆ. ಪಕ್ಷಿಗಳು ಸದ್ದು ಮಾಡುತ್ತ ವೃಕ್ಷಗಳ ದಟ್ಟವಾದ ಶಾಖೆಗಳಲ್ಲಿ ತಮ್ಮ ರೆಕ್ಕೆಗಳನ್ನು ಫಡಫಡಿಸುತ್ತಲಿವೆ. ಬಳಿಕ ಒಮ್ಮೆಲೆ ಸುಮ್ಮನಾಗುತ್ತವೆ. ಯಾವನೋ ನಾವಿಕನು ಹಾಡುತ್ತಿದ್ದಾನೆ. ಅವನ ಸ್ವರದಲ್ಲಿನ ಇಂಪು, ಪ್ರತಿಧ್ವನಿಗೊಳ್ಳುತ್ತಾ ಕ್ಷಿತಿಜದ ಆಚೆ ಲೀನವಾಗುತ್ತ ಹೋಗುತ್ತಿದೆ.

ನಾನು ಸೇತುವೆಯನ್ನು ದಾಟಿ ಮುಂದಕ್ಕೆ ಸಾಗುತ್ತೇನೆ. ನನ್ನ ಗಂಡುಮಕ್ಕಳು ಮತ್ತು ಅವರ ಹೆಂಡಂದಿರು ಮತ್ತು ಮಕ್ಕಳು ನನ್ನ ಹಿಂದೆ ಬರುತ್ತಿದ್ದಾರೆ—ಬೇರೆ ಬೇರೆ ಗುಂಪುಗಳಲ್ಲಿ ವಿಂಗಡಿಸಿಕೊಂಡು. ಇಲ್ಲಿ ಬಾದಾಮಿಯ ಗಿಡಗಳ ಪಂಕ್ತಿಯು ಮುಗಿಯಿತು. ಸರೋವರದ ಕೆಳ ಪ್ರದೇಶವು ಕೂಡ ಕಳೆಯಿತು. ಸರೋವರದ ದಂಡೆಗೆ ಬಂದೆ ~~ಖುಬಾ~~ ಖುಬಾನಿಯ ಗಿಡ. ಆದರೆ ಎಷ್ಟು ದೊಡ್ಡದಾಗಿದೆ! ಆದರೆ ಈ ನಾ......ಇದು ನಾವೆ ನಿಜ. ಆದರೆ ಇದು ಅದೇ ನಾವೆ ಏನು? ಎದುರಿಗೆ ಆ ಮನೆ ಇದೆ. ನನ್ನ ಪ್ರಥಮ ವಸಂತದ ಮನೆ. ನನ್ನ ಪೂರ್ಣಿಮೆಯ ರಾತ್ರಿಯ ಪ್ರೇಮ.

ಮನೆಯಲ್ಲಿ ಬೆಳಕು ಇದೆ. ಮಕ್ಕಳ ಸೊಲ್ಲು ಇದೆ. ಯಾವನೋ ಭಾರವಾದ

ಧ್ವನಿಯಲ್ಲಿ ಹಾಡಲಾರಂಭಿಸುತ್ತಾನೆ. ಯಾವಳೋ ಮುದುಕಿ ಚೀರಿ ಅವವನ್ನು ಸುಮ್ಮನೆ ಮಾಡುತ್ತಾಳೆ. ನಾನು ಯೋಚಿಸುತ್ತೇನೆ: ಅರ್ಧ ಶತಮಾನ ಕಳೆದಿದೆ ನಾನು ಈ ಮನೆಯನ್ನು ನೋಡದೆ. ನೋಡುವದರಲ್ಲಿ ಯಾವ ಹಾನಿ ಇದೆ? ನಾನೇ ಅದನ್ನು ಕೊಂಡುಕೊಂಡಿದ್ದೆ. ಹಾಗೆ ನೋಡಿದರೆ ಇಂದಿಗೂ ನಾನೇ ಅದರ ಮಾಲಕ. ನೋಡುವದರಲ್ಲಿ ಹಾನಿಯಾದರೂ ಏನಿದೆ? ನಾನು ಮನೆಯ ಒಳಗೆ ಹೋಗುತ್ತೇನೆ.

ಬಹಳ ಸುಂದರ ಹಾಗು ಮುದ್ದಾದ ಮಕ್ಕಳು. ಒಬ್ಬ ಯುವತಿಯು ತನ್ನ ಪತಿಯ ಸಲುವಾಗಿ ರಕಾಬಿ (ತಾಟು) ಯಲ್ಲಿ ಊಟ ಇಡುತ್ತಿದ್ದಾಳೆ. ನನ್ನನ್ನು ಕಂಡು ಸ್ತಂಭಿತಳಾಗುತ್ತಾಳೆ. ಜಗಳವಾಡುತ್ತಿದ್ದ ಇಬ್ಬರು ಹುಡುಗರು ನನ್ನನ್ನು ನೋಡಿ ಆಶ್ಚರ್ಯದಿಂದ ಸುಮ್ಮನಾಗುತ್ತಾರೆ. ಇದೀಗ ಕೋಪದಿಂದ ಗದ್ದರಿಸುತ್ತಿದ್ದ ಮುದುಕಿ ಕಂಬದ ಹತ್ತಿರ ನಿಂತುಕೊಳ್ಳುತ್ತಾಳೆ.

"ನೀವು ಯಾರು?"—ಅವಳು ಕೇಳುತ್ತಾಳೆ.

"ಇದು ನನ್ನ ಮನೆ"—ನಾನು ಹೇಳಿದೆ.

"ನಿಮ್ಮ ತಂದೆಯದೇ?—ಅವಳು ಕೇಳಿದಳು.

ನಾನು ಹೇಳಿದೆ: "ನನ್ನ ತಂದೆಯದಲ್ಲ, ನನ್ನದು. ನಾನು ಇದನ್ನು ಕೊಂಡುಕೊಂಡು ನಲವತ್ತೆಂಟು ವರ್ಷವಾದವು. ಸದ್ಯಕ್ಕೆ ನಾನು ಇದನ್ನು ಹಾಗೆಯೇ ನೋಡಲು ಬಂದಿದ್ದೇನೆ, ನಿಮ್ಮನ್ನು ಹೊಗಹಾಕಲಿಕ್ಕಲ್ಲ. ಈ ಮನೆಯಂತೂ ಈಗ ನಿಮ್ಮದೇ. ನಾನಂತು ಹೀಗೆಯೆ...." ನಾನು ಇಷ್ಟು ಹೇಳಿ ಹಿಂದಿರುಗ ಹತ್ತಿದೆ. ಮುದುಕಿಯ ಬೆರಳುಗಳು ಗಟ್ಟಿಯಾಗಿ ಕಂಬವನ್ನು ಹಿಡಿದುಕೊಂಡವು. ಅವಳು ಜೋರಿನಿಂದ ಉಸಿರನ್ನು ಎಳೆದುಕೊಂಡಳು. "ಹಾಗಾದರೆ, ನೀವು ಇರುವಿರೇನು....ಇಷ್ಟು ವರ್ಷಗಳ ಬಳಿಕ ಈಗ ಯಾರಿಗೆ ಹೇಗೆ ಗುರ್ತಿಸಲು ಸಾಧ್ಯ?"—ಅಂದಳು. ಅವಳು ಕಂಬಕ್ಕೆ ಆತುಕೊಂಡು ಸಾಕಷ್ಟು ಸಮಯದ ವರೆಗೆ ಮೌನವಾಗಿ ನಿಂತುಕೊಂಡಳು. ನಾನು ಕೆಳಗೆ ಅಂಗಳದಲ್ಲಿ ನಿಂತುಕೊಂಡು ಮೌನವಾಗಿ ಅವಳ ಕಡೆ ದಿಟ್ಟಿಸುತ್ತಿದ್ದೆ. ಆಮೇಲೆ ಅವಳು ತನ್ನಷ್ಟಕ್ಕೆ ತಾನೇ ನಕ್ಕುಬಿಟ್ಟಳು. ಹಾಗಾದರೆ ಬನ್ನಿ, ನಿಮಗೆ ನನ್ನ ಮನೆಯ ಜನರ ಪರಿಚಯ ಮಾಡಿಕೊಡುವೆನು. ನೋಡಿ, ಇವನು ನನ್ನ ಚೊಚ್ಚಲು ಮಗ. ಇವನು ಚಿಕ್ಕವನು. ಈಕೆ ಚೊಚ್ಚಲು ಮಗನ ಹೆಂಡತಿ. ಇವನು ನನ್ನ ದೊಡ್ಡ ಮೊಮ್ಮಗ. ಸಲಾಮ್ ಮಾಡು ಬೇಟಾ....ಇವಳು ಮೊಮ್ಮಗಳು. ಅವರು ನನ್ನ ಪತಿ. ಇಷ್ಟೆ. ಅವರನ್ನು ಎಬ್ಬಿಸಬೇಡಿ....ಮೊನ್ನೆಯಿಂದ ಅವರಿಗೆ ಜ್ವರ ಬರುತ್ತಿದೆ....ಮಲಗಲಿ ಬಿಡಿ"—ಅಂದಳು.

ಅವಳು ಪುನಃ ಅಂದಳು—"ನಿಮ್ಮ ಯಾವ ಸೇವೆ ಮಾಡಲಿ?"

ನಾನು ಗೋಡೆಯ ಮೇಲಿನ ಗೂಟಕ್ಕೆ ತೂಗು ಹಾಕಿದ ಮುಸುಕಿನ ಜೋಳದ

ತೆನೆಗಳ ಕಡೆ ನೋಡಿದೆ—ಸುಟ್ಟ ತೆನೆಗಳು, ಹೊಂಬಣ್ಣದ ಮುತ್ತುಗಳ ಹಾಗೆ ಹೊಳೆಯುವ ಕಾಳುಗಳು.

ನಾವಿಬ್ಬರೂ ಮುಗುಳುನಗೆ ಬೀರಿದೆವು.

" ನನ್ನವಂತೂ ಬಹಳ ಹಲ್ಲು ಬಿದ್ದುಹೋಗಿವೆ. ಇದ್ದ ಕೆಲವು ಕೆಲಸಕ್ಕೆ ಬರುವದಿಲ್ಲ "—ಅವಳು ಅಂದಳು.

"ಇದೇ ಸ್ಥಿತಿ ನನ್ನದೂ ಇದೆ. ತೆನೆಯನ್ನು ತಿನ್ನಲು ಶಕ್ಯವಿಲ್ಲ"—ನಾನು ಹೇಳಿದೆ.

ನಾನು ಮನೆಯ ಒಳಗೆ ಹೊಕ್ಕಿದ್ದನ್ನು ನೋಡಿ ನನ್ನ ಮನೆಯ ಜನರು ಕೂಡ ಒಳಗೆ ಬಂದು ಬಿಟ್ಟಿದ್ದರು. ಈಗ ಬಹಳಷ್ಟು ಸಂಭ್ರಮ ಇತ್ತು. ಮಕ್ಕಳು ಶೀಘ್ರದಲ್ಲಿ ಪರಸ್ಪರ ಹೊಂದಿಕೊಂಡವು.

ನಾವಿಬ್ಬರೂ ಮೆಲ್ಲಮೆಲ್ಲಗೆ ಹೊರಗೆ ಬಂದೆವು. ಮೆಲ್ಲಮೆಲ್ಲಗೆ ಸರೋವರದ ದಂಡೆಯ ಕಡೆಗೆ ಹೊರಟೆವು.

" ನಾನು ಆರು ವರ್ಷದವರೆಗೆ ನಿಮ್ಮ ದಾರಿ ನೋಡಿದೆ. ನೀವು ಆ ದಿವಸ ಯಾಕೆ ಬರಲಿಲ್ಲ ? "—ಅವಳು ಅಂದಳು.

" ನಾನು ಬಂದಿದ್ದೆ. ಆದರೆ ನಿನ್ನನ್ನು ಬೇರೆ ಯಾರೋ ನವಯುವಕನ ಜೊತೆ ನೋಡಿ ವಾಪಸ್ ಹೊರಟುಹೋಗಿದ್ದೆ "—ನಾನು ಹೇಳಿದೆ.

" ಏನು ಹೇಳುತ್ತಿರುವಿರಿ ? " ಅವಳು ಕೇಳಿದಳು.

" ಹಾಂ. ನೀನು ಅವನ ಜೊತೆ ಊಟ ಮಾಡುತ್ತಿದ್ದಿ. ಒಂದೇ ರಕಾಬಿ (ತಟ್ಟೆ) ಯಲ್ಲಿ ಮತ್ತು ಅವನು ನಿನ್ನ ಬಾಯಿಯಲ್ಲಿ, ನೀನು ಅವನ ಬಾಯಿಯಲ್ಲಿ ತುತ್ತು ಹಾಕುತ್ತಿದ್ದಿರಿ."

ಅವಳು ಒಮ್ಮಿಂದೊಮ್ಮೆಲೆ ಸುಮ್ಮನಾದಳು. ನಂತರ ಜೋರುಜೋರಾಗಿ ನಗಹತ್ತಿದಳು.

" ಏನಾಯಿತು ? " ನಾನು ಆಶ್ಚರ್ಯದಿಂದ ಕೇಳಿದೆ.

" ಅರೆ, ಅವನಂತೂ ನನ್ನ ಒಡಹುಟ್ಟಿದ ಅಣ್ಣನಿದ್ದ "—ಅವಳು ಹೇಳಿದಳು.

ಅವಳು ಪುನಃ ಜೋರುಜೋರಾಗಿ ನಗಹತ್ತಿದಳು—" ಅವನು ಅದೇ ದಿವಸ ನನ್ನನ್ನು ಕಾಣಲಿಕ್ಕೆ ಬಂದಿದ್ದ. ಅಂದೇ ನೀವು ಕೂಡ ಬರುವವರಿದ್ದಿರಿ. ಅವನು ವಾಪಸ್ ಹೊರಟಿದ್ದ. ನಿಮ್ಮನ್ನು ಕಂಡುಹೋಗಲಿ ಎಂದು ನಾನು ಅವನನ್ನು ಉಳಿಸಿಕೊಂಡಿದ್ದೆ....ಆದರೆ ನೀವು ಬರಲಿಲ್ಲ."

ಅವಳು ತಟ್ಟನೆ ಗಂಭೀರಳಾದಳು—" ಆರು ವರ್ಷದವರೆಗೆ ನಾನು ನಿಮ್ಮ ನಿರೀಕ್ಷೆ ಮಾಡಿದೆ. ನೀವು ಹೊರಟುಹೋದಮೇಲೆ ಖುದಾ ನನಗೆ ಮಗನನ್ನು ಕೊಟ್ಟ. ನಿಮ್ಮ ಮಗ. ಆದರೆ ಒಂದು ವರ್ಷದ ಬಳಿಕ ಅವನು ಕೂಡ ಉಳಿಯಲಿಲ್ಲ. ನಾಲ್ಕು ವರ್ಷ ಮತ್ತೆ ನಿಮ್ಮ ದಾರಿ ನೋಡಿದೆ. ಆದರೆ ನೀವು ಬರಲಿಲ್ಲ."

ಆಡುತ್ತ-ಆಡುತ್ತ ಒಂದು ಗಂಡುಮಗು ಇನ್ನೊಂದು ಹೆಣ್ಣುಮಗುವಿಗೆ ಮುಸುಕಿನ ಜೋಳದ ತೆನೆಯನ್ನು ತಿನ್ನಿಸುತ್ತಲಿತ್ತು.

"ಅವನು ನನ್ನ ಮೊಮ್ಮಗ"—ಅವಳು ಅಂದಳು.

"ಅವಳು ನನ್ನ ಮೊಮ್ಮಗಳು"—ನಾನು ಹೇಳಿದೆ.

ಅವರಿಬ್ಬರೂ ಓಡುತ್ತ-ಓಡುತ್ತ ಸರೋವರದ ದಂಡೆಗುಂಟ ದೂರ ಹೋದರು. ನಾವು ಸಾಕಷ್ಟು ಹೊತ್ತು ಅವರನ್ನು ನೋಡುತ್ತಲಿದ್ದೆವು. ಅವಳು ನನ್ನ ಸಮೀಪಕ್ಕೆ ಬಂದು—"ಇಂದು ನೀವು ಬಂದಿರುವಿರೆಂದು ನನಗೆ ಹಿತವೆನಿಸುತ್ತಿದೆ. ನಾನು ಈಗ ನನ್ನ ಬಾಳ್ವೆಯನ್ನು ಮಾಡಿಕೊಂಡಿದ್ದೇನೆ. ಅದರ ಎಲ್ಲ ಸುಖದುಃಖಗಳನ್ನು ಕಂಡಿದ್ದೇನೆ. ನನ್ನ ಮನೆಯು ಮಗಮಗಿಸುತ್ತಿದೆ. ಇಂದು ನೀವು ಕೂಡ ಬಂದಿದ್ದೀರಿ. ನನಗೆ ಎಳ್ಳಷ್ಟೂ ಕೆಡುಕೆನಿಸುತ್ತಿಲ್ಲ."

ನಾನು ಹೇಳಿದೆ—"ಇದೇ ಪರಿಸ್ಥಿತಿಯು ನನ್ನದಿದೆ. ಜೀವವಿರುವತನಕ ಭೆಟ್ಟಿಯಾಗುವುದಿಲ್ಲ ಎಂದು ಯೋಚಿಸುತ್ತಿದ್ದೆ. ಇದಕ್ಕಾಗಿಯೇ ಇಷ್ಟು ವರ್ಷ ಈ ಕಡೆ ಬಂದಿದ್ದಿಲ್ಲ. ಈಗ ಬಂದ ಮೇಲಂತು ಗುಂಜಿಯಷ್ಟು ಕೂಡ ಕೆಟ್ಟದೆನಿಸುತ್ತಿಲ್ಲ."

ನಾವಿಬ್ಬರೂ ಸುಮ್ಮನಾದೆವು. ಮಕ್ಕಳು ಆಡುತ್ತ ಆಡುತ್ತ ನಮ್ಮ ಸಮೀಪಕ್ಕೆ ಹಿಂದಿರುಗಿ ಬಂದವು. ಅವಳು ನನ್ನ ಮೊಮ್ಮಗಳನ್ನು ಎತ್ತಿಕೊಂಡಳು. ನಾನು ಅವಳ ಮೊಮ್ಮಗನನ್ನು ಎತ್ತಿಕೊಂಡೆ. ಅವಳು ನನ್ನ ಮೊಮ್ಮಗಳನ್ನು ಮುದ್ದಿಸಿದಳು. ನಾನು ಅವಳ ಮೊಮ್ಮಗನನ್ನು ಮುದ್ದಿಸಿದೆ. ಮತ್ತು ನಾವಿಬ್ಬರೂ ಪ್ರಸನ್ನತೆಯಿಂದ ಒಬ್ಬರು ಇನ್ನೊಬ್ಬರ ಕಡೆ ನೋಡಹತ್ತಿದೆವು. ಅವಳ ಕಣ್ಣಾಲಿಗಳಲ್ಲಿ ಚಂದ್ರ ಹೊಳೆಯುತ್ತಿದ್ದ. ಆ ಚಂದ್ರ ಆಶ್ಚರ್ಯದಿಂದ ಮತ್ತು ಪ್ರಸನ್ನತೆಯಿಂದ ಹೇಳುತ್ತಿದ್ದ: "ಮನುಷ್ಯರು ಸಾಯುತ್ತಾರೆ. ಆದರೆ ಜೀವನಕ್ಕೆ ಸಾವು ಇಲ್ಲ. ವಸಂತವು ಸಮಾಪ್ತಿಗೊಳ್ಳುತ್ತದೆ. ಆದರೆ ಜೀವನದ ಮಹಾನ್, ಮತ್ತು ನಿಜವಾದ ಪ್ರೇಮವು ಸದಾ ಸ್ಥಿರವಾಗಿ ಇರುತ್ತದೆ. ನೀವಿಬ್ಬರೂ ಹಿಂದಿನ ವಸಂತದಲ್ಲಿ ಇದ್ದಿರಲಿಲ್ಲ. ಈ ವಸಂತವನ್ನು ನೀವು ಕಂಡಿರಿ. ಇದರ ಮುಂದಿನ ವಸಂತದಲ್ಲಿ ನೀವು ಇರುವದಿಲ್ಲ. ಆದರೆ ಜೀವನವು ಇರುವದು ಮತ್ತು ಪ್ರೇಮವು ಕೂಡ. ಮತ್ತು ಯೌವನವು ಕೂಡ ಇರುವದು, ಸೌಂದರ್ಯವೂ ಇರುವದು, ಜೊತೆಗೆ ಮಾಧುರ್ಯ ಮತ್ತು ಸರಳತೆಗಳು ಸಹ...."

ಮಕ್ಕಳು ನಮ್ಮ ಉಡಿಯಿಂದ ಕೆಳಗೆ ಇಳಿದರು. ಯಾಕೆಂದರೆ, ತಾವು ಬೇರೆಯಾಗಿ ಆಡಲು ಬಯಸುತ್ತಿದ್ದರು. ಅವರು ಓಡುತ್ತ ಖೂಬಾನಿಯ ಗಿಡದ ಸಮೀಪಕ್ಕೆ ಹೊರಟುಹೋದರು. ಅದಕ್ಕೆ ನಾವೆಯನ್ನು ಕಟ್ಟಲಾಗಿತ್ತು.

"ಇದು ಅದೇ ಗಿಡವೇ ?"—ನಾನು ಕೇಳಿದೆ.

"ಅಲ್ಲ, ಇದು ಇನ್ನೊಂದು ಗಿಡ"—ಅವಳು ಮುಗುಳುನಕ್ಕು ಹೇಳಿದಳು.

## ಕಚರಾ ಬಾಬಾ

ಅವನು ಆಸ್ಪತ್ರೆಯಿಂದ ಹೊರಗೆ ಬಂದಾಗ ಅವನ ಕಾಲುಗಳು ಕಂಪಿಸುತ್ತಿದ್ದವು. ಅವನ ದೇಹವೆಲ್ಲ ನೀರಿನಲ್ಲಿ ಅದ್ದಿದ ಹತ್ತಿಯಂತೆ ಕಾಣುತ್ತಿತ್ತು. ಅವನ ಮನಸ್ಸು ನಡೆಯಲು ಬಯಸುತ್ತಿರಲಿಲ್ಲ. ಅಲ್ಲಿಯೇ ಫುಟ್‌ಪಾತ್ ಮೇಲೆ ಕೂಡಲು ಬಯಸುತ್ತಿತ್ತು.

ಕಾಯಿದೆ ಪ್ರಕಾರ ಅವನಿಗೆ ಇನ್ನೂ ಒಂದು ತಿಂಗಳು ಆಸ್ಪತ್ರೆಯಲ್ಲಿ ಇರಬೇಕಾಗಿತ್ತು. ಆದರೆ ಆಸ್ಪತ್ರೆಯವರು ಅವನನ್ನು ಹೊರಗೆ ಹಾಕಿದ್ದರು. ನಾಲ್ಕೂವರೆ ತಿಂಗಳವರೆಗೆ ಅವನು ಆಸ್ಪತ್ರೆಯ ಪ್ರೈವೇಟ್ ವಾರ್ಡಿನಲ್ಲಿದ್ದ. ಆಮೇಲೆ ಒಂದೂವರೆ ತಿಂಗಳು ಜನರಲ್ ವಾರ್ಡಿನಲ್ಲಿದ್ದ. ಈ ಮಧ್ಯೆ ಅವನ ಒಂದು ಮೂತ್ರಪಿಂಡವನ್ನು ತೆಗೆಯಲಾಗಿತ್ತು ಮತ್ತು ಅವನ ಕರುಳಿನ ಕೊನೆಯ ಒಂದು ಭಾಗವನ್ನು ಕತ್ತರಿಸಿ ಅದರ ಕ್ರಿಯೆಯನ್ನು ಸರಿಪಡಿಸಲಾಗಿತ್ತು. ಇನ್ನೂ ಅವನ ಪಿತ್ತಕೋಶದ ಕ್ರಿಯೆಯು ಸರಿಯಾಗಿ ಆಗಿರಲಿಲ್ಲವಾದರೂ ಅವನು ಆಸ್ಪತ್ರೆಯಿಂದ ಹೊರಬೀಳಬೇಕಾಯಿತು. ಯಾಕೆಂದರೆ, ಇವನಿಗಿಂತಲೂ ಕೆಟ್ಟ ಸ್ಥಿತಿಯಲ್ಲಿದ್ದ ಬೇರೆ ಜನರು ಆಸ್ಪತ್ರೆ ಸೇರಲು ಕಾದಿದ್ದರು.

ಡಾಕ್ಟರ್ ಅವನ ಕೈಯಲ್ಲಿ ಒಂದು ಉದ್ದವಾದ ಔಷಧದ ಚೀಟಿಯನ್ನು ಕೊಟ್ಟು "ಈ ಟಾನಿಕ್ ಕುಡಿ ಮತ್ತು ಪೌಷ್ಟಿಕ ಆಹಾರವನ್ನು ತೆಗೆದುಕೊ; ಪೂರ್ತಿ ನೆಟ್ಟಗಾಗುವೆ. ಈಗ ಆಸ್ಪತ್ರೆಯಲ್ಲಿರುವ ಯಾವ ಅವಶ್ಯಕತೆಯೂ ಇಲ್ಲ" ಎಂದು ಹೇಳಿದ. "ಆದರೆ ನನ್ನಿಂದ ನಡೆಯಲಾಗುವದಿಲ್ಲ ಡಾ|| ಸಾಹೇಬ್"—ಅವನು ಅಶಕ್ತ ಸ್ವರದಲ್ಲಿ ಅಂದಾಗ,

"ಮನೆಗೆ ಹೋಗು. ಕೆಲವು ದಿನ ಹೆಂಡತಿ ಸೇವೆ ಮಾಡಿದಳೆಂದರೆ ಸಂಪೂರ್ಣ ನೆಟ್ಟಗಾಗಿಬಿಡುವೆ."

ಬಹಳ ನಿಧಾನವಾಗಿ ಹೊಯ್ದಾಡುವ ಹೆಜ್ಜೆಯಿಡುತ್ತ ಫುಟ್‌ಪಾತ್ ಮೇಲೆ ಸಾಗುತ್ತ ಅವನು ಯೋಚಿಸಿದ. "ಮನೆ! ಆದರೆ ನನ್ನ ಮನೆ ಇರುವುದಾದರೂ ಎಲ್ಲಿ?"

ಕೆಲವು ತಿಂಗಳ ಮುಂಚೆ ಅವನದೂ ಒಂದು ಮನೆ ಇತ್ತು. ಒಬ್ಬ ಹೆಂಡತಿಯೂ ಇದ್ದಳು. ಅವಳಿಗೆ ಒಂದು ಮಗು ಕೂಡ ಆಗುವದಿತ್ತು—ಅವರಿಬ್ಬರೂ ಬರಲಿರುವ ಆ ಮಗುವಿನ ಕಲ್ಪನೆಯಿಂದ ಎಷ್ಟು ಆನಂದಿತರಾಗಿದ್ದರು. ಅದಂತೂ ಅವರ ಮೊದಲ

ಮಗುವಾಗಿತ್ತು. ಜಗತ್ತಿನ ಜನಸಂಖ್ಯೆ ಹೆಚ್ಚಾದರೇನಂತೆ? ಅದಂತೂ ಅವರಿಬ್ಬರ ಮೊದಲ ಮಗು ಆಗಲಿತ್ತು. ಅವರ ಜಗತ್ತಿನ ಮೊಟ್ಟಮೊದಲ ಮಗು ಆಗುವದಿತ್ತು.

ದುಲಾರಿ ತನ್ನ ಮಗುವಿಗೆಂದು ಬಹಳ ಸುಂದರ ಬಟ್ಟೆಗಳನ್ನು ಹೊಲಿದಿದ್ದಳು. ಆಸ್ಪತ್ರೆಗೆ ಅವುಗಳನ್ನು ತಂದು ತೋರಿಸಿದ್ದಳು. ಆ ಬಟ್ಟೆಗಳ ಮೇಲೆ ಕೈಯಾಡಿಸಿದಾಗ ಅವನಿಗೆ ತಾನು ತನ್ನ ಮಗುವನ್ನು ತೋಳುಗಳಲ್ಲಿ ಎತ್ತಿಕೊಂಡು ಪ್ರೀತಿ ಮಾಡುತ್ತಿದ್ದಂತೆ ಭಾಸವಾಯಿತು.

ಆದರೆ ಮುಂದೆ ಕೆಲ ತಿಂಗಳುಗಳಲ್ಲಿ ಎಲ್ಲ ಹಾಳಾಯಿತು. ಅವನ ಮೂತ್ರಪಿಂಡದ ಮೊದಲನೆಯ ಆಪರೇಷನ್ ಆದಾಗ ದುಲಾರಿ ತನ್ನ ಒಡವೆಗಳನ್ನು—ಇಂಥ ಸಮಯಕ್ಕೆಂತಲೆ ಅವು ಇರುವುದು—ಎನ್ನುತ್ತ—ಮಾರಿದಳು. ಒಡವೆ ಹೆಣ್ಣಿನ ಸೌಂದರ್ಯವನ್ನು ಹೆಚ್ಚಿಸುತ್ತವೆ ಎಂದು ಜನರು ಭಾವಿಸುತ್ತಾರೆ. ಆದರೆ ಅವು ಇನ್ನೊಬ್ಬರ ನೋವಿನ ಔಷಧಿಯೂ ಆಗಿರುತ್ತವೆ. ಗಂಡನ ಆಪರೇಷನ್, ಮಕ್ಕಳ ವಿದ್ಯಾಭ್ಯಾಸ, ಮಗಳ ಮದುವೆ,—ಈ ಬ್ಯಾಂಕ್ ಇಂತಹ ಪ್ರಸಂಗಗಳಲ್ಲಿ ತೆರೆಯುತ್ತದೆ; ಮತ್ತು ಅದನ್ನು ಖಾಲಿ ಮಾಡಲಾಗುತ್ತದೆ. ಹೆಣ್ಣಂತೂ ಈ ಒಡವೆಗಳ ರಕ್ಷಕಳು ಮಾತ್ರ. ಜೀವನದಲ್ಲಿ ಪ್ರಯಾಸದಿಂದ ಐದಾರು ಸಲ ಮಾತ್ರ ಅವಳಿಗೆ ಈ ಆಭರಣಗಳನ್ನು ಧರಿಸುವ ಸೌಭಾಗ್ಯ ಪ್ರಾಪ್ತವಾಗುತ್ತದೆ.

ಮೂತ್ರಪಿಂಡದ ಎರಡನೆಯ ಆಪರೇಷನ್ನಿಗೆ ಮೊದಲು, ದುಲಾರಿಗೆ ಗರ್ಭಪಾತವಾಯಿತು. ಅದು ಆಗುವದೇ ಇತ್ತು.—ದುಲಾರಿಗೆ ಹಗಲು ರಾತ್ರಿ ಕಠಿಣ ಪರಿಶ್ರಮ ಮಾಡಬೇಕಾಗಿದ್ದುದರಿಂದ ಆ ಸ್ಥಿತಿಯಲ್ಲಿ ಅಪಾಯವು ಮೊದಲಿನಿಂದಲೂ ಇದ್ದೇ ಇತ್ತು. ದುಲಾರಿಯ ತೆಳುವಾದ ಹೊಂಬಣ್ಣದ ದೇಹವು ಇಂಥ ಕಠಿಣ ಪರಿಶ್ರಮಕ್ಕೆಂದು ಮಾಡಿದ್ದಿಲ್ಲವೆಂದು ಅನಿಸುತ್ತಿತ್ತು. ಆದ್ದರಿಂದಲೇ ಆ ಬುದ್ಧಿವಂತ ಮಗು ಮಧ್ಯದಲ್ಲಿಯೇ ಎಲ್ಲಿಯೋ ಜಾರಿಕೊಂಡಿತ್ತು. ಈ ಕಠಿಣ ವಾತಾವರಣವನ್ನು ನೋಡಿ ಮತ್ತು ತಂದೆ ತಾಯಿಗಳ ದುರ್ಭಿಕ್ಷ ಸ್ಥಿತಿ ಅರ್ಥ ಮಾಡಿಕೊಂಡು ಅವನು ಸ್ವಯಂ ಹುಟ್ಟುವದು ಉಚಿತವೆಂದು ತಿಳಿಯಲಿಲ್ಲ. ಕೆಲವು ಮಕ್ಕಳು ಇಷ್ಟು ಬುದ್ಧಿವಂತರಾಗಿರುತ್ತವೆ. ದುಲಾರಿಗೆ ಎಷ್ಟೋ ದಿನಗಳವರೆಗೆ ಆಸ್ಪತ್ರೆಗೆ ಹೋಗಲು ಶಕ್ಯವಾಗಲಿಲ್ಲ. ಅವಳು ಹೋಗಿ ಸುದ್ದಿ ತಿಳಿಸಿದಾಗ ಅವನು ಎಷ್ಟು ಅತ್ತಿದ್ದ, ಒಂದು ವೇಳೆ ಅವನಿಗೆ ಮುಂದೆ ತಾನು ಇದಕ್ಕಿಂತಲೂ ಎಷ್ಟೋ ಹೆಚ್ಚು ಅಳಬೇಕಾಗುವದೆಂದು ಗೊತ್ತಿದ್ದರೆ ಈ ಘಟನೆಯ ಬಗ್ಗೆ ಅಳುವ ಬದಲು ಸಂತೋಷಪಡುತ್ತಿದ್ದನೇನೊ!

ಮೂತ್ರಪಿಂಡದ ಎರಡನೆಯ ಆಪರೇಷನ್ ಆದ ಬಳಿಕ ಅವನ ನೌಕರಿ ಹೋಗುವದರಲ್ಲಿತ್ತು. ದೀರ್ಘವಾದ ಅನಾರೋಗ್ಯದಲ್ಲಿ ಇದು ಆಗುವದೇ ಹೀಗೆ. ಯಾರು ಎಷ್ಟೊಂದು ನಿರೀಕ್ಷೆ ಮಾಡಬಲ್ಲರು. ರೋಗವು ಮನುಷ್ಯನ ವೈಯಕ್ತಿಕ ವಿಷಯ.

ಆದ್ದರಿಂದ ಅವನು ತನ್ನ ನೌಕರಿ ಉಳಿಯಬೇಕೆಂದು ಇಷ್ಟಪಟ್ಟರೆ ಹಾಸಿಗೆ ಹಿಡಿಯಬಾರದು. ಮನುಷ್ಯ ಯಂತ್ರದಂತೆ ಇರುವನು. ಒಂದು ಯಂತ್ರ ಬಹಳ ಸಮಯದ ವರೆಗೆ ಕೆಟ್ಟಿದ್ದರೆ ಅದನ್ನು ಎತ್ತಿ ಒಂದು ಕಡೆ ಇಟ್ಟು ಅದರ ಸ್ಥಾನದಲ್ಲಿ ಹೊಸ ಯಂತ್ರ ತರಲಾಗುತ್ತದೆಯೇ ವಿನಹ ಕೆಲಸ ನಿಲ್ಲಿಸಲು ಸಾಧ್ಯವಿಲ್ಲ. ವ್ಯವಹಾರ ಬಂದಾಗಲೂ ಸಾಧ್ಯವಿಲ್ಲ; ಮತ್ತು ಸಮಯ ನಿಲ್ಲುವದಿಲ್ಲ. ಆದ್ದರಿಂದಲೇ ತನ್ನ ನೌಕರಿಯು ಹೋಗುತ್ತದೆ ಎಂದು ಅವನಿಗೆ ಗೊತ್ತಾದಾಗ ತನ್ನ ಇನ್ನೊಂದು ಮೂತ್ರಪಿಂಡ ವನ್ನೂ ಸಹ ತೆಗೆದುಹಾಕಲಾಗಿದೆಯೇನೋ ಎನ್ನುವಷ್ಟು ಭಾರೀ ಆಘಾತವಾಯಿತು. ಆ ಆಘಾತದಿಂದ ಅವನಿಗೆ ಕಣ್ಣೀರು ಕೂಡ ಬರಲಿಲ್ಲ. ಕೇವಲ ಹೃದಯದೊಳಗೆ ಶೂನ್ಯ ತುಂಬಿಕೊಂಡಂತೆ ಕಾಲಕೆಳಗಿಂದ ನೆಲ ಕುಸಿಯುತ್ತಿರುವಂತೆ ಭಾಸವಾಗಿ ನಾಡಿಗಳಲ್ಲಿ ರಕ್ತದ ಬದಲು ಭಯವು ಹರಿಯುತ್ತಿರುವಂತೆ ಅವನು ಅನುಭವಿಸಿದನು. ಎಷ್ಟೋ ದಿನಗಳವರೆಗೆ ಅವನು ಬರಲಿರುವ ಜೀವನದ ಭಯ ಮತ್ತು ಹೆದರಿಕೆಗಳಿಂದ ಮಲಗಲು ಸಾಧ್ಯವಾಗಿರಲಿಲ್ಲ. ದೀರ್ಘವ್ಯಾಧಿಯ ವೆಚ್ಚವು ದೊಡ್ಡದಾಗಿರುತ್ತದೆ. ಮೆಲ್ಲ ಮೆಲ್ಲಗೆ ಮನೆಯ ಬೆಲೆಯುಳ್ಳ ವಸ್ತುಗಳು ಹೋದವು. ಆದರೆ ದುಲಾರಿ ಧೈರ್ಯಗುಂದಲಿಲ್ಲ. ಅವಳು ನಾಲ್ಕೈವರೆ ತಿಂಗಳವರೆಗೆ ತನ್ನ ಗಂಡನನ್ನು ಪ್ರಾಯ್‌ವೇಟ್ ವಾರ್ಡಿನಲ್ಲಿ ಇಟ್ಟಳು, ಅವನಿಗೆ ಉತ್ಕೃಷ್ಟ ಚಿಕಿತ್ಸೆ ಮಾಡಿಸಿದಳು. ತನ್ನ ಮನೆಯ ಒಂದೊಂದು ವಸ್ತುವನ್ನು ಮಾರಿದಳು ಮತ್ತು ಕೊನೆಗೆ ನೌಕರಿಯನ್ನು ಕೂಡ ಮಾಡಹತ್ತಿದಳು. ಅವಳು ಒಂದು ಫರ್ಮ್‌ನಲ್ಲಿ ನೌಕರಿಗೆ ಸೇರಿದಳು. ಒಂದು ದಿನ ಫರ್ಮ್‌ಇನ ಮಾಲಕನನ್ನು ಆಸ್ಪತ್ರೆಗೆ ಕೂಡ ಕರೆದುಕೊಂಡು ಬಂದಿದ್ದಳು. ಅವನು ಒಬ್ಬ ಬಡಕಲ, ಗಿಡ್ಡ ನಿಲುವಿನ, ಮಧ್ಯ ವಯಸ್ಸಿನ ನಾಚುವ ಮನುಷ್ಯನಂತೆ ಕಾಣಿಸುತ್ತಿದ್ದ. ಕಡಿಮೆ ಮಾತನಾಡುವವ ಮತ್ತು ಮುದ್ದಾದ ಮುಗುಳ್ನಗೆಯನ್ನು ಬೀರುವವನಾಗಿದ್ದ. ರೂಪಲಕ್ಷಣದಿಂದ ಅವನು ಯಾವುದೋ ಫರ್ಮ್‌ಇನ ಮಾಲಕನ ಬದಲು ಪುಸ್ತಕದ ಯಾವುದೋ ಅಂಗಡಿಯ ಮಾಲಕನ ಹಾಗೆ ತೋರುತ್ತಿದ್ದ. ದುಲಾರಿ ಅವನ ಫರ್ಮ್‌ನಲ್ಲಿ ತಿಂಗಳಿಗೆ 200 ರೂಪಾಯಿಯ ಮೇಲೆ ಕೆಲಸಕ್ಕೆ ಸೇರಿದ್ದಳು. ಅವಳು ಹೆಚ್ಚಿಗೆ ಕಲಿತಿದ್ದಿಲ್ಲವಾದ್ದರಿಂದ ಅವಳ ಕೆಲಸವು ಪಾಕೀಟುಗಳ ಮೇಲೆ ಅಂಚೆ ಚೀಟಿ ಅಂಟಿಸುವದಾಗಿತ್ತು.

"ಇದಂತೂ ಬಹಳ ಹಗುರಾದ ಕೆಲಸ"—ಎಂದ ದುಲಾರಿಯ ಗಂಡ.

"ಕೆಲಸವೇನೊ ಹಗುರಾಗಿದೆ. ಆದರೆ ದಿನಾಲು 5-6 ನೂರು ಪತ್ರಗಳ ಮೇಲೆ ಅಂಚೆ ಚೀಟಿ ಹಚ್ಚುವದಿದ್ದರೆ ಇಂಥ ಹಗುರಾದ ಕೆಲಸವು ಕೂಡ ಕಷ್ಟಕರ ವಾಗುತ್ತದೆ"—ಫರ್ಮ್‌ಇನ ಮಾಲಕ ಹೇಳಿದ.

ದುಲಾರಿ ಮುಗುಳ್ನಕ್ಕು ಅಂದಳು—"ನಿಜ. ಬಹಳ ದಣಿಯುತ್ತೇನೆ."

ಫರ್ಮ್‌ಇನ ಮಾಲಕ ಅವನಿಗೆ ಹೇಳಿದ—"ನೆಟ್ಟಗಾದ ಮೇಲೆ ನೀವು ನಿಮ್ಮ

ಹೆಂಡತಿಯ ಬದಲು ಸ್ಟ್ಯಾಂಪು ಅಂಟಿಸುವ ಕೆಲಸವನ್ನು ಮಾಡುವಿರಂತೆ. ನಾನು ಈ ಕೆಲಸವನ್ನು ನಿಮಗೆ ಒಪ್ಪಿಸುತ್ತೇನೆ."

ಫರ್ಮ್‌ನ ಮಾಲಕ ಹೊರಟು ನಿಂತಾಗ ದುಲಾರಿ ಅವನ ಜೊತೆ ಹೊರಟು ಹೋದಳು. ಈ ದಿನ ದುಲಾರಿಯ ನಡಿಗೆಯಲ್ಲಿ ಒಂದು ವಿಚಿತ್ರ ರೀತಿಯ ಸ್ವಾಭಿಮಾನವಿದ್ದಂತೆ ಅವನಿಗೆ ತೋರಿತು. ಅವಳ ಶರೀರವು ಯಾವುದೋ ಹೂವು ತುಂಬಿದ ಟೊಂಗೆಯಂತೆ ಬಳುಕುತ್ತಲಿತ್ತು. ಕೋಣೆಯಿಂದ ಹೊರಬೀಳುತ್ತ ಬೊಸ್ ಒಂದು ಕೈಯಿಂದ ಬಾಗಿಲು ತೆರೆದು ದುಲಾರಿಗೆ ಬಾಗಿಲಿಂದ ಹೊರಗೆ ಹೋಗಲು ಆಹ್ವಾನ ಕೊಡುತ್ತ, ಆದರಪೂರ್ವಕ ಸ್ವಲ್ಪ ಬಾಗಿದ. ಒಂದು ಕ್ಷಣದಷ್ಟು ಹೊತ್ತು ಅವನ ಇನ್ನೊಂದು ಕೈ ದುಲಾರಿಯ ಸೊಂಟದ ಮೇಲೆ ಇತ್ತು. ದುಲಾರಿಯ ಗಂಡನಿಗೆ ಫರ್ಮ್‌ನ ಬೊಸ್‌ನ ಮೊದಲಿನ ಕೈಯ ವರ್ತನೆಯಂತೂ ಮೆಚ್ಚಿಕೆಯಾಯಿತು; ಆದರೆ ಎರಡನೆಯ ಕೈಯ ಚೇಷ್ಟೆ ಸೇರಲಿಲ್ಲ. ಆದರೆ ಅವನು ತನ್ನ ಮನಸ್ಸನ್ನು ಸ್ತಿಮಿತಗೊಳಿಸಿಕೊಂಡ. ಒಂದು ಕೈ ಮಾಡಿದ್ದು ಇನ್ನೊಂದು ಕೈಗೆ ಗೊತ್ತಾಗುವದಿಲ್ಲ ಎಂದುಕೊಂಡ. ತನ್ನ ಕಣ್ಣುಗಳೇ ಮೋಸ ಹೋಗಿರಬಹುದು— ಇದೆಲ್ಲ ಕೇವಲ ಒಂದು ಭ್ರಮೆಯಾಗಿರಬಹುದಲ್ಲ? ಆದ್ದರಿಂದ ಅವನು ನೆಮ್ಮದಿಯಿಂದ ಕಣ್ಣುಮುಚ್ಚಿಕೊಂಡು ಮೃದುವಾದ ತಲೆದಿಂಬುಗಳ ಮೇಲೆ ತಲೆಯಿಟ್ಟು ಗ್ಲುಕೋಸ್ ಇಂಜಕ್ಷನ್ನಿನ ದಾರಿ ನೋಡತೊಡಗಿದ.

ಅವನ ಮೂರನೆಯ ಆಪರೇಷನ್ ಆಸ್ಪತ್ರೆಯ ಜನರಲ್ ವಾರ್ಡಿನಲ್ಲಾಯಿತು. ಆ ಸಮಯದಲ್ಲಿ ದುಲಾರಿ ಫರ್ಮ್‌ನ ಬೊಸ್ ಜೊತೆ ಡಾರ್ಜಿಲಿಂಗ್‌ಗೆ ಹೋಗಿದ್ದಳು. ಕೊನೆಗೆ ಯಾರೇ ಆಗಲಿ, ಎಲ್ಲಿಯವರೆಗೆ ಸಹಿಸಬಲ್ಲರು? ಜೀವನವು ಚಿಕ್ಕದು ಮತ್ತು ಜೀವನದ ವಸಂತವು ಅದಕ್ಕಿಂತಲೂ ಚಿಕ್ಕದಿರುತ್ತದೆ. ಯಾವಾಗ ಭಾವನೆಗಳು ಪ್ರಬಲಗೊಳ್ಳುತ್ತವೆಯೋ ಮತ್ತು ಕಣ್ಣುಗಳಲ್ಲಿ ಚಂದ್ರ ನಿಳಿದು ಬರುವನೋ, ಬೆರಳುಗಳಲ್ಲಿ ಬೆಂಕಿಯಂತಹ ಉರಿ ಭಾಸವಾಗುವದೋ ಮತ್ತು ಎದೆಯಲ್ಲಿ ಮಧುರ ಮಧುರವಾದ ನೋವು ಉಂಟಾಗುತ್ತದೆಯೋ, ಚುಂಬನಗಳು ಭ್ರಮರಗಳಂತೆ ತುಟಿಗಳ ಪಕಳೆಗಳ ಮೇಲೆ ಬೀಳುತ್ತಿರುತ್ತವೆಯೋ ಮತ್ತು ನೀಳವಾದ ಕುತ್ತಿಗೆಯ ವಕ್ರತೆ ಯಾರದೋ ಬಿಸಿ ಉಸಿರಿನ ಮೃದು ಕಾವಿಗೆ ಬಾಯಿ ಬಿಡುವದೊ, ಅಂತಹದರಲ್ಲಿ ಯಾರಾದರೂ ಎಲ್ಲಿಯವರೆಗೆ ಫಿನಾಯಿಲ್ ಮತ್ತು ಮೂತ್ರದ ವಾಸನೆ ಮೂಸಬೇಕು, ಉಗುಳು, ಕೀವು ಮತ್ತು ರಕ್ತಗಳ ಬಣ್ಣ ನೋಡಬೇಕು ಮತ್ತು ಮೃತ್ಯುವಿನ ಬಾಗಿಲವರೆಗೆ ಹೋಗಿ ಮತ್ತೆ ಮರಳಿ ಬರುವ ಬಿಕ್ಕಳಿಕೆಗಳನ್ನು ಕೇಳಬೇಕು? ಕೊನೆಗೆ ಸಹನೆಗೂ ಒಂದು ಮಿತಿಯಿದೆ. ಇಪ್ಪತ್ತು ವರ್ಷದ ಹುಡುಗಿಯ ಸಹನಶೀಲತೆಯಾದರೂ ಎಷ್ಟಿರುತ್ತದೆ? ಮದುವೆಯಾಗಿ ಇನ್ನೂ ಎರಡು ವರ್ಷಗಳಾಗಿಲ್ಲದ, ಮತ್ತು ತನ್ನ ಪತಿಯ ಜೊತೆ ಕಷ್ಟಗಳ ಹೊರತು

ಮತ್ತೀನನ್ನೂ ನೋಡಿರದ ಅವಳು ತನ್ನ ಸ್ವಪ್ನಗಳ ತಂತುಗಳಿಂದ ಬಂಧಿತಳಾಗಿ ಡಾರ್ಜಲಿಂಗಿಗೆ ಹೊರಟುಹೋದರೆ ಅದರಲ್ಲಿ ಯಾರದು ಯಾವ ದೋಷವಿದೆ?

ತಾನು ಯಾರನ್ನಾದರೂ ದೋಷಿಯಾಗಿ ನಿಲ್ಲಿಸುವ ಸ್ಥಾನವನ್ನು ಅವನು ದಾಟಿ ಹೋಗಿದ್ದ. ಒಂದರ ನಂತರ ಮತ್ತೊಂದರಂತೆ ಎಷ್ಟು ಪೆಟ್ಟುಗಳು ಅವನ ಮೇಲೆ ಬಿದ್ದಿವೆಯೆಂದರೆ ಅವನು ಸಂಪೂರ್ಣ ಶೂನ್ಯಮನಸ್ಕನಾಗಿದ್ದ, ಪೂರ್ತಿಯಾಗಿ ಹೆದರಿದ್ದ, ಸಂಪೂರ್ಣ ಚಕಿತನಾಗಿದ್ದ. ಈಗ ಅವನ ಕಷ್ಟ ಮತ್ತು ತೊಂದರೆಗಳಲ್ಲಿ ಯಾವುದೇ ಪ್ರಕಾರದ ಭಾವವಾಗಲೀ ಕಣ್ಣೀರಾಗಲೀ ಇರಲಿಲ್ಲ. ಮೇಲಿಂದಮೇಲೆ ಸುತ್ತಿಗೆಯ ಪೆಟ್ಟು ತಿಂದು ತಿಂದು ಅವನ ಮನಸ್ಸು ಒಂದು ಧಾತುವಿನ ತಗಡಿನ ಹಾಗೆ ಶೀತಲವಾಗಿತ್ತು. ಆದ್ದರಿಂದಲೇ ಇಂದು ಆಸ್ಪತ್ರೆಯಿಂದ ತನ್ನನ್ನು ಹೊರಗೆ ಹಾಕಿದಾಗ ಅವನು ಡಾಕ್ಟರರಿಗೆ ಯಾವುದೇ ಮಾನಸಿಕ ಪೀಡೆಯ ದೂರು ಹೇಳಲಿಲ್ಲ. ಅವನು ಅವರಿಗೆ ತಾನು ಆಸ್ಪತ್ರೆಯಿಂದ ಎಲ್ಲಿ ಹೋಗಬೇಕೆಂದು ಕೇಳಲಿಲ್ಲ. ಈಗ ಅವನಿಗೆ ಯಾವ ಮನೆಯೂ ಇಲ್ಲ, ಯಾವ ಹೆಂಡತಿಯೂ ಇಲ್ಲ, ಯಾವ ಮಗುವೂ ಇಲ್ಲ, ಯಾವ ನೌಕರಿಯೂ ಇಲ್ಲ. ಅವನ ಮನಸ್ಸು ಶೂನ್ಯವಾಗಿತ್ತು. ಅವನ ಜೇಬು ಖಾಲಿಯಾಗಿತ್ತು. ಅವನ ಎದಿರು ಖಾಲಿಯಾದ ಮತ್ತು ಸಪಾಟಾದ ಅವನ ಭವಿಷ್ಯವಿತ್ತು.

ಆದರೆ ಅವನು ಇದನ್ನೆಲ್ಲ ಹೇಳಿರಲಿಲ್ಲ. ಆದರೆ ಇಷ್ಟೇ ಅಂದಿದ್ದ: "ಡಾಕ್ಟರ್ ಸಾಹೇಬ, ನನ್ನಿಂದ ನಡೆಯುವದು ಆಗುವದಿಲ್ಲ."

ಸರಿ. ಇದೊಂದೇ ಮಾತು ಆಗ ಅವನಿಗೆ ನೆನಪಿತ್ತು, ಉಳಿದ ಪ್ರತಿಯೊಂದು ಮಾತೂ ಅವನ ಮನಸ್ಸಿನಿಂದ ಅಳಿಸಿಹೋಗಿತ್ತು. ಅವನಿಗೆ ನಡೆಯುತ್ತ, ನಡೆಯುತ್ತ ಹೀಗೆ ಅನಿಸುತ್ತಿತ್ತು—ಅವನ ಶರೀರವು ತೊಯ್ದ ಅರಳೆಯಿಂದ ಮಾಡಲ್ಪಟ್ಟಿದೆ, ಅವನ ಬೆನ್ನೆಲುವು ಯಾವುದೊ ಹಳೆಯ ಮಂಚದ ಹಾಗೆ ಚಟಚಟ ಎನ್ನುತ್ತದೆ, ಬಿಸಿಲು ಬಹಳ ತೀಕ್ಷ್ಣವಾಗಿದೆ, ಬೆಳಕು ಬಾಣದ ಹಾಗೆ ಚುಚ್ಚುತ್ತಿದೆ, ಆಕಾಶದಲ್ಲಿ ಒಂದು ಬಗೆಯ ಹೊಲಸು ಹಳದಿ ಬಣ್ಣದ ವಾರ್ನಿಶನ್ನು ಸವರಲಾಗಿದೆ. ವಾತಾವರಣದಲ್ಲಿ ಕಪ್ಪಾದ ಅಣುಗಳು ಮತ್ತು ಚಿಂದಿಗಳು ಹೊಲಸು ನೊಣಗಳಂತೆ ಜೇಂಗುಡುತ್ತಲಿದ್ದವು ಮತ್ತು ಜನರ ದೃಷ್ಟಿ ಹೊಲಸು ರಕ್ತ ಮತ್ತು ಕೀವುಗಳ ಹಾಗೆ ಅವನ ಶರೀರಕ್ಕೆ ತಾಕಿ ಅಲ್ಲೇ ಅಂಟಿಕೊಂಡಂತೆ ಅನಿಸುತ್ತಿತ್ತು. ಅವನಿಗೆ ಓಡಿ ಹೋಗಬೇಕು, ಎಲ್ಲೋ ದೂರ, ಈ ಎತ್ತರವಾದ ತೊಡಕುಗೊಂಡ ವಿದ್ಯುತ್ ತಂತಿಯುಳ್ಳ ಕಂಬಗಳ ಮತ್ತು ವಾಹನಗಳ ಚಲನೆಯಿಂದ ಗಡ-ಗಡ ಆಗುತ್ತಿರುವ ರಸ್ತೆಗಳಿಂದ ಎಲ್ಲೋ ದೂರ ಓಡಿಹೋಗಬೇಕು, ಎನ್ನಿಸಹತ್ತಿತು. ಅವನಿಗೆ ತೀರಿ ಹೋದ ತನ್ನ ತಾಯಿ, ತಂದೆಯ ನೆನಪಾಯಿತು. ತನ್ನ ಅಣ್ಣನ ನೆನಪು ಬಂದಿತು. ಅವನು ಆಫ್ರಿಕಾದಲ್ಲಿದ್ದ. ಸನ್-ಸನ್-ಸನ್ ಎಂದು ಒಂದು ಟ್ರಾಮ್ ಅವನ

ಸಮೀಪದಿಂದ ಹೋಗತೊಡಗಿತು. ಟ್ರಾಮ್‌ಇನ ವಿದ್ಯುತ್ ಛಡಿಯು, ವಿದ್ಯುತ್ತಿನ ಉದ್ದವಾದ ತಂತಿಗೆ ತಿಕ್ಕುತ್ತ, ಅವನ ಶರೀರದ ಒಳಸೇರುತ್ತದೆಯೇನೊ ಎನ್ನುವಂತೆ ಹೊರಟಿತ್ತು. ಅವನು ಇಡೀ ಟ್ರಾಮ್ ತನ್ನ ಶರೀರದ ಒಳಗೆ ಹೋಗುತ್ತಿದ್ದಂತೆ ಅನುಭವಿಸಲು ಶಕ್ಯನಾಗಿದ್ದ, ಅವನಿಗೆ ತಾನು ಒಬ್ಬ ಮನುಷ್ಯನಲ್ಲ—ಒಂದು ಸವೆದ, ತುಳಿಯಲ್ಪಟ್ಟ ರಸ್ತೆಯೆಂದು ಅನ್ನಿಸಹತ್ತಿತು.

ಅವನು ಸಾಕಷ್ಟು ಹೊತ್ತಿನವರೆಗೆ ನಡೆಯುತ್ತಲೇ ಇದ್ದ. ತೇಕುತ್ತ ಅನುಮಾನಿಸುತ್ತ ಎಲ್ಲಿ ಎಂದೂ ತನ್ನ ಮನೆಯಿದ್ದಿಲ್ಲವೋ ಅಂಥ ಒಂದು ಅಪರಿಚಿತ ರಸ್ತೆಯ ಕಡೆ ನಡೆಯುತ್ತಲಿದ್ದ. ತನಗೀಗ ಯಾವ ಮನೆಯೂ ಇಲ್ಲ ಎಂಬುದು ಗೊತ್ತಿದ್ದರೂ ಕೂಡ, ಮನೆಗೆ ಹೋಗಬೇಕೆಂಬ ಅಭ್ಯಾಸ ಬಲದಿಂದ ಅಸಹಾಯಕನಾಗಿ ಅದೇ ಕಡೆಗೆ ನಡೆಯುತ್ತಿದ್ದ. ಆದರೆ ಬಿಸಿಲು ಬಹಳ ತೀಕ್ಷ್ಣವಾಗಿತ್ತು ಮತ್ತು ಅವನ ದೇಹದಲ್ಲಿ ಇರುವೆಗಳು ಹರಿದಾಡುತ್ತಿರುವಂತೆ ಅವನಿಗೆ ಭಾಸವಾಗುತ್ತಿತ್ತು. ಅವನು ದಾರಿಯನ್ನು ಮರೆತುಬಿಟ್ಟಿದ್ದ, ಯಾರಾದರೂ ದಾರಿಹೋಕರನ್ನು ಕೇಳಿ ಇದು ಪಟ್ಟಣದ ಯಾವ ಭಾಗವೆಂಬುದನ್ನು ಗುರ್ತುಮಾಡಿಕೊಳ್ಳುವಷ್ಟು ಕೂಡ ಅವನ ದೇಹದಲ್ಲಿ ಚೈತನ್ಯ ಉಳಿದಿರಲಿಲ್ಲ. ಮೆಲ್ಲಮೆಲ್ಲನೆ ಅವನ ಕಿವಿಗಳಲ್ಲಿ ಟ್ರಾಮ್ ಮತ್ತು ಬಸ್ಸುಗಳ ಸಪ್ಪಳ ಹೆಚ್ಚಾಗುತ್ತಿತ್ತು. ಕಣ್ಣುಗಳಿಗೆ ಗೋಡೆಗಳು ಡೊಂಕಾಗಿ ಕಾಣತೊಡಗಿದವು. ಕಟ್ಟಡಗಳು ಬೀಳುತ್ತಿರುವಂತೆ, ವಿದ್ಯುತ್ ಕಂಬಗಳು ಹೊಯ್ದಾಡತೊಡಗಿದಂತೆ ಅನ್ನಿಸಹತ್ತಿತು. ಬಳಿಕ ಅವನ ಕಣ್ಣುಗಳ ಕೆಳಗೆ ಕತ್ತಲು ಮತ್ತು ಹೆಜ್ಜೆಗಳ ಕೆಳಗೆ ಭೂಮಿ ಕಂಪಿಸಿದಂತಾಗಿ ಅವನು ಒಮ್ಮೆಲೆ ನೆಲದಮೇಲೆ ಬಿದ್ದ.

ಅವನು ಎಚ್ಚರಗೊಂಡಾಗ ರಾತ್ರಿಯಾಗಿತ್ತು. ತಂಪಾದ ಕತ್ತಲೆಯು ನಾಲ್ಕು ಕಡೆಗೂ ಆವರಿಸಿತ್ತು. ಅವನು ಕಣ್ಣುಗಳನ್ನು ತೆರೆದು ನೋಡಿದಾಗ ತಾನು ಬಿದ್ದ ಜಾಗದಲ್ಲೆ ಇಲ್ಲಿಯವರೆಗೂ ಬಿದ್ದುಕೊಂಡಿರುವೆನೆಂಬುದು ತಿಳಿಯಿತು. ಅದು ಫುಟ್‌ಪಾಥ್‌ದ ಒಂದು ತಿರುವಾಗಿತ್ತು. ಆ ತಿರುವಿನ ಹಿಂದುಗಡೆ ಎರಡೂ ಕಡೆ ಎರಡು ಗೋಡೆಗಳು ಹೊರಟಿದ್ದವು. ಒಂದು ಗೋಡೆ ಫುಟ್‌ಪಾಥಿಗೆ ತಾಕಿಕೊಂಡು ಸೀದಾ ಉತ್ತರದಿಂದ ದಕ್ಷಿಣಕ್ಕೆ ಹೊರಟುಹೋಗಿತ್ತು, ಇನ್ನೊಂದು ಉತ್ತರದಿಂದ ಪಶ್ಚಿಮಕ್ಕೆ. ಆವೆರಡೂ ಗೋಡೆಗಳು ಕೂಡುವ ಸ್ಥಳದಲ್ಲಿ ಅವನು ಒರಗಿದ್ದ. ಈ ಎರಡೂ ಗೋಡೆಗಳು ಸುಮಾರು ನಾಲ್ಕು ಅಡಿಗಳಷ್ಟು ಎತ್ತರವಾಗಿದ್ದವು. ಈ ಗೋಡೆಗಳ ಹಿಂದೆ ಬಿದಿರಿನ ಪೊದೆಗಳಿದ್ದವು, ಮೊನೊಲಿಯಾದ ಬಳ್ಳಿಗಳಿದ್ದವು, ಪೇರಲ ಮತ್ತು ನೀರಲ ಗಿಡಗಳಿದ್ದವು, ಮತ್ತು ಆ ಗಿಡಗಳ ಹಿಂದೆ ಏನು ಇತ್ತೆಂಬುದು ಅವನಿಗೆ ಆಗ ಕಾಣಿಸುತ್ತಿರಲಿಲ್ಲ. ಇನ್ನೊಂದು ಕಡೆ ಪಶ್ಚಿಮದ ಗೋಡೆಯ ಎದುರು 25-30 ಅಡಿಗಳಷ್ಟು ಅಂತರ ಬಿಟ್ಟು ಒಂದು ಹಳೆಯ ಕಟ್ಟಡದ ಹಿಂಭಾಗವಿತ್ತು. ಮೂರು ಅಂತಸ್ತಿನ ಮನೆ ಅದು ಮತ್ತು ಪ್ರತಿ ಅಂತಸ್ತಿಗೂ ಹಿಂದುಗಡೆ ಕೇವಲ

ಒಂದು ಕಿಡಕಿ ಇತ್ತು ಮತ್ತು ಆರು ದೊಡ್ಡ ದೊಡ್ಡ ಪಾಯಿಪ್ ಇದ್ದವು. ಹಿಂದಿನ ಪಾಯಿಪ್ ಮತ್ತು ಪಶ್ಚಿಮದ ಗೋಡೆಯ ಮಧ್ಯದಲ್ಲಿ 25-30 ಅಡಿ ಅಗಲದ ಒಂದು 'ಅಂಧಿ ಗಲ್ಲಿ' ಆಗಿತ್ತು. ಅದರ ಮೂರೂ ಕಡೆಗೂ ಗೋಡೆಗಳಿದ್ದವು ಮತ್ತು ಒಂದು ಕಡೆ ರಸ್ತೆಯಿದ್ದಿತು. ಎಲ್ಲೋ ದೂರ ಯಾವುದೋ ಚರ್ಚಿನ ಗಂಟೆ ರಾತ್ರಿಯ ಮೂರು ಬಾರಿಸಿತು. ಅವನು ಫುಟ್‌ಪಾಥ್ ಮೇಲೆ ಒರಗಿಯೇ ತನ್ನ ಮೊಳಕೈಗಳ ಮೇಲೆ ಭಾರ ಹಾಕಿ ಸ್ವಲ್ಪ ಮೇಲೆ ಎದ್ದು ಅತ್ತ-ಇತ್ತ ನೋಡತೊಡಗಿದ. ರಸ್ತೆ ಸಂಪೂರ್ಣ ಖಾಲಿ ಇತ್ತು. ಎದುರಿನ ಅಂಗಡಿಗಳು ಮುಚ್ಚಿದ್ದವು. ಫುಟ್‌ಪಾಥ್‌ದ ಕತ್ತಲೆಯ ನೆರಳಿನಲ್ಲಿ ಅಲ್ಲಲ್ಲಿ ರಸ್ತೆಯನ್ನು ಬೆಳಗಲು ಅಶಕ್ತವಾದ ವಿದ್ಯುತ್ ಬಲ್ಬುಗಳು ಮಿನುಗುತ್ತಲಿದ್ದವು. ಕೆಲವು ಕ್ಷಣಗಳವರೆಗೆ ಅವನಿಗೆ ಈ ತಣ್ಣನೆಯ ಕತ್ತಲೆಯು ಬಹಳ ಹಿತವೆನಿಸಿತು. ಹಲವು ಕ್ಷಣಗಳವರೆಗೆ ಅವನು ಕಣ್ಣುಗಳನ್ನು ಮುಚ್ಚಿಕೊಂಡು ಬಹುಶಃ ತಾನು ಯಾವುದೋ ಕೃಪಾಳು ಸಮುದ್ರದ ನೀರಿನಲ್ಲಿ ಮುಳುಗುತ್ತಲಿದ್ದೇನೆ ಎನ್ನುವಂತೆ ಯೋಚಿಸಿದ.

ಆದರೆ ಈ ಅನುಭವದಿಂದ ತನ್ನಷ್ಟಕ್ಕೆ ತಾನೇ ಕೆಲವು ಕ್ಷಣಗಳವರೆಗೆ ಮಾತ್ರ ಮೋಸ ಮಾಡಿಕೊಳ್ಳಲು ಶಕ್ಯವಾಯಿತು. ಯಾಕೆಂದರೆ, ಈಗ ಅವನಿಗೆ ತುಂಬ ಹಸಿವೆಯಾಗಿತ್ತು. ಕೆಲವು ಕ್ಷಣಗಳ ಮೋಹಕ ಚಳಿಯನಂತರ ಅವನು ತಾನು ಬಹಳ ಹಸಿದಿದ್ದೇನೆಂದು ಮನಗಂಡನು. ಅವನ ಕರುಳುಗಳ ಆಪರೇಷನ್ ಆದಂದಿನಿಂದ ಅವನಿಗೆ ಬಹಳ ಹಸಿವಾಗುತ್ತಿತ್ತು. ಡಾಕ್ಟರರು ತನ್ನ ಕರುಳುಗಳ ಕ್ರಿಯೆಯನ್ನು ಜಾಗೃತಿಗೊಳಿಸಿ ತನಗೆ ಯಾವ ಒಳಿತನ್ನೂ ಮಾಡಲಿಲ್ಲವೆಂದು ಅವನು ಯೋಚಿಸಿದ. ಅವನ ಹೊಟ್ಟೆಯ ಒಳಗೆ ವಿಚಿತ್ರವಾದ ಹಿಂಡುವಿಕೆ ಆಗುತ್ತಿತ್ತು, ಮತ್ತು ಕರುಳುಗಳು ಒಳಗಿಂದೊಳಗೆಯೇ ತಳಮಳಗೊಂಡು ರೊಟ್ಟಿಯ ಪ್ರಶ್ನೆಯನ್ನು ಮಾಡುತ್ತಲಿದ್ದವು. ಈ ಸಮಯದಲ್ಲಿ ಅವನ ಮೂಗಿನ ಹೊರಳೆಗಳು ಯಾವುದೇ ನಗರವಾಸಿಯ ಮೂಗಿನ ಹೊರಳೆಯಂತೆ ಇರದೆ ಯಾವುದೋ ಕಾಡುಪಶುವಿನ ಹೊರಳೆಯ ಹಾಗೆ ಕೆಲಸ ಮಾಡುತ್ತಿದ್ದವು. ಚಿತ್ರ ವಿಚಿತ್ರವಾದಂಥ ವಾಸನೆಗಳನ್ನು ಅವನು ಗುರುತಿಸಬಲ್ಲವನಾಗಿದ್ದ. ಸುಗಂಧಗಳ ಒಂದು 'ಸಿಂಫನಿ'ಯು ಅವನ ಚೇತನೆಯ ಮೇಲೆ ಹರಡಿತ್ತು. ಆಶ್ಚರ್ಯದ ವಿಷಯವೆಂದರೆ ಅವನು ಈ 'ಸಿಂಫನಿ'ಯ ಪ್ರತಿಯೊಂದು ಸ್ವರದ ಬೇರೆ ಬೇರೆ ಅಸ್ತಿತ್ವವನ್ನು ಗುರುತಿಸಬಲ್ಲವನಾಗಿದ್ದ. ಇದು ನೇರಳೆಯ ಸುವಾಸನೆ; ಇದು ಪೇರಲದ್ದು; ಇದು ರಾತ್ರಿ ರಾಣಿಯ ಹೂವಿನದು; ಇದು ಎಣ್ಣೆಯಲ್ಲಿ ಕರಿದ ಪುರಿಗಳದ್ದು; ಇದು ಉಳ್ಳೇಗಡ್ಡಿ ಮತ್ತು ಬೆಳ್ಳುಳ್ಳಿಯ ಒಗ್ಗರಣೆ ಕೊಟ್ಟ ಆಲೂಗಡ್ಡೆಯದು; ಇದು ಮೂಲಂಗಿಯದು; ಇದು ಟೊಮೇಟೋದ್ದು; ಇದು ಯಾವುದೋ ಹಣ್ಣಿನದು; ಇದು ಮೂತ್ರದ್ದು; ಇದು ನೀರಿನಲ್ಲಿ ನೆನೆದ ಮಣ್ಣಿನದು—ಅದು ಬಹುಶಃ ಬಿದಿರಿನ ಪೊದೆಯಿಂದ ಬರುತ್ತಿತ್ತು. ಅವನು ಪ್ರತಿ ರೂಪ, ಭಾವ, ಗತಿ

*

ಮತ್ತು ಉಗ್ರತೆಗಳನ್ನು ಗುರುತಿಸಿ ಅನುಭವಿಸಲು ಶಕ್ಯನಾಗಿದ್ದ. ಒಮ್ಮೆಲೆ ಯಾವ ಪ್ರಕಾರ ಹಸಿವು ತನ್ನ ಅಡಗಿದ ಶಕ್ತಿಗಳನ್ನು ಎಚ್ಚರಿಸಿದೆಯೆಂಬುದು ಅವನಿಗೆ ಅರ್ಥವಾಯಿತು. ಕೂಡಲೆ ಅವನು ಬೆಚ್ಚಿದ. ಆದರೆ ಈ ಮಾತಿನ ಬಗ್ಗೆ ಹೆಚ್ಚು ಧ್ಯಾನ ಕೊಡದೆ ಅವನು ಎಣ್ಣೆಯಲ್ಲಿ ಕರಿದ ಪುರಿ ಮತ್ತು ಉಳ್ಳೀಗಡ್ಡಿಯ ಒಗ್ಗರಣೆ ಕೊಟ್ಟ ಆಲೂಗಡ್ಡೆಯ ವಾಸನೆ ಬರುತ್ತಿದ್ದ ದಿಕ್ಕಿನ ಕಡೆಗೆ ಹೊಟ್ಟೆ ಹೊಸೆಯಹತ್ತಿದ. ಅವನು ಮೆಲ್ಲಮೆಲ್ಲಗೆ ಅಂಧೇರಿ ಗಲ್ಲಿಯ ಒಳಗೆ ಹೊಟ್ಟೆ ತೆವಳಹತ್ತಿದ. ಎದ್ದು ನಡೆಯಲು ಅವನ ಶರೀರದಲ್ಲಿ ಎಳ್ಳಷ್ಟೂ ಶಕ್ತಿ ಇರಲಿಲ್ಲ. ಪ್ರತಿಕ್ಷಣವೂ ತಾನು ಆಳವಾದ ನೀರಿನಲ್ಲಿ ಮುಳುಗುತ್ತಿರುವಂತೆ ಅವನಿಗೆ ಅನಿಸುತ್ತಿತ್ತು. ಬಳಿಕ ಯಾವನೋ ಅಗಸ ತನ್ನ ಕರುಳುಗಳನ್ನು ಒಟ್ಟುಗೂಡಿಸಿ ಹಿಡಿದು ಹಿಂಡುತ್ತಿದ್ದಾನೆಂಬಂತೆ ಭಾಸವಾಗ ತೊಡಗಿತು. ನಂತರ ಅವನಿಗೆ ಹಸಿವನ್ನು ಕೆರಳಿಸುವ ಪೂರಿ ಮತ್ತು ಆಲೂಗಡ್ಡೆಯ ವಾಸನೆ ಬಂದಿತು. ಅವನು ಅಧೀರನಾಗಿ ಅರೆ ಮುಚ್ಚಿದ ಕಣ್ಣುಗಳಿಂದ ತನ್ನ ಬಹುತೇಕ ಅರೆಜೀವವಾದ ಶರೀರವನ್ನು ಆಲೂ-ಪೂರಿಯ ವಾಸನೆ ಬರುತ್ತಿದ್ದ ಕಡೆ ಎಳೆಯಲು ಪ್ರಯತ್ನಿಸುತ್ತಿದ್ದ.

ಸ್ವಲ್ಪ ಸಮಯದನಂತರ ಅವನು ಆ ಸ್ಥಾನವನ್ನು ತಲುಪಿದಾಗ ಪಶ್ಚಿಮ ಗೋಡೆ ಮತ್ತು ಅದರ ಎದುರಿನ ಕಟ್ಟಡದ ಹಿತ್ತಲದ ಪಾಯಿಪ್‌ಗಳ ಮಧ್ಯೆ 25-30 ಫೂಟು ಅಂತರದಮೇಲೆ ಕಸದ ಒಂದು ಬಹಳ ದೊಡ್ಡ ತೆರೆದ ಕಬ್ಬಿಣದ ಟಬ್ ಇಟ್ಟಿದ್ದನ್ನು ಕಂಡ. ಈ ಟಬ್ ಸುಮಾರು 15 ಅಡಿ ಅಗಲವಿದ್ದಿರಬಹುದು ಮತ್ತು 30 ಅಡಿ ಉದ್ದ. ಅದರಲ್ಲಿ ಬಗೆಬಗೆಯ ಕಸ, ಹುಲ್ಲು ತುಂಬಿತ್ತು. ಕೊಳೆತ, ಕೆಟ್ಟ ಹಣ್ಣುಗಳ ಸಿಪ್ಪೆ ಮತ್ತು ಡಬಲ್‌ರೋಟಿಯ ಹೋಲಸಾದ ತುಣುಕುಗಳು ಚಹಾಪುಡಿ ಎಲೆಗಳು ಮತ್ತು ಒಂದು ಹಳೆಯ ಜಾಕೆಟ್, ಮಕ್ಕಳ ಹೊಲಸಾದ ಹಾಸಿಗೆಗಳು, ತತ್ತಿಗಳ ಚಿಪ್ಪುಗಳು, ವರ್ತಮಾನ ಪತ್ರಗಳ ತುಂಡುಗಳು, ಪತ್ರಿಕೆಗಳ ಹರಿದ ಪುಟಗಳು, ರೊಟ್ಟಿಯ ತುಣುಕುಗಳು, ಕಬ್ಬಿಣದ ತುಂಡುಗಳು, ಪ್ಲಾಸ್ಟಿಕ್‌ದ ಮುರಿದ ಆಟಗೆಗಳು, ಬಟಾಣಿಯ ಸಿಪ್ಪೆಗಳು, ಬಾಳೆಯ ಎಲೆಯ ಮೇಲೆ ಸ್ವಲ್ಪ ಎಂಜಲಾದ ಪುರಿಗಳು ಮತ್ತು ಆಲೂಪಲ್ಲೆ. ಪೂರಿ ಮತ್ತು ಆಲೂಗಡ್ಡೆಯ ಪಲ್ಯಗಳನ್ನು ನೋಡಿ ಅವನ ಕರುಳುಗಳು ಹೊರಗೆ ಕಿತ್ತುಬಂದವೇನೊ, ಅವನು ಕೆಲವು ಕ್ಷಣಗಳವರೆಗೆ ತನ್ನ ಅಧೀರ ಕೈಗಳನ್ನು ತಡೆದುಕೊಂಡ. ಆದರೆ ಇತರ ಸುಗಂಧಗಳ ಎದುರಿಗೆ ಅವನ ಮೂಗಿನ ಹೊರಳೆಗಳಲ್ಲಿ ಮುಂದಿನ ಕೆಲವು ಕ್ಷಣಗಳವರೆಗೆ ಪೂರಿ ಮತ್ತು ಪಲ್ಯಗಳ, ಹಸಿವನ್ನು ಜಾಗೃತಗೊಳಿಸುವ ವಾಸನೆಯು ಯಾವುದೋ 'ಸಿಂಫನಿ'ಯಲ್ಲಿ ಒಂದು ವಿಶೇಷ ಸ್ವರವು ತಟ್ಟನೆ ಎತ್ತರವಾಗುವ ತರದಲ್ಲಿ ತೀಕ್ಷ್ಣ, ತೀಕ್ಷ್ಣವಾಗುತ್ತ ಹೋಯಿತು ಮತ್ತು ಒಮ್ಮೆಲೆ ಸಭ್ಯತೆಯ ಗೋಡೆಗಳು ಕುಸಿದುಬಿದ್ದವು. ನಡಗುತ್ತಿದ್ದ ಅಧೀರ ಕೈಗಳು ಆ ಬಾಳೆಯ ಎಲೆಯನ್ನು ಹಿಡಿದುಕೊಂಡವು. ಅವನು

ಒಂದು ಅಮಾನುಷ ಹಸಿವೆಯಿಂದ ಅಸಹಾಯಕನಾಗಿ ಆ ಪೂರಿಗಳನ್ನು ಧ್ವಂಸ ಮಾಡತೊಡಗಿದ. ಪೂರಿ, ಪಲ್ಯ ತಿಂದು ಅವನು ಬಾಳೆಯ ಎಲೆಯನ್ನು ಮೇಲಿಂದ ಮೇಲೆ ನೆಕ್ಕಿದ ಮತ್ತು ನೆಕ್ಕಿ-ನೆಕ್ಕಿ ಪ್ರಕೃತಿ ಸೃಷ್ಟಿಸಿದಷ್ಟು ಸ್ವಚ್ಛಮಾಡಿಬಿಟ್ಟ. ಎಲೆಯನ್ನು ನೆಕ್ಕಿದ ಬಳಿಕ ತನ್ನ ಬೆರಳುಗಳನ್ನು ನೆಕ್ಕಿದ. ಉದ್ದುದ್ದ ಉಗುರುಗಳಲ್ಲಿ ಸೇರಿದ ಆಲೂಗಡ್ಡೆ ಪಲ್ಯವನ್ನು ನಾಲಿಗೆ ತುದಿಯು ಗೆಬರಿ ಗೆಬರಿ ತಿಂದಿತು. ಇದರಿಂದಲೂ ಅವನಿಗೆ ತೃಪ್ತಿಯಾಗದಿದ್ದಮೇಲೆ ಅವನು ಕೈಚಾಚಿ ಕಸದ ಗುಂಪಿಯನ್ನು ಕೆದಕಿ ಅದರಲ್ಲಿಂದ ಪುದೀನಾದ ಎಲೆಗಳನ್ನು ಹೊರತೆಗೆದು ತಿಂದ. ಮೂಲಂಗಿಯ ಎರಡು ತುಂಡುಗಳು ಮತ್ತು ಒಂದರ್ಧ ಟೊಮೆಟೋವನ್ನು ತನ್ನ ಬಾಯಲ್ಲಿ ಹಾಕಿಕೊಂಡು ಸಂತಸದಿಂದ ಅದರ ರಸವನ್ನು ಹೀರಿದ. ಇವುಗಳನ್ನೆಲ್ಲ ತಿಂದಮೇಲೆ ಅವನ ಇಡೀ ದೇಹದಲ್ಲಿ ಆಲಸ್ಯಮಯ ನಿದ್ರೆಯ ಒಂದು ತೆರೆ ಎದ್ದಿತು, ಮತ್ತು ಅವನು ಅಲ್ಲಿಯೇ ಟಬ್ ಬಳಿ ಉರುಳಿ ನಿದ್ರೆಹೋದ.

ಎಂಟು ಹತ್ತು ದಿನಗಳು ಇದೇ ಆಲಸ್ಯಮಯ ನಿದ್ರೆ ಮತ್ತು ಅರ್ಧ ಚೇತನೆಯ ಸ್ಥಿತಿಯಲ್ಲಿ ಕಳೆದವು. ಅವನು ತೆವಳಿಕೊಂಡು ಟಬ್ ಸಮೀಪಕ್ಕೆ ಹೋಗುತ್ತಿದ್ದ ಮತ್ತು ಅಲ್ಲಿ ಸಿಕ್ಕ ಆಹಾರವನ್ನು ತಿನ್ನುತ್ತಿದ್ದ, ಬಳಿಕ ಹಸಿವು ಹುಟ್ಟಿಸುವ ವಾಸನೆಯು ತೃಪ್ತಿಯಾದಮೇಲೆ ಉಳಿದ ಕೊಳಕು ವಾಸನೆಗಳು ಎದ್ದೇಳುತ್ತಿದ್ದವು. ಅವನು ತೆವಳಿಕೊಂಡು ಟಬ್‌ಇನ ಆಚೆಯ ಮೂಲೆಗೆ ಹೋಗುತ್ತಿದ್ದ. ಅಲ್ಲಿ ಹಿಂದಿನ ಗೋಡೆಗೆ ಆತು ಕೂಡ್ರುತ್ತಿದ್ದ ಇಲ್ಲವೇ ಮಲಗುತ್ತಿದ್ದ.

15-20 ದಿನಗಳ ಬಳಿಕ ಮೆಲ್ಲಮೆಲ್ಲನೆ ಅವನ ಶರೀರದಲ್ಲಿ ಶಕ್ತಿ ಕಾಣಿಸಹತ್ತಿತು. ಸಾವಕಾಶವಾಗಿ ಅವನಿಗೆ ತನ್ನ ವಾತಾವರಣದ ಪರಿಚಯವಾಗಹತ್ತಿತು. ಈ ಸ್ಥಳ ಎಷ್ಟು ಚೆನ್ನಾಗಿದೆ. ಇಲ್ಲಿ ಬಿಸಿಲು ಇರಲಿಲ್ಲ. ಇಲ್ಲಿ ಗಿಡಗಳ ನೆರಳು ಇದೆ. 'ಅಂಧಿ' ಗಲ್ಲಿ ಮೌನವಾಗಿ ಹಾಳುಹಾಳಾಗಿದೆ. ಇಲ್ಲಿ ಯಾರೂ ಬರುವದಿಲ್ಲ. ಆಗಾಗ ಹಿಂದಿನ ಕಟ್ಟಡದ ಯಾವುದೋ ಕಿಡಕಿ ತೆರೆಯುತ್ತಿತ್ತು ಮತ್ತು ಯಾವುದೋ ಕೈ ಹೊರಚಾಚಿ ಕೆಳಗೆ ಟಬ್ಬಿನಲ್ಲಿ ಅಂದಿನ ಕಸವನ್ನು ಚೆಲ್ಲುತ್ತಿತ್ತು. ಈ ಕಸ ಅವನ ಅನ್ನದಾತವಾಗಿತ್ತು. ಅವನಿಗೆ ಹಗಲು ರಾತ್ರಿ ಆಹಾರ ಕೊಡುವ ಅಕ್ಷಯಪಾತ್ರೆಯಾಗಿತ್ತು. ಅವನ ಜೀವರಕ್ಷಕವಾಗಿತ್ತು. ಹಗಲಿನಲ್ಲಿ ರಸ್ತೆಯ ಚಟುವಟಿಕೆ ನಡೆಯುತ್ತಿತ್ತು, ಅಂಗಡಿಗಳು ತೆರೆಯುತ್ತಿದ್ದವು. ಜನರು ತಿರುಗಾಡುತ್ತಿದ್ದರು. ಮಕ್ಕಳು ತೊಗಲುಬಾವಲಿಗಳ ಹಾಗೆ ಚುಂಯಿಗುಡುತ್ತ ಹಾಯ್ದು ಹೋಗುತ್ತಿದ್ದರು. ಹೆಂಗಸರು ಬಣ್ಣಬಣ್ಣದ ಪಾತರಗಿತ್ತಿಗಳ ಹಾಗೆ ಬಳಕುತ್ತ ರಸ್ತೆಯಮೇಲಿಂದ ಹೋಗುತ್ತಿದ್ದರು. ಆದರೆ ಇದು ಇನ್ನೊಂದು ಜಗತ್ತು. ಈ ಜಗತ್ತಿನ ಜೊತೆ ಅವನಿಗೆ ಯಾವ ಸಂಬಂಧವೂ ಇರಲಿಲ್ಲ. ಈ ಜಗತ್ತಿನಲ್ಲಿ ಈಗ ಯಾರೂ ಅವನವರಾಗಿರಲಿಲ್ಲ ಮತ್ತು ಅವನು ಯಾರವನೂ ಆಗಿರಲಿಲ್ಲ. ಈ ಜಗತ್ತಿನ ಬಗ್ಗೆ ಅವನಿಗೆ

ತಿರಸ್ಕಾರವಿತ್ತು. ಅವನು ಜಗತ್ತಿನಿಂದ ಸೋತಿದ್ದ. ನಗರದ ಗಲ್ಲಿ, ಪೇಟೆ ಮತ್ತು ರಸ್ತೆಗಳೆಲ್ಲ ಅವನ ಪಾಲಿಗೆ ಒಂದು ಧೂಳುಬೆರತ ನೆರಳಿನಂತೆ ಆಗಿದ್ದವು. ಅವುಗಳ ಹೊರಗಿನ ಬೈಲು ಪ್ರದೇಶ, ಹೊಲ, ತೆರೆದ ಬಾನುಗಳೆಲ್ಲ ಒಂದು ವ್ಯರ್ಥ ಕಲ್ಪನೆಯಾಗಿದ್ದವು. ಮನೆ, ಕೆಲಸ-ಬೊಗಸೆ, ಜೀವನ, ಸಮಾಜ, ಸಂಘರ್ಷ ಈ ಅರ್ಥಹೀನ ಶಬ್ದಗಳೆಲ್ಲ, ಕೆಟ್ಟು ಕೊಳೆತು ಕಸದ ರಾಶಿಯಲ್ಲಿ ಬೆರೆತುಹೋಗಿದ್ದವು. ಆ ದೂರದ ಜಗತ್ತಿನಿಂದ ಅವನು ಮುಖ ತಿರುವಿಕೊಂಡಿದ್ದ, ಮತ್ತು ಈಗ ಅವನ ಜಗತ್ತು ಇದ್ದದ್ದು—15 ಅಡಿ ಉದ್ದ ಮತ್ತು 30 ಅಡಿ ಅಗಲ.

ತಿಂಗಳುಗಳು ಮತ್ತು ವರ್ಷಗಳು ಉರುಳುತ್ತಹೋದವು. ಅವನು ಮೂಲೆಯಲ್ಲಿ ಕುಳಿತು, ಕುಳಿತು ಒಂದು ಹಳೆಯ ಬೊಡ್ಡೆಯ ಹಾಗೆ ಅಥವಾ ಯಾವುದೋ ಹಳೆಯ ಸ್ಮಾರಕದ ಹಾಗೆ ಎಲ್ಲರ ಕಣ್ಣುಗಳಲ್ಲಿ ಸೇರುತ್ತ ನಡೆದ. ಅವನು ಯಾರ ಜೊತೆಯೂ ಮಾತನಾಡುತ್ತಿರಲಿಲ್ಲ, ಯಾರಿಗೂ ಲಾಭ ಮಾಡುತ್ತಿರಲಿಲ್ಲ, ಯಾರಿಂದಲೂ ಭಿಕ್ಷೆ ಬೇಡುತ್ತಿರಲಿಲ್ಲ. ಆದರೆ ಅವನು ಯಾವುದಾದರೊಂದು ದಿನ ಎದ್ದು ಹೊರಟು ಹೋದನೆಂದರೆ ಆ ಕ್ಷೇತ್ರದ ಪ್ರತಿ ಮನುಷ್ಯನಿಗೂ ಅದರ ಬಗ್ಗೆ ಆಶ್ಚರ್ಯ ಉಂಟಾಗುತ್ತಿತ್ತು ಮತ್ತು ಬಹುಶಃ ಸ್ವಲ್ಪ ಕಷ್ಟವೂ ಆಗುತ್ತಿತ್ತು.

ಎಲ್ಲ ಜನರು ಅವನಿಗೆ 'ಕಚರಾ ಬಾಬಾ' ಎನ್ನುತ್ತಿದ್ದರು. ಯಾಕೆಂದರೆ, ಅವನು ಕೇವಲ ಕಸದ ಟಬ್ಬಿನಲ್ಲಿಂದ ತನ್ನ ಆಹಾರ ಆಯ್ದು ತಿನ್ನುತ್ತಿದ್ದನೆಂಬುದು ಮತ್ತು ಅಲ್ಲಿ ಏನೂ ಸಿಕ್ಕದ ದಿನ ಹಸಿದೇ ಮಲಗುತ್ತಿದ್ದನೆಂಬುದು ಎಲ್ಲರಿಗೂ ಗೊತ್ತಿತ್ತು. ವರ್ಷಗಳಿಂದ ಪ್ರಯಾಣಿಕರು ಮತ್ತು ಇರಾಣೀ ರೆಸ್ಟೋರೆಂಟ್‌ಗಳು ಅವನ ಈ ಚಾಳಿಯನ್ನು ಅರಿತಿದ್ದರು. ಸಾಮಾನ್ಯವಾಗಿ ಅವರು ಅವನಿಗೆ ತಿನ್ನಲು ಹಾಕಬೇಕಾದುದೆಲ್ಲವನ್ನೂ ಕಸದ ಕುಪ್ಪೆಯಲ್ಲಿ ಚೆಲ್ಲುತ್ತಿದ್ದರು. ಎಷ್ಟೋಸಲ ಕಟ್ಟಡದ ಹಿಂದಿನ ಕಿಡಕಿಗಳಿಂದ ಈಗ ಕಸಕಡ್ಡಿಯನ್ನಲ್ಲದೆ ಆಹಾರದ ಇತರ ವಸ್ತುಗಳನ್ನು ಕೂಡ ಚೆಲ್ಲಲಾಗುತ್ತಿತ್ತು. ಇಡೀ ಪೂರಿಗಳು ಬಹಳಷ್ಟು ಪಲ್ಯ, ಮಾಂಸದ ತುಣುಕುಗಳು, ಅರ್ಧ ಸವಿದ ಮಾವಿನಹಣ್ಣುಗಳು, ಚಟ್ನಿ, ಕಬಾಬದ ತುಂಡುಗಳು, ಮತ್ತು ಖೀರು ತುಂಬಿದ ದೊನ್ನೆಗಳು. ಊಟ-ತಿಂಡಿಯ ಪ್ರತಿ ವಸ್ತುವೂ ಈ ಟಬ್ಬಿನಲ್ಲಿಂದ ಕಚರಾ ಬಾಬಾನಿಗೆ ದೊರೆಯುತ್ತಿತ್ತು. ಆಗಾಗ ಯಾವುದೇ ಹರಿದ ಪೈಜಾಮು, ಯಾವುದೇ ಪಿಸಿದ ನಿಕ್ಕರು, ಯಾವುದೋ ಎಳೆ ಎಳೆ ಹರಿದ ಕಮೀಜ, ಪ್ಲಾಸ್ಟಿಕ್ ಗ್ಲಾಸುಗಳು. ಅದು ಕಸದ ಟಬ್ ಆದರೆ ಏನಂತೆ. ಅವನ ಪಾಲಿಗೆ ಅದು ತೆರೆದ ಪೇಟೆ. ಅಲ್ಲಿ ಅವನು ಹಾಡು-ಹಗಲಿನಲ್ಲಿ ಎಲ್ಲರ ಕಣ್ಣೆದಿರೇ ಉಂಡಾಡಿಯಾಗಿ ಅಲೆಯುತ್ತಿದ್ದ. ಆ ಅಂಗಡಿಯಿಂದ ಏನು ಬೇಕಾದರೂ ಪುಕ್ಕಟೆ ತೆಗೆದುಕೊಳ್ಳುತ್ತಿದ್ದ. ಅವನು ಈ ಪೇಟೆಯ ಏಕಮಾತ್ರ ಒಡೆಯನಾಗಿದ್ದ. ಪ್ರಾರಂಭದಲ್ಲಿ ಕೆಲವು ಹಸಿದ ಬೆಕ್ಕುಗಳು ಮತ್ತು ಕಜ್ಜಿಹತ್ತಿದ ನಾಯಿಗಳು ಅವನನ್ನು ವಿರೋಧಿಸಿದ್ದವು. ಆದರೆ ಅವನು

ಅವುಗಳನ್ನು ಹೊಡೆದು ಹೊರಹಾಕಿದ್ದ. ಈಗ ಅವನು ಈ ಕಸದ ಬುಟ್ಟಿಯ ಸರ್ವಾಧಿಕಾರಿಯಾಗಿದ್ದ. ಮತ್ತು ಅವನ ಅಧಿಕಾರವನ್ನು ಎಲ್ಲರೂ ಸ್ವೀಕರಿಸಿದ್ದರು. ತಿಂಗಳಿಗೊಂದು ಸಲ ಮುನಿಸಿಪಾಲಿಟಿಯ ಜನರು ಬರುತ್ತಿದ್ದರು ಮತ್ತು ಈ ಟಬ್ಬನ್ನು ಖಾಲಿಮಾಡಿ ಹೋಗುತ್ತಿದ್ದರು. ಕಚರಾ ಬಾಬಾ ಅವರನ್ನು ವಿರೋಧಿಸುತ್ತಿರಲಿಲ್ಲ. ಯಾಕೆಂದರೆ, ಮರುದಿನದಿಂದಲೇ ಅದು ಅದೇ ರೀತಿ ತುಂಬತೊಡಗುವದೆಂದು ಅವನಿಗೆ ಗೊತ್ತಿತ್ತು. ಈ ಜಗತ್ತಿನಲ್ಲಿ ಪ್ರಾಮಾಣಿಕತೆ ಕೊನೆಗೊಳ್ಳಬಹುದು, ನಂಬಿಕೆ ಕೊನೆಗೊಳ್ಳಬಹುದು, ಗೆಳೆತನ ಅಳಿಯಬಹುದು; ಆದರೆ ಹೊಲಸು ಮಾತ್ರ ಎಂದಿಗೂ ಅಳಿಯಲು ಸಾಧ್ಯವಿಲ್ಲವೆಂಬುದು ಅವನ ವಿಶ್ವಾಸವಾಗಿತ್ತು. ಇಡೀ ಜಗತ್ತಿನಿಂದ ಸೋತು ಅವನು ಬದುಕುವ ಕೊನೆಯ ರೀತಿಯನ್ನು ಕಲಿತುಕೊಂಡಿದ್ದ. ಇಷ್ಟಕ್ಕೆ ಅವನಿಗೆ ಹೊರ ಜಗತ್ತಿನ ಸುದ್ದಿ ಗೊತ್ತಾಗುತ್ತಿರಲಿಲ್ಲವೆಂದೇನೂ ಇರಲಿಲ್ಲ. ಪಟ್ಟಣದಲ್ಲಿ ಸಕ್ಕರೆ ತುಟ್ಟಿಯಾದಾಗ ತಿಂಗಳುಗಟ್ಟಲೆ ಕಸದ ಟಬ್ಬಿನಲ್ಲಿ ಮಿಠಾಯಿಯ ತುಣುಕುಗಳ ದರ್ಶನವಾಗುತ್ತಿರಲಿಲ್ಲ. ಗೋಧಿ ತುಟ್ಟಿಯಾದಾಗ ಡಬಲ್‌ರೋಟಿಯ ಒಂದು ತುಣುಕೂ ಸಿಗುತ್ತಿರಲಿಲ್ಲ. ಸಿಗರೇಟಿನ ಬೆಲೆ ಹೆಚ್ಚಾದಾಗ ಸಿಗರೇಟಿನ ಉರಿದ ತುಂಡುಗಳು ಪುನಃ ಅವುಗಳನ್ನು ಹೊತ್ತಿಸಿ ಸೇದಲು ಸಾಧ್ಯವಿಲ್ಲದಷ್ಟು ಸಣ್ಣಗಿರುತ್ತಿದ್ದವು. ಝಾಡಮಾಲಿಗಳು ಹರತಾಳ ಮಾಡಿದಾಗ ಎರಡು ತಿಂಗಳವರೆಗೂ ಅವನ ಟಬ್ಬನ್ನು ಯಾರೂ ಸ್ವಚ್ಛಮಾಡಿರಲಿಲ್ಲ. ಬಕರೀದ್ ದಿನ ಸಿಕ್ಕಷ್ಟು ಮಾಂಸ ಅವನಿಗೆ ಉಳಿದ ಯಾವ ದಿನವೂ ಸಿಗುತ್ತಿರಲಿಲ್ಲ. ದೀಪಾವಳಿಯ ದಿನವಂತೂ ಟಬ್ಬಿನ ಸುತ್ತುಮುತ್ತಲೂ ಅನೇಕ ಮಿಠಾಯಿಗಳ ತುಣುಕುಗಳು ಸಿಗುತ್ತಿದ್ದವು. ಅವನಿಗೆ ಈ ಕಸದ ಟಬ್ಬಿನಲ್ಲಿ ಪತ್ತೆಯಾಗದೇ ಇರದಂಥ ಹೊರಜಗತ್ತಿನ ಘಟನೆ ಯಾವುದೂ ಇರುತ್ತಿರಲಿಲ್ಲ; ಹಿಂದಿನ ಮಹಾಯುದ್ಧದಿಂದ ಮೊದಲು ಮಾಡಿ ಹೆಂಗಸರ ಗುಪ್ತರೋಗಗಳ ತನಕ. ಆದರೆ ಈಗ ಅವನಿಗೆ ಹೊರಜಗತ್ತಿನಲ್ಲಿ ಯಾವ ಆಸಕ್ತಿಯೂ ಉಳಿದಿರಲಿಲ್ಲ.

ಇಪ್ಪತ್ತೈದು ವರ್ಷಗಳವರೆಗೆ ಅವನು ಈ ಕಚರಾ (ಕಸದ) ಟಬ್ಬಿನ ದಂಡೆಗೆ ಕುಳಿತು ಕುಳಿತು ತನ್ನ ಆಯುಷ್ಯ ಕಳೆಯುತ್ತಲಿದ್ದ. ರಾತ್ರಿ, ಹಗಲು, ತಿಂಗಳು, ವರ್ಷಗಳು ಅವನ ತಲೆಯ ಮೇಲಿಂದ ಗಾಳಿಯ ಅಲೆಗಳಂತೆ ಹಾಯ್ದು ಹೋದವು. ಅವನ ತಲೆಗೂದಲು ಒಣಗಿ ಒಣಗಿ ವಟವೃಕ್ಷದ ಬಿಳಿಲುಗಳಂತೆ ಜೋಲಾಡಹತ್ತಿದವು. ಅವನ ಕಪ್ಪುಗಡ್ಡ ಅರೆ ನರೆಯಹತ್ತಿತು. ಅವನ ಶರೀರದ ಬಣ್ಣವು ಹೊಲಸು, ಕೊಳಕು ಮತ್ತು ಹಸಿರು ಆಗತೊಡಗಿತು. ತನ್ನ ಗಂಟುಕಟ್ಟಿದ ಕೂದಲು, ಹರಿದು ಚಿಂದಿಯಾದ ಬಟ್ಟೆ ಮತ್ತು ದುರ್ವಾಸನೆಯ ಶರೀರದಿಂದ ಅವನು ರಸ್ತೆಯಲ್ಲಿ ಅಲೆದಾಡುತ್ತಿದ್ದವರಿಗೆ ಸ್ವತಃ ಒಂದು ಕಸದ ಟಬ್ಬಿನಂತೆ ಕಾಣತೊಡಗಿದ. ಆ ಟಬ್ ಸರಿದಾಡುತ್ತಿತ್ತು, ಮತ್ತು ಅಂಗಚೇಷ್ಟೆ ಮಾಡುತ್ತಿತ್ತು,

ಮಾತಾಡುತ್ತಿತ್ತು, ಮತ್ತೊಬ್ಬರ ಜೊತೆಯಲ್ಲಿ, ತನ್ನಷ್ಟಕ್ಕೆ ತಾನೇ ಇಲ್ಲವೆ ಕಸದ ಟಬ್ ಜೊತೆ.

ಕಚರಾ ಬಾಬಾ ಕಸದ ಟಬ್ ಜೊತೆ ಮಾತಾಡುವದನ್ನು ನೋಡಿ ಜನರು ಚಕಿತರಾಗುತ್ತಿದ್ದರು. ವಾಸ್ತವದಲ್ಲಿ ಅದರಲ್ಲಿ ಆಶ್ಚರ್ಯಪಡುವ ಯಾವ ವಿಶೇಷವೂ ಇರಲಿಲ್ಲ. ಕಚರಾ ಬಾಬಾ ಜನರ ಜೊತೆ ಏನೂ ಮಾತಾಡುತ್ತಿರಲಿಲ್ಲ, ಆದರೆ ಅವರ ಆಶ್ಚರ್ಯವನ್ನು ಕಂಡು ಅವಶ್ಯವಾಗಿ ಅವನು—" ಈ ಜಗತ್ತಿನಲ್ಲಿ ಮತ್ತೊಬ್ಬರ ಜೊತೆ ಮಾತನಾಡುವವರು ಯಾರು ಇದ್ದಾರೆ? " ಎಂದು ತನ್ನ ಮನದಲ್ಲಿ ಯೋಚಿಸುತ್ತಿದ್ದಿರಬಹುದು ಈ ಜಗತ್ತಿನಲ್ಲಿ ಎಷ್ಟು ಮಾತುಕತೆ ನಡೆಯುವದೋ ಅದು ಮನುಷ್ಯರ ಮಧ್ಯೆ ನಡೆಯುವದಿಲ್ಲ. ಅದರ ಬದಲು ಕೇವಲ ತನ್ನ ಜಾತಿ ಮತ್ತು ಅವನ ಯಾವುದೋ ಸ್ವಾರ್ಥದ ಮಧ್ಯೆ ನಡೆಯುತ್ತದೆ. ಇಬ್ಬರು ಮಿತ್ರರ ನಡುವೆ ಆಗುವ ಮಾತುಕತೆಯೂ ವಾಸ್ತವದಲ್ಲಿ ಒಂದು ಪ್ರಕಾರದ ಸ್ವಗತ ಕಥನವಿರುತ್ತದೆ. ಈ ಜಗತ್ತು ಒಂದು ಬಹಳ ದೊಡ್ಡ ಕಸದ ರಾಶಿಯಂತಿದೆ; ಅದರಲ್ಲಿಂದ ಪ್ರತಿ ಮನುಷ್ಯ ತನ್ನ ಸ್ವಾರ್ಥದ ಯಾವುದಾದರೂ ಕಸ, ವ್ಯಕ್ತಿಗತ ಲಾಭದ ಯಾವುದೋ ಸಿಪ್ಪೆ, ಅಥವಾ ಲಾಭಕೊಡುವ ಯಾವುದೋ ಚಿಂದಿ ತುಂಡುಗಳನ್ನು ಅಡಗಿಸಿಟ್ಟುಕೊಳ್ಳುವುದಕ್ಕೆ ಯಾವಾಗಲೂ ಸಿದ್ಧನಿರುತ್ತಾನೆ. ಉಹುಂ—ತನ್ನನ್ನು ತುಚ್ಛ, ಫಕೀರ ಅಥವಾ ಮಾನಗೇಡಿ ಎಂದು ಕರೆಯುವ ಈ ಜನರು ತಮ್ಮ ಆತ್ಮದ ಹಿತ್ತಿಲಲ್ಲಿ ಸ್ವಲ್ಪ ಇಣಕಿಯಾದರೂ ನೋಡಲಿ—ಅಲ್ಲಿ ಎಷ್ಟು ಹೊಲಸು ತುಂಬಿದೆ ಎಂಬುದನ್ನು. ಈ ಹೊಲಸನ್ನು ಯಮನು ಮಾತ್ರ ಎತ್ತಿಕೊಂಡೊಯ್ಯಬಲ್ಲನೆಂಬುದು ಗೊತ್ತಾಗುತ್ತದೆ.

ಇದೇ ರೀತಿ ದಿನದ ಮೇಲೆ ದಿನ ಉರುಳತೊಡಗಿದವು. ದೇಶಗಳು ಸ್ವತಂತ್ರವಾದವು, ದೇಶಗಳು ಪರತಂತ್ರವಾದವು, ಆಳಿಕೆಗಳು ಬಂದವು, ಆಡಳಿತಗಳು ಉರುಳಿದವು. ಆದರೆ ಕಚರಾದ ಈ ಟಬ್ ಅಲ್ಲಿಯೇ ಉಳಿಯಿತು; ಮತ್ತು ಅದರ ದಂಡೆಗೆ ಕೂಡ್ರುವ ಕಚರಾ ಬಾಬಾ ಅದೇ ರೀತಿ ಅರ್ಧ ಚೇತನಾವಸ್ಥೆಯಲ್ಲಿ ಜಗತ್ತಿನಿಂದ ಸೋತು ಮುಖ ತಿರುಗಿಸಿ ತನ್ನಷ್ಟಕ್ಕೆ ತಾನೇ ಏನನ್ನೋ ಗೊಣಗಿಕೊಳ್ಳುತ್ತಲಿದ್ದ ಮತ್ತು ಕಸದ ಟಬ್ಬನ್ನು ಕೆದಕುತ್ತಲಿದ್ದ.

ಆಮೇಲೆ, ಒಂದು ರಾತ್ರಿ 'ಅಂಧಿ' ಗಲ್ಲಿಯಲ್ಲಿ ಅವನು ಟಬ್‌ದಿಂದ ಕೆಲವು ಅಡಿಗಳ ಅಂತರದ ಮೇಲೆ ಗೋಡೆಗೆ ಬೆನ್ನು ತಾಕಿಸಿ ತನ್ನ ಹರಿದ ಚಿಂದಿಗಳಲ್ಲಿ ಮುದುಡಿಕೊಂಡು ಮಲಗಿಕೊಂಡಿದ್ದಾಗ ಒಂದು ಜೋರಾದ, ತೀಕ್ಷ್ಣವಾದ ಚೀತ್ಕಾರವನ್ನು ಕೇಳಿದ. ಅವನು ಭಯಪಟ್ಟು ಚೀತ್ಕಾರ ಕೇಳಿಬರುತ್ತಿದ್ದ ಟಬ್ ಕಡೆ ಓಡಿದ.

ಕಸದ ಟಬ್ ಹತ್ತಿರ ಹೋಗಿ ಅವನು ಅತ್ತಿತ್ತ ಕೈಯಾಡಿಸಿದರೆ ಅವನ ಕೈಗೆ ಯಾವುದೋ ಮೃದುವಾದ ಮಾಂಸದ ಮುದ್ದೆಯಂತಹದು ತಾಕಿತು. ತಕ್ಷಣ

ಮತ್ತೊಂದು ಜೋರಾದ ಚೀತ್ಕಾರ ಕೇಳಿಸಿತು. ಟಬ್ ಒಳಗೆ ಡಬಲ್‌ರೋಟಿ ತುಂಡುಗಳು, ನೆಕ್ಕಿ ಬಿಟ್ಟ ಎಲುವುಗಳು, ಹಳೆಯ ಚಪ್ಪಲಿಗಳು, ಕಾಜಿನ ತುಂಡು ಗಳು, ಮಾವಿನ ಸಿಪ್ಪೆಗಳು, ಬಾಡಿದ ಹೂವಿನ ಸರಗಳು ಮತ್ತು 'ಠರ್ರಾ' ಸೆರೆಯ ಒಡೆದ ಬಾಟಲುಗಳು ಇವುಗಳ ನಡುವೆ ಒಂದು ನವಜಾತ ಶಿಶುವು ಬತ್ತಲೆ ಬಿದ್ದು ಕೊಂಡು ತನ್ನ ಕೈಕಾಲು ಬಡಿಯುತ್ತ ಜೋರು ಜೋರಾಗಿ ಚೀರುತ್ತಲಿತ್ತು.

ಎಷ್ಟೋ ಸಮಯದವರೆಗೆ ಕಚರಾ ಬಾಬಾ ಆಶ್ಚರ್ಯದಲ್ಲಿ ಮುಳುಗಿ ಆ ಪುಟ್ಟ ಮಾನವನನ್ನು ನೋಡುತ್ತಿದ್ದ. ಅದು ತನ್ನ ಪುಟ್ಟ ಎದೆಯ ಪೂರ್ತಿ ಶಕ್ತಿಯಿಂದ ತನ್ನ ಆಗಮನವನ್ನು ಸಾರುತ್ತಿತ್ತು. ಸ್ವಲ್ಪ ಸಮಯದವರೆಗೆ ಅವನು ಚಿಂತಿತ ಮತ್ತು ಕುತೂಹಲಭರಿತ ಕಣ್ಣುಗಳಿಂದ ಈ ದೃಶ್ಯವನ್ನು ಸುಮ್ಮನೆ ನೋಡುತ್ತಲೇ ಇದ್ದ. ಬಳಿಕ ಅವನು ಗಡಿಬಿಡಿಯಿಂದ ಮುಂದಕ್ಕೆ ಬಾಗಿ ಕಸದ ಟಬ್ಬಿನೊಳಗಿಂದ ಆ ಮಗುವನ್ನು ಎತ್ತಿಕೊಂಡು ತನ್ನ ಎದೆಗೆ ಅಪ್ಪಿಕೊಂಡು ಹಾಗೆಯೇ ಅದನ್ನು ಚಿಂದಿ ಯಲ್ಲಿ ಅಡಗಿಸಿಕೊಂಡ.

ಆದರೆ ಮಗು ಅವನ ಉಡಿಯಲ್ಲಿ ಹೋದಮೇಲೂ ಯಾವ ರೀತಿಯಿಂದಲೂ ಸುಮ್ಮನಾಗಲಿಲ್ಲ. ಅದು ಈ ಜೀವನದಲ್ಲಿ ಅದೇ ಪ್ರವೇಶಿಸಿತ್ತು ಮತ್ತು ಅತ್ತು ಅತ್ತು ತನ್ನ ಹಸಿವನ್ನು ಪ್ರಕಟಿಸುತ್ತಿತ್ತು. ಇನ್ನೂ ಅದಕ್ಕೆ ಬಡತನ ಹೇಗಿರುತ್ತದೆ ಎಂಬುದು ಗೊತ್ತಿರಲಿಲ್ಲ. ಮಮತೆ ಹೇಗೆ ಅಳ್ಳಿದೆಯಾಗುವುದು, ಜೀವನ ಹೇಗೆ ಹಾಳಾಗು ತ್ತದೆ? ಅದನ್ನು ಹೇಗೆ ಹೊಲಸು, ಜಿಗಿ, ಕೊಳಕುಮಾಡಿ ಕಸದ ಟಬ್‌ನಲ್ಲಿ ಹಾಕಲಾಗುತ್ತದೆ—ಈಗಿನ್ನೂ ಅದಕ್ಕೆ ಏನೂ ಗೊತ್ತಿರಲಿಲ್ಲ. ಈಗ ಅದು ಹಸಿದಿತ್ತು ಮತ್ತು ಅತ್ತು ಅತ್ತು ತನ್ನ ಹೊಟ್ಟೆಯ ಮೇಲೆ ಕೈ ಹೊಡೆದುಕೊಳ್ಳುತ್ತ ಕಾಲು ಬಡಿಯುತ್ತಿತ್ತು.

ಈ ಮಗುವನ್ನು ಹೇಗೆ ಸುಮ್ಮನೆ ಮಾಡಬೇಕೆಂದು ಕಚರಾ ಬಾಬಾನಿಗೆ ತಿಳಿಯ ಲಿಲ್ಲ. ಅವನ ಬಳಿ ಏನೂ ಇರಲಿಲ್ಲ. ಹಾಲೂ ಇಲ್ಲ, ನೆಕ್ಕಿಸಲೂ ಇಲ್ಲ. ಅವನಿ ಗಂತೂ ಯಾವ ಜೋಗುಳದ ಹಾಡೂ ನೆನಪಿರಲಿಲ್ಲ. ಅವನು ವ್ಯಾಕುಲನಾಗಿ ಮಗುವನ್ನು ಎತ್ತಿಕೊಂಡು ಬೆನ್ನು ತಟ್ಟಹತ್ತಿದ. ಈ ಸಮಯದಲ್ಲಿ ಮಗುವಿಗೆ ಹಾಲು ಎಲ್ಲಿಂದ ತರುವದು ಎಂದು ನಿರಾಶೆಯಿಂದ ರಾತ್ರಿಯ ಕತ್ತಲೆಯಲ್ಲಿ ನಾಲ್ಕು ಕಡೆಗೂ ನೋಡತೊಡಗಿದ. ತನಗೆ ತಿಳಿಯದಾದಾಗ ಅವನು ಬೇಗನೆ ಕಸದ ಟಬ್ಬಿ ನಿಂದ ಮಾವಿನ ಒಂದು ಗೊರಟವನ್ನು ಎತ್ತಿಕೊಂಡನು ಮತ್ತು ಅದರ ತುದಿಯನ್ನು ಮಗುವಿನ ಬಾಯಿಗೆ ಕೊಟ್ಟುಬಿಟ್ಟನು.

ಅರ್ಧ ತಿಂದ ಮಾವಿನ ಸಿಹಿ-ಸಿಹಿ ರಸವು ಮಗುವಿನ ಬಾಯಲ್ಲಿ ಹೋಗಹತ್ತಿದ ಮೇಲೆ ಅದು ಅಳುತ್ತ ಅಳುತ್ತ ಸುಮ್ಮನಾಯಿತು, ಮತ್ತು ಸುಮ್ಮನಾಗುತ್ತ ಆಗುತ್ತ ಕಚರಾ ಬಾಬಾನ ತೋಳುಗಳಲ್ಲಿ ಮಲಗಿಕೊಂಡಿತು. ಮಾವಿನ ಗೊರಟವು ಜಾರಿ

ನೆಲದಮೇಲೆ ಬಿದ್ದಿತು. ಈಗ ಮಗು ಅವನ ತೋಳುಗಳಲ್ಲಿ ಪ್ರಜ್ಞೆಯಿಲ್ಲದೆ ಮಲಗಿದೆ. ಮಾವಿನ ಹಳದಿರಸ ಈವರೆಗೂ ಅದರ ಕೋಮಲ ತುಟಿಗಳ ಮೇಲೆ ಇದೆ. ಅದರ ಪುಟ್ಟ ಕೈಯು ಕಚರಾ ಬಾಬಾನ ಹೆಬ್ಬೆರಳನ್ನು ಗಟ್ಟಿಯಾಗಿ ಹಿಡಿದುಕೊಂಡಿತ್ತು.

ಒಂದು ಕ್ಷಣ ಕಚರಾ ಬಾಬಾನ ಮನಸ್ಸಿನಲ್ಲಿ ತಾನು ಈ ಕೂಸನ್ನು ಇಲ್ಲಿಯೇ ಚೆಲ್ಲಿ ಎಲ್ಲಾದರೂ ಓಡಿಹೋಗಿಬಿಡಬೇಕೆನಿಸಿತು. ಅವನು ನಿಧಾನವಾಗಿ ಆ ಮಗುವಿನ ಕೈಯಿಂದ ತನ್ನ ಹೆಬ್ಬೆರಳನ್ನು ಬಿಡಿಸಿಕೊಳ್ಳುವ ಪ್ರಯತ್ನಮಾಡಿದ. ಆದರೆ ಮಗುವಿನ ಹಿಡಿತ ಬಹಳ ಬಿಗಿಯಾಗಿತ್ತು. ಈ ಬದುಕು ಮತ್ತೊಮ್ಮೆ ತನ್ನನ್ನು ಹಿಡಿದುಕೊಂಡಿದೆ ಮತ್ತು ಅದು ಮೆಲ್ಲಮೆಲ್ಲನೆ ತನ್ನನ್ನು ಅದರ ಬಳಿ ಸೆಳೆಯುತ್ತಿದೆ ಎಂದು ಕಚರಾ ಬಾಬಾನಿಗೆ ಅನಿಸಿತು. ತಟ್ಟನೆ ಅವನಿಗೆ ದುಲಾರಿಯ ನೆನಪಾಯಿತು. ಅವಳ ಗರ್ಭದಿಂದ ಎಂದೋ ಬಿದ್ದುಹೋದ ಆ ಕೂಸು ನೆನಪಾಯಿತು. ಒಮ್ಮೆಲೆ ಕಚರಾ ಬಾಬಾ ಬಿಕ್ಕಿಬಿಕ್ಕಿ ಅಳತೊಡಗಿದ. ಈ ದಿನ ಅವನ ಕಣ್ಣುಗಳಲ್ಲಿದ್ದಷ್ಟು ನೀರು ಸಮುದ್ರದಲ್ಲಿ ಕೂಡ ಇರಲಿಲ್ಲ ಎಂದೆನಿಸುತ್ತಿತ್ತು. ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಅವನ ಆತ್ಮದಮೇಲೆ ಕವಿದ ಹೊಲಸು, ಕೊಳಕುಗಳೆಲ್ಲ ಈ ಬಿರುಗಾಳಿಯ ಒಂದೇ ಹೊಡೆತದಿಂದ ತೊಳೆದುಹೋದವು.

ರಾತ್ರಿಯೆಲ್ಲ ಕಚರಾ ಬಾಬಾ ಆ ನವಜಾತ ಶಿಶುವನ್ನು ಉಡಿಯಲ್ಲಿ ಹಿಡಿದುಕೊಂಡು ತಳಮಳ ಮತ್ತು ವಿವಶಗೊಂಡು ಫುಟ್‌ಪಾಥ್ ಮೇಲೆ ಅಲೆದಾಡುತ್ತಲಿದ್ದ. ಬೆಳಗಾಗಿ ಸೂರ್ಯ ಹುಟ್ಟಿದಮೇಲೆ ಕಚರಾ ಬಾಬಾ ಕಸದ ಟಬ್ ಬಳಿ ಕೂತಿರದೆ ರಸ್ತೆಯ ಆಚೆ ಹೊಸದಾಗಿ ತಯಾರಾಗುತ್ತಿರುವ ಕಟ್ಟಡದ ಕೆಳಗೆ ನಿಂತುಕೊಂಡು ಇಟ್ಟಿಗೆಗಳನ್ನು ಹೊರುತ್ತಿದ್ದ. ಆ ಕಟ್ಟಡದ ಸಮೀಪದ ಗುಲ್‌ಮೊಹರ್ ಗಿಡದ ನೆರಳಲ್ಲಿ ಒಂದು ಚೀಟಿಯ ಬಟ್ಟೆಯಲ್ಲಿ ಸುತ್ತಲ್ಪಟ್ಟ ಒಂದು ಪುಟ್ಟ ಮಗು ಬಾಯಲ್ಲಿ ಹಾಲಿನ ಬಾಟ್ಲ ಇಟ್ಟುಕೊಂಡು ಮುಗುಳ್ನಗುತ್ತಿದ್ದುದನ್ನು ಜನರು ಕಂಡರು.

# ರತ್ನಗಂಬಳಿ

ಈಗಂತೂ ಈ ರತ್ನಗಂಬಳಿ ಹಳೆಯದಾಗಿ ಬಿಟ್ಟಿದೆ. ಆದರೆ ಇಂದಿಗೆ ಎರಡು ವರ್ಷಗಳ ಹಿಂದೆ, ನಾನು ಇದನ್ನು ಹಜರತ್‌ಗಂಜದ ಒಂದು ಅಂಗಡಿಯಲ್ಲಿ ಕೊಂಡಕಾಲಕ್ಕೆ ಈ ರತ್ನಗಂಬಳಿ ಮುಗ್ಧವಿತ್ತು. ಇದರ ಸುತ್ತುಕಟ್ಟು ಮುಗ್ಧವಿತ್ತು. ಅದರ ಮುಗುಳುನಗೆ ಮುಗ್ಧವಿತ್ತು. ಇದರ ಪ್ರತಿ ಬಣ್ಣವೂ ಮುಗ್ಧವಾಗಿತ್ತು—ಈಗಲ್ಲ ಎರಡು ವರ್ಷಗಳ ಹಿಂದೆ. ಈಗಂತೂ ಅದರಲ್ಲಿ ವಿಷ ಬೆರೆತಿದೆ. ಅದರ ಒಂದೊಂದು ಎಳೆಯೂ ವಿಷಪೂರಿತವಾಗಿ ದುರ್ವಾಸನೆಯಿಂದ ತುಂಬಿದೆ. ಬಣ್ಣ ಮಸಕಾಗಿದೆ. ಅದರ ಮುಗುಳುನಗೆಯಲ್ಲಿ ಕಣ್ಣೀರು ತೆರೆಗಟ್ಟಿದೆ. ಮತ್ತು ಸುತ್ತುಕಟ್ಟಿನಲ್ಲಿ ಯಾವುದೋ ಉಪದಂಶತ್ರಸ್ತ ರೋಗಿಯ ಹಾಗೆ ಅಲ್ಲಲ್ಲಿ ಕಲೆಗಳು ಬಿದ್ದಿವೆ. ಮೊದಲು ಈ ರತ್ನಗಂಬಳಿ ಮುಗ್ಧವಿತ್ತು. ಈಗ ನಿರಾಶಾವಾದಿ ಆಗಿದೆ. ವಿಷಯುಕ್ತ ನಗೆಯನ್ನು ನಗುತ್ತದೆ. ಮತ್ತು ಜಗತ್ತಿನ ಎಲ್ಲಾ ಹೊಲಸು ಕೊಳಚೆಗಳನ್ನು ತನ್ನ ಎದೆಯಲ್ಲಿ ಅಡಗಿಸಿಕೊಂಡಿರುವ ಹಾಗೆ ಉಸಿರಾಡಿಸುತ್ತದೆ.

ರತ್ನಗಂಬಳಿಯ ಉದ್ದ ಒಂಬತ್ತು ಅಡಿ, ಅಗಲ ಐದು ಅಡಿ. ಸರಿ ಒಂದು ಸಾಮಾನ್ಯ ಪಲ್ಲಂಗದ ಅಗಲಳತೆ ಇದ್ದಷ್ಟು. ರತ್ನಗಂಬಳಿಯ ಅಂಚು ಒಂದೂವರೆ ಇಂಚು ಅಗಲವಾಗಿದ್ದು ಅದರ ಬಣ್ಣ ಬಾದಾಮಿ ಬಣ್ಣವಾಗಿತ್ತು. ಅಲ್ಲಿಂದ ದಟ್ಟ ಕೆಂಪಿನ ಬಣ್ಣ ಪ್ರಾರಂಭವಾಗಿತ್ತು. ಈ ಬಣ್ಣವು ರತ್ನಗಂಬಳಿಯ ಅಡ್ಡಗಲದ ತುಂಬೆಲ್ಲಾ ಹಬ್ಬಿ ಎರಡು ಅಡಿಯಷ್ಟು ಆಗಿದೆ. ಅಂದರೆ 2 × 5 ಅಡಿಯ ಚೌಕೋನವು ಒಂದು ಕೆಂಪು ಬಣ್ಣದ ಸರೋವರದಂತೆ ನಿರ್ಮಿತವಾಗಿದೆ. ಆದರೆ ಈ ಸರೋವರದಲ್ಲಿಯೂ ಕೂಡ ಕೆಂಪು ಬಣ್ಣದ ಮತ್ತು ಎಷ್ಟೋ ಬೇರೆ ಬಣ್ಣಗಳ ಚಿತ್ರ-ವಿಚಿತ್ರ ಸುಳುಹು-ಹೊಳಹುಗಳು ಇವೆ—ಗಟ್ಟಿಗೆಂಪು, ಗುಲಾಬಿ, ತಿಳಿಗುಲಾಬಿ ಮತ್ತು ಕೆಟ್ಟ ರಕ್ತದಂತಹ ಸುರ್ಖಿ ಬಣ್ಣ. ಮಲಗುವಾಗ ಈ ಭಾಗದ ಮೇಲೆ ನಾನು ಯಾವಾಗಲೂ ನನ್ನ ತಲೆ ಇಡುವೆನು. ನನ್ನ ತಲೆಗೆ ಜಿಗಳೆಗಳು ಅಂಟಿಕೊಂಡು ನನ್ನ ಕೆಟ್ಟ ರಕ್ತವನ್ನು ಹೀರುತ್ತಿವೆ ಏನೋ ಎನ್ನುವಂತೆ ನನಗೆ ಪ್ರತಿಸಲವೂ ಅನ್ನಿಸುತ್ತದೆ.

ಅನಂತರ ಈ ರಕ್ತವರ್ಣದ ಚೌಕೋನದ ಕೆಳಗೆ ಐದು ಬೇರೆ ಚೌಕೋನಗಳಿವೆ. ಅವುಗಳ ಬಣ್ಣಗಳು ಬೇರೆ ಬೇರೆಯಾಗಿ ಇವೆ. ಈ ಚೌಕೋನಗಳು ರತ್ನಗಂಬಳಿಯ ತುಂಬೆಲ್ಲಾ ಹರಡಿಕೊಂಡಿವೆ. ಈ ರೀತಿಯ ಅಂತಿಮ ಚೌಕೋನದಲ್ಲಿ ರತ್ನಗಂಬಳಿಯ

ಉದ್ದಳತೆಯೂ ಕೂಡಾ ಸಮಾಪ್ತಗೊಳ್ಳುವದು. ಬಳಿಕ ದಾರದ ಅಂಚು ಪ್ರಾರಂಭ ವಾಗುವದು. ಆ ರಕ್ತವರ್ಣದ ಚೌಕೋನದ ಕೆಳಗೆ ಸರಿಯಾಗಿ ಕೆಳಗೆ ಮೂರು ಸಣ್ಣಸಣ್ಣ ಚೌಕೋನಗಳಿವೆ. ಮೊದಲನೆಯದು ಚದುರಂಗದ ಹಾಸಿನ ಹಾಗೆ ಕಪ್ಪು ಮತ್ತು ಬಿಳಿ ಚೌಕಳಿಯದು, ಎರಡನೆಯದು ಶ್ವೇತ ಮತ್ತು ನೀಲಿ ಬಣ್ಣದ್ದು, ಮೂರನೆಯದು ಕಡುನೀಲಿ ಮತ್ತು ಖಾಕಿ ಬಣ್ಣದ್ದು. ಈ ಶತರಂಜಿಗಳು ದೂರ ದಿಂದ ತದ್ರೂಪ ಸಿಡುಬಿನ ಕಲೆಗಳ ಹಾಗೆ ಕಾಣಿಸುತ್ತವೆ. ಸಮೀಪದಿಂದ ನೋಡಿ ದರೂ ಕೂಡಾ ಇವುಗಳ ಅಂದದಲ್ಲಿ ಹೆಚ್ಚಳವೇನೂ ಕಂಡುಬರುವುದಿಲ್ಲ. ಅದರ ಬದಲು ಹರಾಜಿಗೆ ಹಾಕಲಾದ ಹಳೆಯ ಕೋಟಿನ ಅಂಚಿನ ಹಾಗೆ ಹೊಲಸು, ಕೊಳಕು ಮತ್ತು ಅಸಹ್ಯ ಕಾಣಿಸುತ್ತದೆ. ಮೊದಲನೆಯ ಚೌಕೋನವು ರಕ್ತದ ಸರೋವರವಾಗಿದ್ದರೆ ಈ ಮೂರು ಸಣ್ಣಸಣ್ಣ ಚೌಕೋನಗಳು ಒಟ್ಟುಗೂಡಿ ಕೀವಿನ ಸರೋವರದಂತೆ ಪರಿಣಾಮ ಉಂಟುಮಾಡುತ್ತವೆ. ಇವುಗಳು ಶ್ವೇತ, ಕಪ್ಪು, ಹಳದಿ, ಕಡುನೀಲಿ ಬಣ್ಣಗಳು ಕೀವಿನ ಸರೋವರದಲ್ಲಿ ಬೆರೆತಂತೆ ಕಾಣುತ್ತವೆ. ಈ ಸರೋವರದ ಮೇಲೆ ನನ್ನ ಭುಜ, ನನ್ನ ಹೃದಯ ಮತ್ತು ನನ್ನ ಪುಪ್ಪುಸಗಳು, ಎದೆಗೂಡು, ಪಕ್ಕೆಯ ಎಲವುಗಳ ಪೆಟ್ಟಿಗೆಯಲ್ಲಿ ತುಂಬಿರಲ್ಪಟ್ಟವೆ. ನಾಲ್ಕನೆಯ ಚೌಕೋನದ ಬಣ್ಣ ಹಳದಿ ಇದೆ. ಐದನೆಯದರದು ಹಸಿರು. ಆದರೆ ಅದು ಆಳ ವಾದ ಸಮುದ್ರದ ಹಸಿರು ಬಣ್ಣವಿದ್ದ ಹಾಗೆ ಇದೆ. ವಸಂತ ಋತುವಿನಲ್ಲಿಯ ಹಸಿರು ಬಣ್ಣದ ಹಾಗಲ್ಲ. ಇದು ಒಂದು ಅಪಾಯಕಾರಿ ಬಣ್ಣ. ಇದನ್ನು ನೋಡಿ ಶಾರ್ಕ ಮೀನುಗಳ ನೆನಪು ಬರತೊಡಗುವದು. ಮತ್ತು ಮುಳುಗುತ್ತಿರುವ ನಾವಿಕರ ಚೀತ್ಕಾರಗಳು ಕೇಳಿಸಹತ್ತುತ್ತವೆ. ನೆಗೆಯುತ್ತಿರುವ ತೆರೆಗಳ, ಬಿರುಗಾಳಿಯ ಗುಂಜನೆ ಮತ್ತು ತೆರೆಗಳ ಗರ್ಜನೆಗಳು ನಡುಕ ಹುಟ್ಟಿಸುತ್ತವೆ. ಈ ಹಳದೀ ಮಣ್ಣಿನಂತಹ ಬಣ್ಣವಂತೂ ಅಶುಭ. ಈ ಬಣ್ಣ ಕೇಸರಿಯ ಹಾಗೆ ಇದೆ, ಬಸಂತದ ಹಳದಿಯಲ್ಲ. ಈ ಬಣ್ಣ ಮಣ್ಣಿನ ಹಾಗೆ ಹಳದಿ ಇದೆ. ಕ್ಷಯ-ರೋಗಿಯಂಥಹ ಹಳದಿ ಇದೆ. ಮೊದಲ ಪಾಪದ ಹಾಗೆ ಹಳದಿ ಇದೆ. ಇದು ಪಶ್ಚಾತ್ತಾಪದ ತೆಳುವಾದ ಅನುಭವವು ಕೂಡಿದಂಥ ಹಳದಿಯ ಬಣ್ಣ. ನನಗಂತೂ ಈ ಚೌಕೋನವು ಮೇಲಿಂದ ಮೇಲೆ " ನಾನು ಏತಕ್ಕಾಗಿ ಇರುವೆ "...." ನಾನು ಏತಕ್ಕಾಗಿ ಇರುವೆ " ? ಎಂದು ಅನ್ನುತ್ತಿರು ವಂತೆ ಭಾಸವಾಗುತ್ತದೆ.

ಎಲ್ಲಿ ನಾನು ನನ್ನ ಮುಂಡವನ್ನು ಇಡುತ್ತೇನೆಯೋ ಅಲ್ಲಿ ಬಲಗಡೆಯ ಮೂಲೆ ಯಲ್ಲಿ ನೀಲಿ ಮತ್ತು ಹಳದಿ ಬಣ್ಣಗಳ ನೇರ ರೇಖೆಗಳು ರಚಿತವಾಗಿವೆ. ಎಲ್ಲಿ ನಾನು ನನ್ನ ಕಾಲು ಚಾಚಿ ಮಲಗುವೆನೋ ಅಲ್ಲಿ ಇನ್ನೊಂದು ನೇರ ರೇಖೆಗಳಿವೆ. ಇವು ಹಳದಿ ಮತ್ತು ಹಸಿರು-ನೀಲಿಯ ಬಣ್ಣದ್ದಿರುತ್ತವೆ. ರತ್ನಗಂಬಳಿಯ ಮಧ್ಯದಲ್ಲಿ ಆರು ನೆಟ್ಟಗಿನ ರೇಖೆಗಳಿವೆ. ಅವುಗಳ ಬಣ್ಣ ಕೆಂಪು ಮತ್ತು ಶ್ವೇತ. ಅವುಗಳ

ಮಧ್ಯೆ ಒಂದು ದಟ್ಟವಾದ ಕಪ್ಪು ಬಣ್ಣದ ಚುಕ್ಕೆ ಇದೆ. ನಾನು ರತ್ನಗಂಬಳಿಯ ಮೇಲೆ ಮಲಗಿದಾಗ ತಲೆಯಿಂದ ಕಾಲಿನವರೆಗೆ ಯಾರೋ ನನ್ನನ್ನು ಈ ನೇರ ರೇಖೆಗಳ ಕೊಕ್ಕೆಗಳಿಂದ ಬಂಧಿಸಿ ಬಿಗಿದು ಕಟ್ಟಿರುವರೋ ಏನೋ ಎಂದು ನನಗೆ ಅನಿಸುತ್ತದೆ....ನನ್ನನ್ನು ಸಿಲುಬೆಯ ಮೇಲೆ ತೂಗುಬಿಟ್ಟು ನನ್ನ ಹೃದಯದ ಮೇಲೆ ಒಂದು ಗಾಢವಾದ ಕಪ್ಪು ಬಣ್ಣದ ಮೊಳೆಯನ್ನು ಚುಚ್ಚಿದ್ದಾರೆ ಮತ್ತು ನನ್ನ ಸುತ್ತಲೂ ಕೆಟ್ಟ ರಕ್ತವಿದೆ, ಕೀವು ತುಂಬಿದೆ. ಶಾರ್ಕಮೀನು ಮತ್ತು ಆಕ್ಟೋಪಸ್‌ಗಳಿಂದ ತುಂಬಲ್ಪಟ್ಟ ಹಸಿರು ಸಮುದ್ರವಿದೆ. ನಾನು ಈ ರತ್ನಗಂಬಳಿಯ ಮೇಲೆ ಮಲಗುವಾಗ ಅನುಭವಿಸುವ ಸಂಕಟವನ್ನು ಬಹುಶಃ ಏಸೂಕ್ರಿಸ್ತನು ಕೂಡ ಸಿಲುಬೆಯ ಮೇಲೆ ಅನುಭವಿಸಿರಲಿಕ್ಕಿಲ್ಲ. ಆದರೆ ಕಷ್ಟವನ್ನು ಸಹಿಸುವುದು ಮಾನವಸಹಜವಾದ ಗುಣ. ಆದ್ದರಿಂದ ನಾನು ಈ ರತ್ನಗಂಬಳಿಯನ್ನು ಬಿಡಲಾರೆ. ಇದು ಇದ್ದಾಗಲೇ ಇನ್ನೊಂದು ರತ್ನಗಂಬಳಿಯನ್ನು ಕೊಂಡುಕೊಳ್ಳುವ ಸಾಹಸವೂ ನನ್ನಿಂದಾಗುತ್ತಿಲ್ಲ. ನನ್ನ ಬಳಿ ಇದೊಂದೇ ರತ್ನಗಂಬಳಿ ಇದೆ. ಸಾಯುವವರೆಗೂ ನನ್ನ ಜೊತೆಗೆ ಇದೇ ರತ್ನಗಂಬಳಿ ಇರುವದೆಂದು ನಾನು-ನಂಬಿದ್ದೇನೆ.

ವಾಸ್ತವದಲ್ಲಿ ಈ ರತ್ನಗಂಬಳಿಯನ್ನು ಒಬ್ಬ ಯುವತಿ ಖರೀದಿಮಾಡಲು ಬಯಸುತ್ತಿದ್ದಳು. ಹಜರತ್-ಗಂಜನ ಒಂದು ಅಂಗಡಿಯಲ್ಲಿ ಅವಳು ಇದನ್ನು ಬಿಚ್ಚಿ ನೋಡುತ್ತಿದ್ದಾಗ ನನ್ನ ಕಣ್ಣುಗಳಿಗೆ ಈ ರತ್ನಗಂಬಳಿಯು ಮೆಚ್ಚಿಕೆಯಾಯಿತು. ಆ ಯುವತಿ ಏನನ್ನೂ ನಿರ್ಧರಿಸದಾದಳು. ಅದನ್ನು ಅಲ್ಲಿಯೇ ಬಿಟ್ಟು ತನ್ನ ಬ್ಲೌಜಿಗಾಗಿ ರೇಶಿಮೆಯ ಬಟ್ಟೆ ನೋಡತೊಡಗಿದಳು.

"ನಾನು ಈ ರತ್ನಗಂಬಳಿಯನ್ನು ಕೊಂಡುಕೊಳ್ಳಬೇಕೆಂದಿರುವೆ" ಮ್ಯಾನೇಜರನಿಗೆ ಹೇಳಿದೆ.

"ಮಿಸ್ ರೂಪವತಿ ಬಹುಶಃ ಅದನ್ನು ಆಯ್ಕೆಮಾಡಿದಂತೆ ತೋರುತ್ತದೆ. ತಾಳಿ, ನಾನು ಅವರನ್ನು ವಿಚಾರಿಸುವೆ"—ಅವನು ಆ ಯುವತಿಯ ಕಡೆಗೆ ಸಂಕೇತ ಮಾಡುತ್ತ ಅಂದ.

"ರತ್ನಗಂಬಳಿ ಅಷ್ಟೇನೂ ಕೆಟ್ಟದಾಗಿಲ್ಲ"—ರೂಪವತಿ ಅಂದಳು.

"ಕೆಟ್ಟದಾಗಿಲ್ಲ ಅಂದರೆ ನಿಮ್ಮ ಅಭಿಪ್ರಾಯವೇನು?—ನಾನು ಕೆರಳಿ ಕೇಳಿದೆ.

"ಇಂಥಹ ರತ್ನಗಂಬಳಿ ಜಗತ್ತಿನಲ್ಲಿ ಎಲ್ಲಿಯೂ ಇರಲಿಕ್ಕಿಲ್ಲ. ದಾಂತೆನ ಕಲ್ಪನೆಯೂ ಕೂಡಾ ಇಂಥಹ ಸುಂದರ ನಕ್ಷೆಯನ್ನು ಹೆಣೆದಿರಲಿಕ್ಕಿಲ್ಲ. ಈ ರತ್ನಗಂಬಳಿ ಆಸ್ಪತ್ರೆಯ ಹೊಲಸಿದ್ದ ಬಕೇಟ್ ಇದ್ದ ಹಾಗೆ ಸುಂದರವಾಗಿದೆ. ಹುಚ್ಚು ರೋಗಿಗಳ ಹಾಗೆ ಆತ್ಮವರ್ಧಕವಾಗಿದೆ. ಈ ಬೆಂಕಿ ಮತ್ತು ಕೀವುಗಳ ಪ್ರವಾಹವು ಹಾತಿಮತಾಯಿಯ ಯಾತ್ರೆಯನ್ನು ಜ್ಞಾಪಿಸುತ್ತದೆ. ಪ್ರಾಚೀನ ಸನ್ಯಾಸಿಗಳ, ಕುಶಲ ಚಿತ್ರಕಾರರ ಕೃತಿಗಳ ನೆನಪನ್ನು ಹಸಿರುಗೊಳಿಸುತ್ತದೆ. ಇದು ರತ್ನಗಂಬಳಿಯಲ್ಲ, ಇತಿಹಾಸ

ವಾಗಿದೆ. ಮಾನವತೆಯ ಆತ್ಮವಾಗಿದೆ."

ಅವಳು ಮುಗುಳುನಗೆ ನಕ್ಕಳು. ಅವಳ ಹಲ್ಲು ಅತ್ಯಂತ ಬೆಳ್ಳಗಿದ್ದವು. ಆದರೆ ಸ್ವಲ್ಪ ಅಂಕುಡೊಂಕು ಮತ್ತು ಒಂದಕ್ಕೊಂದು ಕೂಡಿಕೊಂಡಿದ್ದವು. ಆದರೂ ನಾನು ಆ ಮುಗುಳ್ನಗೆಗೆ ಮಾರುಹೋದೆ.

"ತಾವು ಎಂದಾದರೂ ಇಟಲಿಗೆ ಹೋಗಿದ್ದಿರೇನು ?"—ಅವಳು ಕೇಳಿದಳು.

"ಇಟಲಿ ! ಎಲ್ಲಿಯದು ? ನಾನಂತೂ ಹಜರತ್‌ಗಂಜನ ಆಚೆ ಕೂಡ ಹೋಗಿಲ್ಲ. ಇದೇ ಮರುಭೂಮಿಯಲ್ಲಿಯೇ ನನ್ನ ಆಯುಷ್ಯ ಕಳೆದುಹೋಗಿದೆ. ಈ ಬೀಡಾದ ಅಂಗಡಿ ಮತ್ತು ಎದುರಿಗಿನ ಕಾಫಿ ಹೌಸ್ ಇಷ್ಟೇ !—ನಾನು ಉತ್ತರ ಕೊಟ್ಟೆ.

ಮ್ಯಾನೇಜರ್ ಈಗ ನಮ್ಮ ಪರಿಚಯ ಮಾಡಿಸುವದು ಉಚಿತವೆಂದು ತಿಳಿದು "ಇವರೊಬ್ಬ ಕಲಾವಿದರು. ಕಾಗದದ ಮೇಲೆ ಚಿತ್ರ ತಯಾರಿಸುವರು. ಇವರು ಮಿಸ್ ರೂಪವತಿ, ಇಲ್ಲಿ ಹುಡುಗಿಯರ ಕಾಲೇಜಿಗೆ ಪ್ರಿನ್ಸಿಪಾಲರಾಗಿ ಬಂದಿದ್ದಾರೆ. ಇದೀಗ ಇಂಗ್ಲಂಡನಿಂದ ಶಿಕ್ಷಣ ಮುಗಿಸಿಕೊಂಡು ಇಲ್ಲಿಗೆ......." ಎಂದು ಹೇಳುತ್ತಿದ್ದಂತೆ ಅವಳು "ನಡೆಯಿರಿ....ಆ ರತ್ನಗಂಬಳಿಯನ್ನು ತಾವೇ ತೆಗೆದುಕೊಳ್ಳಿರಿ. ನನಗೆ ಅಷ್ಟೇನೂ ಮೆಚ್ಚಿಕೆಯಾಗಿಲ್ಲ" ಎಂದಳು.

"ತಮ್ಮ ಉಪಕಾರ ಬಹಳವಾಯಿತು"—ನಾನು ರತ್ನಗಂಬಳಿಯ ಬೆಲೆಯನ್ನು ಕೊಡುತ್ತ ಅಂದೆನು—"ತಾವು ನನ್ನ ಜತೆ ಕಾಫಿಗೆ ಬರಲು ಏನೂ ಅಭ್ಯಂತರವಿಲ್ಲವಷ್ಟೇ ? ನಡೆಯಿರಲ್ಲ ಸ್ವಲ್ಪ ಕಾಫಿ-ಹೌಸವರೆಗೆ....ತಾವು ತಪ್ಪು ತಿಳಿಯಬಾರದು....ಅರ್ಥಾತ್........"

"ಧನ್ಯವಾದ !....ಆದರೆ ನಾನು ಸ್ವಲ್ಪ ಈ ಬ್ಲೌಜಪೀಸ ನೋಡಬೇಕಲ್ಲ"—ಎಂದು ಪುನಃ ಮುಗುಳ್ನಕ್ಕಳು.

ಅವಳ ಮುಗುಳ್ನಗೆಯೂ ಆಪ್ಯಾಯಮಾನವೆನಿಸಿತು. ಅವಳ ಸುಂದರವಾದ ದುಂಡು ಮುಖದ ಬಣ್ಣ ಹಳದಿಯಿತ್ತು. ಚಂದನದ ಬಣ್ಣದ ಮೇಲೆ ತುಟಿಯ ತೆಳುವಾದ ಕೆಂಪು ಒಂದು ವಿಚಿತ್ರ ಪ್ರಕಾರದ ರಸಭರಿತ, ಸಮ್ಮಿಶ್ರಣದಂತಹ ಭಾವನೆಯನ್ನು ಹುಟ್ಟಿಸುತ್ತಿತ್ತು. ಬ್ಲೌಜಿನ ಬಟ್ಟೆ ಕೊಂಡುಕೊಂಡು ಅವಳು ನನ್ನ ಜತೆ ಹೊರಟಾಗ ಅವಳ ಜೋಲಿ ಹೋಯಿತು. ನಾನು ಅವಳ ತೋಳು ಹಿಡಿದು ಆಸರೆ ಕೊಟ್ಟು ಕೇಳಿದೆ—"ವಿಷಯವೇನು ? ತಾವು ಯಾವಾಗಲೂ ಹೀಗೆಯೇ ನಡೆಯುವಿರೇನು ?" "ಇಲ್ಲವಲ್ಲ"—ಅವಳು ಅಂದಳು. ನಾನು ಲಕ್ಷ್ಯಗೊಟ್ಟು ಅವಳ ಕಾಲುಗಳತ್ತ ನೋಡಿದೆ. ಕಾಲಮೇಲೆ ಪಟ್ಟಿ ಕಟ್ಟಲಾಗಿತ್ತು.

"ಗಾಯವಾಗಿದೆಯೇ ?"—ನಾನು ಕೇಳಿದೆ.

"ಹಾಂ. ಹೆಬ್ಬೆರಳಿನ ಉಗುರು ಬೆಳೆದಿತ್ತು. ಚರ್ಮದ ಒಳಗೆ....ನೌಕೆಯಲ್ಲಿನ ಸರ್ಜನ ಪೂರಾ ಕತ್ತೆ ಇದ್ದ"—ಅವಳು ತಲೆಯಮೇಲಿನ ಮುಸುಕನ್ನು ಸರಿಪಡಿಸಿ

ಕೊಂಡಳು. ಅವಳು ಮೊದಲಸಲ ಹೊರಳಿದಾಗ ಅವಳ ಕೂದಲಲ್ಲಿ, ಕುತ್ತಿಗೆಯ ಹತ್ತಿರ ಬಲಗಡೆಗೆ ಹಳದೀ ಗುಲಾಬಿಯ ಹೂವನ್ನು ಮುಡಿದಿದ್ದನ್ನು ನಾನು ಕಂಡೆ. ಪುನಃ ಅವಳು ಹೊರಳಿದಾಗ ಹಣೆಯ ಕುಂಕುಮ ಉಜ್ವಲವಾಗಿ ಕಾಣಿಸಿತು. ಇದಕ್ಕೂ ಮೊದಲು ಈ ಕುಂಕುಮ ಅಷ್ಟೇಕೆ ಸುಂದರವಾಗಿರಲಿಲ್ಲ ಎಂದು ನಾನು ಯೋಚಿಸಿದೆ.

ಕಾಫಿ-ಹೌಸಿನಲ್ಲಿ ಕುಳಿತಬಳಿಕ ಅವಳು ಚಲುವೆಯೆಂಬುದು ಗೊತ್ತಾಯಿತು. ಕೆಲ ಮಟ್ಟಿಗೆ ಕಾಫಿ-ಹೌಸಿನಲ್ಲಿಯ ಬೆಳಕಿನ ವ್ಯವಸ್ಥೆಯೇ ಹಾಗಿರುತ್ತದೆ; ಪುರುಷರು ಕುರೂಪಿಗಳಾಗಿ ಕಾಣುತ್ತಾರೆ ಮತ್ತು ಹೆಂಗಸರು ಸುಂದರಿಯರಾಗಿ. ಅಲ್ಲದೇ—ಹಾಂ—ಏನೋ ವಿಶೇಷವಿತ್ತು. ಇಲ್ಲದಿದ್ದರೆ ಈ ಜನರು ಪದೇಪದೇ ಏಕೆ ಹೊರಳಿ ನೋಡುತ್ತಿದ್ದರು? ಹೆಂಗಸರು ತೀಕ್ಷ್ಣ ದೃಷ್ಟಿಯಿಂದ ಏಕೆ ದಿಟ್ಟಿಸಿ ನೋಡುತ್ತಿದ್ದರು? 'ಬೇರಾ'ಗಳು ಅಷ್ಟು ಶೀಘ್ರತೆಯಿಂದ ಮೇಜಿನ ಬಳಿ ಯಾಕೆ ಬರುತ್ತಿದ್ದರು?

ಅವಳು ಮುಗುಳ್ನಕ್ಕು "ನೋಡು ಬೇರಾ, ಸ್ವಲ್ಪ ಬಿಸಿ ಹಾಲು ಮತ್ತು ಬಿಸಿ ನೀರು ಬೇರೆಬೇರೆ ಬಟ್ಟಲಲ್ಲಿ ಬೇಕು" ಎಂದಳು.

"ಬಿಸಿನೀರು ಅಂತೂ ......."—ಬೇರಾ ತಡೆದು ಹೇಳಿದ.

"ಒಂದಿಷ್ಟು ಬಿಸಿನೀರು—ಸಾಕು."—ಅವಳು ಮತ್ತೆ ಮುಗುಳ್ನಕ್ಕಳು. ಬೇರಾ, ತಲೆಯಿಂದ ಕಾಲಿನವರೆಗೆ ತನ್ನ ಶರೀರವೆಲ್ಲ ಕಾಜಿನಿಂದ ಮಾಡಲಾಗಿದೆ ಏನೋ ಎಂಬಂತೆ ಕರಗಿಹೋದ. ನಾನು ಅವನು ಕರಗುವದನ್ನು ನೋಡುತ್ತಿದ್ದೆ. ಅವನ ತುಟಿಗಳ ಮೇಲೆ ಮುಗುಳ್ನಗೆ ತೇಲಿ ಬಂತು ಮತ್ತು ಅವನ ಶರೀರವನ್ನೆಲ್ಲ ಕರಗಿಸುತ್ತ ಹೋಯಿತು. ಈ ಕಣ್ಣುಗಳೇನು? ಈ ಥಳಕು ಎಂಥದು? ಇದೆಲ್ಲ ಕಾಫಿ-ಹೌಸಿನ ವಿದ್ಯುದ್ದೀಪಗಳ ಚಮತ್ಕಾರವಿರಲಿಕ್ಕಿಲ್ಲವಷ್ಟೇ?

"ಮತ್ತೆ ಬೇರಾ....ಕೋಳಿಮೊಟ್ಟೆಯ ಸ್ಯಾಂಡವಿಚಸ್........" ಅವಳು ಪುನಃ ಹೇಳಿದಳು.

ಬೇರಾ ಹಿಂತಿರುಗಿ ಬಂದು "ಜೀ....ಮೊಟ್ಟೆಯ ಸ್ಯಾಂಡವಿಚ್‌ಗಳು ಮುಗಿದಿವೆ." ಅಂದ.

"ಸ್ವಲ್ಪವೂ ಇಲ್ಲವೇ....?"—ಅವಳ ದೊಡ್ಡದೊಡ್ಡ ಮುಗ್ಧ ಕಂಪಿತ ಕಣ್ಣುಗಳು ಇನ್ನೂ ಅರಳುತ್ತಿದ್ದಂತೆ ಅನಿಸಿತು. ಆದರೆ ಅವುಗಳಲ್ಲಿ ಅಸಹಾಯಕತೆ ಇತ್ತು.

"ಒಂದು ಪ್ಲೇಟೂ ಇಲ್ಲವೇ?"

ಸ್ಯಾಂಡವಿಚ್‌ಗಳು ಕೂಡಾ ದೊರೆತವು.

"ಇಲ್ಲ....ಬಿಲ್ ನಾನು ಕೊಡುವೆ" ಅವಳು ಅಂದಳು.

"ಇಲ್ಲ, ಇದು ಹೇಗೆ ಸಾಧ್ಯ? ನಾನು ಪುರುಷ."

ಅವಳು ನಕ್ಕಳು—"ಬಹಳ ಹಳೆಯ ಮಾತು ಇದು." ಬಿಲ್ ಅವಳೇ ಕೊಟ್ಟಳು.

ಮನೆಯಲ್ಲಿ ಕೆಲಸದವರಿಗೆ ರತ್ನಗಂಬಳಿಯು ಮನಸ್ಸಿಗೆ ಬರಲಿಲ್ಲ. ಆವಾಗ ಒಬ್ಬ ಮುಂಗೋಪಿಯಾದ ಕವಿ ಅತಿಥಿಯಾಗಿದ್ದ. ಅವನು ಫ್ರೀ-ವರ್ಸನಲ್ಲಿ ಕವಿತೆ ಬರೆಯುತ್ತಿದ್ದ. ಷರಾಬ್ (ಮದ್ಯ) ಕುಡಿಯುತ್ತಿದ್ದ ಮತ್ತು ಐದು ಸಲ ನಮಾಜ ಮಾಡುತ್ತಿದ್ದ. ಅವನಿಗೂ ರತ್ನಗಂಬಳಿ ಮನಸ್ಸಿಗೆ ಬರಲಿಲ್ಲ. ನಾನು ಕೇಳಿದರೆ ಕೇವಲ "ಹುಂ" ಎಂದು ಸುಮ್ಮನಾಗಿಬಿಟ್ಟ. ಅವನು ಕವಿತೆಗಳನ್ನು ಎಷ್ಟು ಉದ್ದುದ್ದ ಬರೆಯುತ್ತಿದ್ದನೋ ಮಾತುಗಳನ್ನು ಅಷ್ಟೇ ಕಡಿಮೆ ಆಡುತ್ತಿದ್ದ. "ಹುಂ....ದ ಅರ್ಥ ಏನು ?"— ನಾನು ಕೆರಳಿ ಕೇಳಿದೆ—"ಏನನ್ನಾದರೂ ಹೇಳು. ಈ ಬಣ್ಣಗಳ ಜೋಡಣೆ, ಯೋಜನೆ."

"ಹುಂ"

ರೂಪ ಅದನ್ನು ಬಹಳ ಲಕ್ಷ್ಯಗೊಟ್ಟು ನೋಡುತ್ತಿದ್ದಳು. ಈಗ ಅವಳು ಗಟ್ಟಿಯಾಗಿ ನಗತೊಡಗಿದಳು. ಆ ಕೊಳೆತು ಸಾಯುತ್ತಿದ್ದ ಕವಿಗೆ "ನಿಮ್ಮ ಹೊಸ ಕವಿತೆ ಓದಿರಿ....ಇತ್ತೀಚಿಗೆ ಅಸ್ಪೆಂಡರ ಮತ್ತು ಲಾಯನ್ ಯಾವ ವಸ್ತುಗಳ ಮೇಲೆ ಕವಿತೆಗಳನ್ನು ಬರೆಯುತ್ತಿದ್ದಾರೆ ಎಂಬುದು ನಿಮಗೆ ಗೊತ್ತಿದೆಯೇ ?"

"ಹುಂ...." ಅವನು ತನ್ನ ಗಡ್ಡದ ಮೇಲೆ ಕೈಯಾಡಿಸುತ್ತ ಗುರುಗುಟ್ಟಿದ.

"ಇವರು ನಿಮಗೆ ತಮ್ಮ ಕವಿತೆಗಳನ್ನು ಹೇಳಿರುವರೆ?" ನಾನು ರೂಪಳಿಗೆ ಕೇಳಿದೆ.

"ಇಲ್ಲ. ಆದರೆ ನನಗೆ 'ಜಾ' ಹೇಳಿದ್ದಾರೆ."

"ಜಾ ಯಾರು ?"

"ಜಾ ಬ್ರಾವುನ್ ಹೆಸರು ಕೇಳಿಲ್ಲವೇನು ? ಇತ್ತೀಚಿನ ಆಕ್ಸಫರ್ಡದ ಸರ್ವಪ್ರಿಯ ಕವಿ ಅವರು. ಭಾರತಕ್ಕೆ ಅವರ ಕವಿತೆ ಇನ್ನೂ ತಲುಪಿಲ್ಲ. ಲಂಡನ್‌ದಲ್ಲಿ ನನ್ನ ಮೇಲೆ ಮೋಹಗೊಂಡಿದ್ದರು"....ಅವಳು ಸ್ವಲ್ಪ ವಿಚಿತ್ರ ಸ್ವಲ್ಪ ನಿರ್ಲಜ್ಜ ಸ್ವಲ್ಪ ನಾಚುಬುರುಕಿಯಂಥಹ ನಗುವಿನ ಜತೆ ಹೇಳತೊಡಗಿದಳು. ಆಗ ಅವಳ ಹಣೆಯು ಕುಂಕುಮ ಕೆಂಪು ವಜ್ರದ ಹಾಗೆ ಥಳಥಳಿಸಹತ್ತಿತು.

"ನಿಮ್ಮ ಜೀವನವು ಯಶಸ್ವಿಯಾಗಿರುವಂತೆ ತೋರುತ್ತದೆ"— ನಾನು ಕೇಳಿದೆ.

"ಇಲ್ಲ" ಎಂದು ಅವಳು ಸಿಟ್ಟುಸಿರುಬಿಟ್ಟು ಹೇಳಿದ ರೀತಿಯನ್ನು ನೋಡಿ ಅವಳನ್ನು ಅಪ್ಪಿಕೊಳ್ಳಬೇಕೆಂದು ಮನಸ್ಸಾಯಿತು.

"ಹುಂ...."—ಕವಿ ಅಂದನು.

ರೂಪಾ ಮುಗುಳ್ನಕ್ಕು—"ನಿಮ್ಮ ಕವಿ, ಬಹಳ ಮಾತಿನ-ಮಲ್ಲರಂತೆ ಕಾಣುತ್ತಿದ್ದಾರೆ....ಇಕೋ ಕೇಳಿರಿ ನಾನು ನಿಮಗೆ ಒಂದು ಕವಿತೆ ಹೇಳುವೆನು" ಅಂದಳು.

ನನ್ನ ಆಶ್ಚರ್ಯವು ಹೆಚ್ಚುತ್ತಲಿತ್ತು. "ನೀವು ಕವಿಯೂ ಹೌದೇ ?"—ನಾನು ಕೇಳಿದೆ.

"ಇಲ್ಲ....ಈ ಕವಿತೆಯನ್ನು ನನ್ನ ತಾಯಿ ಬರೆದಿದ್ದರು."

"ತಡೆಯಿರಿ, ನಾನು ಈ ರತ್ನಗಂಬಳಿ ಹಾಸುವೆನು."

ರತ್ನಗಂಬಳಿಯನ್ನು ಹಾಸಲಾಯಿತು. ರೂಪ ಕವಿತೆಯನ್ನು ಹಾಡಿದಳು. ಅದು ಒಂದು ಬಂಗಾಲಿ ಕವಿತೆ. ಉದಾಸಗೊಂಡ ವಿರಹದ ರಾತ್ರಿಯ ಹಾಗೆ, ದಗ್ಧಗೊಂಡಂತಹ....ದೀಪಕದಂತೆ ಸುಂದರವಾಗಿತ್ತು. ಸ್ವರದಲ್ಲಿ ಬೆಂಕಿಯಂತಹ ಕಂಪನ, ಪ್ರಭಾವವು ಮದಿರೆಯ ಹಾಗೆ ಮಾದಕ, ಯುವತಿಯರು ಸಾಲುಗಟ್ಟಿ....ಕೊಡಗಳನ್ನು ಎತ್ತಿಕೊಂಡು ಘಾಟನತ್ತ ಹೋಗುತ್ತಿದ್ದರು. ಸಮುದ್ರದ ಹಸಿರು ತೆರೆಗಳು ನೆಗೆಯುತ್ತಿದ್ದವು....ಈಗ ವಾತಾವರಣ ಮೌನವಾಗಿತ್ತು ಮತ್ತು ರೂಪಳ ಕಣ್ಣುಗಳಲ್ಲಿ ನೀರಿತ್ತು....ಕಣ್ಣೀರು ಕೆನ್ನೆಗಳ ಮೇಲಿಂದ ಉರುಳಿ ರತ್ನಗಂಬಳಿಯ ಮೇಲೆ ಬಿದ್ದವು. ಆ ಕೆಂಪು ಚೌಕೋನವು ಬೆಂಕಿಯ ಉಂಡೆಯಂತಾಯಿತು.

"ನೀವು ಜಾ-ಬ್ರಾವುನ್‌ನನ್ನು ಪ್ರೀತಿಸಲಿಲ್ಲವೇ?"—ನಾನು ಕೇಳಿದೆ. ರೂಪ ತನ್ನ ಕಣ್ಣೀರನ್ನು ತೊಡೆದುಹಾಕಿದಳು.

"ನಾನು ಪ್ರೇಮಿಸಿದ ಹುಡುಗನಿಗೆ ಲಂಡನ್ನಿನಲ್ಲಿಯೇ ಕ್ಷಯರೋಗವಾಗಿತ್ತು. ಅವನು ಹಡಗಿನಲ್ಲಿ ನನ್ನ ಜೊತೆ ಪ್ರಯಾಣ ಮಾಡುತ್ತಿದ್ದ. ಆದರೆ ದಾರಿಯಲ್ಲಿಯೇ ಅವನು ತೀರಿಹೋದ—ಏಡನ್ನದ ಆಚೆ ಕೆಂಪು-ಸಾಗರದಲ್ಲಿ" ಎಂದಳು.

"ಕೆಂಪು-ಸಾಗರ"—ನಾನು ಯೋಚಿಸಿದೆ. ರತ್ನಗಂಬಳಿಯ ಕೆಂಪು ಚೌಕೋನ 'ಕೆಂಪು-ಸಾಗರ'ವಾಯಿತು. ಅದರ ಆಳವಾದ ನೀರಿನಲ್ಲಿ ನನಗೆ ಒಂದು ಹಳದೀ ಬಣ್ಣದ ಕೆಮ್ಮುತ್ತಿದ್ದ ಮುಖವು ಕಾಣಿಸಿತು. ಬಳಿಕ ತಿರುಗಣಿಯಲ್ಲಿ ಮಾಯವಾಯಿತು. ರೂಪಳ ಪ್ರೇಮಿಯು ಸ್ವಪ್ನ-ಸಂಸಾರದಲ್ಲಿರುವನು, ಕೆಂಪು-ಸಾಗರದ ನೀರಿನಲ್ಲಿ....ಮತ್ತು ರೂಪಳ ಕಣ್ಣೀರು ನನ್ನ ರತ್ನಗಂಬಳಿಯ ಮೇಲೆ.

"ಹುಂ"—ಕವಿ ಅಂದನು. ನಾನು ಒಂದು ಪುಸ್ತಕದಿಂದ ಅವನ ತಲೆಯಮೇಲೆ ಏಟುಹಾಕಿದೆ.

ರೂಪ ಕಣ್ಣೀರಿನ ಮಧ್ಯದಲ್ಲಿ ಮುಗುಳ್ನಕ್ಕಳು. ಒಮ್ಮೊಮ್ಮೆ ಕಣ್ಣೀರು ಹರಿಸುವದಕ್ಕಿಂತ ಕಣ್ಣೀರು ಕುಡಿಯುವದು ಹೆಚ್ಚು ಕಷ್ಟಕರ.

'ರೂಪ!' ಎಷ್ಟು ವಿಚಿತ್ರ ಹುಡುಗಿ. ಲಂಡನದಲ್ಲಿ ಕವಿ ಜಾ-ಬ್ರಾವುನ್ ಅವಳನ್ನು ಪ್ರೀತಿಸುತ್ತಿದ್ದ. ಲಖನೌದಲ್ಲಿ ಹಜರತಗಂಜದ ಈ ಉಂಡಾಡಿ ಸ್ವಭಾವದ ನಿರ್ಧನ ಕಲಾವಿದ ಅವಳ ಪ್ರೇಮದಲ್ಲಿ ಬಂಧಿತನಾಗಿದ್ದ. ಇದು ವಿಷವೆಂದು ಗೊತ್ತಿದ್ದರೂ, ತಿಳಿದೂ ತಿಳಿದೂ ಅವನು ಯಾವ ಪ್ರಕಾರ ಈ ವಿಷದ ಬಟ್ಟಲನ್ನು ಕುಡಿದ. ನಿರಾಶೆ, ವಿವಶತೆ, ಪ್ರೇಮದ ಉತ್ತರವು ಯಾವಾಗಲೂ ಪ್ರೇಮವೇಕೆ ಆಗುವದಿಲ್ಲ? ಇದು ಎಂಥಹ ಬೆಂಕಿ? ಒಬ್ಬರ ಮನವನ್ನು ಸುಡುವದು. ಆದರೆ ಇನ್ನೊಬ್ಬನ ಮನದ ಮೇಲೆ ಕಲ್ಲಿನ ಮುದ್ರೆಯಾಗುವದು. ಒಬ್ಬನಿಗೆ ಕಣ್ಣೀರು

ಸುರಿಸಹಚ್ಚುವದು ಮತ್ತು ಇನ್ನೊಬ್ಬನ ತುಟಿಗಳ ಮೇಲೆ ಮುಗುಳ್ನಗೆಯ ನೆರಳನ್ನು ಕೂಡ ಸುಳಿಯಗೊಡುವದಿಲ್ಲ....ಇದು ಎಂಥಹ ಬೆಂಕಿ?

ನಾನು ರತ್ನಗಂಬಳಿಯನ್ನು ಸವರುತ್ತ ಕೇಳಿದೆ.

"ನಾನೊಂದು ಶಿಲುಬೆ....ನನಗೆ ದುಃಖ ಮತ್ತು ನೋವುಗಳನ್ನು ತಿಳಿದುಕೊಳ್ಳುವ ಶಕ್ತಿ ಇದೆ. ಆದರೆ ದುಃಖ ಮತ್ತು ನೋವಿನ ಔಷಧಿ ನನಗೆ ತಿಳಿಯದು." ರತ್ನಗಂಬಳಿ ಉತ್ತರಿಸಿತು.

ರೂಪ ಹೇಳಿದಳು—"ಇವೆಲ್ಲ ಅವರವರ ಭಾಗ್ಯ....ಭಾಗ್ಯವು ನಿಮ್ಮನ್ನು ರತ್ನಗಂಬಳಿ ಕೊಂಡುಕೊಳ್ಳಲು ಅಲ್ಲಿಗೆ ಕರೆದೊಯ್ಯಿತು....ನನ್ನ ಜತೆ ಭೆಟ್ಟಿಯಾಗುವ ಅವಕಾಶ ಕೊಟ್ಟಿತು. ಆದರೆ ಈಗ ನನಗೆ ನಿಮ್ಮನ್ನು ಪ್ರೇಮಿಸಲು ಶಕ್ಯವಾಗಲಿಲ್ಲ—ಇದು ನಿಮ್ಮ ಭಾಗ್ಯ. ಸಾವಿರ ಪ್ರಯತ್ನ ಮಾಡಿದಮೇಲೂ ಕೂಡ ಈ ಮೈತ್ರಿ ಪ್ರೇಮದಲ್ಲಿ ಪರಿವರ್ತಿತವಾಗಲು ಸಾಧ್ಯವಿಲ್ಲ. ಇದು ಭಾಗ್ಯವಲ್ಲದೇ ಮತ್ತೇನು?"—ಆಮೇಲೆ ಹೇಳತೊಡಗಿದಳು—"ಕವಿ, ನಿಮ್ಮ ಕವಿತೆ ಹೇಳಿರಿ."

ಕೆಲವು ದಿನಗಳ ಬಳಿಕ "ನನಗೆ ನಿಮ್ಮ ಕವಿಯೊಡನೆ ಪ್ರೇಮವಾಗಿದೆ" ಎಂದು ಏಕಾಏಕಿ ನನ್ನೊಡನೆ ಹೇಳಿದಳು.

"ಸುಳ್ಳು....ಆ ಮೂರ್ಖನ ಜತೆ...."

"ನೀವು ಅವನ ಕಣ್ಣುಗಳನ್ನು ನೋಡಿರುವಿರೇನು?"—ಅವಳು ನಿಟ್ಟುಸಿರು ಬಿಡುತ್ತ ಅಂದಳು—"ಏಸು ಶಿಲುಬೆಯ ಮೇಲೆ ಜೋತು ಬಿದ್ದಿದ್ದಾನೋ ಎನ್ನುವಂತೆ. ಎಷ್ಟು ದುಃಖವಿದೆ ಆ ಕಣ್ಣುಗಳಲ್ಲಿ."

"ಒಂದು ವೇಳೆ ನೀವು ಹೇಳಿದರೆ, ನಾನು ನನ್ನ ಕಣ್ಣುಗಳನ್ನು ಕುರುಡು ಮಾಡಿಕೊಳ್ಳಲೇ?"—ನಾನು ಕೇಳಿದೆ. ಬಹುಶಃ ನನ್ನ ಮಾತು ಅವಳಿಗೆ ನೋವು ಉಂಟುಮಾಡಿರಬೇಕು. "ಏನು ಮಾಡಲಿ?"—ಗಂಭೀರಳಾಗಿ ಅಂದಳು.

"ಹಾಂ ...ಮನದ ಪ್ರಶ್ನೆ ಇದೆಯಲ್ಲ"—ನಾನು ವ್ಯಂಗ್ಯಪೂರ್ವಕ ಅಂದೆ.

"ಹುಂ...."—ಕವಿ ಅಂದ.

ಅವರನ್ನು ಬೀಳ್ಕೊಟ್ಟ ದಿನ ನಾನು ಮನೆಯಲ್ಲಿ ಒಂದು ಸಣ್ಣ ಔತಣಕೂಟ ಏರ್ಪಡಿಸಿದ್ದೆ. ರೂಪ ಗಾಢವಾದ ಕರಿಯ ಮಲ-ಮಲ್ ಉಟ್ಟಿದ್ದಳು. ಅವಳ ಕಣ್ಣುಗಳಲ್ಲಿನ ಕಾಡಿಗೆ ಆಳವಾಗಿತ್ತು. ರೇಶ್ಮಿಬಳೆಗಳ ಬಣ್ಣವೂ ಕರಿಯದಿತ್ತು. ಪ್ರತಿ ದಿನ ಅವಳನ್ನು ಕಂಡಾಗ ಬೆಳಕಿನ, ಸೂರ್ಯನ, ಚಂದ್ರನ ಕಿರಣಗಳ ಪ್ರಕಾಶದ ಅನುಭವವಾಗುತ್ತಿತ್ತು. ಆದರೆ ಇಂದು ಅವಳನ್ನು ನೋಡಿ ಅದೇಕೋ ಕತ್ತಲೆಯ ಅನುಭವವಾಗಹತ್ತಿತು. ತನ್ನ ಆ ಸಂಪೂರ್ಣ ಪ್ರಸನ್ನತೆಯ ಕ್ಷಣಗಳಲ್ಲಿಯೂ ಅವಳು ಅದೇಕೆ ದುಃಖ ಮತ್ತು ನಿರಾಶೆಯ ಮೂರ್ತಿಯಂತೆ ಕಾಣಿಸುತ್ತಿರುವಳು. ಅದು ಈ ನಿರ್ಧನ ಕಲಾವಿದನ ಮನಸ್ಸಿನ ಅಂಧಕಾರವಿರಲಿಕ್ಕಿಲ್ಲವಷ್ಟೆ? ಇಂದು ನಾನು

ಅವಳನ್ನು ಮೊದಲ ದಿನ ತಾನು ಹಾಡಿದ ಆ ಹಾಡನ್ನು ಹೇಳಲು ಪ್ರಾರ್ಥಿಸಿದೆ.... ನನಗೆ ನೆನಪಿದೆ, ಹಾಡಿದಮೇಲೆ ಅವಳು ನರ್ತಿಸಿದ್ದಳು ಕೂಡ. ನಾನು ಅವಳ ಮುಖವನ್ನು ನೋಡಲಿಲ್ಲ. ಅವಳ ಕಾಲುಗಳನ್ನು ನೋಡುತ್ತಲಿದ್ದೆ. ಮಸುಮಸುಕಾದ ಕಾಲುಗಳ ಮೇಲಿನ ಮದರಂಗಿಯ ಕೆಂಪು ರೇಖೆ ಮಿಂಚಿನಂತೆ ಥಳಥಳ ಹೊಳೆಯುತ್ತಿತ್ತು. ಅವಳು ನರ್ತಿಸುತ್ತಲೇ ಇದ್ದಳು. ನಾನು ಆ ಅಂಧಕಾರದಲ್ಲಿ ಮದರಂಗಿಯ ಬಣ್ಣದ ರೇಖೆಯ ನೃತ್ಯ ನೋಡುತ್ತಲೇ ಇದ್ದೆ. ನೃತ್ಯ ಸಮಾಪ್ತಿಗೊಂಡ ಬಳಿಕ ನಾನು ಆ ಕಾಲುಗಳನ್ನು ಎತ್ತಿ ನನ್ನ ಎದೆಯಲ್ಲಿ ಇಟ್ಟುಕೊಂಡೆ. ಆ ಕಾಲುಗಳು ಇಂದಿನವರೆಗೂ ಈ ಎದೆಯಲ್ಲಿ ಏಕೆ ಸುರಕ್ಷಿತವಾಗಿವೆ? ಈ ಪಿರಾಮಿಡ್‌ನಲ್ಲಿ ಹೆಣಗಳ ಹೊರತು ಬೇರೆ ಯಾರಿಗೂ ಸ್ಥಾನವಿಲ್ಲವೆ?

ಅವಳು ಹೋದಮೇಲೆ ನಾನು ಪುನಃ ರತ್ನಗಂಬಳಿಯ ಮೇಲೆ ಹೋಗಿ ಕುಳಿತೆ. ಹಳದೀ ಗುಲಾಬಿಯ ಒಂದು ಮೊಗ್ಗು ಅವಳ ತುರುಬಿನಿಂದ ಜಾರಿ ರತ್ನಗಂಬಳಿಯ ಮೇಲೆ ಬಿದ್ದುಕೊಂಡಿತ್ತು. ನನ್ನ ಹೃದಯದಲ್ಲಿ ಬಹುಶಃ ಈಗ ರೂಪಳ ಯಾವ ನೆನಪೂ ಬಾಕಿ ಇಲ್ಲವೇನೋ. ಕೇವಲ ಆ ಎರಡು ಕಾಲುಗಳು ಇವೆ ಮತ್ತು ಈ ಒಂದು ಹಳದೀ ಗುಲಾಬಿಯ ಮೊಗ್ಗು....ಎಂಥ ಚಿತ್ರವಿದು? ಕಲಾವಿದನಾಗಿಯೂ ನಾನು ಬಹುಶಃ ಇಂಥ ವಿಚಿತ್ರ ಚಿತ್ರವನ್ನು ಈ ಮೊದಲು ಎಂದೂ ರಚಿಸಿರಲಿಲ್ಲ.... ಆದರೆ?

ನಾನು ರತ್ನಗಂಬಳಿಯನ್ನು ಕೇಳಿದೆನು.

'ನಾನಂತೂ ಶಿಲುಬೆಯ ಮೇಲೆ ಇರುವೆ. ಶಿಲುಬೆ ಮೃತ್ಯುವನ್ನು ಪ್ರಧಾನ ಮಾಡುತ್ತದೆ. ಅದಕ್ಕೆ ಜೀವನ ಶ್ರಮದ ಜ್ಞಾನವಿಲ್ಲ"—ರತ್ನಗಂಬಳಿ ಉತ್ತರ ಕೊಡುತ್ತದೆ.

ಒಳ್ಳೆಯದು, ಅದು ಹೋಗಲಿ ಬಿಡು. ಆದದ್ದು ಆಯಿತು. ಜೀವನದಲ್ಲಿ ಗೋರಿಯಿಂದ ಆನಂದ ಪಡೆಯುವದಿದ್ದರೆ ಅದನ್ನು ಸಂತೋಷವಾಗಿ ಯಾಕೆ ಅನುಭವಿಸಬಾರದು? ಜೇನಿನಲ್ಲಿ ವಿಷ ಬೆರಸಿ ಕುಡಿಯುವದಿದ್ದರೆ....ಬರೀ ವಿಷವನ್ನೇ ಯಾಕೆ ಕುಡಿಯಬಾರದು? ಸರಳತೆಯು ಕೊನೆಯವರೆಗೂ ಇರಲು ಸಾಧ್ಯವಿರದಿದ್ದರೆ ಪಾಪದ ಮಡಿಲಲ್ಲಿ ಆಶ್ರಯ ಪಡೆಯಬಾರದೇಕೆ? ಬಾ....ತನ್ನ ಆತ್ಮದಲ್ಲಿ ಉಳಿದಿರುವ ಒಂದು ತೆಳುವಾದ ದೀಪಶಿಖೆಯನ್ನು ನಂದಿಸಿಬಿಡೋಣ ಮತ್ತು ಜೀವನದ ಗೇಲಿ ಮಾಡೋಣ....ಅಟ್ಟಹಾಸ ಮಾಡೋಣ....ಪ್ರೇಮವಿಲ್ಲದಿದ್ದರೆ ಇಲ್ಲಿ ಲಾಲಸೆಯೇ ಇರಲಿ.

ಕಲಾವಿದನು ಮತ್ತೊಬ್ಬ ಹುಡುಗಿಯ ಪರಿಚಯ ಮಾಡಿಕೊಂಡನು. ಅವಳು 'ವೀಕ್'ದಲ್ಲಿ ಕೆಲಸ ಮಾಡುತ್ತಿದ್ದಳು. ಅವಳ ಹೆಸರು 'ಆಶಾ'. ಆದರೆ ಅವಳ ಮುಖದ ಮೇಲೆ ಪೂರ್ತಿ ನಿರಾಶೆಯ ಕಳೆ ಸುರಿಯುತ್ತಿತ್ತು. ಎಂದೂ ನೋಡಿದ್ದಿಲ್ಲ

ವೇನೋ ಎನ್ನುವಂಥ ಹಸಿದ ಹುಡುಗಿ ಇದ್ದಳು. ಹೆಣ್ಣು ನಾಯಿಯಂತೆ ಮೈಗೆ ಮೈ ಒತ್ತಿಕೊಂಡೇ ತಿರುಗುತ್ತಿದ್ದಳು....ಪಾಪ. ಕಲಾವಿದನಿಗೆ ಬಹುಶಃ ಅವಳ ಬಗ್ಗೆ ದಯೆ ಬರಹತ್ತಿತೇನೋ. ಅವನು ಅವಳ ಜತೆ ಸ್ನೇಹದಿಂದ ವರ್ತಿಸಹತ್ತಿದನು, ಪಾಲನೆ ಮಾಡುವ ಒಬ್ಬ ಸ್ನೇಹಿತನಂತೆ. ಈಗ ಅವನು ಅವಳನ್ನು ಪ್ರತಿಯೊಂದು ಸ್ಥಳಕ್ಕೂ ಕರೆದೊಯ್ಯುತ್ತಿದ್ದ. ಜನರು ವ್ಯಂಗ್ಯವಾಗಿ ಅವನ ಆಯ್ಕೆಯನ್ನು ಹೊಗಳು ತ್ತಿದ್ದರು. ಅವನು ಒಂದು ಪ್ರಕಾರದ ಆದರದಿಂದ ಅವರ ಪ್ರಶಂಸೆಯನ್ನು ಸ್ವೀಕರಿಸು ತ್ತಿದ್ದ. ಯಾರಾದರೂ "ನೋಡಯ್ಯ, ಬಹಳ ಕುರೂಪಿ ಇದ್ದಾಳೆ ಈಕೆ ನೀವು ಏನನ್ನು ಯೋಚಿಸಿ...." ಎಂದರೆ, ಅವನು ಜಗಳಕ್ಕೇ ಇಳಿಯುತ್ತಿದ್ದ. ಗಂಟೆಗಟ್ಟಲೆ ಅವಳ ಸೌಂದರ್ಯದ ವಿಶ್ಲೇಷಣೆ ಮಾಡುವನು. ಇದ್ದಲಿಯಿಂದ ಅವನು ಆಶಾಳ ಚಿತ್ರ ಬರೆದ ಬಳಿಕ ತನ್ನ ಸ್ಟುಡಿಯೋವಿನಲ್ಲಿಯ ಪ್ರತಿಯೊಬ್ಬನಿಗೂ ಆ ಚಿತ್ರವನ್ನು ತೋರಿಸಿದ. ನೋಡಿ....ನೋಡಿ....ನೋಡಿ. ನನಗೆ ನಿಮ್ಮದಾವ ಪರಿವೆಯೂ ಇಲ್ಲ. ನಾನು ನನ್ನ ಆತ್ಮದ ಸ್ವಂತ ಒಡೆಯನಿರುವೆ. ವಿಷ !....ಇದ್ದಿಲು !—ತನ್ನ ಮನಸ್ಸಿನ ಭಾವವನ್ನು ತೋರಿಸಹತ್ತಿದ್ದ.

ಆದರೆ ಎಂದೂ ಹಜರತ-ಗಂಜದ ಆಚೆ ಹೋಗದ ಅವನು ಅಲ್ಲಿಂದ ಓಡಿ ಹೋಗುವ ಯೋಚನೆಯಲ್ಲಿದ್ದ. ಫುಟ್‌ಪಾತಮೇಲೆ ನಡೆಯುತ್ತ ನಡೆಯುತ್ತ ಅವನು ಸಾವಿರಾರು ಅಡ್ಡಾದಿಡ್ಡಿ ಕನಸುಗಳನ್ನು ಕಾಣತೊಡಗಿದ್ದ. ರಸ್ತೆಯ ಪ್ರತಿ ಕಲ್ಲಿ ನಲ್ಲಿಯೂ ಯಾರದೋ ಕಾಲುಗಳ ಮಸುಕು ಮಸುಕು ನೆರಳು ಕಂಪಿಸಿದಂತೆ ಅನಿಸು ತ್ತಿತ್ತು. ಕಾಫಿಯ ಬಟ್ಟಲಿನ ಪ್ರತಿಯೊಂದು ಗುಟುಕಿನಲ್ಲಿಯೂ ಅವನು ಅವಳ ಬಿಸಿಯುಸಿರಿನ ಸ್ಪರ್ಶವನ್ನು ಅನುಭವಿಸುತ್ತಿದ್ದ. ವಿದ್ಯುದ್ದೀಪಗಳ ಉಜ್ವಲ ಪ್ರಕಾಶ ದಲ್ಲಿ ಅವನಿಗೆ ಸಾವಿರಾರು ಕುಂಕುಮಗಳು ತೇಲುತ್ತಿರುವಂತೆ ಕಾಣಿಸುತ್ತಿದ್ದಿತು. ಈ ನಗು....ಎಲ್ಲಿಂದ ಬಂದಿತು ಎಂದು ಹೊರಳಿ ನೋಡುವನು. ಬುಲ್-ಬುಲ್ ಪಂಜರದ ಸಲಾಕಿಗಳನ್ನು ಮುರಿದು ಹಾರಿಹೋಗಿದೆ. ಆದರೂ ಅವನು ಈವರೆಗೂ ಹಜರತ-ಗಂಜದ ಈ ನಿರ್ಜನ ಸ್ಥಾನದಲ್ಲೇಕೆ ಕೈದಿಯಾಗಿದ್ದ? ಯಾಕೆ....? ಯಾಕೆ....?.... ಯಾಕೆ....? ಎಂದು ಆ ಮದರಂಗಿಯ ರೇಖೆ ಮಿಂಚಿನ ಹಾಗೆ ಹೊಳೆದು ಅವನನ್ನು ಪದೇ ಪದೇ ಕೆಣಕಿ ಕೇಳುತ್ತಿತ್ತು.

ಈಗ ಅವನು ಪಟ್ಟಣವನ್ನು ಬಿಟ್ಟುಹೋಗುವವನಿದ್ದ. ಅವನು ತನ್ನ ಎಲ್ಲ ಗೆಳೆಯರಿಗೆ, ಆ 'ವೀಕ್'ದ ಹುಡುಗಿಯ ಎಲ್ಲ ಗೆಳತಿಯರಿಗೆ ಔತಣವನ್ನು ಕೊಟ್ಟ. ಔತಣದ ನಂತರ ಎಲ್ಲರೂ ಹೋದಮೇಲೆ ಬೆದರಿದ ಮತ್ತು ಚಿಂತಿತ ಆ 'ವೀಕ್' ಹುಡುಗಿ ಅದೇ ರತ್ನಗಂಬಳಿಯ ಮೇಲೆ ಕುಳಿತೇ ಇದ್ದಳು. ಬಳಿಕ ಏಕಾಏಕಿ ಅವನನ್ನು ತಬ್ಬಿಕೊಂಡು ಅಳತೊಡಗಿದ್ದಳು. ಆ ಬಿಸಿಯಾದ ಕಣ್ಣೀರು ಅವನ ಎದೆಯಲ್ಲಿ ಬರ್ಫಿನ ಫಲಗಳಾಗತೊಡಗಿದವು. ಪ್ರೇಮದ ಉತ್ತರ ಪ್ರೇಮವೇಕೆ ಆಗುವುದಿಲ್ಲ?

ಒಬ್ಬನ ಮನವನ್ನು ಸುಡುವ ಆದರೆ ಇನ್ನೊಬ್ಬನ ಮನದಮೇಲೆ ಕಲ್ಲಿನ ಮುದ್ರೆಯಾಗಿ ಬಿಡುವ ಈ ಬೆಂಕಿ ಎಂಥದು?

ಒಬ್ಬ ಹುಡುಗಿ ರತ್ನಗಂಬಳಿಯ ಮೇಲೆ ಒರಗಿದ್ದಳು. ಅವಳ ತೋಳುಗಳು ಮೇಲಿನ ನೇರ ರೇಖೆಗಳ ಮೇಲಿತ್ತು ಮತ್ತು ಕಾಲುಗಳು ಕೆಳಗಿನ ನೇರ ನೇರರೇಖೆಗಳ ಮೇಲೆ ಇದ್ದವು. ರತ್ನಗಂಬಳಿಯು ಸದ್ದಿಲ್ಲದೇ ಅವಳ ಎದೆಯಲ್ಲಿ ಒಂದು ಕಪ್ಪು ಮೊಳೆಯನ್ನು ಹೊಡೆಯಿತು. ಅಂತ್ಯವಿಧಿಯ ಸಲುವಾಗಿ ಮತ್ತೊಂದು ಹೆಣ ಸಿದ್ಧವಾಯಿತು. ಆದರೆ ಅಲ್ಲಿ ಸ್ಥಳ ಎಲ್ಲಿತ್ತು? ಎದೆಯಲ್ಲಿ ಈಗಲೂ ಆ ಎರಡು ಕಾಲುಗಳು ನರ್ತಿಸುತ್ತಿದ್ದವು....ಮತ್ತು ಅದೇ ಹಳದೀ ಗುಲಾಬಿಯ ಒಂದು ಮೊಗ್ಗು....

ನಾನು ರತ್ನಗಂಬಳಿಗೆ ಕೇಳಿದೆ—"ಇದೆಂಥ ಆಟ? ನಾನು ಯಾರಿಗೆ ಏನು ಅನ್ಯಾಯ ಮಾಡಿರುವೆ? ಈ ಗಾಯಗಳು ಯಾರವು? ಈ ಹುಡುಗಿ ಏಕೆ ಅಳುತ್ತಿದ್ದಾಳೆ? ಇದೆಲ್ಲ ಒಂದು ವೇಳೆ ಭಾಗ್ಯವಾಗಿದ್ದರೆ ಹೆಣದಲ್ಲಿ ಜೀವ ತುಂಬಲು ಯತ್ನಿಸುತ್ತಿರುವ ಈ ಕ್ರಿಯಾತ್ಮಕ ಚೇಷ್ಟೆ ಯಾವುದು?"

ರತ್ನಗಂಬಳಿಯು ಉತ್ತರಿಸಿತು—"ನನಗೆ ಗೊತ್ತಿಲ್ಲ. ನಾನಂತೂ ಒಂದು ಸಿಲುಬೆ... ಅದು ಹೃದಯದಲ್ಲಿ ಕಪ್ಪು ಮೊಳೆ ಹೊಡೆಯುವದು. ಉಜ್ವಲ ಪ್ರಕಾಶ ತರುವದಿಲ್ಲ. ಭಾಗ್ಯದ ಅಂತ್ಯವನ್ನು ತೋರಿಸುವದು. ಆದರೆ ಅದರ ಪ್ರಾರಂಭ ಮತ್ತು ಯೌವನವನ್ನಲ್ಲ."

"ನಿನ್ನನ್ನು ಸುಟ್ಟು ಬೂದಿ ಮಾಡಲಿಕ್ಕಿಲ್ಲವೇ?"

ಆ ಹೊಸ ಪಟ್ಟಣದಲ್ಲಿ, ನಾಲ್ಕು ಜನ ರತ್ನಗಂಬಳಿಯ ಮೇಲೆ ಕುಳಿತು ಇಸ್ಪೇಟ ಆಡುತ್ತಿರುವರು. ಅವರಲ್ಲಿಬ್ಬರು ನಟರು. ತಮಾಶೆ ತೋರಿಸುತ್ತಿರುವವನು ಕಲಾವಿದ. ಇಸ್ಪೇಟ ಆಡುತ್ತ ಆಡುತ್ತ ನಟ ಮತ್ತು ವ್ಯಾಪಾರಿ ಜಗಳವಾಡಲು ಪ್ರಾರಂಭಿಸುವರು. ಕೈ ಕೈ ಹತ್ತುವ ಪರಿಸ್ಥಿತಿ ಬರುತ್ತದೆ. ರತ್ನಗಂಬಳಿಯನ್ನು ತುಳಿಯಲಾಯಿತು. ಯಾಕೆಂದರೆ, ಒಂದು ಆಟದಲ್ಲಿ ವ್ಯಾಪಾರಿಯು ಮರವೆಯಿಂದಲೋ ಅಥವಾ ಉದ್ದೇಶಪೂರ್ವಕವಾಗಿಯೋ ಎಂಟು ಆಣೆ ಹೆಚ್ಚು ಪಡೆದಿದ್ದನು. ನನ್ನ ಕೊರಳ ಪಟ್ಟಿ ಚಿಂದಿ ಚಿಂದಿಯಾಯಿತು. ಯಾಕೆಂದರೆ, ಜಗಳವನ್ನು ಬಿಡಿಸ ಹೋದವನೇ ಹೆಚ್ಚು ಪೆಟ್ಟು ತಿನ್ನುತ್ತಾನೆ. ಈ ಕೆಟ್ಟ ಸ್ವಭಾವವನ್ನು ದೂರ ಮಾಡುವದಕ್ಕೆ ಯಾವ ಉಪಾಯವಿದೆ ಎಂದು ನಾನು ಯೋಚಿಸುತ್ತೇನೆ. ಹರಟೆ....? ಅಸಂಭವ, ಗ್ರಾಮೋಫೋನ? ನಿರರ್ಥಕ ಚಹಾ?....ಧಿಕ್ಕಾರ, ಷರಾಬು? ವ್ಹಾ.... ವ್ಹಾ....

ಎಲ್ಲರೂ ಷರಾಬು ಕುಡಿಯುತ್ತಿದ್ದಾರೆ. ಕಲಾವಿದನ ಕಣ್ಣು ಕೆಂಪಾಗಿದೆ. ಯಾವಾಗಲೂ ನಗುತ್ತಿರುವ, ಪ್ರಸನ್ನನಾಗಿರುವ ಸುಂದರ ನಟನು ಯಾವಾಗಲೂ ಸುಮ್ಮನಿರುವ ಕಡಿಮೆ ಅಂತಸ್ತಿನ ಸುಂದರ ನಟನಿಗೆ ಹೇಳುತ್ತಿದ್ದ. "ಪ್ರೇಮ?

ಪ್ರೇಮ? ಮಗನೇ, ಪ್ರೇಮವನ್ನು ನೀನೇನು ಬಲ್ಲೆ? ಇನ್ನೂ ಕಾಲೇಜಿನ ಹುಡುಗ ನೀನು....ಏ? ಪ್ರೇಮದ ಅಮಲು ಏನೆಂದು ನನ್ನನ್ನು ಕೇಳು....ಮಗಂದು ಈ ಷರಾಬು ಪೂರ್ತಿ ಸಪ್ಪೆ ಆಗಿದೆ........ರಾಣಿಯನ್ನು ನೀನು ನೋಡಿರುವೆ ಏನು?"

"ರಾಣಿ, 1944ರ ಒಂದನೇ ನಂಬರ ನಟಿ ಅಲ್ಲವೇ?"—ನಾನು ಕೇಳಿದೆ. "ಹೌದು. ಅವಳೇ....ಅವಳೇ....ಮಗನೇ ನಿನಗೇನು ಗೊತ್ತು? ಅವಳು ನನ್ನ ಪ್ರೇಯಸಿ.... ತಿಳಿಯಿತೇ? ಏ ಅವಳಿಗಾಗಿ ನಾನು ನನ್ನ ತಾಯಿ ತಂದೆಯುವರಿಂದ ಬೈಗಳು ತಿನ್ನಬೇಕಾಯಿತು. ಅವಳ ಬೇರೆ ಪ್ರೇಮಿಗಳ ಜತೆಗೆ ಕಾದಾಡಿದೆ. ನನ್ನ ಮನೆ ಮಠ ಬಿಟ್ಟುಬಿಟ್ಟೆ....ಈ ಉಂಗುರ....ಮಗನೇ ನೋಡುತ್ತಿರುವೆ ಏನು....ಈ ಅಂಗಿಯ ಗುಂಡಿ....ಈ ಕಫ್-ಬಟನ್ ಇವೆಲ್ಲ ಬಂಗಾರದ್ದು ಮಗನೇ! ನಿನಗೇನು ಗೊತ್ತು.... ಇವೆಲ್ಲವನ್ನೂ ಅವಳು ಕೊಟ್ಟಿದ್ದಾಳೆ....ಕಾಣಿಕೆ....ಆದರೆ ನಾನು ಅವಳನ್ನು ಮದುವೆಯಾಗುವದಿಲ್ಲ....ಎಂದೂ ಆಗುವದಿಲ್ಲ."—ಅವನು ನಿಶ್ಚಯಪೂರ್ಣ ಸ್ವರದಲ್ಲಿ ಹೇಳಿದ.

"ಯಾಕೆ?...."

"ಅವಳು ನನ್ನನ್ನು ಪ್ರೀತಿಸುತ್ತಾಳೆ. ನನಗಿಂತಲೂ ಬಹಳ ಶ್ರೀಮಂತಳಾದ ಅವಳು ನನ್ನನ್ನು ಮದುವೆಯಾಗಬಯಸುತ್ತಾಳೆ. ನಾನು ಸತ್ತರೂ ಅವಳನ್ನು ಮದುವೆಯಾಗುವದಿಲ್ಲ."

"ನಿನಗೆ ಅವಳಲ್ಲಿ ಪ್ರೇಮವಿಲ್ಲವೇ?"—ಒಬ್ಬ ವ್ಯಾಪಾರಿ ಕೇಳಿದ.

"ಅಲ್ಲಯ್ಯ, ಮನೆಗೆ ಬರುತ್ತಿರುವ ಲಕ್ಷ್ಮಿಯನ್ನು ಏಕೆ ಬಿಡುತ್ತಿರುವೆ?" ಇನ್ನೊಬ್ಬ ವ್ಯಾಪಾರಿ ಕೇಳಿದ.

ನಟ ಮುಷ್ಟಿಗಳನ್ನು ಬಿಗಿಯುತ್ತ—"ನಾನು ಹೇಗಿದ್ದೆನೋ ಹಾಗೆಯೇ ಇರುವೆ. ನಾನು ಅವಳನ್ನು ಪ್ರೀತಿಸುತ್ತೇನೆ. ಆದರೆ ಅವಳ ದಾಸನಾಗಿರಲು ನನ್ನಿಂದ ಸಾಧ್ಯವಿಲ್ಲ. ನಾನು ಬಯಸುವದು ಅವಳ ಪ್ರೀತಿಯನ್ನು, ಧನವನ್ನಲ್ಲ, ಓಹ್...."—ನಟ ಜೋರಾಗಿ ರತ್ನಗಂಬಳಿಯ ಮೇಲೆ ಕೈತಟ್ಟಿ ಅಂದನು. ಬಳಿಕ ಗಹಗಹಿಸಿ ನಗತೊಡಗಿದನು. ರತ್ನಗಂಬಳಿ ಕಂಪಿಸಹತ್ತಿತು ಮತ್ತು ಅದರ ಬಣ್ಣ ವಿಚಿತ್ರವಾಯಿತು.

"ಇನ್ನಷ್ಟು ಷರಾಬು ಕೊಡು ಸೂಳೇಮಗನೇ"—ಅವನು ತನ್ನ ಖಾಲಿ ಗ್ಲಾಸನ್ನು ಹುಡುಕಲು ಅತ್ತಿತ್ತ ತಡಕಾಡಿದ.

"ರಾಣಿ! ಅಲ್ಲಯ್ಯ, ಇಂದೇ ನಾನು ಪೇಪರಿನಲ್ಲಿ ಓದಿರುವೆ. ರಾಣಿ ಒಬ್ಬ ಅಮೇರಿಕನ್‌ನನ್ನು ಮದುವೆಯಾಗಿದ್ದಾಳಂತೆ"—ನಾನು ಅಂದೆ.

ನಟ ಸಾವಕಾಶವಾಗಿ ಷರಾಬಿನ ಗ್ಲಾಸನ್ನು ರತ್ನಗಂಬಳಿಯ ಮೇಲೆ ಎಸೆದ. ಅವನ ಬೆರಳುಗಳು ಗ್ಲಾಸನ್ನು ಬಿಗಿಯಾಗಿ ಹಿಡಿದವು ಗಾಜು ಅವನ ಬೆರಳುಗಳನ್ನು ತೊರೆಯುತ್ತ ಚೂರು ಚೂರಾಯಿತು.

ಅವನು ಬಿಗಿದ ಕಂಠದಿಂದ "ಇದು ಸುಳ್ಳು. ಪೂರ್ತಿ ಸುಳ್ಳು" ಎಂದ. ಕಲಾವಿದನು ಟೇಬಲ್ ಮೇಲಿನ ಪೇಪರನ್ನು ಎತ್ತಿಕೊಂಡು ಓದಿದ. ನಟನ ಮುಖಚರ್ಯೆ.... ಅವನು ರತ್ನಗಂಬಳಿಯ ಮೇಲೆ ಮೊಳಕೈ ಊರಿ ನನ್ನ ಕಡೆ ನೋಡುತ್ತಲಿದ್ದ....ಅವನ ಮುಖದ ಬಣ್ಣ....ಬದಲಾಗಹತ್ತಿತು. ಬಾಡುತ್ತಿದ್ದ ಅವನ ಮುಖದ ಮೇಲೆ ಹೆಣದ ಮುಖ ಲಕ್ಷಣಗಳೆಲ್ಲ ಕಾಣಿಸತೊಡಗಿದ್ದವು.

"ಇದು ಸುಳ್ಳು....ಪೂರ್ತಿ ಸುಳ್ಳು"—ಅವನು ಪುನಃ ಚೀರಿದ, ಬಳಿಕ ಒಮ್ಮೆಲೆ ಸುಮ್ಮನಾದ. ಇನ್ನೊಬ್ಬ ನಟ ಅವನ ಗ್ಲಾಸಿನಲ್ಲಿ ಷರಾಬನ್ನು ಬಗ್ಗಿಸತೊಡಗಿದ. ಅವನು ಆಗಲೂ ಸುಮ್ಮನಿದ್ದ. ಆದರೆ ಮೊದಲನೆಯ ನಟನು ರತ್ನಗಂಬಳಿಯ ಮೇಲೆ ಬಿದ್ದುಕೊಂಡು ಬಿಕ್ಕುತ್ತಿದ್ದ. ಬಳಿಕ ಅವನು ಕಾರಿಕೊಂಡ. ನನಗೆ ರತ್ನಗಂಬಳಿಯ ಬಣ್ಣ ಹಾಕುತ್ತಿದ್ದಂತೆ ಅನಿಸಿತು. ಕೆಂಪಿನಿಂದ ಬಿಳುಪು ಮತ್ತು ಬಳಿಕ ಹಳದಿ. ಇದು ರತ್ನಗಂಬಳಿಯಲ್ಲ. ಜೀವನದ ಹೆಣಕ್ಕೆ ಹೊದಿಸುವ ವಸ್ತ್ರವಿದ್ದಂತೆ.

ರಾಣಿ! ರಾಣಿ! ರಾಣಿ!

ಬೆಳಿಗ್ಗೆ ನಾನು ರತ್ನಗಂಬಳಿಯನ್ನು ತೊಳೆಯಿಸಿದೆ ಮತ್ತು ಸ್ವಚ್ಛಮಾಡಿ ಪುನಃ ಕೋಣೆಯಲ್ಲಿ ಹಾಕಿಸಿದೆ. ಆಗ ನನ್ನ ಪ್ರೇಯಸಿ ಕೋಣೆಯಲ್ಲಿ ಪ್ರವೇಶಿಸಿದಳು. ಅವಳು ನನ್ನ ಪಟ್ಟಣದ ಹೊಸ ಪ್ರೇಯಸಿಯಾಗಿದ್ದಳು. ಇಲ್ಲಿಗೆ ಬಂದು ಕಲಾವಿದನು ಪುನಃ ಪ್ರೀತಿಸಿದ್ದ. ಪ್ರೀತಿಸುವದು ಎಷ್ಟು ಕಠಿಣವಿದೆ, ಆದರೆ ಒಂದು ಸಲ ಪ್ರೇಮದ ಮೃತ್ಯು ಆಯಿತೆಂದರೆ ಆ ಬಳಿಕ ಪ್ರೇಮಿಸುವುದು ಎಷ್ಟೋ ಸುಲಭ ಅಲ್ಲವೇ! ನೀಚ....ಏಕೆ ಮಾತಾಡುತ್ತಿಲ್ಲ? ಉತ್ತರ ಕೊಡು. ನನ್ನ ಪ್ರೇಯಸಿಯ ತುಟಿ ದಪ್ಪವಿದ್ದವು. ಗಲ್ಲಗಳೂ ದಪ್ಪವಾಗಿದ್ದವು. ಶರೀರವೂ ದಪ್ಪವಿತ್ತು. ನಗೆಯೂ ದಪ್ಪವಿತ್ತು. ಬುದ್ಧಿಯೂ ದಪ್ಪವಿತ್ತು. ಅವಳು ಹೆಣ್ಣು ಆಗಿರಲಿಲ್ಲ. ಒಂದು ಎರಡು ಪಟ್ಟು ಮೂರು ಪಟ್ಟು ರತ್ನಗಂಬಳಿ ಇದ್ದಳು. ಇಂದು ಅವಳು ತನ್ನ ಕೂದಲನ್ನು ಎರಡು ಜಡೆ ಹೆಣೆದಿದ್ದಾಳೆ ಮತ್ತು ಅವುಗಳಲ್ಲಿ ಮಲ್ಲಿಗೆಯ ಹೂವು ಮುಡಿದಿದ್ದಾಳೆ. ಅವಳು ರತ್ನಗಂಬಳಿಯ ಮೇಲೆ ಬಂದು ಕುಳಿತಳು. ನಾನು ಅವಳ ಮುಖ ಚುಂಬಿಸಿ "ಇಂದಂತು ನೀನು ಕ್ಲಿಯೋಪಾತ್ರಾಳನ್ನೂ ಕೂಡ ಸೋಲಿಸುತ್ತಿರುವಿ" ಎಂದೆ.

"ಕ್ಲಿಯೋಪಾತ್ರಾ—ಎಂದರೆ ಏನದು?" ಅವಳು ಕೇಳಿದಳು.

"ಮಿಶ್ರ (ಇಜಿಪ್ತ)ದ ಸಾಮ್ರಾಜ್ಞಿ."

"ಮಿಶ್ರ?"

"ಹಾಂ. ಮಿಶ್ರ ಆ ದೇಶದಲ್ಲಿ ಸತ್ತಬಳಿಕ ಪಿರಮಿಡ್ ತಯಾರಾಗುತ್ತದೆ. ಮತ್ತು ಸತ್ತವರ ಹೆಣ ತಯಾರಮಾಡಲಾಗುತ್ತವೆ. ದೇವರು ನಿನಗೂ ಕ್ಲಿಯೋಪಾತ್ರಳಂಥ ಮೃತ್ಯುವನ್ನು ಕೊಡಲಿ."

"ಹಾಯ್ ಎಂಥ ಮಾತು ಆಡುತ್ತಿರುವಿರಿ? ಏನಾಗಿತ್ತು ಅವಳಿಗೆ?"

" ಹಾವು ಕಚ್ಚಿಸಿಕೊಂಡು ಸತ್ತಿದ್ದಳು."

ಅವಳು ಒಂದು ಮಂದವಾದ ಚೀತ್ಕಾರ ಮಾಡಿ ನನ್ನ ಸಮೀಪಕ್ಕೆ ಬಂದಳು. " ಹೆದರಿಸುತ್ತಿರುವಿರೇನು ನನ್ನನ್ನು ? "—ಅವಳು ನನ್ನ ತೋಳು ಹಿಡಿದುಕೊಂಡು ಕೇಳಿದಳು. ನಂತರ ಆ ನಗು, ಅವಳ ದಪ್ಪ ಅಸಹ್ಯ ನಗು—ಎಮ್ಮೆ ಮೆಲಕು ಹಾಕುತ್ತಿದೆ ಎನ್ನುವಂತೆ........ಬಳಿಕ ಅವಳು ತನ್ನ ತುಟಿಗಳನ್ನು ನನ್ನ ಎದಿರು ಚಾಚಿದಳು. ಯಾರೋ ಉದಾರ ಜಾಠನು ಯಾರೋ ಅಪರಿಚಿತ ದಾರಿಹೋಕನಿಗೆ ಸವಿಯಲು ಕಬ್ಬು ಕೊಟ್ಟಂತೆ.

ನಾನು ಕಬ್ಬನ್ನು ಸವಿಯುತ್ತ ಅಂದೆನು—" ಈ ರತ್ನಗಂಬಳಿ ಬದುಕುವುದು ಒಂದು ಸಲ ಆದರೆ ಸಾಯುವುದು ಪದೇ ಪದೇ....ಆಹ್....ಈ ಸಾವು ಪದೇ ಪದೇ ಯಾಕೆ ಬರುತ್ತದೆ ? ಈಗ ಬಂದಾದರೂ ಬರಲಿ ಅಂತಿಮ ಸಾವು."

" ಇಂದು ನೀವು. ಪದೇ ಪದೇ ಸಾವಿನ ವರ್ಣನೆ ಯಾಕೆ ಮಾಡುತ್ತಿರುವಿರಿ ? "—ಅವಳು ಗೊಣಗಿದಳು.

"ಏನೂ ಇಲ್ಲ....ನಿನಗೆ ಅರ್ಥವಾಗುವುದಿಲ್ಲ"—ನಾನು ಹೇಳಿದೆ—"ಹಾಂ ! ನಿನ್ನ ತಾಜಾ ತುಟಿಗಳಿಂದ, ಕಣ್ಣುಗಳಿಂದ, ಕೂದಲಿಂದ ಇದೆಂಥ ಸುವಾಸನೆ ಹೊರ ಬರುತ್ತಿದೆ ಹೇಳು." " ಏನೂ ಇಲ್ಲ,"—ಅವಳೂ ನಕ್ಕು ಹೇಳಿದಳು—" ಇಂದು ಸುಗಂಧಿತ ಕೊಬ್ಬರಿ ಎಣ್ಣೆಯನ್ನು ಹಚ್ಚಿಕೊಂಡಿರುವೆ."

ನಾನು ರತ್ನಗಂಬಳಿಯತ್ತ ಓರೆಗಣ್ಣಿನಿಂದ ನೋಡತೊಡಗಿದೆ. ಅದರ ಬಣ್ಣ ಹಾರುತ್ತಲಿತ್ತು. ಪಾಪ, ಅದು ಮತ್ತೊಮ್ಮೆ ಸಾಯುತ್ತಲಿತ್ತು. ಅದರ ಸಾವನ್ನು ನನ್ನಿಂದ ನೋಡಲಾಗುತ್ತಿರಲಿಲ್ಲ. ನಾನು ಗಾಬರಿಗೊಂಡು ಕೋಣೆಯಿಂದ ಹೊರ ಬಿದ್ದೆ. ನೇರವಾಗಿ ಸ್ಟೇಷನ್ ತಲುಪಿದೆ. ಮನಃಪೂರ್ತಿಯಾಗಿ ಬೀರ್ ಕುಡಿಯ ಬೇಕೆಂದು ನಿರ್ಧರಿಸಿದೆ. ನನ್ನ ಹೊಟ್ಟೆಗಷ್ಟೇ ಅಲ್ಲ, ಆತ್ಮಕ್ಕೂ ಕೂಡ ಜುಲಾಬು ಕೊಡಲು ನಿರ್ಧರಿಸಿದೆ. ಯಾಕೆಂದರೆ, ಈ ಹೊಲಸು ಕಸರು ಹರಿದು ಹೋಗಲಿ, ಹೊರಬಿದ್ದು ಹೋಗಲಿ, ಪ್ರಕೃತಿಯು ಹಗುರಾಗಲಿ. ಸ್ಟೇಷನ್‌ನಲ್ಲಿ, ಬೀರ್‌ಗೆ ಮೊದಲು ರೂಪ ಸಿಕ್ಕಳು.

" ಅರೆ ! ನೀವು ಇಲ್ಲಿ ? "

" ಜುನಾಗಡಕ್ಕೆ ಹೋಗಿದ್ದೆ. ಬೆಟ್ಟದ ಮೇಲೆ."

" ಮತ್ತೆ ಕವಿ ? "

" ಅವನು ನನ್ನನ್ನು ಬಿಟ್ಟಿದ್ದಾನೆ "—ಅವಳು ನಕ್ಕು ಅಂದಳು.

" ಬಿಟ್ಟಿದ್ದಾನೆ ! ಯಾಕೆ ? "

" ನನಗೆ ಕ್ಷಯರೋಗವಿದೆ. ಜುನಾಗಡಕ್ಕೆ ಹೋಗಿದ್ದೆನಲ್ಲ ? "

ಅವಳ ಕಣ್ಣುಗಳಲ್ಲಿ ಹಸಿರು ಬಣ್ಣದ ಸಮುದ್ರವಿತ್ತು ಮತ್ತು ಒಂದು ಹಳದಿ

ವರ್ಣದ ಒಣಗಿದ ಮುಖವು ತಿರುಗಣಿಯಲ್ಲಿ ಮುಳುಗಿ ಏಳುತ್ತಲಿತ್ತು. ಬಳಿಕ ಆ ಮುಖವು ಮಾಯವಾಯಿತು. ಈಗ ಕವಿಯ ಕೊಳೆತು ನಾರುವ ಮುಖ ತೆರೆಗಳ ಮೇಲೆ ಈಸತೊಡಗಿತು. ಕವಿಯ ಮುಖವು ತಲೆಯಲ್ಲಾಡಿಸುತ್ತ ಹೇಳುತ್ತಿತ್ತು. "ಹುಂ".

"ಎಲ್ಲಿದ್ದಾನೆ ಆ ಸೂಳೇಮಗ?" ನಾನು ಕೇಳಿದೆ.

"ಹೋಗಲಿ ಬಿಡಿ"—ಅವಳು ವಿನಯಪೂರ್ಣ ಸ್ವರದಲ್ಲಿ ಹೇಳಿದಳು—"ಅವನನ್ನು ಬೈಯಬೇಡಿ. ನನಗೆ ಅವನಲ್ಲಿ ಈಗಲೂ ಪ್ರೀತಿ ಇದೆ."

"ಆದರೆ......."

"ಹಾಂ"—ಅವಳು ಅಂದಳು—"ಈ ಆದರೆಯ ಬಳಿಕವೂ....ಈಗ ನಾನು ನನ್ನ ಮನೆಗೆ ಹೋಗುತ್ತಿರುವೆ—ತವರು ಮನೆಗೆ—ಹಾಯಾಗಿ ಸಾಯುತ್ತೇನೆ."

"ಇಲ್ಲ....ಇಲ್ಲ."—ನಾನು ಕಠೋರವಾಗಿ ಅಂದೆ—"ಈಗ ನಾನು ನಿನ್ನನ್ನು ಹೋಗಗೊಡುವದಿಲ್ಲ, ಜೀವನವು ನಿನ್ನನ್ನು ನನ್ನಿಂದ ಕಸಿದುಕೊಂಡಿತು. ಈಗ ಮೃತ್ಯುವಿನ ಬಾಗಿಲವರೆಗೆ ಇಬ್ಬರೂ ಜತೆಯಲ್ಲಿಯೇ ಹೋಗೋಣ. ಈ ಲೋಕದ ಬಳಿಕ ಯಾವದಾದರೂ ಬೇರೆ ಲೋಕ ಇದ್ದರೆ ಬಹುಶಃ......."

ಅವಳು ನಕ್ಕಳು. ಅದೇ ಉಜ್ವಲ ನಗು, ಅದೇ ಚಂದನದ ಮುಖ, ಅದೇ ಹೊಳೆಯುತ್ತಿರುವ ಕುಂಕುಮ.

ನಾನು ಅವಳ ತೋಳು ಹಿಡಿದುಕೊಂಡು "ಮನೆಗೆ ನಡೆ ರೂಪಾ. ಜೀವನದಲ್ಲಿ ನೀನು ನನ್ನನ್ನು ನಿನ್ನ ಜತೆ ಇರಗೊಡಲಿಲ್ಲ. ಈಗ ಮೃತ್ಯುವಿನ ಕೆಲವು ಕ್ಷಣಗಳನ್ನಾದರೂ ಕರುಣಿಸು."

ಅವಳು ಮುಗುಳ್ನಕ್ಕಳು—"ನಿಮಗೆ ಗೊತ್ತಿಲ್ಲ. ಪ್ರೇಮವು ಜೀವನದಲ್ಲಿಯೂ ಮೃತ್ಯುವಿನಲ್ಲಿಯೂ ಒಂದೇ ಬಗೆಯ ವ್ಯವಹಾರ ಮಾಡುತ್ತದೆ."

ಗಾಡಿ ಸೀಟಿ ಕೊಟ್ಟಿತು.

"ನೀವು ಪುನಃ ಸಿಗುವಿರಿ ಎಂಬ ಆಶೆ ನನಗಿರಲಿಲ್ಲ. ನಾನು ಇಲ್ಲಿ ಉಳಿಯಲಾಗದ್ದಕ್ಕೆ ನನಗೆ ಖೇದವೆನಿಸುತ್ತದೆ....ಹಾಂ.... ಈ ಪುಸ್ತಕವನ್ನು ನಿಮಗೆ ಕೊಡಬಲ್ಲೆ. 'ಅರಲ್ಕೆ'ನ ಕವಿತೆಗಳು...." ಅವಳು ಅಂದಳು.

ಗಾರ್ಡ್ ನಿಶಾನೆ ತೋರಿಸಿದ.

ಅವಳು ತನ್ನ ಡಬ್ಬಿಯ ಕಡೆ ನಡೆದಳು. ನನಗೆ ಅವಳ ಮುಖದ ಕಡೆ ನೋಡಲಾಗಲಿಲ್ಲ. ನನ್ನ ದೃಷ್ಟಿಯು ಪುನಃ ಅವಳ ಕಾಲುಗಳ ಮೇಲೆ ನಟ್ಟಿತು. ಆ ಕಾಲುಗಳು ನಡೆಯುತ್ತ ಹೊರಟವು....ಅವು ದೂರ ಹೋಗುತ್ತ....ಹೋಗುತ್ತ ನನಗೆ ಇನ್ನೂ ಹತ್ತಿರವಾದವು. ಅವು ಪೂರ್ಣವಾಗಿ ನನ್ನ ಎದೆಯ ಮೇಲೆಯೇ ಬಂದವು. ನಾನು ಅವುಗಳನ್ನು ಎತ್ತಿಕೊಂಡು ನನ್ನ ಎದೆಯ ಒಳಗೆ ಅಡಗಿಸಿಕೊಂಡೆ.

ನಾನು ಕಣ್ಣೆತ್ತಿ ನೋಡಿದೆ.

ಗಾಡಿ ಹೊರಟುಹೋಗಿತ್ತು.

ಪ್ರೇಯಸಿ ಈವರೆವಿಗೂ ನನ್ನ ದಾರಿ ಕಾಯುತ್ತಿದ್ದಳು—"ಎಲ್ಲಿ ಹೊರಟು ಹೋಗಿದ್ದಿರಿ?"—ಕೇಳಿದಳು.

ನಾನು ಸುಮ್ಮನೆ ಇದ್ದೆ.

"ಇದು ಯಾವ ಪುಸ್ತಕ?"

"ಅರಲ್ಕೆನದು."

"ಏನು........?"

"ಒಬ್ಬ ಕವಿಯ ಕವಿತೆಗಳಿವೆ."

"ನನಗೆ ಹೇಳಿರಲ್ಲ ಏನು ಬರೆದಿದ್ದಾನೆ ಇವನು?"

ನಾನು ಪುಸ್ತಕ ತೆರೆದೆ. ಹದಿನೈದನೆಯ ಪುಟ ಕಣ್ಣೆದುರು ಬಂದಿತು. ನಾನು ಮೆಲ್ಲಮೆಲ್ಲಗೆ ಓದಲಾರಂಭಿಸಿದೆ. "ದೇವರೇ, ನೀನು ಜೀವನವನ್ನು ನಿನ್ನ ಇಚ್ಛಾನುಸಾರ ಕೊಟ್ಟಿರುವೆ. ಈಗ ಮೃತ್ಯುವನ್ನಾದರೂ ನನ್ನ ಇಚ್ಛೆಯಂತೆ ಕೊಡು. ನಿನ್ನಿಂದ ನಾನು ಮತ್ತೇನೂ ಬಯಸುವದಿಲ್ಲ ದೇವರೇ."

"ಮತ್ತೆ ಮೃತ್ಯು?" ಅವಳು ಅಂದಳು—"ಕೆಟ್ಟ ಶಕುನ." ಅವಳು ಪುಸ್ತಕವನ್ನು ನನ್ನ ಕೈಯಿಂದ ಕಸಿದುಕೊಂಡು ಆಚೆ ಇಟ್ಟಳು. ಮತ್ತು ತುಟಿಗಳನ್ನು ನನ್ನತ್ತ ಚಾಚಿದಳು. ರತ್ನಗಂಬಳಿ ಕುದಿಯುತ್ತಿತ್ತು. ಪೂರ್ತಿ ಬೆಂಕಿಯಾಗಿತ್ತು. ಬೆಂಕಿಯ ನದಿ, ತೇವಿನ ಸಮುದ್ರ, ವಿಷವನ್ನು ಉಗುಳುತ್ತಿರುವ ಕಾರಂಜಿ. ನಾನು ಅದನ್ನು ಕೇಳಿದೆ—"ನೀನು ಶಿಲುಬೆ ಇರುವೆ. ನೀನು ಮಾನವ ಪುತ್ರನನ್ನು ಏಸುವನ್ನಾಗಿ ಮಾಡಿದೆ. ನನ್ನನ್ನೇನು ಮಾಡುವೆ ಹೇಳು?"

"ನೀನು ಸ್ವತಃ ಆಗಿರುವೆಯಲ್ಲ—ಒಂದು ಪಿರಾಮಿಡ್—ಒಂದು ಪೊಳ್ಳು ಪಿರಾಮಿಡ್—ಅದರ ಎದೆಯಲ್ಲಿ ಹೆಣಗಳು ಹುಗಿಯಲ್ಪಟ್ಟಿವೆ"—ರತ್ನಗಂಬಳಿ ಉತ್ತರಿಸಿತು.

ನಾನು ನನ್ನ ಪ್ರೇಯಸಿಗೆ ಹೇಳಿದೆ—"ಈ ರತ್ನಗಂಬಳಿಯನ್ನು ಸುಟ್ಟು ಬೂದಿ ಮಾಡಿಬಿಡಬೇಕೆಂದು ಮನಸ್ಸಾಗುತ್ತಿದೆ."

"ಹಾಂ, ಹಳೆಯದಂತೂ ಆಗಿದೆ"—ಅವಳು ಅಂದಳು.

"ಆದರೆ...."—ನಾನು ತಡೆದು ದುಃಖದ ಸ್ವರದಲ್ಲಿ ಹೇಳಿದೆ—"ನನ್ನ ಹತ್ತಿರ ಇರುವುದು ಇದೇ ಒಂದು ರತ್ನಗಂಬಳಿ ಮತ್ತು ಇದೇ ಒಂದು ಜೀವನವಾಗಿದೆ. ಇದನ್ನು ಬದಲಿಸಲಾರೆ ಅಥವಾ........"

ಇಷ್ಟು ಹೇಳಿ ಕಲಾವಿದ ಕಬ್ಬು ಸವಿಯತೊಡಗಿದ.

# ಚೌರಸ್ತೆಯ ಬಾವಿ

ನನ್ನ ಗಂಡು ಮಗುವಿಗೆ ಕಾಹಿಲೆಯಾಗಿತ್ತು. ಅದು ಸಾಯುವದೆಂದು ನನ್ನ ಅನುಮಾನವಿತ್ತು. ಒಂದುವೇಳೆ ನೀನು ಮಗುವನ್ನು ಚೌರಸ್ತೆಯ ಬಾವಿಗೆ ಒಯ್ದು ಆ ಬಾವಿಯ ಒಂದು ಗುಟುಕು ನೀರು ಅದರ ಗಂಟಲಲ್ಲಿ ಇಳಿಸಿದೆಯೆಂದರೆ ಮಗು ಉಳಿಯುವದು ಎಂದು ಜನರು ಹೇಳಿದರು.

"ಚೌರಸ್ತೆಯ ಬಾವಿ ಎಲ್ಲಿದೆ?"—ನಾನು ಕೇಳಿದೆ.

"ಅದು ಎಲ್ಲೂ ಇಲ್ಲ ಊರಲ್ಲಿದೆ"—ಅವರು ಅಂದರು.

"ಎಲ್ಲೂ ಇಲ್ಲ ಊರು ಎಲ್ಲಿದೆ?"—ನಾನು ಕೇಳಿದೆ.

ನಮ್ಮ ಊರಿನ ವಯೋವೃದ್ಧ ವೈದ್ಯ ಹೇಳಿದ. "ನೀನು ಇಲ್ಲಿಂದ ಅಲ್ಲಿಗೆ ಹೋಗು, ಅಲ್ಲಿಂದ ಇತ್ತ ಹೋಗು, ಇತ್ತಿಂದ ಅತ್ತ ಹೋಗು, ನೀನು ಅತ್ತ ಮುಟ್ಟಿದ ಮೇಲೆ ಅಲ್ಲಿಂದ ಎಲ್ಲಿಯ ಕಡೆಗೆ ಹೊರಳು. ಸರಿಯಾಗಿ ಎದುರಿಗೆ ನಿನಗೆ ಎಲ್ಲೂ ಇಲ್ಲ ಊರು ಸಿಕ್ಕುತ್ತದೆ. ಅದರ ಮಧ್ಯದಲ್ಲಿ ಚೌರಸ್ತೆಯ ಬಾವಿ ಇದೆ.

ನಾನು ವೈದ್ಯನ ಆಭಾರ ಮನ್ನಿಸಿದೆ. ಮಗುವನ್ನು ನನ್ನ ಮಡಿಲಲ್ಲಿ ಎತ್ತಿಕೊಂಡೆ. ನನ್ನ ಊರಿನಿಂದ ಹೊರಟೆ.

ನಾನು ಇಲ್ಲಿಂದ ಅಲ್ಲಿಗೆ ಹೋದೆ, ಅಲ್ಲಿಂದ ಇತ್ತ ಹೋದೆ, ಇತ್ತಿಂದ ಅತ್ತ ಹೋದೆ, ಮತ್ತು ಅತ್ತ ಮುಟ್ಟಿ ನಾನು ಎಲ್ಲಿಯ ಕಡೆ ಹೊರಳಿದಾಗ ನನಗೆ ಎದುರಿಗೆ ನಾಲ್ಕು ರಸ್ತೆಗಳು ಕಾಣಿಸಿದವು.

ಒಂದು ಕೆಂಪು ರಸ್ತೆಯಿತ್ತು.

ಒಂದು ನೀಲಿ ರಸ್ತೆಯಿತ್ತು.

ಒಂದು ಕಪ್ಪು ರಸ್ತೆಯಿತ್ತು.

ಒಂದು ಬಿಳಿಯ ರಸ್ತೆಯಿತ್ತು.

ಈ ನಾಲ್ಕೂ ರಸ್ತೆಗಳನ್ನು ಕತ್ತರಿಸುತ್ತ ಮಂಡಲಾಕಾರವಾಗಿ ಆ ಎಲ್ಲೂ ಇಲ್ಲ ಊರು ನೆಲಸಿತ್ತು. ಮತ್ತು ಈ ಊರಿನ ಮಧ್ಯದಲ್ಲಿ ಚೌರಸ್ತೆಯ ಬಾವಿ ಇತ್ತು.

ಚೌರಸ್ತೆಯ ಬಾವಿಯ ಮೇಲೆ ಬಹಳ ಜನರು ಸೇರಿದ್ದರು—ಗಂಡಸರು ಮತ್ತು ಹೆಂಗಸರು, ಮುದುಕರು ಮತ್ತು ಮಕ್ಕಳು, ಬಹಳಷ್ಟು ಜನರು ನೆರದಿದ್ದರು. ಒಂದು ಜಾತ್ರೆಯ ಹಾಗೆ ಕಾಣಿಸುತ್ತಿತ್ತು. ಈ ಜನರಲ್ಲಿ ಒಬ್ಬ ಎತ್ತರವಾದ ಮೈಕಟ್ಟಿನ ಬಿಳಿಯ ಕೂದಲಿನ ಮುದುಕ ಅತ್ತ ಇತ್ತ ಅಲೆದಾಡುತ್ತ ಅತ್ಯಂತ ಸುಂದರ

ಮತ್ತು ಶೀಲವಂತನಾಗಿ ಕಾಣಿಸುತ್ತಿದ್ದ. ಪ್ರತಿಯೊಬ್ಬ ವ್ಯಕ್ತಿಯೂ ಅವನಿಗೆ ಆದರ ತೋರಿಸುತ್ತಿದ್ದ. ಮುದುಕ ಆದರವನ್ನು ಸ್ವೀಕರಿಸುತ್ತ ಒಳ್ಳೆಯ ಕಾವ್ಯಮಯ ರೀತಿಯಲ್ಲಿ ತನ್ನ ತೋಳುಗಳನ್ನು ಮೇಲೆ ಕೆಳಗೆ ತಿರುಗಿಸುತ್ತಲಿದ್ದ. ಇಂಥ ಕಾವ್ಯವು ಕೇವಲ ಹಣ್ಣು ತುಂಬಿದ ಟೊಂಗೆಗಳಲ್ಲಿ ಇರುತ್ತದೆ.

"ನೀವು ಈ ಊರಿಗೆ ಹೊಸಬರೆ?"—ಮುದುಕ ನನ್ನನ್ನು ಕೇಳಿದ.

ನಾನು ಆದರದಿಂದ ತಲೆ ಬಾಗಿಸಿದೆ.

"ನೀವು ಎಲ್ಲಿಂದ ಬಂದಿರುವಿರಿ?"—ಮುದುಕ ಕೇಳಿದ.

"ನಾನು ಇಲ್ಲೇ ಎಲ್ಲೋ ಊರಿಂದ ಬಂದಿದ್ದೇನೆ, ನನ್ನ ಮಗುವಿಗೆ ಜಡ್ಡಾಗಿದೆ. ನನ್ನ ಮಗುವಿಗೆ ಚೌರಸ್ತೆಯ ಬಾವಿಯ ಒಂದು ಗುಟುಕು ನೀರು ಕುಡಿಸಿದರೆ ಅವನು ಬದುಕುವನೆಂದು ವೈದ್ಯರು ಹೇಳಿದ್ದಾರೆ."

"ನೀರಿನಿಂದ ಏನಾಗುತ್ತದೆ?"—ಮುದುಕ ನಿರಾಶೆಯ ಸ್ವರದಲ್ಲಿ ಕೇಳಿದ.

"ನೀರಿನಲ್ಲಿ ದೊಡ್ಡ ಶಕ್ತಿ ಇದೆ ಬಾಬಾ."

"ಬೆಂಕಿಯಲ್ಲಿ ದೊಡ್ಡ ಶಕ್ತಿ ಇದೆ ಮಗು."

"ಬೆಂಕಿ ಮತ್ತು ನೀರು ಎರಡೇ ದೊಡ್ಡ ಶಕ್ತಿಗಳು ಬಾಬಾ. ಬೆಂಕಿ, ಅದು ಮನುಷ್ಯನ ಹೃದಯದೊಳಗಿದೆ. ನೀರು, ಅದು ಅವನ ಕಣ್ಣುಗಳಲ್ಲಿದೆ. 'ಯಾವ ಕಾರ್ಯವನ್ನು ಬೆಂಕಿ ಪೂರ್ತಿ ಮಾಡಲು ಸಾಧ್ಯವಿಲ್ಲವೋ ಅದನ್ನು ನೀರು ಪೂರ್ಣಗೊಳಿಸುತ್ತದೆ' ಹೀಗೆಂದು ವೈದ್ಯರೇ ಹೇಳಿದ್ದಾರೆ."

ಮುದುಕ ನನ್ನ ಮಾತು ಕೇಳಿ ಮುಗುಳ್ನಕ್ಕ. ನನ್ನ ಹೆಗಲ ಮೇಲೆ ಕೈಯಿಡುತ್ತ ಹೇಳಿದ—"ನಿಮ್ಮ ಊರಿನ ವೈದ್ಯ ಬಹಳ ಬುದ್ಧಿವಂತನೆಂದು ತೋರುತ್ತದೆ. ಆದರೆ ವಿಷಾದವೇನೆಂದರೆ ಈ ಸಮಯಕ್ಕೆ ನಿಮಗೆ ಈ ಬಾವಿಯಿಂದ ಒಂದು ಹನಿ ನೀರು ಸಿಕ್ಕಲಾರದು."

"ಯಾಕೆ?"

"ನೋಡುತ್ತಿಲ್ಲವೆ, ನಾವು ಬಾವಿಯನ್ನು ಸ್ವಚ್ಛ ಮಾಡುತ್ತಿದ್ದೇವೆ."

ಒಮ್ಮಿಂದೊಮ್ಮೆಲೆ ಅದೇ ಸಮಯಕ್ಕೆ ಒಬ್ಬ ನೀರಿನಲ್ಲಿ ಮುಳುಗುವವನು ಹೊರಗೆ ಬಂದು ಜಾಲವನ್ನು ಬಾವಿಯ ಹೊರಗೆ ಮಗುಚಿ ಹಾಕಿದನು. ಜಾಲದೊಳಗಿಂದ ಬಹಳಷ್ಟು ಕೆಸರು ನೆಲದ ಮೇಲೆ ಹರಡಿತು. ಒಮ್ಮೆಲೆ ಬಹಳಷ್ಟು ಜನರು ಓಡಿದರು ಮತ್ತು ತಮ್ಮ ಎರಡೂ ಕೈಗಳಿಂದ ಆ ಕೆಸರಿನಲ್ಲಿ ಏನನ್ನೋ ಹುಡುಕ ಹತ್ತಿದರು. ಆದರೆ ಅವರಿಗೆ ಕೆಸರಿನಲ್ಲಿ ಏನೂ ಸಿಕ್ಕಲಿಲ್ಲ. ಮುಳುಗುವವನು ಖಾಲಿಯಾದ ಜಾಲವನ್ನು ಕೈಯಲ್ಲಿ ಹಿಡಿದುಕೊಂಡು ಪುನಃ ಬಾವಿಯಲ್ಲಿ ಜಿಗಿದನು.

"ಈ ನೀರಿನಲ್ಲಿ ಮುಳುಗುವವನು ಏನು ಹುಡುಕುತ್ತಿದ್ದಾನೆ?"—ನಾನು ಮುದುಕನನ್ನು ಕೇಳಿದೆ.

"ಏನನ್ನೂ ಹುಡುಕುತ್ತಿಲ್ಲ. ಇವನು ಬಾವಿಯ ಹೊಲಸು ಕೆಸರನ್ನು ಹೊರಗೆ ತೆಗೆದು ಚೆಲ್ಲುತ್ತಲಿದ್ದಾನೆ. ಎಲ್ಲ ಕೆಸರನ್ನು ಹೊರಗೆ ತೆಗೆದು ಹಾಕಿದಮೇಲೆ ಈ ಬಾವಿ ಸ್ವಚ್ಛವಾಗುತ್ತದೆ. ಬಳಿಕ ನೀವು ಇದರ ನೀರನ್ನು ಮಗುವಿಗೆ ಕುಡಿಸ ಬಲ್ಲಿರಿ."—ಮುದುಕ ಉತ್ತರಿಸಿದ.

ನಾನು ಮಗುವನ್ನು ಎತ್ತಿಕೊಂಡು ಬಾವಿಯ ದಂಡೆಯ ಮೇಲೆ ನಿಂತುಕೊಂಡೆ. ಮುಳುಗುವವನು ಜಾಲವನ್ನು ತೆಗೆದುಕೊಂಡು ಹೊರಬಿದ್ದ. ಅವನು ಕೆಸರನ್ನು ಕೆಳಗೆ ಭೂಮಿಯ ಮೇಲೆ ಚೆಲ್ಲಿದ. ಕೆಸರಿನಲ್ಲಿಂದ ಒಂದು ಬಾಚಣಿಗೆ ಹೊರಬಿತ್ತು.

"ಈ ಬಾಚಣಿಗೆ ಯಾರದು?"—ನೀರಿನಲ್ಲಿ ಮುಳುಗುವವನು ಕೇಳಿದ.

ಒಬ್ಬ ನವ ವಿವಾಹಿತ ಹುಡುಗಿ ನಾಚಿ ಮುಳುಗುವವನ ಕೈಯಿಂದ ಬಾಚಣಿಗೆ ಯನ್ನು ತೆಗೆದುಕೊಂಡಳು. ಬಳಿಕ ತನ್ನ ಪತಿಯ ಹೆಗಲ ಮೇಲೆ ಬಾಗಿದಳು. ಈ ಹುಡುಗಿಯ ಹೊಂಬಣ್ಣದ ಕೂದಲು ಉದ್ದವಿತ್ತು. ಮುಖದ ಬಣ್ಣವು ಗೋದಿ ಗೆಂಪು. ಅವಳ ದೊಡ್ಡ ದೊಡ್ಡ ಕಣ್ಣುಗಳು ಕಂದುವರ್ಣದವಾಗಿದ್ದವು. ಆಗಾಗ ಅವುಗಳಲ್ಲಿ ಕಣ್ಣೀರು ಬಂದವೆಂದರೆ ಪ್ರಾತಃಕಾಲೀನ ಆಕಾಶದ ಕೆಂಬಣ್ಣದ ಹಾಗೆ ಹೊಳೆಯುತ್ತಿದ್ದವು.

"ನೆನಪಿದೆಯೆ?"—ಅವಳು ತನ್ನ ಪತಿಗೆ ಮೆಲ್ಲಗೆ ಉಸಿರಿದಳು. ಅವಳ ಬೆರಳು ಗಳು ಬಾಚಣಿಗೆಯ ಮೇಲೆ ಅಲೆದಾಡಹತ್ತಿದವು—ಬಾಚಣಿಗೆಯ ಪ್ರತಿಯೊಂದು ಹಲ್ಲು, ಈಗ ಎಂದಿಗೂ ಮರಳಿ ಬಾರದ ಸಮಯದ ಒಂದು ಮಧುರ ಕ್ಷಣವೇನೋ ಎನ್ನುವ ಹಾಗೆ.

"ನೆನಪಿದೆ"—ಅವಳ ತರುಣ ಪತಿ ಮೆಲ್ಲಗೆ ಹೇಳಿದ ಮತ್ತು ಅವನು ಸ್ವಪ್ನ ಗಳಲ್ಲಿ ತೇಲಿಹೋದ. ಇದೇ ಬಾವಿಯ ದಂಡೆಯ ಮೇಲೆ ಅವನು ತನ್ನ ಶರ್ಮಿಲಿ ಯನ್ನು ಮೊದಲ ಸಲ ನೋಡಿದ್ದ. ಆಗ ಅವಳು ಸ್ನಾನ ಮಾಡುವ ಮುನ್ನ ತನ್ನ ಹೊಂಬಣ್ಣದ ಕೂದಲನ್ನು ಬಾಚಿಕೊಳ್ಳುತ್ತಿದ್ದಳು. ಅವನು ನೀರಡಿಸಿದ್ದ ಮತ್ತು ತನ್ನ ಕುದುರೆಯನ್ನು ಇದೇ ಬಾವಿಯ ಮೇಲೆ ನಿಲ್ಲಿಸಿ ಅವಳನ್ನು ನೀರು ಕೇಳಿದ್ದ.

ನೀರು.

ನೀರಿನಲ್ಲಿ ಅಪಾರ ಶಕ್ತಿ ಇದೆ.

ನೀರಿನಲ್ಲಿ ಅಪಾರ ಪ್ರೇಮವಿದೆ.

ಯುವಕ ಪತಿಯು ತನ್ನ ನವ ವಿವಾಹಿತ ಪತ್ನಿಯಿಂದ ಬಾಚಣಿಗೆಯನ್ನು ತೆಗೆದು ಕೊಂಡು ಅದನ್ನು ತನ್ನ ತುಟಿಗಳಿಗೊತ್ತಿಕೊಂಡ. ಬಳಿಕ ಅದನ್ನು ತನ್ನ ಜೇಬಿನಲ್ಲಿ ಇಟ್ಟುಕೊಂಡ. ಹುಡುಗಿ ಅವನಿಗೆ ನೀರು ಕುಡಿಸುವ ಮೊದಲು ಬಾಚಣಿಗೆಯನ್ನು ಬಾವಿಯ ಕಟ್ಟೆಯ ಮೇಲೆ ಇಟ್ಟಿದ್ದಳು. ಅವಳ ಹೊಂಬಣ್ಣದ ಕೂದಲು ಅವಳ ಹೆಗಲ ಮೇಲೆ ಹರಡಿತ್ತು. ಅವಳು ನೀರು ಕುಡಿಸಿ ಹೊರಳಿದಾಗ ತರುಣನು

ಅವಳ ಕೈ ಹಿಡಿದುಕೊಂಡಿದ್ದ, ಮತ್ತು ಇದೇ ಎಳೆದಾಟದಲ್ಲಿ ಬಾ...ಗೆ ಜಾರಿ ಬಾವಿಯಲ್ಲಿ ಬಿದ್ದಿತ್ತು.

"ನೆನಪಿದೆಯೆ ?"

ಯಾರಿಗೆ ನೆನಪಿರಲಿಕ್ಕಿಲ್ಲ, ಕೈಗಳ ಆ ಮೊದಲ ಸ್ಪರ್ಶ, ಬಾಚಣಿಗೆ ನೀರಿನಲ್ಲಿ ಬಿದ್ದದ್ದು, ದೃಷ್ಟಿ ಹೃದಯದಲ್ಲಿ ಇಳಿದದ್ದು, ಕೂದಲಿನ ಪ್ರತಿಕಿರಣವು ಸೂರ್ಯ ನಾದದ್ದು, ಯಾರಿಗೆ ನೆನಪಿರಲಿಕ್ಕಿಲ್ಲ.

ಮುಳುಗುವವನು ಪುನಃ ಹೊರಗೆ ಬಂದ. ಹೊರಗೆ ಬಂದು ಪುನಃ ಜಾಲವನ್ನು ಮಗುಚಿ ಹಾಕಿದ. ಈ ಸಲ ಅದರಲ್ಲಿಂದ ಒಂದು ಉದ್ದವಾದ ಚೂರಿ ಹೊರಟಿತು.

ಬಿಳಿಯ ಕೂದಲಿನ ಮುದುಕ ಚೂರಿಯನ್ನು ಕೈಯಲ್ಲಿ ತೆಗೆದುಕೊಂಡು

"ಈ ಚೂರಿ ಯಾರದು"—ಎಂದ.

ಕೆಲವು ಕ್ಷಣಗಳವರೆಗೆ ಆ ಗುಂಪಿನಲ್ಲಿ ಯಾರೂ ಮಾತಾಡಲಿಲ್ಲ. ಎಲ್ಲರಿಗೂ ಆ ಚೂರಿ ಗೊತ್ತಿತ್ತು. ಆ ಚೂರಿಯ ದಂತದ ಹಿಡಿಯು ಬಹಳ ಸುಂದರವಾಗಿತ್ತು. ಯಾವ ನವ ಯುವಕನ ಚೂರಿ ಇದಾಗಿತ್ತೋ ಅವನು ಕೂಡ ಈ ಜನ ಸಮೂಹ ದಲ್ಲಿ ನಿಂತಿದ್ದ. ಎಲ್ಲ ಜನರು ಅವನ ಕಡೆ ನೋಡುತ್ತಿದ್ದರು. ಯಾಕೆಂದರೆ, ಅವನು ತಮ್ಮ ಊರಿನ ಹೆಣ್ಣು ಮಕ್ಕಳ ಶೀಲ ಹರಣ ಮಾಡುತ್ತಿದ್ದ. ಆ ಅತ್ಯಾಚಾರಿ ಠಾಣೆ ದಾರನನ್ನು ಮುಗಿಸಿದ್ದನೆಂಬುದು ಎಲ್ಲರಿಗೂ ಗೊತ್ತಿತ್ತು. ಆದರೆ ಆ ನವ ಯುವಕನ ವಿರುದ್ಧ ಯಾವ ಸಾಕ್ಷಿಯೂ ದೊರೆಯಲು ಸಾಧ್ಯವಾಗಲಿಲ್ಲ. ಪೋಲೀಸರ ಮುಕದ್ದಮೆಯನ್ನು ತಳ್ಳಿಹಾಕಲಾಯಿತು. ಊರಿನ ಮರ್ಯಾದೆ ಹಾಳು ಮಾಡಿ ದವನ ಹೆಸರು ಮತ್ತು ಗುರುತು ಭೂಮಿಯ ಮೇಲಿಂದ ಅಳಿಸಿಹೋಗಿತ್ತು. ನೀರಿನ ತೆರೆಗಳು, ತಾಯಿ ತನ್ನ ಅಪರಾಧಿ ಮಗನನ್ನು ಸೆರಗಿನಲ್ಲಿ ಅಡಗಿಸಿಕೊಳ್ಳುವ ಹಾಗೆ ಈ ಚೂರಿಯನ್ನು ಜನರ ದೃಷ್ಟಿಯಿಂದ ಅಡಗಿಸಿಟ್ಟಿದ್ದವು.

ನೀರಿನಲ್ಲಿ ಅಪಾರ ಶಕ್ತಿಯಿದೆ.

ನೀರು ಪ್ರತಿಶೋಧವಿರುತ್ತದೆಯಲ್ಲ !

ಆ ತರುಣನ ಕಣ್ಣುಗಳು ಕೆಂಪಗಾದವು. ತಟ್ಟನೆ ಅವನು ಮುಂದಕ್ಕೆ ಸಾಗಿ ಮುದುಕನ ಕೈಯಿಂದ ಚೂರಿಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ತನ್ನ ನಡ ಪಟ್ಟಿಯಲ್ಲಿ ತುರುಕಿಕೊಂಡ. ಗರ್ವ ಮತ್ತು ಅಭಿಮಾನದಿಂದ ಅವನ ತಾಯಿ ಅವನ ಕೈ ಹಿಡಿದುಕೊಂಡಳು.

ಮುಳುಗುವವನು ಮತ್ತೆ ತನ್ನ ಜಾಲವನ್ನು ಹೊರಗೆ ತಂದ. ಈ ಸಲದ ಕರಿಯ ಬಣ್ಣದ ಕೆಸರಿನಲ್ಲಿ ಅನೇಕ ಕೋರೆಯ ಬಹಳಷ್ಟು ಬಳೆಗಳಿದ್ದವು.

ಊರಿನ ಎಲ್ಲರಿಗಿಂತ ತರುಣ ವಿಧವೆ ಸಾವಕಾಶವಾಗಿ ಬಿಕ್ಕಿಹತ್ತಿದಳು. ಯಾಕೆಂದರೆ, ಮದುವೆಯ ದಿನ ಅವಳ ಮದುಮಗ ವಿಷ ತಿಂದಿದ್ದ. ಅವನು ವಿಷ

ವನ್ನು ತಿಂದಿದ್ದರ ಕಾರಣವೆಂದರೆ, ಬೇರೆ ಊರಿನ ಇನ್ನೊಂದು ಹುಡುಗಿಯೊಡನೆ ಅವನ ಪ್ರೇಮವಿತ್ತು. ಆ ಹುಡುಗಿ ಎಂದಿಗೂ ಅವನವಳಾಗಲು ಶಕ್ಯವಾಗಲಿಲ್ಲ. ಪ್ರಥಮ ರಾತ್ರಿ ತನ್ನೆದುರು ತನ್ನ ಪತಿಯ ಹೆಣವನ್ನು ನೋಡಿ ಆ ನಾಚಿಕೆಯ ಶರ್ಮಿಲಿಯು ಚೀರಿ ಹೊರಗೆ ಓಡಿಹೋಗಿದ್ದಳು. ಅವಳು ತನ್ನ ಎಲ್ಲ ಬಳೆಗಳನ್ನು ಬಿಚ್ಚಿ ಬಾವಿಯಲ್ಲಿ ಎಸೆದಿದ್ದಳು.

ಮುದುಕ ಸುಮ್ಮನೆ ನಿಂತಿದ್ದ

ಆ ಯುವತಿ ವಿಧವೆ ಮೆಲ್ಲಮೆಲ್ಲನೆ ಮುಂದಕ್ಕೆ ಬಂದಳು, ಬಾಗಿಕೊಂಡು ಒಂದೊಂದೇ ಬಳೆಯನ್ನು ಬಹಳ ಎಚ್ಚರದಿಂದ ತನ್ನ ಸೆರಗಿನಲ್ಲಿ ತುಂಬಿಕೊಳ್ಳತೊಡಗಿದಳು—ಅವು ತನ್ನ ಬಳೆಗಳಲ್ಲ, ತಾನು ಎಂದೂ ನೋಡಿರದ ಬಯಕೆಗಳನ್ನು ಎಣಿಸುತ್ತಿರುವಳೇನೋ ಎನ್ನುವಂತೆ. ಎಲ್ಲ ಬಳೆಗಳನ್ನು ಎತ್ತಿ ತನ್ನ ಸೆರಗಿನಲ್ಲಿ ಹಾಕಿಕೊಂಡಳು. ನಂತರ ತಲೆ ತಗ್ಗಿಸಿಕೊಂಡು ಅಲ್ಲಿಂದ ಹೊರಟಳು. ಅವಳು ಹೋದ ಮೇಲೂ ಸಹ ಬಹಳ ಹೊತ್ತಿನವರೆಗೆ ಜನರು ಮೌನವಾಗಿದ್ದರು.

"ಇದು ನಮ್ಮ ಪೂರ್ವಜರ ಬಾವಿ. ಇದು ನಮಗೆ ಜೀವನವನ್ನು ಕೊಡುತ್ತದೆ ಮತ್ತು ಮೃತ್ಯುವನ್ನು ಸಹ ಈ ಬಾವಿಯಿಂದ ಯಾರೂ ಪಾರಾಗಲು ಸಾಧ್ಯವಿಲ್ಲ"— ಮುದುಕ ಹೇಳಿದ.

ಒಮ್ಮೆಲೆ ಮುಳುಗುವವನು ಪುನಃ ಹೊರಗೆ ಬಂದ. ಈಗ ಅವನ ಮುಖವು ಕಪ್ಪಿಟ್ಟಿತ್ತು ಮತ್ತು ಎದೆ ಜೋರಾಗಿ ಹೊಡೆದುಕೊಳ್ಳುತ್ತಿತ್ತು. ಅವನು ನೆಲೆಯಿಲ್ಲದ ನೀರಿನಲ್ಲಿಂದ ಏನನ್ನೇ ಹುಡುಕಿ ತಂದಿರುವನೆಂದು ಗೊತ್ತಾಯಿತು........

ಮುಳುಗುವವನು ಬಹು ಎಚ್ಚರಿಕೆಯಿಂದ ಜಾಲವನ್ನು ಬಿಚ್ಚಿದ. ಈ ಸಲ ಜಾಲದಲ್ಲಿ ಕೆಸರು ಕಡಿಮೆ ಇತ್ತು, ಉಸುಕು ಹೆಚ್ಚಿತ್ತು. ಈ ಉಸುಕಿನಲ್ಲಿ ಒಂದು ಪುಟ್ಟ ಮಗುವಿನ ಶವವಿತ್ತು. ಏಕಾಏಕಿ ಎಲ್ಲ ಜನರು ಎರಡು ಹೆಜ್ಜೆ ಹಿಂದೆ ಸರಿದರು ಮತ್ತು ಲಕ್ಷ್ಯಗೊಟ್ಟು ಆ ಮಗುವಿನ ಶವವನ್ನು ನೋಡತೊಡಗಿದರು. ಅವರೆಲ್ಲರ ಕಣ್ಣುಗಳು ಆಶ್ಚರ್ಯದಿಂದ ಅಗಲವಾಗಿದ್ದವು. ಉಜ್ವಲ ಕಾಂತಿಯ ಮುದುಕನು ಆ ಸತ್ತ ಮಗುವನ್ನು ತನ್ನ ಎರಡೂ ಕೈಗಳಲ್ಲಿ ಮೇಲಕ್ಕೆ ಎತ್ತಿಕೊಂಡು "ಈ ಮಗು ಯಾರದು?" ಎಂದ.

ಯಾರೂ ಮಾತನಾಡಲಿಲ್ಲ.

ಯಾರೂ ಮುಂದಕ್ಕೆ ಬರಲಿಲ್ಲ.

ಗಂಡಸರ ಮುಖಗಳು ಬಿಳಿಚಿದ್ದವು; ವಿವಾಹಿತ ಸ್ತ್ರೀಯರು ಮುಸುಕು ಎಳೆದುಕೊಂಡಿದ್ದರು; ಯುವತಿ ಕುಮಾರಿಯರ ದೃಷ್ಟಿ ಕೆಳಗಿತ್ತು.

"ಈ ಮಗು ಯಾರದು?" ಉಜ್ವಲ ಕಾಂತಿಯ ವೃದ್ಧನು ತುಸು ಕಠೋರ ಸ್ವರದಲ್ಲಿ ಮತ್ತೆ ಕೇಳಿದ.

ಎಲ್ಲರೂ ಮೌನದಿಂದ ಸ್ತಬ್ಧರಾಗಿ ಬಾವಿಯ ನಾಲ್ಕೂ ಕಡೆಗೂ ದುಂಡಗೆ ನಿಂತಿದ್ದರು. ಯಾರೂ ಏನೂ ಉತ್ತರ ಕೊಡಲಿಲ್ಲ. ಯಾರೂ ಆ ಮಗು ತನ್ನದೆಂದು ಅನ್ನಲಿಲ್ಲ.

ಮುದುಕನು ಸತ್ತ ಮಗುವನ್ನು ಮುಳುಗುವವನ ವಶಕ್ಕೆ ಕೊಡುತ್ತ ಬಹಳ ವಿಷಾದದಿಂದ ಅಂದ—"ಅಯ್ಯಾ ! ಈ ಮಗುವನ್ನು ಮರಳಿ ಬಾವಿಯಲ್ಲಿ ಹಾಕಿಬಿಡು."

ಬಳಿಕ ಅವನು ನನ್ನ ಕಡೆ ಖೇದ ಮತ್ತು ದುಃಖ ತುಂಬಿದ ಕಣ್ಣುಗಳಿಂದ ನೋಡುತ್ತ ಹೇಳಿದ—"ಅತಿಥಿ, ಈಗ ಈ ಬಾವಿ ಸ್ವಚ್ಛವಾಗುವದಿಲ್ಲ ಎನ್ನಲು ನನಗೆ ಅತ್ಯಂತ ಖೇದವೆನಿಸುತ್ತದೆ. ನೀವು ನಿಮ್ಮ ಮಗುವಿಗೆ ಇದರ ನೀರನ್ನು ಕುಡಿಸಿ ಅದಕ್ಕೆ ಜೀವನ ಕೊಡಲಾರಿರಿ........"

ಮುಳುಗುವವನು ಸತ್ತ ಮಗುವನ್ನು ಬಾವಿಯಲ್ಲಿ ಹಾಕಿಬಿಟ್ಟ.

ತಟ್ಟನೆ ನನ್ನ ಮಡಿಲಿನಿಂದ ನನ್ನ ಮಗು ಜಿಗಿದು ಬಾವಿಯ ಕಡೆ ಧಾವಿಸಿತು—"ನಿಲ್ಲು, ನಿಲ್ಲು....ನಾನು ಈ ಮಗುವಿನೊಡನೆ ಆಡುವೆ."

ನಾನು ಇನ್ನೂ ಮುಂದಕ್ಕೆ ಧಾವಿಸುವ ಮೊದಲೇ ನನ್ನ ಮಗು ಬಾವಿಯಲ್ಲಿ ಜಿಗಿಯಿತು.

"ನನ್ನ ಮಗು ! ನನ್ನ ಮಗು ! !" ಎನ್ನುತ್ತ ನಾನು ಮುನ್ನುಗ್ಗಿದೆ. ಆದರೆ ಊರ ಜನರು ನನ್ನನ್ನು ತಡೆದರು.

"ನೋಡುತ್ತಿಲ್ಲವೇನು ?" ನಾನು ಕೆರಳಿ ಅಂದೆ—"ನನ್ನ ಮಗು ಈ ಬಾವಿಯಲ್ಲಿ ಬಿದ್ದಿದೆ."

"ಅವನು ಇನ್ನೊಂದು ಮಗುವಿನೊಡನೆ ಆಡುತ್ತಿದ್ದಾನೆ" ಉಜ್ವಲ ಕಾಂತಿಯ ವೃದ್ಧನು ನಿಧಾನವಾಗಿ ಅಂದನು.

ನಾನು ಬಾವಿಯಲ್ಲಿ ಹಣಿಕಿ ಹಾಕಿ ಕೂಗಿದೆ—"ಮಗು ! ಮಗೂ !! ಮರಳಿ ಬಾ."

ಬಾವಿಯಿಂದ ಒಂದು ವಿಷಭರಿತ ನಗುವಿನ ಧ್ವನಿ ಬಂದಿತು. ಬಾವಿಯಲ್ಲಿ ನೀರಿರಲಿಲ್ಲವೇನೋ ! ವಿಷದ ಬುರುಗೇ ಇದ್ದು ಅದು ಉಕ್ಕಿ ಉಕ್ಕಿ ಇಡೀ ಜಗತ್ತಿನ ಗುಡ್ಡ, ಕೊಳ್ಳ ಮತ್ತು ಬೈಲು ಪ್ರದೇಶದಲ್ಲಿ ಹಬ್ಬುತ್ತಿದೆಯೇನೋ ಅನ್ನುವಂತೆ.

ಜನರು ಅಲ್ಲಿಂದ ನನ್ನನ್ನು ಎಳೆದು ಬೇರೆ ಕಡೆಗೆ ಒಯ್ದರು. ನಾನು ಎರಡೂ ಮೊಣಕಾಲುಗಳನ್ನೂರಿ ಮುದುಕನ ಅಂಗಿಯ ಚುಂಗನ್ನು ಹಿಡಿದು ಬೇಡಿಕೊಳ್ಳುವಂತೆ ಅಂದೆ—"ನನ್ನ ಮಗು ! ಬಾಬಾ, ನನ್ನ ಮಗುವನ್ನು ನನಗೆ ಮರಳಿ ಕೊಟ್ಟು ಬಿಡು. ನಾನು ಸ್ವತಃ ನಡೆದುಕೊಂಡು ನಿನ್ನ ಬಾವಿಯ ಬಳಿ ಬಂದಿದ್ದೇನೆ. ನನ್ನ ಮಗು ನನಗೆ ದೊರೆಯಬೇಕು."

"ದೊರೆಯುವದು" ಬಾಬಾ ಸೀದಾ ಸೆಟೆದು ನಿಂತರು. ಅವರ ಕಣ್ಣುಗಳಲ್ಲಿ ಒಂದು

ವಿಲಕ್ಷಣವಾದ ಕಾಂತಿ ಮೂಡಿತು. ಸಾವಕಾಶವಾಗಿ ಆದರೆ ಬಹಳ ದೃಢತೆಯಿಂದ ಅವರು ಅಂದರು—"ನಿನ್ನ ಮಗು ನಿನಗೆ ಮರಳಿ ಸಿಕ್ಕುವದು. ಆದರೆ ಈಗಲ್ಲ, ಯಾರಾದರೂ ಒಬ್ಬ ಕುಮಾರಿ ಈ ಬಾವಿಗೆ ಬರುವಳು ಮತ್ತು ಈ ಬಾವಿಯ ಕಟ್ಟೆಯಮೇಲೆ ಬಾಗಿ ಆ ಇನ್ನೊಂದು ಮಗುವನ್ನು ಕೂಗುವಳು. ಅದನ್ನು ತನ್ನ ಮಗು ಎಂದು ಕರೆಯುವಳು. ಆಕ್ಷಣ ನಿನಗೆ ನಿನ್ನ ಮಗು ಸಿಗುವದು."

ನಾನು ಅಲ್ಲಿಂದ ಎದ್ದೆ. ಊರಿನ ಸ್ತ್ರೀಯರ ಬಳಿ ಹೋದೆ.

"ನನ್ನ ಮಗುವನ್ನು ನನಗೆ ಕೊಟ್ಟುಬಿಡಿ."

ವಿವಾಹಿತ ಸ್ತ್ರೀಯರು ತಮ್ಮ ಮುಸುಕನ್ನು ಇನ್ನೂ ಕೆಳಗೆ ಜಗ್ಗಿಕೊಂಡರು. ನನ್ನ ಕಡೆ ಬೆನ್ನುಮಾಡಿ ನಿಂತರು.

"ನನ್ನ ಮಗುವನ್ನು ನನಗೆ ಕೊಟ್ಟುಬಿಡಿ."

ಕುಮಾರಿಯರು ತಮ್ಮ ಮುಖ ತಿರುವಿಕೊಂಡರು. ಅವರ ತುಟಿಗಳು ಬಿಳಿಚಿಕೊಂಡಿದ್ದವು ಮತ್ತು ರೆಪ್ಪೆಗಳು ಕಣ್ಣೀರಿನಿಂದ ತುಂಬಿ ಕಂಪಿಸುತ್ತಿದ್ದವು.

"ನನ್ನ ಮಗುವನ್ನು ನನಗೆ ಕೊಟ್ಟುಬಿಡಿ."

ಮುದುಕಿಯರು ತಿರಸ್ಕಾರದಿಂದ ಅಟ್ಟಹಾಸ ಮಾಡಿ ನಕ್ಕರು. ಅವರು ತಿರಸ್ಕಾರದಿಂದ ನಗಬಲ್ಲವರಾಗಿದ್ದರು. ಯಾಕೆಂದರೆ, ಅವರ ಗರ್ಭ ಕುರುಡಾಗಿತ್ತು.

ನಾನು ನನ್ನ ಎರಡೂ ಕೈಗಳಲ್ಲಿ ನನ್ನ ಮುಖ ಮುಚ್ಚಿಕೊಂಡೆ—ಆ ಜನರು ನನ್ನ ಗಲ್ಲದ ಮೇಲೆ ಹರಿಯುತ್ತಿರುವ ಕಣ್ಣೀರನ್ನು ನೋಡದಿರಲಿ ಎಂದು.

ಬಹಳ ಹೊತ್ತಿನಮೇಲೆ ನಾನು ನನ್ನ ಮುಖದಿಂದ ಕೈ ಸರಿಸಿಕೊಂಡರೆ ಅಲ್ಲಿ ಯಾರೂ ಇರಲಿಲ್ಲ. ನಾನು ಕಂಡದ್ದೇನು?—ಎಲ್ಲೂ ಇಲ್ಲದ ಆ ಊರಿನಲ್ಲಿ ನಾನು ಒಬ್ಬಳೇ ಇದ್ದೇನೆ. ಆ ಬಾವಿಯ ದಂಡೆಯ ಮೇಲೆ ನಿಂತಿದ್ದೇನೆ. ಅಂಥ ಬಾವಿ ಪ್ರತಿ ಚೌರಸ್ತೆಯ ಮೇಲಿರುತ್ತದೆ. ನನ್ನ ಮಗುವನ್ನು ಉಳಿಸಲು ಬರಲಿರುವ ಆ ಕುಮಾರಿಯ ಪ್ರತೀಕ್ಷೆ ಮಾಡುತ್ತಾ ನಿಂತಿದ್ದೇನೆ.

# ನೋ ಮತ್ತು ಯಸ್

ಅಂತಿಮ ಮಹಾಯುದ್ಧವು 2165ರಲ್ಲಿ ನಡೆಯಿತು ಮತ್ತು ಇಡೀ ಜಗತ್ತು ಅದರಲ್ಲಿ ಹಾಳಾಯಿತು. ಕೇವಲ ಮೂರು ವ್ಯಕ್ತಿಗಳು ಉಳಿದರು.

(1) ಪ್ರೊಫೆಸರ್ ಮೆಹತಾಬ್.

(2) ಒಬ್ಬ ನೀಗ್ರೋ ಹುಡುಗ—ನಾಲ್ಕು ವರ್ಷದವನು.

(3) ಒಂದು ಆರು ತಿಂಗಳ ಫ್ರೆಂಚ್ ಹುಡುಗಿ—ಅವಳ ಹೆಸರು ಮಿಸ್ ನೋ ಇತ್ತು.

ಪ್ರೊಫೆಸರ್ ಮೆಹತಾಬ ತಮ್ಮ ಕಾಲದ ಎಲ್ಲರಿಗಿಂತ ದೊಡ್ಡ ಜೀನಿಯಸ್ ಎಂದು ಖ್ಯಾತರಾಗಿದ್ದರು. ಫೋಟೋನ್ ರಾಕೆಟ್ ಅನ್ನು ಅವರು ಆವಿಷ್ಕಾರ ಮಾಡಿದ್ದರು. ಅದು ಸುಮಾರು ಬೆಳಕಿನ ವೇಗದಿಂದ ಹೋಗುತ್ತಿತ್ತು. ಅದು ಅಂತರಿಕ್ಷದಲ್ಲೆಲ್ಲ ಸಿಗುವ ಈಥರ್‌ದ ಕಚ್ಚಾ ತತ್ವದಿಂದ ಆಕ್ಸಿಜನ್, ಹೈಡ್ರೋಜನ್ ಮತ್ತು ನೈಟ್ರೋಜನ್‌ಗಳ ಪರಮಾಣುಗಳನ್ನು ಹುಟ್ಟಿಸಿ ಅವುಗಳಿಂದ ಇಂಧನವನ್ನು ಉತ್ಪನ್ನ ಮಾಡಲು ಶಕ್ಯವಿತ್ತು. ಅದರಿಂದ ಗುರುತ್ವಾಕರ್ಷಣ ಶಕ್ತಿಯನ್ನು ಪ್ರತಿರೋಧಿಸಲು ಮತ್ತು ಕೃತಕ ಗುರುತ್ವಾಕರ್ಷಣೆಯನ್ನು ಹುಟ್ಟಿಸಲು ಸಾಧ್ಯವಿತ್ತು.

ಶ್ವೇತ ಕಿರಣವನ್ನು ಅವರೇ ಕಂಡುಹಿಡಿದಿದ್ದರು. ಅದು ಬಿಸಿಲಿನ ಹಾಗೆ ಪ್ರತ್ಯೇಕ ಸಮಯದಲ್ಲಿ ಸೂರ್ಯನಿಂದ ಬೇರೆಯಾಗುತ್ತಲಿರುತ್ತದೆ. ಆದರೆ ಈ ಕಿರಣ ಹಗಲಿನಲ್ಲಾಗಲಿ ರಾತ್ರಿಯಲ್ಲಾಗಲಿ ಕಣ್ಣಿಗೆ ಕಾಣಿಸುವದಿಲ್ಲ. ಅದನ್ನು ಇಂದ್ರ ಧನುಸ್ಸಿನ ಬಣ್ಣಗಳಲ್ಲಿ ವಿಭಜಿಸಲು ಸಾಧ್ಯವಿರಲಿಲ್ಲ. ಎಕ್ಸ್-ರೇ, ರಾಡಾರ್, ಅಣು ವೀಕ್ಷಣ ಯಂತ್ರ, ರೇಡಿಯೋ ಮತ್ತು ಇಲೆಕ್ಟ್ರಾನಿಕ್ ಉಪಕರಣಗಳು ಕೂಡ ಅದನ್ನು ತಮ್ಮ ವಶದಲ್ಲಿ ತೆಗೆದುಕೊಳ್ಳಲು ಅಸಮರ್ಥವಿದ್ದವು. ಪ್ರೊಫೆಸರ್ ಮೆಹತಾಬ ಒಂದು ಎಂಟೇ ಮೀಟರ ಯಂತ್ರದಿಂದ ಈ ಕಿರಣಗಳ ವಿಕಿರಣವಾಗುವದನ್ನು ಸಿದ್ಧಮಾಡಿದ್ದರು, ಮತ್ತು ಅದರ ವಿಶೇಷತೆಯನ್ನು ಜಗತ್ತಿಗೆ ಪರಿಚಯ ಮಾಡಿಸಿದ್ದರು.

ಮನುಷ್ಯರ ಹೃದಯದಲ್ಲಿ ಒಬ್ಬರೊಬ್ಬರ ಬಗ್ಗೆ ಏಳುವ ತಿರಸ್ಕಾರ ಭಾವನೆಗಳಿಗೆ ಇದೇ ಬೆಳ್ಳಗೆ ಕಾಣಿಸುವ ಕಿರಣಗಳೇ ಕಾರಣವೆಂಬುದನ್ನು ಮತ್ತು ಸೂರ್ಯನಿಂದ ಹೊರಟ ಈ ಕಿರಣಗಳು ಮನುಷ್ಯರ ನರಗಳಲ್ಲಿ ಲೀನವಾಗುತ್ತವೆಂಬುದನ್ನು ಪ್ರೊಫೆಸರ್ ಸಿದ್ಧಮಾಡಿ ತೋರಿಸಿದ್ದರು.

ಆದರೆ ಪ್ರೊಫೆಸರ್ ಮೆಹತಾಬ ಈ ಬಿಳಿಯ ಕಿರಣದ ಹಾನಿಕಾರಕ ಪ್ರಭಾವವನ್ನು

ತಗ್ಗಿಸುವ ಯಾವುದಾದರೂ ರೀತಿಯನ್ನು ತಿಳಿದುಕೊಳ್ಳುವ ಮೊದಲೇ ಈ ಜಗತ್ತು ಸನ್ 2165ನೆಯ ಇಸ್ವಿಯ ಅಂತಿಮ ಯುದ್ಧದಲ್ಲಿ ಹಾಳಾಗಿಬಿಟ್ಟಿತು; ಮತ್ತು ನಾನು ಮೇಲೆ ಉಲ್ಲೇಖಿಸಿದ ಮೂರು ವ್ಯಕ್ತಿಗಳು—ಪ್ರೊಫೆಸರ್ ಮೆಹತಾಬ, ಮಿಸ್ ನೋ ಮತ್ತು ನೀಗ್ರೋ ಹುಡುಗ—ಅವನ ಹೆಸರು ಯಸ್ ಇತ್ತು—ಇವರ ಹೊರತು ಯಾರೂ ಉಳಿಯಲಿಲ್ಲ.

ಪ್ರೊಫೆಸರ್ ಮೆಹತಾಬ ಈ ಜಗತ್ತನ್ನು ಬಿಟ್ಟರು. ಭೂಮಿಯಿಂದ ಹಾರಿ ಈ ಸೌರಮಂಡಲವನ್ನು ದಾಟಿ ಆಕಾಶಗಂಗೆಯ ಇನ್ನೊಂದು ಕಡೆ ಡ್ರೊಮೆದಾ ಗ್ರಹಕ್ಕೆ ಹೊರಟುಹೋದರು. ಡ್ರೊಮೆದಾ ಗ್ರಹಕ್ಕೆ ಎರಡು ಸೂರ್ಯಗಳು ಬಿಸಿಯನ್ನು ತಲುಪಿಸುತ್ತಿದ್ದವು. ಆದರೆ ಈ ಬಿಸಿಯು ಅತ್ಯಂತ ಮಧ್ಯಮ ರೀತಿಯದಾಗಿತ್ತು. ಯಾಕೆಂದರೆ, ಅವು ಪ್ರೌಢ ವಯಸ್ಸಿನ ಸೂರ್ಯನವಾಗಿದ್ದವು. ಇದರ ಅತಿರಿಕ್ತ ಈ ಎರಡೂ ಸೂರ್ಯರಿಂದ ಎರಡು ಭಿನ್ನ ಪ್ರಕಾರದ ಕಿರಣಗಳು ಹೊರಡುತ್ತಿದ್ದವು. ಒಬ್ಬ ಸೂರ್ಯನಿಂದ ಭೂಮಿಯ ಸೂರ್ಯನ ಹಾಗೆ ಕಣ್ಣಿಗೆ ಕಾಣಿಸದ ಶ್ವೇತ ಕಿರಣಗಳು ಹೊರಡುತ್ತಿದ್ದರೆ ಇನ್ನೊಂದರಿಂದ ಹೊರಟ ಕಿರಣಗಳು ಈ ಶ್ವೇತ ಕಿರಣಗಳನ್ನು ಸಮಾಪ್ತಿ ಮಾಡುತ್ತಿದ್ದವು. ಆದ್ದರಿಂದ ಈ ಗ್ರಹದ ಹವಾಮಾನವು ಅತ್ಯಂತ ಸಮಶೀತೋಷ್ಣವಿತ್ತು. ಅಲ್ಲಿ ಮನಸ್ಸಿನಲ್ಲಿ ಕ್ರೋಧದ ಭಾವನೆಗಳೇ ಹುಟ್ಟುತ್ತಿರಲಿಲ್ಲ. ಮನುಷ್ಯ ಮನುಷ್ಯನನ್ನು ದ್ವೇಷಿಸುವಂಥ ಯಾವ ಬಗೆಯ ತಿರಸ್ಕಾರವೂ ಅಲ್ಲಿರಲಿಲ್ಲ. ಬಿಸಿಲು ಹೆಚ್ಚಿರಲಿಲ್ಲ. ಚಳಿಯೂ ಬಹಳ ಕಡಿಮೆ. ಗುರುತ್ವಾಕರ್ಷಣ ಎಷ್ಟು ಕಡಿಮೆ ಎಂದರೆ, ಎರಡೂ ಮಕ್ಕಳು ಆ ಗ್ರಹವನ್ನು ತಲುಪಿ ಆ ಗ್ರಹದ ಮೇಲ್ಮೈಯಿಂದ ಜಿಗಿದರೆ ನೆಲದಿಂದ ಎಷ್ಟೋ ಸಾವಿರ ಗಜ ಜಿಗಿದು ಹೋಗುತ್ತಿದ್ದರು.

ಹೀಗೆ ಭಾವಿಸಿರಿ: ಆ ಗ್ರಹವು ಪೃಥ್ವಿಯಾಗಿದ್ದರೆ ಮಕ್ಕಳು ಭೂಮಿಯ ಮೇಲ್ಮೈಯಿಂದ ಜಿಗಿದು ಮೌಂಟ್ ಎವರೆಸ್ಟನ್ನು ಮುಟ್ಟಲು ಶಕ್ಯವಿತ್ತು. ಬಿಸಿಲು ಮೆಲ್ಲ ಮೆಲ್ಲನೆ ಯಾವ ಪ್ರಕಾರ ಸೂಸಿ ಸೂಸಿ ಬರುತ್ತಿತ್ತೆಂದರೆ, ಮಿಸ್ ನೋ ಆ ಕಿರಣದ ದಾರಗಳನ್ನು ಹೆಣೆದು ಹೊಂಬಣ್ಣದ ಸ್ವೆಟರ್ ತಯಾರು ಮಾಡಿಕೊಳ್ಳುತ್ತಿದ್ದಳು. ಮಾಸ್ಟರ್ ಯಸ್ ಯಾವುದಾದರೂ ಮಾತಿಗೆ ಸಂತೋಷದಿಂದ ಗಹಗಹಿಸಿ ನಕ್ಕರೆ ಆ ಅಟ್ಟಹಾಸವು ಗಾಳಿಯಲ್ಲಿ ಐಸ್‌ಕ್ರೀಮ್ ಆಗಿ ಹಾರುತ್ತಿತ್ತು. ಹಗಲಿನಲ್ಲಿ ದಿನವೆಲ್ಲ ಈ ಗ್ರಹದ ಮೇಲೆ ಎರಡೂ ಮಕ್ಕಳು ನಕ್ಕು ನಕ್ಕು ತಮ್ಮ ನಗೆಯಿಂದಾದ ಐಸ್‌ಕ್ರೀಮ್ ತಿನ್ನುತ್ತಲಿದ್ದರು. ವಾಸ್ತವದಲ್ಲಿ ಪರ್ವತಗಳು ಮೌಂಟ್ ಎವರೆಸ್ಟಕ್ಕಿಂತಲೂ ಎತ್ತರವಾಗಿದ್ದವು. ಆದರೆ ಹಗುರವಾದ ಸ್ಪಂಜ್ ವಸ್ತುವಿನಿಂದ ಮಾಡಲ್ಪಟ್ಟಿದ್ದವು ಮತ್ತು ಎಷ್ಟು ಹಗುರಾಗಿದ್ದವೆಂದರೆ ಹೆಬ್ಬೆಟ್ಟಿನ ಭಾರ ಹಾಕಿದರೆ ಸಾಕು ಪೂರ್ತಿ ಪರ್ವತವು ಭೂಮಿಯಲ್ಲಿ ಕುಸಿದುಬಿಡುತ್ತಿತ್ತು ಮತ್ತು ಮೆಲ್ಲಮೆಲ್ಲನೆ ಬೇರೆ

ಯಾವುದೋ ಸ್ಥಳದಲ್ಲಿ ಉದ್ಭವಿಸುತ್ತಿತ್ತು. ಮಾಸ್ಟರ್ ಯಸ್ ಮತ್ತು ಮಿಸ್ ನೋ ಅವರಿಗೆ ಈ ಆಟವು ಬಹಳೇ ಮನೋರಂಜಕವಾಗಿರುತ್ತಿತ್ತು. ಪ್ರತಿದಿನ ಆ ಗ್ರಹದ ಪರ್ವತಗಳು ಮತ್ತು ಅದರಂತೆಯೆ ಜಲವಾಯುವಿನಲ್ಲಿ ಪರಿವರ್ತನ ವಾಗುತ್ತಲಿದ್ದಿತು.

ಪ್ರೊಫೆಸರ್ ಮೆಹತಾಬ ಬಹಳ ಯೋಚಿಸಿ ವಿಚಾರಿಸಿ ಆಗ್ರಹದ ಆಯ್ಕೆ ಮಾಡಿದ್ದರು. ಸಾವಿರಾರು ವರ್ಷಗಳಿಂದ ಮನುಷ್ಯನ ಕಣ ಕಣಗಳಲ್ಲಿ ಅಡಕವಾಗಿರುವ ತಿರಸ್ಕಾರವು ಒಂದು ದಿನ ಹೊರಬಿದ್ದು, ದುರ್ದೈವಿಯಾದ ಮನುಷ್ಯನ ಇಡೀ ವಂಶವನ್ನೇ ನಾಶಮಾಡುವದು ಎಂದು ಅವರಿಗೆ ಗೊತ್ತಿತ್ತು. ಯಾಕೆಂದರೆ, ಕಾಲವು ಕಡಿಮೆ ಇತ್ತು ಮತ್ತು ಈ ಕಿರಣದ ಯಾವುದೇ ಯೋಗ್ಯ ಉಪಯೋಗವನ್ನು ಕಂಡು ಹಿಡಿಯಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಅವರು ಮೆಲ್ಲಮೆಲ್ಲನೆ ತಮ್ಮ ಬೃಹತ್ ಫೋಟೋನ್ ರಾಕೆಟ್ ಮುಖಾಂತರ ಅನೇಕ ಸಲ ಸೌರಮಂಡಲದಿಂದ ಹೊರಗೆ ಹಾರಿ ಹೋಗಲು ಯತ್ನಿಸಿ ಮನುಜ ವಂಶವು ಬೇರೆ ಕಡೆ ಹೋಗಿ ತಿರಸ್ಕಾರದ ಈ ವಿನಾಶತೆಯಿಂದ ಪಾರಾಗಿ ಬದುಕಿ ಉಳಿಯಲು ಸಾಧ್ಯವಿರುವಂಥ ಒಂದು ಗ್ರಹದ ಶೋಧನೆಯಲ್ಲಿ ತಿರುಗುತ್ತಿದ್ದರು. ಸೌಭಾಗ್ಯದಿಂದ ಅವರಿಗೆ ಬೇಗನೇ ಆ ಗ್ರಹವು ಸಿಕ್ಕಿತು. ಅವರು ಮುಂದಿನ ಹತ್ತು ವರ್ಷಗಳಲ್ಲಿ ಮಾನವನ ಜ್ಞಾನ ಮತ್ತು ಕಲೆಗಳಿಗೆ ಸಂಬಂಧಿಸಿದ ಎಲ್ಲ ಸಭ್ಯತೆ ಮತ್ತು ಸಂಸ್ಕೃತಿಗಳ ಬಹುಮೂಲ್ಯ ಅನುಭವ ಮತ್ತು ಅನ್ಯ ಆವಶ್ಯಕ ಸಾಮಗ್ರಿಗಳನ್ನು ಗುಪ್ತರೀತಿಯಲ್ಲಿ ಭೂಮಿಯಿಂದ ಒಯ್ದು ಆ ಗ್ರಹಕ್ಕೆ ಸಾಗಿಸುತ್ತಲಿದ್ದರು. ಅವರು ಎಲ್ಲ ವ್ಯವಸ್ಥೆಯನ್ನು ಸಂಪೂರ್ಣಗೊಳಿಸಿದ ಮೇಲೆ, ಮಾನವನ ಸಭ್ಯತೆ ಹಾಗೂ ಸಂಸ್ಕೃತಿಗಳ ಉನ್ನತಿಯು ಸುರಕ್ಷಿತವಾಗಿರಲು ಸಾಧ್ಯವಿದೆ ಎಂಬ ಪೂರ್ತಿ ವಿಶ್ವಾಸ ತಮ್ಮಲ್ಲಿ ಮೂಡಿದಮೇಲೆ, ಈ ಸಂತೋಷದ ಸುದ್ದಿ ತಿಳಿಸಲೆಂದು ಡ್ರೊಮೆದಾ ಗ್ರಹದಿಂದ ನಮ್ಮ ಭೂಮಿಯ ಮೇಲೆ ಇಳಿದರು.

ಆದರೆ ವಿಷಾದದ ಮಾತೆಂದರೆ ಪ್ರೊಫೆಸರ್ ಡ್ರೊಮೆದಾ ಗ್ರಹದಿಂದ ಮರಳಿ ನಮ್ಮ ಭೂಮಿಯನ್ನು ತಲುಪಿದಾಗ ಅಂತಿಮ ಮಹಾಯುದ್ಧವು ತನ್ನ ಕೊನೆಯ ಉಸಿರು ಎಳೆಯುತ್ತಿತ್ತು. ಮನುಷ್ಯ ಕುಲವು ನಾಶವಾಗಿತ್ತು. ಅವನ ಸಭ್ಯತೆಯು ನಿರ್ನಾಮವಾಗಿತ್ತು. ಪ್ರೊಫೆಸರರ ಸಂತೋಷದ ಸುದ್ದಿಯನ್ನು ಜಾರಿಗೆ ತರಲು ಯಾರೂ ಬದುಕಿ ಉಳಿದಿರಲಿಲ್ಲ. ಬಹಳ ಕಷ್ಟಪಟ್ಟು ಹುಡುಕಿದಮೇಲೆ ಪ್ರೊಫೆಸರ್ ಮೆಹತಾಬರಿಗೆ ಈ ಭೂಮಿಯ ಎರಡು ಬೇರೆ ಬೇರೆ ಭಾಗಗಳಲ್ಲಿ ಯಾವ ರೀತಿಯಿಂದಲೋ ಬದುಕಿ ಉಳಿದ ಈ ಎರಡು ಮಕ್ಕಳು ದೊರೆತವು. ಅವರು ಅವುಗಳನ್ನು ತಮ್ಮ ಫೋಟೋನ್ ರಾಕೆಟ್‌ನಲ್ಲಿ ಕೂಡಿಸಿಕೊಂಡು ಹೊಸ ಗ್ರಹಕ್ಕೆ ಹಾರಿಹೋದರು.

ಡ್ರೊಮೆದಾ ಗ್ರಹವನ್ನು ತಲುಪಿ, ಅವರು ಈ ಎರಡೂ ಮಕ್ಕಳ ಆರೈಕೆ ಮತ್ತು ಶಿಕ್ಷಣದಲ್ಲಿ ಹಗಲು ರಾತ್ರಿ ನಿರತರಾದರು. ಇವೆರಡೂ ಮಕ್ಕಳು ಮನುಷ್ಯರ ಜಾತಿ

ಯನ್ನು ಮುಂದುವರಿಸಿಕೊಂಡು ಹೋಗುವವರಾಗಿದ್ದರು. ಇವರಲ್ಲಿ ಒಂದು ವೇಳೆ ಯಾರಾದರೂ ಒಬ್ಬರು ಸತ್ತರೆ, ಯಾರಾದರೊಬ್ಬರ ಶಿಕ್ಷಣ, ಪೋಷಣೆಯಲ್ಲಿ ತಪ್ಪಾದರೆ 21ನೇ ಶತಮಾನದಲ್ಲಿ ಮನುಷ್ಯನನ್ನು ಮೃತ್ಯುವಿನ ದಂಡೆಯ ಮೇಲೆ ಒಯ್ದು ನಿಲ್ಲಿಸಿದ ಅದೇ ಸಮಸ್ಯೆಗಳು ಪುನಃ ತಲೆದೋರುವ ಅಪಾಯವಿತ್ತು.

ಆದ್ದರಿಂದಲೇ ಪ್ರೊಫೆಸರ್ ಮೆಹತಾಬರು ಈ ಎರಡೂ ಮಕ್ಕಳ ಶಿಕ್ಷಣದಲ್ಲಿ ಯಾಗಲೀ, ಲಾಲನೆ-ಪಾಲನೆ ಮತ್ತು ಮೇಲ್ವಿಚಾರಣೆಗಳಲ್ಲಿ ಯಾವದೇ ರೀತಿಯ ಕೊರತೆಯನ್ನು ಮಾಡಲಿಲ್ಲ ಅವರಿಗೆ ತಾವು ಸಾಯುವ ಮೊದಲು ಮನುಷ್ಯನ ಜಾತಿಯ ಈ ಇಬ್ಬರು ಪ್ರತಿನಿಧಿಗಳಿಗೆ, ಈಗ ಪೃಥ್ವಿಯಲ್ಲಿ ಎಂದೆಂದಿಗೂ ಅಪ್ರಾಪ್ಯ ವಾಗಿರುವ ಮಾನವ ಜ್ಞಾನ, ಸಭ್ಯತೆ ಮತ್ತು ಸಂಸ್ಕೃತಿಗಳ ಸಂಪೂರ್ಣ ನಿಧಿಯನ್ನು ಒಪ್ಪಿಸಬೇಕಾಗಿತ್ತು.

ಜೀವನದಲ್ಲಿ ಯಾವ ವಿಷಯವೂ ಕೈತಪ್ಪಿ ಹೋಗದಂತೆ ವಿಜ್ಞಾನ, ಇತಿಹಾಸ, ಸಾಹಿತ್ಯ, ದರ್ಶನಶಾಸ್ತ್ರ, ಅರ್ಥಶಾಸ್ತ್ರ ಇವುಗಳನ್ನೆಲ್ಲ ಮತ್ತು ಸ್ವರ, ವ್ಯಂಜನಗಳಿಂದ ಮೊದಲು ಮಾಡಿಕೊಂಡು ಶೇಕ್ಸ್‌ಪಿಯರ್, ಕಾಳಿದಾಸ, ಡಾಂಟೆ, ತುಲಸೀದಾಸ ಮತ್ತು ಗಾಲಿಬ್‌ರವರೆಗೆ, ವಿಜ್ಞಾನದಲ್ಲಿ ಸೇಬು ಬೀಳುವದರಿಂದ ಹಿಡಿದು ನಕ್ಷತ್ರಗಳ ಹಾರುವಿಕೆಯವರೆಗೆ ಅರ್ಥಾತ್ ನ್ಯೂಟನ್ನನಿಂದ ಐನ್‌ಸ್ಟೀನ್ ಮತ್ತು ಪ್ರೊಫೆಸರ್ ಮೆಹತಾಬರವರೆಗಿನ ಜ್ಞಾನದ ಅತ್ಯಮೂಲ್ಯವಾದ ಭಂಡಾರವನ್ನು ಅವರು ಕೆಲವೇ ವರ್ಷಗಳಲ್ಲಿ ಈ ಇಬ್ಬರು ಅಪ್ರಬುದ್ಧ ಮಕ್ಕಳ ವಶಕ್ಕೆ ಕೊಡಬೇಕಾಗಿತ್ತು. ಕಾಲ ಕಡಿಮೆ ಇತ್ತು. ಅವರು ದಿನದಿನಕ್ಕೆ ವೃದ್ಧರಾಗುತ್ತಲಿದ್ದರು. ಆ ಆರು ತಿಂಗಳ ಹೆಣ್ಣುಮಗು ಈಗ 16 ವರ್ಷದ ಬೆಡಗಿನ ಚಂಚಲ ಸುಂದರಿಯಾಗಿದ್ದಳು. ಆ ಗುಂಗುರು ಕೂದಲಿನ ಮದಭರಿತ ಕಣ್ಣುಗಳ ಮತ್ತು ಲಜ್ಜೆ ತುಂಬಿದ ಮುಗುಳ್ನಗೆಯ ನೀಗ್ರೋ ಹುಡುಗ ಈಗ 6 ಅಡಿ ಎತ್ತರದ ವಿಶಾಲ ಎದೆಯ ತರುಣನಾಗಿದ್ದು, 21ನೇ ವರ್ಷದಲ್ಲಿ ಕಾಲಿಡುತ್ತಲಿದ್ದ.

ಇಬ್ಬರ ಪಾಲನೆ-ಪೋಷಣೆಯು ಜೊತೆಜೊತೆಯಲ್ಲಿ ನಡೆಯುತ್ತಿತ್ತು. ಇಬ್ಬರೂ ಪ್ರೊಫೆಸರ್‌ರ ದೃಷ್ಟಿಯಲ್ಲಿ ಸರಿಸಮಾನರಾಗಿದ್ದರು— ಯಾರೂ ಕಡಿಮೆಯಿಲ್ಲ, ಯಾರೂ ಹೆಚ್ಚಿಲ್ಲ. ಇಬ್ಬರನ್ನೂ ಒಂದೇ ರೀತಿ ಪ್ರೀತಿಸುತ್ತಿದ್ದರು. ಎಲೆಕ್ಟ್ರಾನಿಕ್ ಉಪಕರಣಗಳ ಮುಖಾಂತರ ದಿನಾಲೂ ಇಬ್ಬರಿಗೂ ಸಮನಾಗಿ ಮಾನವ ಜ್ಞಾನಕೋಶದ ಪರಿಚಯ ಮಾಡಿಸುತ್ತಿದ್ದರು. ಇಬ್ಬರೂ ಜಾಣರು ಮತ್ತು ಬುದ್ಧಿವಂತರು ಆಗಿದ್ದರು. ಈಗ ಕಳೆದ 15 ವರ್ಷಗಳ ಶಿಕ್ಷಣದಿಂದ ಇಬ್ಬರ ಬುದ್ಧಿಯು, ಮಾನವರ ಬುದ್ಧಿಯು 15 ಶತಮಾನಗಳಲ್ಲಿ ತಲುಪಿದ ಮಟ್ಟವನ್ನು ಪಡೆದಿತ್ತು.

ಪ್ರೊಫೆಸರ್ ಅಪಾರ ಸಂತೋಷದಿಂದಿದ್ದರು. ಕೆಲವು ವರ್ಷಗಳಲ್ಲಿ ಇಬ್ಬರೂ ಇಪ್ಪತ್ತನೆಯ ಶತಮಾನದ ಜ್ಞಾನವನ್ನು ಉಲ್ಲಂಘನೆ ಮಾಡುವರು. ಬಳಿಕ ಅವರ

ಅಪೂರ್ಣ ಶಿಕ್ಷಣವು ಪೂರ್ಣಗೊಳ್ಳುವದು. ಸಾವಿರಾರು ವರ್ಷಗಳಿಂದ ಮಾನವನು ತನ್ನ ಅನುಸಂಧಾನದಿಂದ ಶೇಖರಿಸಿದ ಜ್ಞಾನಕೋಶವು ವ್ಯರ್ಥವಾಗುವದಿಲ್ಲ, ಮನುಷ್ಯನ ಪ್ರಗತಿ ನಿಲ್ಲುವದಿಲ್ಲ, ಮಾನವನು ತನ್ನ ಹೊಸ ದೇಶದಲ್ಲಿ ಮುಂದುವರಿಯುತ್ತ ಹೋಗುವನು.

ಆದರೆ ಮಾನವನ ವಂಶ ಬೆಳೆಯುವದು ಎಲ್ಲಿಂದ....ಬರುವದು ಎಲ್ಲಿಂದ? ಈಗಂತು ಈ ಗ್ರಹದ ಮೇಲೆ ಮೂರು ವ್ಯಕ್ತಿಗಳಿದ್ದರು—ಜ್ಞಾನ ಮತ್ತು ವಿದ್ಯೆಗಳ ಹಗ್ಗದಿಂದ ಒಬ್ಬರಿಗೊಬ್ಬರು ಬಂಧಿತಗೊಂಡವರು, ಒಂದು ಮನೆಯಲ್ಲಿರುವ ಹೊಂದಾಣಿಕೆ, ಅನ್ಯೋನ್ಯತೆ ಮತ್ತು ಪ್ರೇಮ ಇವರಲ್ಲಿ ಎಲ್ಲಿತ್ತು? ಆ ಮನೆ, ಯಾವುದನ್ನು ಪ್ರೊಫೆಸರ್ ಕೆಳಗೆ ಭೂಮಿಯಮೇಲೆ ಕಳೆದುಕೊಂಡಿದ್ದರೋ, ಆ ಮನೆ, ಯಾವುದರ ಸುಖದ ಬಗ್ಗೆ ಈ ಇಬ್ಬರು ನವಯುವಕ ಹೃದಯ ಅಪರಿಚಿತವಿತ್ತು.

ಮಿಸ್ ನೋ ಮತ್ತು ಮಾಸ್ಟರ್ ಯಸ್ ಇಬ್ಬರ ಲಾಲನೆ-ಪಾಲನೆ ಜೊತೆಯಾಗಿ ಆಗಿತ್ತು. ಇಬ್ಬರೂ ಜೊತೆಯಲ್ಲಿಯೇ ಬೆಳೆಯುತ್ತಿದ್ದರು, ಇಬ್ಬರೂ ಒಬ್ಬರ ಹತ್ತಿರ ಒಬ್ಬರು ಇರುವದು ಅನಿವಾರ್ಯವಿತ್ತು. ಇದೆಲ್ಲ ವಿಚಿತ್ರ ವಿಷಯುವಾಗಿತ್ತು. ಯಾಕೆಂದರೆ, ಇವರಿಬ್ಬರ ಹೊರತು ಅಲ್ಲಿ ಯಾರೂ ಜೊತೆಯಿರಲಿಲ್ಲ. ಪ್ರೊಫೆಸರ್ ಇದ್ದರು. ಆದರೆ ಅವರ ಸ್ಥಾನವು ಒಬ್ಬ ತಂದೆಯದು, ಒಬ್ಬ ಗುರುವಿನದು, ಒಬ್ಬ ದಯಾಳುವಾದ ಹಿರಿಯನದು. ಕಾಯಿದೆಯಂತೆ ಅವರಿಬ್ಬರು ಒಬ್ಬರಿಗೊಬ್ಬರು ಪ್ರೀತಿಸಿ ಮಾನವ ಜಾತಿಯನ್ನು ಮುಂದುವರಿಸಬೇಕಿತ್ತು. ಪ್ರೊಫೆಸರ್ ಅವರಿಬ್ಬರಿಗೂ ಅನೇಕ ಸಲ ತಿಳಿಸಿ ಹೇಳಿದ್ದರು. ಅವರು ಅರ್ಥವಾಗದಷ್ಟು ಚಿಕ್ಕ ಮಕ್ಕಳೇನೂ ಇರಲಿಲ್ಲ. ತಾವು ಒಬ್ಬರನ್ನೊಬ್ಬರು ಮದುವೆಯಾಗದಿದ್ದರೆ ಅದರ ಪರಿಣಾಮಗಳು ಘೋರವಾಗಿರುವವು ಎಂಬುದನ್ನು ತಿಳಿದುಕೊಂಡಿದ್ದರು. ಈ ಇಡೀ ಗ್ಯಾಲಕ್ಸಿಯಿಂದ (ನಭೋಮಂಡಲ) ಸುಬೋಧ, ಶೃಂಖಲಾಬದ್ಧ, ವಿಚಾರಶೀಲ ಜೀವನವು ಕೊನೆಯವರೆಗೂ ಸಮಾಪ್ತಿಗೊಳ್ಳುವದು. ಆದರೆ ಅದೇನು ವಿಷಯವೋ ಏನೋ ಅವರಿಬ್ಬರೂ ಒಬ್ಬರನ್ನೊಬ್ಬರು ಬಯಸುತ್ತಿರಲಿಲ್ಲ, ಪ್ರೀತಿಸುತ್ತಿರಲಿಲ್ಲ. ಒಬ್ಬರು ಇನ್ನೊಬ್ಬರ ಜೊತೆ ಇರುತ್ತಿದ್ದರು. ಒಬ್ಬರನ್ನೊಬ್ಬರು ಪಸಂದು ಕೂಡ ಮಾಡುತ್ತಿದ್ದರು. ಆದರೆ ಒಬ್ಬರನ್ನೊಬ್ಬರು ಪ್ರೀತಿಸುತ್ತಿರಲಿಲ್ಲ.

ನೋ ವಿಪರೀತ ಬೆಳ್ಳಗಿದ್ದಳೆಂದು ಮಾಸ್ಟರ್ ಯಸ್‌ನ ಆಕ್ಷೇಪಣೆ. ತನಗೆ ಇಷ್ಟು ಬೆಳ್ಳಗಿನ ಹುಡುಗಿ ಬೇಕಿಲ್ಲ ಎಂದು ಅವನು ಅನ್ನುತ್ತಿದ್ದ.

ಯಸ್‌ನ ಕಪ್ಪು ಬಣ್ಣದ ಬಗ್ಗೆ ನೋಳ ಆಕ್ಷೇಪಣೆ ಏನೂ ಇರಲಿಲ್ಲ. ಆದರೆ ಅವನ ಗುಂಗುರುಗೂದಲು ಅವಳಿಗೆ ಸೇರುತ್ತಿರಲಿಲ್ಲ—"ನನಗೆ ನೇರ ಕೂದಲಿನ ಒಬ್ಬ ಹುಡುಗ ಬೇಕು" ಎನ್ನುತ್ತಿದ್ದಳು.

"ನನಗಂತೂ ಕಪ್ಪು ಕಣ್ಣಿನ ಹುಡುಗಿ ಬೇಕು. ಎಷ್ಟೇ ಕಪ್ಪಿರಲಿ, ಎಷ್ಟೇ ವಾದ

ವಿವಾದ ಅವಳು ಮಾಡಲಿ, ಆದರೆ ಕೊನೆಯಲ್ಲಿ ಅವಳು ಸೋಲುತ್ತಿರಬೇಕು."

"ವ್ಹಾ! ನಾನೇಕೆ ಸೋಲುತ್ತಿರಬೇಕಂತೆ? ಹೂಂ. ಹೂಂ. ನಿನ್ನೊಡನೆ ಸೋಲಬೇಕೆ?" ನೋ ಉದ್ವಿಗ್ನಗೊಂಡು ಅನ್ನುತ್ತಿದ್ದಳು.

"ನೋ, ನೀನು ಮಾತು ಮಾತಿಗೆ ಕವಿತೆ ಓದಬೇಡ." ಯಸ್‌ನ ಅಭಿರುಚಿ ಸೈನ್ಸ್, ಗಣಿತ, ಅಲ್ಜಿಬ್ರಾಗಳಲ್ಲಿ ಅಧಿಕವಿತ್ತು. ನೋಗೆ ಕಾವ್ಯ ಸೇರುತ್ತಿತ್ತು. ಸಾಹಿತ್ಯ, ದರ್ಶನಶಾಸ್ತ್ರ ಮತ್ತು ಹರಟೆ ಕೂಡ. ಹಾಗೆ ನೋಡಿದರೆ ಅವಳಿಗೆ ಬಹಳ ಭಾಷೆಗಳು ಬರುತ್ತಿದ್ದವು. ರಾಕೆಟ್ ಕೂಡ ನಡೆಸುತ್ತಿದ್ದಳು.

"ಏನು ತಿಳಿದುಕೊಂಡಿರುವೆ? ನಾನು ನಿನ್ನಂಥ ನೀರಸ ಪಂಡಿತ, ಅಲ್ಜಿಬ್ರಾದ ಮೂರ್ಖನ ಜೊತೆ ಮದುವೆಯಾಗುವೆನೆ?"

"ಯಸ್" ಯಸ್ ಹೇಳಿದ.

"ನೋ" ನೋ ಹೇಳಿದಳು—"ನನಗಂತೂ ನೀರಿನ ಗುಳ್ಳೆಗಳ ಹಾಗೆ ಮೃದುವಾಗಿರುವ, ಸೂರ್ಯನಂತೆ ಹೊಂಬಣ್ಣದ, ರಾಕೆಟ್‌ದ ಹಾಗೆ ತೀವ್ರತೆಯುಳ್ಳ ಹುಡುಗ ಬೇಕು. ಯಾವಾಗಲೂ ತಿರುವು ಮುರುವು ಫಾರ್ಮುಲಾಗಳನ್ನು ಯೋಚಿಸುವಂಥ ಶುಂಠನಲ್ಲ."

"ಆದರೆ ಅಂಥ ಹುಡುಗ ಎಲ್ಲಿಂದ ಬರುವನು?" ಪ್ರೊಫೆಸರ್ ವಿವಶನಾಗಿ ನೋಳನ್ನು ಕೇಳುವನು—"ನೀನೇ ಇರುವವಳು ಈಗ ನೀವಿಬ್ಬರೂ ಮದುವೆ ಮಾಡಿಕೊಳ್ಳಬೇಕೆಂದು ನಾನು ಇಚ್ಛಿಸುತ್ತೇನೆ. ಮುಂದಿನ ಇಪ್ಪತ್ತು ವರ್ಷಗಳಲ್ಲಿ ನಿಮಗೆ ಹದಿನಾರು ಮಕ್ಕಳಾದವೆಂದು ತಿಳಿದುಕೊಂಡರೆ...." ಪ್ರೊಫೆಸರ್ ಲೆಕ್ಕ ಮಾಡುವದರಲ್ಲಿ ವ್ಯಸ್ತನಾಗುತ್ತಿದ್ದ.

"ನನಗೆ ಇವನಲ್ಲಿ ಪ್ರೀತಿಯಿಲ್ಲ." ನೋ ಅಳುವವರಂತೆ ಅಂದಳು—"ಇವನು ನನ್ನ ಕೈಯನ್ನು ತನ್ನ ಕೈಯಿಂದ ಸ್ಪರ್ಶಿಸಿದಾಗ ಅವನ ಕೈಗಳು ಪೂರ್ತಿ ತಣ್ಣಗೆ ಅನಿಸುತ್ತವೆ. ನನ್ನ ಕೈಗೆ ಯಾವುದೋ ಬರ್ಫದ ತುಂಡು ತಾಗಿದೆ ಎಂದು ಅನಿಸುವದು. ನನಗೆ ಕೆಂಡದಂತೆ ಜ್ವಲಿಸುವ ಹುಡುಗ ಬೇಕು."

"ಇವಳು ಬಹಳ ಕುರೂಪಿ" ಯಸ್ ಮುಖ ಸಿಂಡರಿಸಿ ಬೇಜಾರಾದಂತೆ ಅನ್ನುವನು—"ಇವಳ ನೀಲಿ ಕಣ್ಣುಗಳು ಮತ್ತು ಕುತ್ತಿಗೆಯಮೇಲೆ ಲೆಕ್ಕವಿಲ್ಲದಷ್ಟು ಚಿಕ್ಕ ಚಿಕ್ಕ ಕಪ್ಪು ಕಲೆಗಳು ಮತ್ತು ಹಸಿಯಾದ ಚರ್ಮ ಸುಲಿದ ಮಾಂಸದಂತಹ ಕೆಂಪು ಕೆಂಪು ತುಟಿಗಳು. ಇಶ್ಯ! ನಾನು ಈ ಹುಡುಗಿಯನ್ನು ಪ್ರೀತಿಸಲಾರೆ, ಎಂದಿಗೂ ಪ್ರೀತಿಸಲಾರೆ."

ಪ್ರೊಫೆಸರ್ ನಿರಾಶರಾಗಿ ತಮ್ಮ ತಲೆಗೂದಲನ್ನು ಕಿತ್ತುಕೊಳ್ಳತೊಡಗಿದರು. ಅವರ ಇಡೀ ಜೀವನದ ಪರಿಶ್ರಮವು ವ್ಯರ್ಥವಾಗಹತ್ತಿತ್ತು. ಅವರು ಜಗತ್ತಿನ ಸರ್ವ ಶ್ರೇಷ್ಠ ಜೀನಿಯಸ್ ಆಗಿದ್ದರಲ್ಲದೇ ಈ ಸೃಷ್ಟಿಯ ಕೊನೆಯ ಬುದ್ಧಿ ಜೀವಿ

ಯಾಗಿದ್ದರು. ಅವರು ಎಲ್ಲ ಜ್ಞಾನ, ಎಲ್ಲ ವಿಜ್ಞಾನ ಮತ್ತು ಕಲೆಯನ್ನು ಕರಗತ ಮಾಡಿಕೊಂಡಿದ್ದರು. ಆದರೆ ಅವರು ಪ್ರೇಮದ ಬಗ್ಗೆ ಏನನ್ನೂ ಅರಿತಿದ್ದಿಲ್ಲ.

ಅವರು ತಮ್ಮ ಗತಿಸಿಹೋದ ದಿನಗಳನ್ನು ನೆನೆದಾಗ ತಮ್ಮ ಬಾಲ್ಯದ ನೆನಪಾಯಿತು. ಅವರು ಬೀದಿಗಳಲ್ಲಿ ಬೆಳೆದಿದ್ದರು. ಒಬ್ಬ ಭಿಕ್ಷುಕಿ ಅವರನ್ನು ಜೋಪಾನಮಾಡಿದ್ದಳು. ತನ್ನ ತಾಯಿ ಯಾರು? ಯಾರು ತನ್ನ ತಂದೆ?—ಏನೂ ಅವರಿಗೆ ಗೊತ್ತಿರಲಿಲ್ಲ. ಅವರ ಅವಶ್ಯಕತೆಯನ್ನು ಪ್ರೊಫೆಸರ್ ಎಂದೂ ತಿಳಿಯಲಿಲ್ಲ. ಅಲ್ಪ ಪ್ರಾಯದಲ್ಲಿಯೇ ಅವರಿಗೆ ತಮ್ಮ ಜೀವನ ಮತ್ತು ತಿಳುವಳಿಕೆಯನ್ನು ಕಲಿಯ ಬೇಕಾಯಿತು. ಎಷ್ಟು ಅಂಧಕಾರಪೂರ್ಣವಾದ ಬದುಕು, ಧೂಳು ತುಂಬಿದ ರಸ್ತೆಯಲ್ಲಿ ಹೊರಳಾಡಿದ, ದುರ್ವಾಸನೆ ತುಂಬಿದ ಕಟ್ಟೆಗೆಯ ಮೆಟ್ಟಲುಗಳ ಹಿಂದೆ ಮಲಗಿದ್ದ, ಪಾದ್ರಿಯ ಭಿಕ್ಷೆಯಮೇಲೆ ಬದುಕಿದ್ದ ವರ್ಷಗಳು, ಭಿಕ್ಷೆಯ ಹಣದಿಂದ ಶಿಕ್ಷಣ ಪಡೆದ ಕ್ಷಣಗಳು ಎಷ್ಟು ಬೆಳಕು ಮತ್ತು ಥಳಕಿನ ವರ್ಷಗಳಾಗಿದ್ದವು. ಅವರಿಗೆ ಖ್ಯಾತಿ ಲಭಿಸಿತು. ಐಶ್ವರ್ಯ ದೊರೆಯಿತು. ಪ್ರತಿಷ್ಠೆ ಸಿಕ್ಕಿತು. ಆದರೆ ಇವುಗಳ ಮಧ್ಯೆ ಅವರಿಗೆ ಪ್ರೇಮ ಸಿಕ್ಕಲಿಲ್ಲ. ಅವರು ಮಾಡುತ್ತಿದ್ದ ಕಾರ್ಯ ಮತ್ತು ಕೆಳಗೆ ಅಂದರೆ, ಭೂಮಿಯ ಮೇಲೆ ತಮ್ಮ ಹೊಣೆಗೆ ತೆಗೆದುಕೊಂಡ ಕೆಲಸ ಎಷ್ಟು ದೊಡ್ಡದಿತ್ತೆಂದರೆ ಅವರಿಗೆ ಪ್ರೇಮದ ಅವಶ್ಯಕತೆ ಎಂದೂ ಅನಿಸಲೇ ಇಲ್ಲ. ಅವರು ಈ ವಿಲಕ್ಷಣ ಭಾವನೆಯಿಂದ ಅಪರಿಚಿತರಾಗಿದ್ದರು. ಅವರು ಪ್ರೇಮದ ಬಗ್ಗೆ ಎಲ್ಲವನ್ನೂ ಓದಿದ್ದರು ಮತ್ತು ಈ ಇಬ್ಬರು ತರುಣರಿಗೂ ಕೂಡ ಓದಿಸಿದ್ದರು. ಆದರೆ ಓದುವದೇ ಒಂದು ವಿಷಯವಾದರೆ ಅದನ್ನು ಅರ್ಥ ಮಾಡಿಕೊಳ್ಳುವದು ಬೇರೆ ವಿಷಯ. ಅವರಿಗೆ ಎಂದಿಗೂ ಪ್ರೇಮದ ಬಗ್ಗೆ ತಿಳಿದುಕೊಳ್ಳಲಾಗಲಿಲ್ಲ. ಅವರು ಪ್ರೇಮವನ್ನು ಬೆಂಕಿಯ ಕಡ್ಡಿಗಳ ಹಾಗೆ ಉಪಯೋಗ ಮಾಡಿದ್ದರು. ಅದರಿಂದ ತಮ್ಮ ಬೆರಳುಗಳನ್ನು ಎಂದೂ ಸುಟ್ಟುಕೊಂಡಿರಲಿಲ್ಲ. ಹೀಗಾಗಿ ಅವರು ಪ್ರೇಮದ ಕ್ರಮದ ಬಗ್ಗೆ ತಿಳಿ ಹೇಳುವದರಲ್ಲಿ ಅಸಮರ್ಥರಾಗಿದ್ದರು.

ತಾವು ಏನು ಮಾಡಬೇಕೆಂದು ತಿಳಿಯದಾದಾಗ ಅವರು ಪುನಃ ಮತ್ತೊಂದು ಸಲ ಭೂಮಿಯನ್ನು ಸುತ್ತಲು ತಯಾರಾದರು. ಬಹುಶಃ ಈ ಭೂಮಿಯಮೇಲೆ ಅವರಿಗೆ ತನ್ನ ಹಾಗೆ ಯಾರಾದರೂ ಇಬ್ಬರು ವ್ಯಕ್ತಿಗಳು ಒಂಟಿಯಾಗಿಯೋ ಅಥವಾ ಜೊತೆಯಾಗಿಯೋ, ಅಥವಾ ಬೇರೆ ಬೇರೆಯಾಗಿ ಎಲ್ಲಿಯೋ, ಎಂದೋ ಒಮ್ಮೆ ಉತ್ತಮ ಸಭ್ಯತೆಯ ಮನೆಯಾಗಿದ್ದು, ಈಗ ಹಾಳು ಬಿದ್ದು ನಷ್ಟವಾದ ಬೀಳು ಪ್ರದೇಶದಲ್ಲಿ ದೊರೆತರೆ, ಅವರು ಒಬ್ಬರನ್ನೊಬ್ಬರು ಮದುವೆಯಾಗಲು ಸಿದ್ಧವಾಗಿ ತಮ್ಮ ಜೊತೆ ಈ ಗ್ರಹಕ್ಕೆ ಬಂದು ಮನುಷ್ಯಜಾತಿಯನ್ನು ಮುಂದುವರಿಸುವದಾದರೆ, ವೃದ್ಧಿಯನ್ನುಂಟುಮಾಡುವದಾದರೆ—ಅದರ ಆಶೆಯಂತು ಅವರಿಗೆ ಇರಲಿಲ್ಲ. ಆದರೂ ಒಂದು ಅಂತಿಮ ಪ್ರಯತ್ನ ಮಾಡುವದರಲ್ಲಿ ಯಾವ ಹಾನಿಯಿದೆ?

ಅವರು ತಮ್ಮ ಈ ಹೊಸ ಯೋಜನೆಯನ್ನು ಇಬ್ಬರೂ ಹರೆಯದವರಿಗೆ ತಿಳಿಯ ಗೊಡಲಿಲ್ಲ. ತಾನು ಪೃಥ್ವಿಯ ಮೇಲಿನ ಸಭ್ಯತೆ ಮತ್ತು ಸಂಸ್ಕೃತಿಗಳ ಅವಶೇಷ ಗಳನ್ನು ನೋಡಲು ತನ್ನ ಫೋಟೋನ್ ರಾಕೆಟ್‌ದಲ್ಲಿ ಹೊರಟಿರುವದಾಗಿಯೂ ಅವರೂ ನೋಡಲು ಇಷ್ಟಪಟ್ಟರೆ ಜೊತೆಗೆ ಬರಬಹುದು—ಎಂದು ಇಷ್ಟೇ ಅವರು ಹೇಳಿದರು.

ಯಸ್ ಮತ್ತು ನೋ ತಕ್ಷಣ ಸಿದ್ಧರಾದರು. ಇಬ್ಬರೂ ತಮ್ಮ ದೇಶವನ್ನು ನೋಡಲು ವ್ಯಾಕುಲ ಮತ್ತು ಚಂಚಲರಾದರು. ತಾವು ಎಲ್ಲಿಂದ ಬಂದಿರುವರೋ? ಯಾವುದರ ಇತಿಹಾಸ ಮತ್ತು ಸಭ್ಯತೆಗಳ ಬಗ್ಗೆ ಪ್ರೊಫೆಸರರಿಂದ ಬಹಳಷ್ಟು ಕೇಳಿರು ವರೋ, ಆ ಸ್ಥಳ ಹೇಗಿರಬಹುದು? ತಮ್ಮ ಮೊದಲಿನ ದೇಶವನ್ನು, ತಮ್ಮ ಪೂರ್ವಜರ ಪೃಥ್ವಿಯನ್ನು, ಕೇವಲ ಒಂದು ಐತಿಹಾಸಿಕ ಮತ್ತು ಭೌಗೋಳಿಕ ತಿಳುವಳಿಕೆಯ ಸಲುವಾಗಿ ನೋಡಲು ಅವರು ಕಾತುರರಾಗಿದ್ದರು.

ಒಂದು ಕೊಳೆ ಕೊಳೆಯಾದ ಮಂಜಿನಂತಹ ವಸ್ತು ಭೂಮಿಯ ಮೇಲೆ ಕವಿದಿತ್ತು. ಫೋಟೋನ್ ರಾಕೆಟ್ ಭೂಮಿಯ ವಾಯುಮಂಡಲದಲ್ಲಿ ಇಳಿದು ಮೆಲ್ಲಮೆಲ್ಲಗೆ ಹಾರಹತ್ತಿದಾಗ ಮುಂಜಾವಿನ ಒಂದು ಕೊಳೆಯಾದ, ಹೊಲಸಾದ, ಅರುಣ ಛಾಯೆ ನಾಲ್ಕೂ ಕಡೆಯೂ ಆವರಿಸಿತ್ತು. ಸೂರ್ಯನ ಬಣ್ಣವು ಪಾರಿವಾಳದ ರಕ್ತದ ಹಾಗೆ ಕೊಳಕು ಕೆಂಪಾಗಿತ್ತು. ಎಲ್ಲಾ ಕಡೆಗಳಲ್ಲೂ ಪಟ್ಟಣಗಳು ಹಾಳು ಬಿದ್ದು ಗೋಡೆ, ಕಲ್ಲು-ಮಣ್ಣಿನ ರಾಶಿ ಆಗಿದ್ದವು. ಗಿಡಗಳು ಸುಟ್ಟು ಹೋಗಿದ್ದವು. ಹೊಲಗಳಲ್ಲಿ ಬೂದಿಯು ಹಾರುತ್ತಿತ್ತು. ಹವೆಯಲ್ಲಿ ಮದ್ದಿನ ವಾಸನೆ ಇತ್ತು. ಎಲ್ಲೇ ಆಗಲಿ ಮಾನವ ಜೀವನದ ಚಿಹ್ನೆಗಳು ಉಳಿದಿರಲಿಲ್ಲ.

ಪ್ರೊಫೆಸರ್ ಮೆಹತಾಬ ತನ್ನ ಫೋಟೋನ್ ರಾಕೆಟ್ಟನ್ನು ಅನೇಕ ಸಲ ಭೂಮಿಯ ಸುತ್ತಲೂ ತಿರುಗಿಸಿದರು. ತಮ್ಮ ಇಲೆಕ್ಟ್ರಾನಿಕ್ ಮತ್ತು ರಾಡಾರ್ ಯುಕ್ತ ದೂರ ದರ್ಶಕದಿಂದ ಭೂಮಿಯ ಮೂಲೆ ಮೂಲೆಯನ್ನೂ ಅವಲೋಕಿಸಿದರು. ಎಲ್ಲಿಯೂ ಜೀವದ ಲಕ್ಷಣಗಳು ಇರಲಿಲ್ಲ. ತೀಕ್ಷ್ಣ ಹವೆಯು ಸಿಟ್ಟಿಗೆದ್ದ ತೋಳಗಳ ಹಾಗೆ ಬತ್ತಿದ, ಒಣಗಿದ ಮಹಾದ್ವೀಪಗಳ ಮೇಲಿಂದ ಬೀಸುತ್ತಿತ್ತು. ಹೊಳೆಗಳಲ್ಲಿ ನೀರು ಇತ್ತು. ಆದರೆ ನೀರು ಕುಡಿಯುವವರು ಯಾರೂ ಇರಲಿಲ್ಲ, ವಿಶಾಲವಾದ, ಓಜಸ್ವಿ ಯಾದ ಶಿಖರಗಳು ಸುಂದರ ವಸ್ತ್ರವನ್ನು ತೊಟ್ಟು ನಿಂತಿದ್ದವು. ಆದರೆ ನೋಡು ವವರು ಯಾರೂ ಇರಲಿಲ್ಲ. ಅಲ್ಲಲ್ಲಿ ಗುಡ್ಡಗಳ ಮೇಲೆ ಹುಲ್ಲು ಬೆಳೆಯಹತ್ತಿತ್ತು. ಆದರೆ ಅದರ ಮೇಲೆ ನಡೆಯುವವರು ಯಾರೂ ಇರಲಿಲ್ಲ.

ಸ್ವಲ್ಪ, ಸ್ವಲ್ಪ ಅಂತರಗಳ ಮಧ್ಯೆ, ರಾಕೆಟ್‌ನ ಅತ್ಯಂತ ಬಲಶಾಲಿಯಾದ ಧ್ವನಿ ವರ್ಧಕದ ಮೂಲಕ ಪ್ರೊಫೆಸರ್ ಘೋಷಿಸುತ್ತಿದ್ದ—"ಎಲ್ಲಿಯಾದರೂ, ಯಾರಾ ದರೂ ಮನುಷ್ಯರಿದ್ದರೆ ಹೇಳಿರಿ" — "ಎಲ್ಲಿಯಾದರೂ ಯಾರಾದರೂ ಮನುಷ್ಯರಿದ್ದರೆ

ಹೇಳಿರಿ.” ಅವರ ರಾಕೆಟ್‌ನ ಇಲೆಕ್ಟ್ರಾನಿಕ್ ಎಂಟೆನಾ, ಜೇಡನ ಬಲೆಯ ಹಾಗೆ ತಮ್ಮ ಉದ್ದಗಲವನ್ನು ಹರಡಿ ಯಾವುದೇ ಮನುಷ್ಯನ ಅತಿ ಸೂಕ್ಷ್ಮವಾದ ಧ್ವನಿಯನ್ನು ಕೂಡ ಗುರುತಿಸಲು ಸಮರ್ಥವಾಗಿದ್ದವು.

ಎಲ್ಲಿಯೂ ಕ್ಷೀಣವಾದ ಅಂತಿಮ ಧ್ವನಿಯಾಗಲಿ, ಯಾವುದೇ ಮಗುವಿನ ತೊದಲ್ನುಡಿಯಾಗಲಿ, ಮಾನವೀಯತೆಯ ಪಿಸುನುಡಿಯ ಅಲೆಯಾಗಲಿ ಇರಲಿಲ್ಲ. ಇದ್ದಿದ್ದರೆ ಈ ಎಂಟೆನಾ ಅದನ್ನು ತಟ್ಟನೆ ಗ್ರಹಿಸಲು ಶಕ್ಯವಿತ್ತು. ಆದರೆ ಉತ್ತರವಾಗಿ ಯಾವ ಧ್ವನಿಯೂ ಬರಲಿಲ್ಲ.

ರಾಕೆಟ್ ಒಂದು ನಿಶ್ಶಬ್ದ ವಾಯುಮಂಡಲದಲ್ಲಿ ತಿರುಗುತ್ತಲಿತ್ತು. ಈ ಯಾವಾಗಲೂ ಮಾತನಾಡುವ, ಟೊಳ್ಳು ಬಡಾಯಿ ಕೊಚ್ಚುವಂಥ, ಎಂದಿಗೂ ಸುಮ್ಮನೆ ಇರದಂಥ ಮನುಷ್ಯನಿಗೆ ಅಯ್ಯೋ ! ಎಂಥ ಮೌನ ಕವಿದಿತ್ತು. ಯಾರು ಭಾಷಣ ಮಾಡುತ್ತಿದ್ದರೋ, ಗೀತೆಗಳನ್ನು ಹಾಡುತ್ತಿದ್ದರೋ, ಧರ್ಮದ ಹೆಸರಿನಲ್ಲಿ ಯುದ್ಧಕ್ಕೆ ಇಳಿಯುತ್ತಿದ್ದರೋ, ಅಧಿಕಾರ ಮತ್ತು ತ್ಯಾಗಗಳ ಸಾಕ್ಷಿಗಾಗಿ ತುಂಡಾಗಿ ಸಾಯಲಿಕ್ಕೆ ಸಿದ್ಧರಿರುತ್ತಿದ್ದರೋ—ಅವರೆಲ್ಲ ಹಾಳಾಗಿ ಹೋಗಿದ್ದರು, ಮತ್ತು ಅವರ ಜೊತೆ ಅವರ ಸತ್ಯತೆ, ಪ್ರಾಮಾಣಿಕತೆಗಳು ಕೂಡ ಸತ್ತುಹೋಗಿದ್ದವು. ಅವರ ಧರ್ಮ, ಅಧಿಕಾರ ಮತ್ತು ನ್ಯಾಯಗಳ ರೀತಿ ನೀತಿಗಳೆಲ್ಲ ಕೊನೆಗೊಂಡಿದ್ದವು.

ಹೊಳೆಗಳಲ್ಲಿ ನೀರು ಅಳುತ್ತಿತ್ತು. ಗಿಡಗಳ ಬಂಜೆಯಾದ ಟೊಂಗೆಗಳು ತಲೆ ತಗ್ಗಿಸಿದ್ದವು. ಅರುಣವು ಸಿಂಗರಿಸಿಕೊಂಡು ಪೃಥ್ವಿಯ ಮೇಲೆ ಇಳಿದಿತ್ತು. ಆದರೆ ತನ್ನನ್ನು ಬಯಸುವ ಯಾವುದೇ ಜೀವನವನ್ನು ಕಾಣದೆ ನಿರಾಶೆಗೊಂಡು ಸೂರ್ಯನ ಮಗ್ಗುಲಲ್ಲಿ ಒರಗಿತ್ತು.

ಫೋಟೋನ್ ರಾಕೆಟ್ ಪೃಥ್ವಿಗೆ ತೀರ ಸಮೀಪದಲ್ಲಿ ಮೆಲ್ಲಗೆ ಹಾರುತ್ತಿತ್ತು. ಪ್ರೊಫೆಸರ್ ತಟ್ಟನೆ ಉದಾಸಗೊಂಡರು. ಅವರು ಯಾವುದೋ ಕರುಣ ಕತೆಯ ಅಂತಿಮ ಪರಿಚ್ಛೇದವನ್ನು ಹೇಳುತ್ತಿರುವಹಾಗ ಮೆಲ್ಲಮೆಲ್ಲಗೆ ಹೇಳಲು ಪ್ರಾರಂಭಿಸಿದರು.

“ಇಲ್ಲಿ ನ್ಯೂಯಾರ್ಕ್‌ದ ಗಗನಚುಂಬಿ ಕಟ್ಟಡಗಳಿದ್ದವು. ಇದು ಪ್ಯಾರಿಸ್—ನಾಜೂಕು ದೇಹದ ಸುಂದರಿಯರ ಪಟ್ಟಣ ; ಇದು ಮಾಸ್ಕೊ—ಚೆಕಾವ್, ದೊಸ್ತೊವಸ್ಕಿ ಮತ್ತು ಟಾಲ್‌ಸ್ಟಾಯರ ಪ್ರಿಯವಾದ ನಗರ: ಇದು ಪೀಕಿಂಗ್ ನೀಲಿ “ಜೇಡ್” ಶಿಲೆಗಳ ನಾಜೂಕು ಕಟ್ಟಡಗಳ ನಗರ, ಇಲ್ಲಿ ಟೋಕಿಯೋ ಇತ್ತು—ಗೀಷ್ಯಾಗಳ ಮತ್ತು ಚೆರ್ರಿಗಳ ಮೊಗ್ಗುಗಳ ಪಟ್ಟಣ, ಇದು ತೆಹರಾನ್, ಸುಂದರ ಗುಲಾಬಿಗಳ ತೊಟ್ಟಿಲು, ಇದು ಲಾಹೋರ್—ಕಾವ್ಯ ಮತ್ತು ಸಾಹಿತ್ಯ ಚಟುವಟಿಕೆಗಳ ಕೇಂದ್ರ. ಇದು ದಿಲ್ಲಿ—ಹಿಂದೂಸ್ತಾನದ ರಾಜಧಾನಿ, ಮತ್ತು ಏಳು ಸಭ್ಯತೆಗಳ ರಾಜಧಾನಿ ಮತ್ತು ಏಳು ಸಭ್ಯತೆಗಳ ಮನೆ. ಆದರೆ ಈಗ ಇವೆಲ್ಲ ಹಾಳು ಗೋಡೆ,

ಇಟ್ಟಿಗೆಯ ರಾಶಿಯಾಗಿವೆ—ಮೌನ, ಹಾಳಾದ ನಿಶ್ಶಬ್ದ, ನಿರ್ಜನ ಪ್ರದೇಶ, ಮುರಿದ, ಒಡೆದ ಭಗ್ನಾವಶೇಷಗಳು, ಒಂದು ಕಟ್ಟಡವು ಕೂಡ ಪೂರ್ಣವಾಗಿ ಭದ್ರ ವಾಗಿ ಉಳಿದಿಲ್ಲ. ಎಲ್ಲ ಹಾಳು ಗೋಡೆ, ಇಟ್ಟಿಗೆಯ ರಾಶಿ."

ಪ್ರೊಫೆಸರ್‌ರ ಧ್ವನಿಯು ಮಂದವಾಗುತ್ತಾ ಅವರು ದುಃಖದ ಮಡುವಿನಲ್ಲಿ ಕೊಚ್ಚಿಹೋದರೊ ಎಂಬಂತೆ ಸುಮ್ಮನಾಯಿತು; ಒಮ್ಮೆಲೆ ಪ್ರೊಫೆಸರ್ ಸ್ತಂಭಿತರಾಗಿ ಆಶ್ಚರ್ಯದಿಂದ ಕೆಳಗೆ ನೋಡತೊಡಗಿದರು.

"ಏ!"—ಅವರು ಆಶ್ಚರ್ಯದಿಂದ ಚೀರಿದರು.

ಯಸ್ ಮತ್ತು ನೋ ಇಬ್ಬರೂ ಅವರ ಚೀತ್ಕಾರ ಕೇಳಿ ಅವರ ಸಮೀಪಕ್ಕೆ ಬಂದರು ಮತ್ತು ಅವರ ದೃಷ್ಟಿಗಳು ಕೂಡ ಪ್ರೊಫೆಸರರ ದೃಷ್ಟಿಯ ಜೊತೆ ಜೊತೆ ಕೆಳಗೆ ಚಾಚಿದವು.

ನಿಜವಾಗಿಯೂ ಒಂದು ಕಟ್ಟಡವು ಕೆಳಗೆ ತನ್ನ ಮೊದಲ ಸ್ಥಿತಿಯಲ್ಲಿಯೇ ಸುರ ಕ್ಷಿತ ಮತ್ತು ಸಂಪೂರ್ಣವಾಗಿ ನಿಂತಿತ್ತು. ಅವರಿಬ್ಬರೂ ಆಶ್ಚರ್ಯಚಕಿತರಾದರು. ಅವರು ತಮ್ಮ ಕಣ್ಣುಗಳನ್ನು ತಿಕ್ಕಿಕೊಂಡು ಪುನಃ ನೋಡಿದರು. ನಿಜವಾಗಿಯೂ ಒಂದು ಕಟ್ಟಡ ನಿಂತಿತ್ತು. ಕಣ್ಣುಗಳೇನೂ ಮೋಸ ಹೋಗಿರಲಿಲ್ಲ. ಇಡೀ ಪೃಥ್ವಿಯ ಮೇಲೆ ಒಂದೇ ಕಟ್ಟಡ ನಿಂತಿತ್ತು.

ಪ್ರೊಫೆಸರ್ ತನ್ನ ರಾಕೆಟ್ಟನ್ನು ಮೆಲ್ಲಮೆಲ್ಲನೆ ಆ ಕಟ್ಟಡದ ಎದುರಿಗೆ ಇಳಿಸಿದರು. ಬಳಿಕ ಅವರು ಮೂವರೂ ಹೊರಬಿದ್ದು ಆ ಕಟ್ಟಡದ ಕಡೆ ಮುಂದುವರಿದರು. ಇಡೀ ಪೃಥ್ವಿಯಮೇಲೆ ಮನುಷ್ಯನ ಕೈಗಳಿಂದ ನಿರ್ಮಾಣವಾದ ಕೊನೆಯ ಕಟ್ಟಡವು ಗರ್ವದಿಂದ ಮೂಲ ಸ್ಥಿತಿಯಲ್ಲಿ ತಲೆಯೆತ್ತಿ ನಿಂತಿತ್ತು.

ಕತ್ತಲೆ ಹೆಚ್ಚಾಗುತ್ತಲಿತ್ತು. ಆದರೆ ಆ ಕಟ್ಟಡ ನಿಂತ ಸ್ಥಳದಲ್ಲಿ ಕತ್ತಲೆ ಇರ ಲಿಲ್ಲ. ಕತ್ತಲೆಯೂ ಕೂಡ ಈ ಕಟ್ಟಡವನ್ನು ಸ್ಪರ್ಶಿಸಲು ಹೆದರುತ್ತಿತ್ತೇನೋ ಎಂದೆನಿಸುತ್ತಿತ್ತು.

ನದಿಯ ದಂಡೆಯ ಮೇಲೆ ಒಂದು ಸುಂದರ ಸಜಲ ಹಿತಕರ ಸ್ವಪ್ನವು ಯಾವುದೊ ಸುಂದರಿಯ ಹಾಗೆ ಮೈ ಮುರಿಯುತ್ತ ತನ್ನ ತುಂಬು ತೋಳುಗಳನ್ನೆತ್ತಿ ಪ್ರೇಮ ದರ್ಬಾರದಲ್ಲಿ ನಮಾಜ್ ಮಾಡುತ್ತಿರುವಂತೆ ಇತ್ತು.

"ತಾಜಮಹಲ್," ನೋ ಗುರುತಿಸಿ ಜೋರಾಗಿ ಚೀರಿದಳು ಮತ್ತು ಓಡುತ್ತಲೇ ಅದರ ಬಾಗಿಲ ಬಳಿಗೆ ಹೋದಳು. ಪ್ರೊಫೆಸರ್ ತಾಜಮಹಲದ ಬಗ್ಗೆ ಅವರಿಬ್ಬ ರಿಗೂ ತಿಳಿಸಿದ್ದರು. ಅದರ ಚಿತ್ರವನ್ನೂ ತೋರಿಸಿದ್ದರು. ಈಗ ಅದೇ ತಾಜಮಹಲ್ ಅವರ ಎದುರಿಗೆ ಇತ್ತು.

ಎಲ್ಲವೂ ಹಾಳಾಗಿತ್ತು. ಆದರೆ ತಾಜಮಹಲ್ ಉಳಿದಿತ್ತು. ಇದು ಒಂದು ಅದ್ಭುತ ವಿಷಯವಾಗಿತ್ತು. ಈಗ ಆ ಮೂವರೂ ಆಶ್ಚರ್ಯ ಮತ್ತು ಪ್ರಸನ್ನತೆ

ಯಿಂದ, ಕಂಪಿಸುತ್ತಿದ್ದ ಭಾವನೆಗಳನ್ನು ತಮ್ಮ ಹೃದಯಗಳಲ್ಲಿ ಅಡಗಿಸಿಕೊಂಡು ತಾಜದ ಸಮ್ಮುಖದಲ್ಲಿ ನಿಂತಿದ್ದರು. ನಿಂತೇ ಇದ್ದರು. ಒಮ್ಮೆಲೆ ಒಂದು ಅಮೃತ ಶಿಲೆಯ ಗೋಪುರದ ಮೇಲೆ ಚೌತಿಯ ಚಂದ್ರ ಏರಿ ಬಂದ. ಯಾರದೋ ಕೋಮಲ ಶಂಕುವಿನಂತಹ ಬೆರಳಿಗೆ ಬೆಳ್ಳಿಯ ಉಂಗುರವನ್ನು ತೊಡಿಸಿದಹಾಗೆ ಅನಿಸುತ್ತಿತ್ತು.

"ಆಹ್ !" ನೋಳ ಹೃದಯದಿಂದ ನಿಟ್ಟುಸಿರು ಮೆಲ್ಲಮೆಲ್ಲನೆ ಹೊರಟಿತು. ಅವಳು ಯಸ್‌ನ ಕೈಹಿಡಿದುಕೊಂಡಳು. ಸಾವಕಾಶವಾಗಿ ಅವನ ಕೈಯನ್ನು ಅದುಮುತ್ತ "ನಿಮ್ಮ ಕೈಗಳು ಕೆಂಡದಂತೆ ಏಕೆ ಸುಡುತ್ತಿವೆ?" ಎಂದಳು.

"ಓಹ್ !" ನೀನು ಎಷ್ಟು ಚೆಲುವೆ ಇರುವೆ—ಯಸ್ ನೋಗೆ ಹೇಳಿದ--"ನೀನು ಇಷ್ಟು ಸುಂದರಿ ಇರುವೆ ಎಂದು ನನಗೆ ಗೊತ್ತಿರಲಿಲ್ಲ." ಅವನು ಆಶ್ಚರ್ಯಚಕಿತನಾಗಿ ನೋಳ ಮುಖದ ಕಡೆಗೆ, ಮೊದಲ ಸಲ ಅದನ್ನು ನೋಡುತ್ತಿರುವನೇನೋ ಎನ್ನುವ ಹಾಗೆ, ನೋಡತೊಡಗಿದ.

"ನಾನು ಯಸ್‌ನ ಜೊತೆ ಮದುವೆಯಾಗಲಿರುವೆನು ಮತ್ತು ನಾವು ಇದೇ ತಾಜಮಹಲದ ಪದತಲದಲ್ಲಿರುವೆವು. ಇಲ್ಲಿಯೇ ನಮ್ಮ ಮಕ್ಕಳು ಹುಟ್ಟುವವು"—ನೋ ಪ್ರೊಫೆಸರ್‌ಗೆ ಹೇಳಿದಳು.

"ಏನು ಹೇಳುತ್ತಿರುವಿರಿ ? "—ಪ್ರೊಫೆಸರ್ ಗಾಬರಿಗೊಂಡು ಅಂದರು. "ಇದು ತಿರಸ್ಕಾರ ತುಂಬಿದ ಯುದ್ಧಗಳ ಭೂಮಿ. ಧೂಳು ಮತ್ತು ರಕ್ತದಲ್ಲಿ ತೊಯ್ದು, ಅಣ್ಣ-ತಮ್ಮಂದಿರ ರಕ್ತದ ಪಿಪಾಸೆಯುಳ್ಳ, ಅತ್ಯಾಚಾರಗಳ ಭೂಮಿ ಇದು. ಪುನಃ ಅದೇ ಕತೆಯನ್ನು ಪುನರಾವೃತ್ತಿ ಮಾಡಬಯಸುವಿಯೇನು ?"

"ಎಲ್ಲಿಯವರೆಗೆ ತಾಜಮಹಲ್ ಬದುಕಿರುವದೋ, ಮಾನವನ ಆಶೆ ಕೂಡ ಬದುಕಿರುವದು." ನೋ ಬಹಳ ಪ್ರೀತಿಯಿಂದ ತಾಜಮಹಲದತ್ತ ನೋಡುತ್ತಿದ್ದಳು. "ನಾನು ನಿಮ್ಮ ಸಲುವಾಗಿ ನನ್ನ ಫೋಟೋನ್ ರಾಕೆಟ್‌ದ ಮುಖಾಂತರ ತಾಜ ಮಹಲನ್ನು ಇಲ್ಲಿಂದ ಎತ್ತಿಕೊಂಡು ಡ್ರೊಮೆದಾ ಗ್ರಹದ ಮೇಲೆ ಒಯ್ಯಬಲ್ಲೆನು."

"ಇದಕ್ಕಿಂತ ಹೆಚ್ಚಿನ ಅನ್ಯಾಯ ಮತ್ತಾವುದು ಆಗಲು ಸಾಧ್ಯ, ಪ್ರೊಫೆಸರ್" ಯಸ್ ಗಾಬರಿಪಟ್ಟು ಅಂದ.

"ತಾಜಮಹಲನ್ನು ನೋಡಿರಿ. ಅದನ್ನು ಮಾನವನ ಕೈಗಳು ಮಾಡಿಲ್ಲ. ಇದೇ ಭೂಮಿಯಿಂದ ಹುಟ್ಟಿದೆ ಎಂದು ಅನ್ನಿಸುತ್ತದೆ. ಇದು ಈ ಭೂಮಿಯ ಸ್ವಪ್ನ, ಪ್ರೊಫೆಸರ್. ಮತ್ತು ಸ್ವಪ್ನಗಳನ್ನು ಕದಿಯಲು ಸಾಧ್ಯವಿಲ್ಲ."

"ಆದರೆ ಈ ಭೂಮಿಯಮೇಲೆ ತಿರಸ್ಕಾರದ ಕಿರಣಗಳು ಬೀಳುತ್ತವೆ. ಅವು ಮಾನವನ ಎಲುವುಗಳಲ್ಲಿ ಸೇರಿಕೊಳ್ಳುವವು."—ಪ್ರೊಫೆಸರ್ ಜೋರಾಗಿ ಚೀರಿದರು.

"ಹಾಗಾದರೆ, ಈ ತಾಜಮಹಲ್ ಹೇಗಾಯಿತು ? " ಯಸ್ ಕೇಳಿದ.

"ತಿರಸ್ಕಾರದ ಭೂಮಿಯಿಂದ ಪ್ರೇಮದ ಈ ಚಮತ್ಕಾರ ಹೇಗೆ ಹುಟ್ಟಿತು?"

—ನೋ ಪ್ರೊಫೆಸರ್‌ರನ್ನು ಕೇಳಿದಳು. ಮತ್ತು ಬಹಳ ಬಲವಾಗಿ ಯಸ್‌ನ ಕೈಯನ್ನು ಹಿಡಿದುಕೊಂಡು ಹೀಗೆ ಹೇಳಬೇಡಿ ಪ್ರೊಫೆಸರ್, ಹೀಗೆ ಹೇಳಬೇಡಿ! ಯಾವಾಗಲಾದರೂ ಆ ಧ್ವನಿಯು ಬರುವದು, ಯಾವಾಗಲಾದರೂ ಆ ಸುವಾಸನೆ ತೇಲಾಡುವದು, ಯಾವಾಗಲಾದರೂ ಪ್ರೇಮ ಜಾಗ್ರತಗೊಳ್ಳುವದು. ಹಳ್ಳಿ ಹಳ್ಳಿ ಮತ್ತು ಗಲ್ಲಿ ಗಲ್ಲಿಗಳು ಈ ಜಗತ್ತಿನ ಮೇಲೆ ರಾಜ್ಯವಾಳುವವು."

ಬಳಿಕ ಒಂದು ದೀರ್ಘ ಉಸಿರು ಎಳೆದುಕೊಂಡು ನೋ, ಯಸ್‌ನ ಎದೆಯ ಮೇಲೆ ತನ್ನ ತಲೆಯಿಟ್ಟು, ತನ್ನ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತ ಬಹಳ ಶಾಂತ ಭಾವದಿಂದ ಅಂದಳು.—"ನಾನು ನನ್ನ ಮಕ್ಕಳನ್ನು ನೋಡಬಲ್ಲೆ."

ಅವರು ತಾಜಮಹಲಿನ ಸಂದೇಶವನ್ನು ಇಡೀ ಜಗತ್ತಿನಲ್ಲಿ ಹರಡುತ್ತ ಹೊರಟರುವರು.

# ಮಿಥುನ

ಪೇಟೆಯೇ ಉದ್ದವಾಗಿತ್ತೋ ಅಥವಾ ವ್ಯಾಪಾರವೇ ಮಂದವಾಗಿತ್ತೋ........ ಪಶ್ಚಿಮದ ಕಡೆ ಎಲ್ಲಿ ರಸ್ತೆಯು ಸ್ವಲ್ಪ ಮೇಲೇರಿ ಆಕಾಶವನ್ನು ಅಪ್ಪಿ ಕೊನೆಗೆ ಒಮ್ಮೆಲೆ ಕೆಳಗಿಳಿಯುತ್ತದೆಯೋ ಅಲ್ಲಿ ಜಗತ್ತಿನ ಕೊನೆ ಇದೆ. ಅಲ್ಲಿಂದ ಒಮ್ಮೆ ಹಾರಿದರೆ ಈ ಬದುಕಿನ ಹಿಡಿತದಿಂದ ಬಿಡುಗಡೆ ಪಡೆಯಬಹುದೆಂದು ಅನಿಸುತ್ತಿತ್ತು.

ಇಡೀ ದಿನ ತಲೆ ಕೆಡಿಸಿಕೊಂಡಮೇಲೆ ಮಗನ ಟಕಲೆ—ಕಬಾಡಿಯಾನಿಗೆ (ರದ್ದಿ ವಸ್ತುಗಳ ವ್ಯಾಪಾರಿ) ಎರಡೇ ಎರಡು ವಸ್ತುಗಳು ಕೈಗೆ ಹತ್ತಿದವು—ಫ್ಲೋರೆಂಟೈನ್ (ಒಂದು ಬಗೆಯ ರೇಷ್ಮೆ ಬಟ್ಟೆ) ಮತ್ತು ಜಮಿನಿ ರಾಯನ ವರ್ಣಚಿತ್ರ. ಫ್ಲೋರೆಂಟೈನ್‌ನ್ನು ಬಹುಶಃ ಯಾವನಾದರೂ ತಲೆಕೆಟ್ಟ ಚಲನಚಿತ್ರ ನಿರ್ಮಾಪಕ ಬಾಡಿಗೆಗೆ ಒಯ್ಯಬಹುದು. ಆದರೆ ಜಮಿನಿ ರಾಯನ ವರ್ಣಚಿತ್ರ?....ಏನೂ ಯೋಚಿಸ ಬೇಕಿಲ್ಲ. ಇಂದು ಅದನ್ನು ಮುಚ್ಚಿ ಇಟ್ಟರೆ ಮುಂದೆ ಅವನ ಮೊಮ್ಮಕ್ಕಳು ಮರಿಮಕ್ಕಳು ಅದರಿಂದ ಕೋಟಿಗಟ್ಟಲೆ ಗಳಿಸಬಹುದು. ಇಂದು ಕೂಡ ಪಶ್ಚಿಮ ದಲ್ಲಿ ಯಾರಲ್ಲಿಂದಾದರೂ ಲಿಯೊನಾರ್ಡೊನ ಸ್ಕೆಚ್‌ಗಳು ಹೊರಬಿದ್ದರೆ ಆರ್ಟ್ ಬಾಜಾರದಲ್ಲಿ ಅವುಗಳ ಬೆಲೆ ಲಕ್ಷದವರೆಗೆ ಹೋಗುತ್ತದೆ....ಈ ಲಕ್ಷ, ಕೋಟಿಗಳ ಕಲ್ಪನೆಯಿಂದಲೇ ಮಗನಲಾಲನ ಕಣ್ಣುಗಳಲ್ಲಿ ಮಿಂಚುವಲ್ಲರಿ ಹೊಳೆಯತೊಡಗಿತು. ಅವನು ತಾನು ನಲವತ್ತು, ನಲವತ್ತೆರಡು ವರ್ಷದವ, ಅಲ್ಲದೆ ಟಕಲಾ—ಬೋಳು ತಲೆಯುವ, ಅವಿವಾಹಿತ ಬೇರೆ ಎಂಬುದನ್ನು ಮರೆತೇಬಿಟ್ಟಿದ್ದ. ಆದ್ದರಿಂದ ಮೊಮ್ಮಕ್ಕಳು, ಮರಿಮಕ್ಕಳ ಪ್ರಶ್ನೆಯೇ ಇಲ್ಲ. ಮಗನ್ ಮಾಡಬಲ್ಲನಾದರೂ ಏನು? ಅವನು ಒಬ್ಬ ಸಾಮಾನ್ಯ ಹಿಂದೂ. ಇಷ್ಟು ದೊಡ್ಡ ತತ್ವಜ್ಞಾನದ ಒಡೆ ತನ ಪಡೆದಿದ್ದರೂ ಅವನ ಅಂತರಂಗದ ಬಿಸಿಯಾತನವು ಹೋಗಿರಲಿಲ್ಲ. ಅವನು ಮಾತಿನಲ್ಲಿ ಹಣವು ಮಾಯೆ ಎಂದು ಹೇಳಿ ಅದನ್ನು ಆಚೆ ತಳ್ಳಿಬಿಡುತ್ತಿದ್ದನಾದರೂ ಒಳಗೆ ಅದನ್ನು ಪ್ರಾಣಸಮಾನವೆಂದು ಭಾವಿಸುತ್ತಿದ್ದ. ಇಡೀ ಜಗತ್ತಿನಲ್ಲಿಯೇ ಹಣ ವನ್ನು ಯಾರಾದರೂ ಪೂಜಿಸುವವರೆಂದರೆ ಹಿಂದೂಗಳು ಮಾತ್ರ—ಇಂದಿಗೂ ಅದರಲ್ಲಿ ದೀಪಾವಳಿಯ ದಿನ ಪರಾತದ ಕೆಳಗೆ ಜ್ಯೋತಿಯೊಂದಿಗೆ ಹಾಲು-ನೀರಿನಲ್ಲಿ ತೊಳೆದ, ಕುಂಕುಮ ಹಚ್ಚಿದ ರೂಪಾಯಿ ಸಿಗುತ್ತದೆ. ದಸರೆಯ ದಿನ ಅವರ ವಾಹನಗಳ ಮೇಲೆ ಕೆಂಪು ಹೂಗಳ ಹಾರಗಳು ಇರುತ್ತವೆ. ಮತ್ತು ಹೆಣ್ಣು ಗಂಡು ಗಳೆಲ್ಲ ಕೂಡಿ ಲಕ್ಷ್ಮೀ ಮಂದಿರಕ್ಕೆ ಪೂಜೆಗಾಗಿ ಹೋಗುವರು. ಹಣಕ್ಕಾಗಿಯಂತು

ಅವರು ಯೂಸುಫ್‌ನಂಥ ತಮ್ಮನನ್ನು, ಪದ್ಮಿನಿಯಂಥ ಪತ್ನಿಯನ್ನು ಕೂಡ ಮಾರಲು ಸಿದ್ಧರಿರುತ್ತಾರೆ.

ಎದುರಿಗೆ ಇರುತ್ತಿದ್ದವನು ಸಿರಾಜಾ—ಎವ್ಹಜ್ ಬೀಡಿಗಳ ಏಜೆಂಟ್, ಅವನ ಅಂಗಡಿ ಅಶ್ವತ್ಥಕಟ್ಟೆಯ ಹಿಂದೆ ಸ್ವಲ್ಪ ಮರೆಯಾಗಿತ್ತು. ಕರ್ಮಠ... ಹಿಂದೂಗಳು ಮುಂಜಾನೆ ಬಂದು ಅದರಮೇಲೆ ನೀರಿನಲ್ಲಿ ಬೆರೆಸಿದ ಹಾಲಿನ ಲೋಟಾಗಳನ್ನು ಸುರುವಿ ಹೋಗುತ್ತಿದ್ದರು. ಅಂಗಡಿ ಮತ್ತು ರಸ್ತೆಯ ಮಧ್ಯದ ಸ್ಥಳವು ಕೆಸರಿನಿಂದ ತುಂಬಿರುತ್ತಿತ್ತು. ದೇಶ ವಿಭಜನೆಯ ನಂತರ ಹಿಂದೂಸ್ಥಾನದಲ್ಲಿ ಉಳಿದಿರುವ ಸಿರಾಜೂಸಿಗೆ ಕರ್ಮಠ ಹಿಂದೂಗಳ ಈ ಸಂಪ್ರದಾಯವನ್ನು ಅಳವಡಿಸಿಕೊಳ್ಳಲೇಬೇಕಾಗಿತ್ತು. ಇಲ್ಲದಿದ್ದರೆ ಅವನ ಗತಿ!...."ವೃಕ್ಷಗಳಲ್ಲಿ ಅಶ್ವತ್ಥ ಇರಬೇಕು" ಎಂದು ಭಗವಾನ್ ಹೇಳಿದ್ದ ಆ ಗಿಡದ ಬುಡಕ್ಕೆ ದಿನವೆಲ್ಲ ಕಾಲು ಎತ್ತಿ ಎತ್ತಿ ಉಚ್ಚೆ ಹೊಯ್ಯುವ ಆ ಬಿಡಾಡಿ ನಾಯಿಗಳು ಖಂಡಿತವಾಗಿ ಹಿಂದಿನ ಜನ್ಮದಲ್ಲಿ ಮುಸಲ್ಮಾನರಾಗಿರಲೇಬೇಕು — ಹತ್ತೊಂಬತ್ತು ನೂರಾ ನಲವತ್ತೇಳರ ಮತೀಯ ಗಲಭೆಗಳಲ್ಲಿ ಹಿಂದೂಗಳ ಕೈಯಲ್ಲಿ ಕೊಲ್ಲಲ್ಪಟ್ಟ ಮುಸಲ್ಮಾನರು.

ಸಿರಾಜ ಯಾವಾಗಲೂ ಅಶ್ವತ್ಥದ ಹಣ್ಣುಗಳನ್ನು ತಿನ್ನುತ್ತಿದ್ದುದು ಕಂಡು ಬರುತ್ತಿತ್ತು. ಅದಕ್ಕೆ ಕಾರಣ ವ್ಯಾಪಾರವು ಮಂದವಾಗಿರುವದಾಗಲಿ ಅಥವಾ ಹಸಿವಾಗಲಿ ಇರಲಿಲ್ಲ. ಸಿರಾಜಾ ತನ್ನ ವೀರ್ಯವನ್ನು ಕೆಡಿಸುವಂಥ ಪ್ರತಿ ವಸ್ತುವನ್ನು ತಿನ್ನುತ್ತಿದ್ದ. ಹಾಂ, ಅವನ ಕೆಲಸವೇ ಇದು—ತಿನ್ನುವುದು, ಕುಡಿಯುವುದು ಮತ್ತು ಭೋಗ ಮಾಡುವುದು. ಬೌದ್ಧಿಕ ಮಟ್ಟದಲ್ಲಿ ಅವರು ಏನೇ ಇದ್ದರೂ ಪ್ರವೃತ್ತಿಯಿಂದ ಮಾತ್ರ ಅಲೆಮಾರಿಗಳು. ಅವರು ಹಿಂದೂಸ್ಥಾನದಲ್ಲಿ ಇದ್ದರೆ ಪಾಕೀಸ್ಥಾನದ ವಿಷಯ ಮಾತನಾಡುವರು. ಮತ್ತು ಪಾಕಿಸ್ಥಾನದಲ್ಲಿ ಇದ್ದರೆ— "ಮೇರೆ ಮೌಲಾ ಬುಲಾಲೋ ಮದೀನೆ ಮುಝ್ಕು" (ನನ್ನ ಮೌಲಾ, ನನ್ನನ್ನು ಮದೀನೆಗೆ ಕರೆಯಿಸಿಕೊ) ಯಾವ ವಸ್ತುವಿನಲ್ಲಿಯೂ ಅವರಿಗೆ ಆಸಕ್ತಿ ಇಲ್ಲ. ಮಗನ್ ಟಕಲಾ ಈ ಬಗ್ಗೆ ಎಷ್ಟೋ ಸಲ ಯೋಚಿಸಿದ್ದ. ಅವರ ಅಲ್ಲಾ ಎಷ್ಟು ವಿಲಾಸಿ. ನಮ್ಮ ದೇವರೊಬ್ಬ—ಕೆಳಗಿನ ಬದಲು ಮೇಲೆ ತ್ರಿಕುಟಿಯ ಪರಿಸರದಲ್ಲಿ ವೀರ್ಯ ಸ್ಖಲನವು ಆಗುತ್ತಲಿರುತ್ತದೆ. ಬಹುಶಃ ಸಿರಾಜಾ ಸ್ವಇಚ್ಛೆಯಿಂದ ಒಬ್ಬ ತಾಂತ್ರಿಕನಾಗಿದ್ದ. ಅವರು ವೀರ್ಯ ರಕ್ಷಣೆಗಾಗಿ ಕುಂಡಲಿಯನ್ನು ಜಾಗ್ರತಗೊಳಿಸುತ್ತಲಿದ್ದರು ಮತ್ತು ಮುಕ್ತಿಯ ಮಾರ್ಗವನ್ನು ಮಾಡಿಕೊಳ್ಳುತ್ತಿದ್ದರು. ಅವರು ಸ್ತ್ರೀಲೋಲುಪರಾಗಿದ್ದರೂ ಕೂಡ ತಮ್ಮ ವೀರ್ಯವನ್ನು ಯಾವ ರೀತಿಯಿಂದಲೂ ಸ್ಖಲಿಸುತ್ತಿರಲಿಲ್ಲ. ಮುಕ್ತಿಯನ್ನು ಇಂಥ ಸ್ವಾರ್ಥಮಯ ಪದ್ಧತಿಗಳಿಂದ ಪಡೆಯುತ್ತಿದ್ದವರು, ಸ್ತ್ರೀಯನ್ನು ಕೇವಲ ಒಂದು ಸಾಧನವನ್ನಾಗಿ ಬಳಸಿಕೊಳ್ಳುವವರು, ಎಂದಾದರೂ ಆ ದಿನ ಅಬಲೆಯ ಪರಿಸ್ಥಿತಿಯು ಏನಾಗಿರಬಹುದು

ಎಂದು ಯೋಚಿಸಿರುವರೇ ? ಅವಳನ್ನು ಹಸಿದ, ನೀರಡಿಸಿದ, ಅಳುವ, ಬಳಲುವ ಸ್ಥಿತಿಯಿಲ್ಲಿಟ್ಟು ಯಾರು ಹೇಗೆ ಮೋಕ್ಷ ಸಾಧಿಸಲು ಶಕ್ಯ ? ಯಾವ ಪರಮಾತ್ಮ ನನ್ನು ಪಡೆಯಲು ಸಾಧ್ಯ ? ಮತ್ತು ವೀರ್ಯದಿಂದ ಬಿಡುಗಡೆ ಪಡೆಯುವದರಲ್ಲಿ ಇರುವ ಈ ಮೋಕ್ಷವು ಕೇವಲ ಪುರುಷನಿಗೆ ಮಾತ್ರ ಮೀಸಲು ! ಸ್ತ್ರೀಗೆ ?.... ಸ್ವಾತಿ ಬಿಂದುವೂ ಮುತ್ತಲ್ಲ; ಸಿಂಪಿಯೂ ಅಲ್ಲ. ಮುತ್ತು ಆಗುವುದು ಬಿಂದು ಬೀಳುವದರಲ್ಲಿ ಮತ್ತು ಸಿಂಪಿ ಅದನ್ನು ಒಳಗೆ ಧರಿಸಿಕೊಂಡು ಬಾಯಿ ಮುಚ್ಚಿಕೊಳ್ಳುವದರಲ್ಲಿ ಮಾತ್ರ ಇದೆ.

ರಾತ್ರಿಯು ತ್ವರೆಯಿಂದ ಬಂದಿತ್ತು. ಹೊರಗೆ ಕ್ಷಿತಿಜವು ಕತ್ತಲೆಯ ಜೊತೆ ಹೊಟ್ಟೆಹೊಸೆಯುತ್ತ ಇನ್ನಷ್ಟು ಸಮೀಪ ಬಂದಿತ್ತು. ರೇಷ್ಮಿಯ ಲಾಯಕಿರಾಮ, ಕಾಶ್ಮೀರಿ ಬುಡ್‌ಶಾಹ, ಅಷ್ಟೇಕೆ, ಉಡುಪಿಯ ಚಕ್ರಪಾಣಿಯ ಅಂಗಡಿಗಳು ಮುಚ್ಚಿದ್ದವು. ತಿಂಗಳಿನ ಎರಡನೆಯ ಶನಿವಾರವಿದ್ದುದರಿಂದ ಅವನ ಎಲ್ಲ ಇಡ್ಲಿ, ದೋಸೆ, ಸಾಂಬರ್, ಕೇಸರಿಭಾತ್‌ಗಳು ಮಾರಿ ಹೋಗಿರಬಹುದು. ಸಿರಾಜನ ಅಂಗಡಿ ಮಾತ್ರ ತೆರೆದಿದೆ. ಕಾರಣವೇನಿತ್ತೋ ಏನೋ ? ಬಹುಶಃ ಬೀಡಿಗಳ ಅವಶ್ಯಕತೆಯು ರಾತ್ರಿಯೇ ಇರುವದು ಕಾರಣವಾಗಿರಬಹುದು. ಆದರೆ ಆವನು ಮುಂಬೆಳಕಿನಲ್ಲಿ ಅಂಗಡಿ ತೆರೆಯುತ್ತಿದ್ದ. ಅದಿನ್ನೂ ರಾತ್ರಿಯ ಭಾಗವೇ, ಅದರ ಕೊನೆಯ ಭಾಗ. ಇಲ್ಲವಾದರೆ ಮುಂಜಾವು ಎಲ್ಲಿ ಯಾರದಾಗಿದೆ ? ಅದಂತೂ ಕಮ್ಯುನಿಷ್ಟರ ಮಾತಾಯಿತು. ಬಹುಶಃ ಸಿರಾಜ ಟೂರಿಸ್ಟ್ ಏಜೆಂಟ್ ಮಾಯ್ಕಲ್‌ನ ನಿರೀಕ್ಷೆಯಲ್ಲಿದ್ದ. ಯಾಕೆಂದರೆ, ಮರುದಿನ ಅವರಿಬ್ಬರೂ ಒಟ್ಟಿಗೆ ಖುಜರಾಹೋದ ಪ್ರೋಗ್ರಾಂ ಮಾಡಿಕೊಳ್ಳಬಹುದು ಮತ್ತು ಸ್ವಲ್ಪ ಹಣ ಸಂಪಾದಿಸಬಹುದು. ಇಲ್ಲ, ಸಿರಾಜ ಹಣದ ಹಿಂದೆ ಎಲ್ಲಿ ಹೋಗುತ್ತಿದ್ದ ? ಅವನು ಹೋಗುತ್ತಿದ್ದುದು ಆ ಪಶ್ಚಿಮ ದೇಶದ ಹೆಂಗಸರ ಬೆನ್ನು ಹಿಂದೆ. ಅವರು ಬಹು-ವಿವಾಹಗಳ ಕಾರಣದಿಂದ ಹಸಿದು, ನೀರಡಿಸಿ ಬರುತ್ತಿದ್ದರು. ಮತ್ತು ಇಲ್ಲಿಗೆ ಬಂದ ಮೇಲೆ ಮಮ್ತಾಜಳ ಪ್ರೇಮವನ್ನು ಇಲ್ಲಿಯ ಶಾಹಜಹಾನ್ ಸ್ವಭಾವದ ಯಾವುದಾದರೂ ಗಂಡಿನ ಮೇಲೆ ಒರೆಗೆ ಹಚ್ಚುತ್ತಿದ್ದರು; ಖುಜರಾಹೋದ ಮಿಥುನವನ್ನು ಜೀವಂತಗೊಳಿಸುತ್ತಿದ್ದರು.

ಆಗಲೇ ಸಿರಾಜನ ಧ್ವನಿ ಕೇಳಿ ಮಗನಲಾಲ ಬೆಚ್ಚಿಬಿದ್ದ.

" ಹೆಲ್ಲೋ, ಸ್ವೀಟ ಬಾಯ್ ? "

ಸಿರಾಜ ಬಹುಮಟ್ಟಿಗೆ ನಿರಕ್ಷರಿಯೇ ಇದ್ದ. ಆದರೆ ಟೂರಿಸ್ಟರ ಜೊತೆ ಇರುತ್ತಿದ್ದುದರಿಂದ ಇಂಗ್ಲೀಷ ಕಲಿತಿದ್ದ. ಅವನ ಧ್ವನಿಯಿಂದ ಮಗನ್ ಕೀರ್ತಿ ಬಂದಿರುವಳೆಂದು ತಿಳಿದುಕೊಂಡ.

ಅವಳು ನಿಜವಾಗಿಯೂ ಕೀರ್ತಿಯೇ ಆಗಿದ್ದಳು. ಗಿಡ್ಡ, ದಷ್ಟಪುಷ್ಟ ದೇಹದ, ಮತ್ತು ಒರಟು ಲಕ್ಷಣಗಳ ಒಂದು ಉದಾಸ ಹುಡುಗಿ. ಅವಳ ಬಣ್ಣವಂತು ಪಕ್ಕಾ

ಇತ್ತು. ಆದರ ಮೇಲೆ ನೀರಲ ಬಣ್ಣದ ಸೀರೆ ಬೇರೆ ಉಟ್ಟಿದ್ದಳು. ಅವಳು ಬಂದಳೆಂದರೆ ಕತ್ತಲೆಯ ಯಾವುದೋ ತುಣುಕು ಸಾಕಾರಗೊಂಡು ಎದುರು ಬಂದಿದೆ ಏನೋ ಎಂದೆನಿಸುತ್ತಿತ್ತು. ಅವಳು ಬರುತ್ತಿದ್ದುದು ಯಾವಾಗಲೂ ರಾತ್ರಿಯಲ್ಲಿಯೇ—ಅವಳಿಗೆ ತನ್ನನ್ನು ತಾನೇ ಮುಚ್ಚಿಟ್ಟುಕೊಳ್ಳುವುದು ಇದೆ ಎನ್ನುವಂತೆ. ಸಿರಾಜ ಆ ಅಂಗಡಿಯ ಎದುರು ನಿಂತಿದ್ದ. ಎಂದಿನಂತೆ ಕೀರ್ತಿ ಅವನತ್ತ ನೋಡದೇ, ಅವನ ಜೊತೆ ಮಾತನಾಡದೆ ಬಂದಿದ್ದಳು. ಹಾಗಿದ್ದರೂ ಕೂಡ ಅವನು ಸೀಟಿ ಹಾಕುತ್ತಲಿದ್ದ.

ಆದರೆ ಕೀರ್ತಿ ಎಲ್ಲಿ ಮಾತನಾಡುವವಳು? ಅವನ ಜೊತೆಯೂ ಇಲ್ಲ, ಯಾರ ಜೊತೆಗೂ ಇಲ್ಲ. ಅವಳೊಡನೆ ಮಾತನಾಡಬೇಕಾದರೆ ಪ್ರಶ್ನೆಗಳನ್ನು ಯಾವ ರೀತಿ ಹೊಂದಿಸಿಕೊಳ್ಳಬೇಕಾಗಿತ್ತು. ಅಂದರೆ ಅವುಗಳ ಉತ್ತರಗಳು ಕೇವಲ ಹೌದು ಅಥವಾ ಇಲ್ಲ ಎಂದಿಷ್ಟೇ ಇರಬೇಕು. ಕೇವಲ ಕೆಳಗೆ ಮೇಲೆ ಇಲ್ಲವೆ ಎಡಕ್ಕೆ ಬಲಕ್ಕೆ ತಲೆ ಅಲ್ಲಾಡಿಸುವುದರಿಂದ ಮಾತ್ರ ಮಾತು ಹೊರಡಬೇಕಿತ್ತು. ಸಿರಾಜ ಅವಳನ್ನು ಕೆಣಕುವುದು ಮಗನ್‌ಗೆ ಬಹಳ ಅಪ್ರಿಯವಾಗಿತ್ತು. ಅಲ್ಲದೆ ಅವನು ಅನೇಕ ಸಲ ಮಗನ್‌ಗೆ, "ಗೆಳೆಯ, ಎಲ್ಲಿಯಾದರೂ ನೀನು ಪ್ರೇಮದ ಚಕ್ರದಲ್ಲಿ ಬಿದ್ದಿರುವೆ ಏನು? ಪ್ರಾಯದ ಹುಡುಗಿ ಇದ್ದಾಳೆ. ಹಿಡಿದು ಎಳೆ. ಲಖ್ವಾ ಪಾರಿವಾಳದ ಹಾಗೆ, ನೀನು ಬಹಳಷ್ಟು ಅತ್ತ ಇತ್ತಲೇ ಇದ್ದರೆ ಅವಳು ಹಾರಿ ಹೋಗುವಳು" ಎಂದು ಹೇಳುತ್ತಿದ್ದ. ಆದರೆ ಮಗನ್ ಅವನನ್ನು ಗದ್ದರಿಸುತ್ತಿದ್ದ.

ವಾಸ್ತವದಲ್ಲಿ ಮಗನ್ ಟಕಲಿನ ಧಂದೆಯು ಪ್ರತಿ ಮಾತಿಗೂ ತಪ್ಪದೆ ಅಡ್ಡಿಯೊಡ್ಡುವದಾಗಿತ್ತು. ಕೀರ್ತಿ ಯಾವುದಾದರೂ ವುಡ್‌ವರ್ಕ್ (ಮರಗೆಲಸ) ಅಥವಾ ಶಿಲ್ಪವನ್ನು ತಯಾರಿಸಿ, ಮಾರುವ ಗರ್ಜಿನಿಂದ ಅವನಲ್ಲಿಗೆ ತಂದರೆ ಅವನು ಅದರಲ್ಲಿ ಏನಾದರೂ ಹುಳುಕು ತೆಗೆಯುತ್ತಿದ್ದ. ಈಗ ಇಂಥ ವಸ್ತುಗಳ ಬೇಡಿಕೆ ಇಲ್ಲವೆಂದು ಒಮ್ಮೆ ಹೇಳಿದರೆ, ಇನ್ನೊಮ್ಮೆ ಇದರಲ್ಲಿ ಕಲೆಯ ಸೊಬಗು ಮತ್ತು ಬಳಕುಗಳು ಪೂರ್ಣವಾಗಿ ಮೂಡಿಬಂದಿಲ್ಲವೆಂದು ಹೇಳುತ್ತಿದ್ದ. ಕೀರ್ತಿ ತನ್ನ ಮುಖವನ್ನು ಇನ್ನೂ ಕೆಳಕ್ಕೆ ಬಾಗಿಸುವಳು. ವಾಸ್ತವದಲ್ಲಿ ಇವೆಲ್ಲ ಮಾತುಗಳಲ್ಲಿ ಮಗನ್‌ನ ಉದ್ದೇಶವು ಒಂದೇ ಇರುತ್ತಿತ್ತು: ನೂರರ ಬೆಲೆಯ ವಸ್ತುವನ್ನು ಅವಳು ಐದು-ಹತ್ತರಲ್ಲಿ ಮಾರಿ ಹೋಗಲಿ, ಮತ್ತು ತಾನು ಅದನ್ನು ಸೀಜನ್ ಮಾಡಿ ನೂರಾರು ರೂಪಾಯಿಗೆ ಮಾರಬಹುದು.

ಕೀರ್ತಿ ಈ ಕೆಲಸವನ್ನು ಯಾವುದೇ ಆರ್ಟ ಸ್ಕೂಲಿನಲ್ಲಿ ಕಲಿತಿರಲಿಲ್ಲ. ಅವಳ ತಂದೆ ನಾರಾಯಣ ಒಬ್ಬ ಶಿಲ್ಪಿಯಾಗಿದ್ದ. ಅವನು ಭಾವದಾಜಿ ಮತ್ತು ಜೇಮ್ಸ ಬರ್ಗಸ್ ಮುಂತಾದವರ ಜೊತೆ ಸೇರಿ ನೇಪಾಲ ಮತ್ತು ಇತರ ಅನೇಕ ಕಡೆಗೆ ಹಿಂದೂಸ್ಥಾನದ ಪರಂಪರೆಯನ್ನು ಹುಡುಕುತ್ತ ಅಲೆಯುತ್ತಿದ್ದ. ಆದರೆ ವಾಸ್ತವದಲ್ಲಿ

ಅದು ಲಂಡನ್‌ದ ಮ್ಯುಜಿಯಂ, ನ್ಯೂಯಾರ್ಕ ಮತ್ತು ಶಿಕ್ಯಾಗೊಗಳ ಎಂಟಿಕ್ ಅಂಗಡಿಗಳಲ್ಲಿ ಕಾಲು ಮುರಿದುಕೊಂಡು ಬಿದ್ದಿರುತ್ತಿತ್ತು. ಪ್ರತಿ ವರ್ಷ ನಮ್ಮ ಮಂದಿರ ಮತ್ತು ದೇವಸ್ಥಾನಗಳಿಂದ ನೂರಾರು ಮೂರ್ತಿಗಳು ಮಾಯವಾಗುತ್ತಿದ್ದು ಅವು ಸಾವಿರಾರು ಮೈಲು ದೂರ ತಸ್ಕೋರಿಯಾ ಮುಂತಾದ ಅಂಗಡಿಗಳಲ್ಲಿ ಸ್ಥಾನ ಪಡೆಯುತ್ತಿವೆ. ನಾರಾಯಣನು ಸತತವಾದ ಪ್ರಯಾಣದಿಂದ ಬೇಸತ್ತು ಹಿಂದಿರುಗಿದ್ದನು. ಮತ್ತು ಮನೆಯಲ್ಲಿಯೇ ಶಿಲ್ಪ ತಯಾರಿಸಲಾರಂಭಿಸಿದ್ದ. ಕೀರ್ತಿ ಅವುಗಳನ್ನ ಬಹಳ ತಲ್ಲೀನತೆಯಿಂದ ನೋಡುತ್ತಿದ್ದಳು. ಉಪಕರಣಗಳನ್ನು ಹಿಡಿಯುವದರಲ್ಲಿ ಮತ್ತು ರಫ್ ಕೆಲಸ ಮಾಡುವದರಲ್ಲಿ ತಂದೆಗೆ ಸಹಾಯ ಮಾಡುತ್ತಿದ್ದಳು. ಹೀಗೆ ಮನೆಯಲ್ಲಿ ಕುಳಿತಿದ್ದರಿಂದ ನಾರಾಯಣನಿಗೆ ಲಭ್ಯ ಅವಶೇಷಗಳಿಗಿಂತ ಕಳೆದುಹೋದವುಗಳಿಗೆ ಅಧಿಕ ಬೆಲೆ ಇದ್ದು, ಎರಡಲ್ಲ, ನಾಲ್ಕಲ್ಲ, ನೂರು ಪಟ್ಟು ಬೆಲೆ ದೊರೆಯುವುದು ಎಂಬ ವಿಷಯವು ಮರೆತೇಹೋಯಿತು. ಹಣದ ಅವಶ್ಯಕತೆಯನ್ನು ಅರ್ಥ ಮಾಡಿಕೊಂಡಿದ್ದರೂ ಕೂಡ ಜೀವನವನ್ನು ವಿಶಾಲವಾಗಿ ನೋಡದ ಹಲವರಲ್ಲಿ ನಾರಾಯಣನೊಬ್ಬನಾಗಿದ್ದ. ಅವನು ಶಿಲ್ಪವನ್ನು ಮಾಡುತ್ತಿದ್ದ. ಆದರೆ ಕಷ್ಟದಿಂದ ಅನ್ನ ಗಳಿಸುತ್ತಿದ್ದ. ಕೊನೆಗೊಂದು ದಿನ ಎರಡು ರೊಟ್ಟಿಗಳ ಮಧ್ಯದಲ್ಲಿಯೇ ಅವನಿಗೆ ಸಾವು ಬಂದಿತು. ಅವನು ಜಗದಂಬೆಯ ಮೂರ್ತಿಯನ್ನು ಕಟೆಯುತ್ತಿದ್ದ. ತನ್ನ ಉಳಿಯೇ ತನ್ನ ಕೈಗೆ ತಾಕಿದ್ದರಿಂದ ಟಿಟಿನಸ್ ಆಯಿತು. ಸಮೀಪದ ದಂಡು (ಕಂಟೋನಮೆಂಟ್) ಆಸ್ಪತ್ರೆಯಲ್ಲಿ ಸತ್ತ. ಅವನು ನಾಯಿ ಸಾವು ಸತ್ತನಂತೆ! ಅಂಥ ಸಾವು ಅವನಿಗೇಕೆ ಬರಬಾರದಿತ್ತು? ಅವನು ದೇವಿಯ ಮೂರ್ತಿ ಮಾಡುತ್ತಿದ್ದ. ದಿನಗಟ್ಟಲೆ, ತಿಂಗಳುಗಟ್ಟಲೆ ಅದರ ಮೊಲೆ, ಅದರ ನಿತಂಬ ಮತ್ತು ತೊಡೆಗಳ ಮೇಲೆ ನಿಂತಿರುತ್ತಿದ್ದ. ಸಣ್ಣ ಶಿಲ್ಪಗಳಲ್ಲಂತು ಮೊಲೆಗಳು ಬಯಲಿನಲ್ಲಿ ತಿರುಗುವ ಬಗರಿಗಳಂತೆ ತೋರುತ್ತಿದ್ದವು. ಆದರೆ ದೊಡ್ಡ ಶಿಲ್ಪಗಳಲ್ಲಿ, ಕಾಲುಗಳು ಮತ್ತು ಟಾರ್ಸೊ (ಮುಂಡ) ಸೇರಿ ರೂಪ ಕೊಟ್ಟ ಒಂದು ಬಗೆಯ ಗಡಗಂಚಿಯ ಮೇಲೆ ಹಾಲಿನ ದೊಡ್ಡ ಕೊಡಗಳನ್ನಿಟ್ಟಂತೆ ಅವು ಕಾಣುತ್ತಿದ್ದವು. ನಿತಂಬಗಳು ಆನೆಯ ಮುಖದ ಹಾಗೆ ಇದ್ದು ಕೆಳಗೆ ಒಂದರ ಬದಲು ಎರಡು ಸೊಂಡೆಗಳು ಹೊರಟ ಹಾಗೆ ಕಾಣಿಸುತ್ತಿದ್ದವು. ಅವನು ದುರ್ಗಾಳಂಥ ಉಗ್ರ ದೇವಿಯ ಮೂರ್ತಿ ಕೂಡ ಮಾಡಿದ್ದ. ಇಂಥ ದೇವಿಯರ ದೇಹವನ್ನು ಮಾಡುತ್ತಲಿದ್ದ ನಾರಾಯಣನಿಗೆ ನಾಯಿ ಸಾವು ಬರದೆ ನಮ್ಮ ನಿಮ್ಮಂಥ ಸಾವು ಬಂದೀತೆ?

"ಏನು ತಂದಿರುವಿ?" —ಮಗನ್ ಟಕಲಾ ಕೀರ್ತಿಯನ್ನು ಕೇಳಿದ.

ಕೀರ್ತಿ ತನ್ನ ಸೀರೆಯ ಸೆರಗಿನಿಂದ ವುಡ್‌ವರ್ಕ ಹೊರತೆಗೆದು ಅದನ್ನು ಮಗನ್‌ನ ಎದುರಿನ ರೋಲ್ ಟಾಪ್ ಮೇಜಿನ ಮೇಲೆ ಇಟ್ಟಳು. ಅಲ್ಲಿ ಮೇಲಿನ ದೀಪದ ಬೆಳಕು ಸಾಂದ್ರಗೊಂಡಿತ್ತು. ಅದನ್ನು ನೋಡುವ ಮೊದಲು ಮಗನ್ ಒಂದು

ಜೀರ್ಣವಾದ ಕುರ್ಚಿಯನ್ನು ಕೀರ್ತಿಯ ಎದುರು ಸರಿಸಿದ. ಆದರೆ ಅವಳು ಎಂದಿನಂತೆ ನಿಂತೇ ಇದ್ದಳು.

"ನಿನ್ನ ತಾಯಿ ಹೇಗಿದ್ದಾಳೆ?"

ಕೀರ್ತಿ ಏನೂ ಉತ್ತರಿಸಲಿಲ್ಲ. ಒಂದು ಸಲ ಹಿಂದಕ್ಕೆ—ರಸ್ತೆ ಕೆಳಗೆ ಇಳಿಯುವಲ್ಲಿ—ನೋಡಿದಳು. ಮುಗನ್‌ನ ಕಡೆ ಮುಖ ತಿರುಗಿಸಿದಾಗ ಅವಳ ಕಣ್ಣು ತೇವಗೊಂಡಿದ್ದವು.

ಕೀರ್ತಿಯ ತಾಯಿ ಅವಳ ತಂದೆ ಸತ್ತ ಅದೇ 'ದಂಡು' ಆಸ್ಪತ್ರೆಯಲ್ಲಿ ಬಿದ್ದುಕೊಂಡಿದ್ದಳು. ಮುದುಕಿಗೆ ಗುದನಾಳದ ಕ್ಯಾನ್ಸರ್ ಆಗಿತ್ತು. ಅವಳ ಹೊಟ್ಟೆಯಲ್ಲಿ ಒಂದು ಛಿದ್ರ ಮಾಡಿ ಅದಕ್ಕೆ ಒಂದು ನಳಿಕೆಯನ್ನು ಜೋಡಿಸಿ ಒಂದು ಬಾಟ್ಲಿಯನ್ನು ಕಟ್ಟಲಾಗಿತ್ತು. ಮಲ-ಮೂತ್ರಗಳು ಆ ಬಾಟ್ಲಿಯಲ್ಲಿ ಹೋಗುವಂತೆ ಮಾಡಲಾಗಿತ್ತು. ಮೊದಲಿನ ಬಾಟ್ಲಿ ಯಾವುದೋ ಕಾರಣದಿಂದ ಕೆಟ್ಟಿತ್ತು. ಇನ್ನೊಂದಕ್ಕೆ ಹಣ ಬೇಕಿತ್ತು, ಬಹುಶಃ ಮುಗನ್‌ಗೆ ಇದನ್ನು ಹೇಳಿದ್ದರೆ, ಅವನು ಬೇರೆ ರೀತಿಯಲ್ಲಿ ಮಾತನಾಡುತ್ತಿದ್ದನೇನೋ! ಆದರೆ ವುಡ್‌ವರ್ಕ ನೋಡಿ ಅವನು ಒಮ್ಮೆಲೆ ಉರಿವೆದ್ದು,

"ಮತ್ತೆ ಅದೇ. ನಾನು ನಿನಗೆ ಎಷ್ಟು ಸಲ ಹೇಳಿಲ್ಲ. ಇತ್ತೀಚೆಗೆ ಇಂಥ ವಸ್ತುಗಳನ್ನು ಯಾರೂ ಕೇಳುವದಿಲ್ಲ....ಈ ಮಲಗಿದ ವಿಷ್ಣು, ಮೇಲೆ ಶೇಷನಾಗ, ಲಕ್ಷ್ಮಿ ಕಾಲು ಒತ್ತುತ್ತಿರುವಳು" ಅಂದನು.

ಕೀರ್ತಿ ತನ್ನ ದೊಡ್ಡ ದೊಡ್ಡ ಕಣ್ಣುಗಳಿಂದ ಮುಗನ್‌ನತ್ತ ನೋಡಿದಳು. ಅವುಗಳಲ್ಲಿ, "ಮತ್ತೆ ಏನನ್ನು ಮಾಡಲಿ?" ಎಂಬ ಪ್ರಶ್ನೆ ಇತ್ತು

"ಅದೆ, ಇತ್ತೀಚೆಗೆ ಬೇಕಾದಂಥವು."

"ಇತ್ತೀಚೆಗೆ....ಎಂಥವು ಬೇಕಾಗುತ್ತವೆ?" ಕೀರ್ತಿ ಕೊನೆಗೆ ಬಾಯಿ ಬಿಟ್ಟಳು ಪ್ರಯಾಸದಿಂದ. ಅವಳ ಧ್ವನಿಯು ಕೇಳಿಸಿತು—ಕನೇರಿ (canary) ಹಕ್ಕಿಯ ಚುಂಚು ಅಲುಗಾಡುವದು ಕಂಡರೂ ಧ್ವನಿಯು ಕೇಳಿಸದಹಾಗೆ.

ಮುಗನ್ ತುಸು ತಡೆದು ಒಳಿಕ ಯಾವುದೋ ದಾರಿ ಕಂಡವನಂತೆ, "ಇನ್ನೇನೂ ಮಾಡಲಾಗದಿದ್ದರೂ ಗಾಂಧಿಯನ್ನೇ ಮಾಡು, ನೆಹರೂನನ್ನೇ ಮಾಡು" ಎಂದ. ನಂತರ ಏನೋ ತಪ್ಪು ಆದಂತೆ ಅನಿಸಿ ಅದನ್ನು ತಿದ್ದಿಕೊಳ್ಳುತ್ತ, "ಯಾವುದಾದರೂ ನ್ಯೂಡ್—" ಎಂದನು.

"ನ್ಯೂಡ್?"

"ಹಾಂ! ಇತ್ತೀಚೆಗೆ ಜನರು ನ್ಯೂಡ್ ಮೆಚ್ಚುತ್ತಾರೆ."

ಕೀರ್ತಿ ಸುಮ್ಮನಾದಳು. ತಾನು ಕುಮಾರಿ ಇದ್ದುದರಿಂದ ಅವಳು ನಾಚಬಹುದಾಗಿತ್ತು, ಲಜ್ಜೆಪಡಬಹುದಾಗಿತ್ತು. ಆದರೆ ಈ ಎಲ್ಲ ವಿಷಯಗಳು ಈ ಹುಡುಗಿಗೆ ಲಕ್ಸೂರಿ (luxury) ಆಗಿದ್ದವು. ಅವಳಿಗೆ ಇದ್ದ ಒಂದೇ ಒಂದು ಚಿಂತೆಯೆಂದರೆ

ಮಗನ್ ವುಡ್‌ವರ್ಕನ್ನು ಕೊಂಡು ಹಣ ಕೊಡುವನೊ ಇಲ್ಲವೊ ಎಂಬುದಾಗಿತ್ತು. ಏನನ್ನೊ ಯೋಚಿಸುತ್ತ, ತಡೆಯುತ್ತ ಅವಳು, "ಅದು ನನಗೆ ಬರುವದಿಲ್ಲ" ಎಂದಳು.

"ಏನು ಹೇಳುತ್ತಿರುವಿ ? ನಿನ್ನ ತಂದೆ ಎಷ್ಟೊಂದು ಮಾಡಿದ್ದನಲ್ಲ ?"

"ಅವು....ಅಂತೂ....ದೇವಿ ಅಮ್ಮನವು."

"ಅಂತರವೇನದೆ? ದೇವಿಯೂ ಕೂಡ ಹೆಣ್ಣು. ನೀನು ಅದನ್ನೇ ಮಾಡು. ಆದರೆ ದಮ್ಮಯ್ಯ, ದೇವರ ಸಲುವಾಗಿ ಅದರ ಜೊತೆ ಯಾವುದಾದರೂ ದಂತಕತೆಯನ್ನು ಜೋಡಿಸಬೇಡ. ಈ ಬಗೆಯ ಚೇಷ್ಟೆಯಿಂದಲೇ ನಿನ್ನ ತಂದೆ ಇಂಥ ಸಾವು ಸ....ಸ್ವರ್ಗವಾಸವಾದ."

ಕೀರ್ತಿ ತನ್ನ ಜೀವನದ ಹಿತ್ತಲಲ್ಲಿ ಇಣುಕಿಟ್ಟಳು. ಈಗ ಅವಳಿಗೆ ನಿಂತಿರಲು ಸಾಧ್ಯವಿರಲಿಲ್ಲವೇನೋ. ಬೇರೆ ಯಾರಿಗೂ ತಿಳಿಯದೆ ಅವಳಿಗೆ ಮಾತ್ರ ಗೊತ್ತಿದೆ ಎನ್ನುವಂಥ ಎಂಥದೋ ಭೀತಿಯಿಂದ ಅವಳ ಶರೀರವು ಕಂಪಿಸುತ್ತಿತ್ತು. ಆದರೂ ಅವಳು ಆ ಜೀರ್ಣ ಕುರ್ಚಿಯ ಮೇಲೆ ಕೂಡ್ರಲಿಲ್ಲ. ಅದರ ಆಸರೆ ಪಡೆದು ನಿಂತುಕೊಂಡಳು. ಆ ಕಡೆಯಿಂದ ಅವಳ ದೇಹದ ಚೆಲುವಾದ ಆದರೆ ಆಕ್ರಮಣ ಮಾಡಲು ಸಿದ್ಧರಾಗಿದ್ದ ಏರಿಳಿವುಗಳು ಕಾಣಿಸುತ್ತಿದ್ದವು. ಎಂಥ ಶಿಲ್ಪವದು? ಅದರ ಮೇಲಿನ ಭಾಗವನ್ನಲ್ಲ, ಕೆಳಗಿನ ಭಾಗವನ್ನು ನಾರಾಯಣ ಮಾಡಿದ ಹಾಗೆ ಇತ್ತು. ಮಗನಲಾಲನ ಮಸ್ತಿಷ್ಕದಲ್ಲಿ ಸಂಯಮ ಮತ್ತು ವಿವಶತೆಗಳು ಪರಸ್ಪರ ಪರಾಕ್ರಮ ತೋರಿಸುತ್ತಿದ್ದವು. ತನ್ನ ಎದುರು ಕಡೆಯ ಹುಡುಗಿಯಲ್ಲಿಯೂ ಅದೇ ಸಂಯಮ ಮತ್ತು ವಿವಶತೆಗಳ ಪರಸ್ಪರ ತಾಕಲಾಟ ನಡೆದಿದೆ ಎಂಬುದು ಅವನಿಗೆ ತಿಳಿದಿರಲಿಲ್ಲ. ಅವಳ ಬಾಯಿ ಒಣಗಿತ್ತು. ಯಾವುದೋ ಒಂದು ಗುಟುಕು ನುಂಗುವ ಪ್ರಯತ್ನದಲ್ಲಿ ಅವಳು,

"ನಾನು...ನನ್ನ ಬಳಿ ಮಾಡೆಲ್ ಇಲ್ಲ" ಅಂದಳು.

"ಮಾಡೆಲ್ ?" ಮಗನ್ ಅವಳ ಸಮೀಪಕ್ಕೆ ಬರುತ್ತ ಅಂದನು,—"ನೂರಾರು ಸಿಗುತ್ತವೆ. ಈಗಂತೂ ಯಾರಾದರೂ ಹರೆಯದ ಸುಂದರ ಹುಡುಗಿಗೆ ಹಣದ ಆಸೆ ತೋರಿಸಿದರಾಯ್ತು. ಅವಳು ಒಮ್ಮೆಲೆ...."

ಕೀರ್ತಿ ಏನೂ ಮಾತಾಡಲಿಲ್ಲ. ಆದರೆ ಮಗನ್‌ಗೆ ಸರಿಯಾಗಿ ಕೇಳಿಬಂತು— "ಹಣ ?" ಅವನು ತಾನೇ ಹೇಳತೊಡಗಿದ—"ಮನುಷ್ಯ ಹಣ ಖರ್ಚು ಮಾಡಿದರೆ ತಾನೆ ಹಣ ಮಾಡಬಲ್ಲ."

ಈ ಮಾತು ಕೀರ್ತಿಯನ್ನು ಇನ್ನೂ ದುಃಖಿತಳನ್ನಾಗಿ ಮಾಡಿತು. ಅವಳ ಆತ್ಮವು ಜೀವನದ ಆ ದೌರ್ಜನ್ಯದ ತುಳಿತಕ್ಕೆ ಸಿಕ್ಕು ಧಡಪಡಿಸುತ್ತಿತ್ತು. ನಂತರ ಅವಳ ಕಣ್ಣುಗಳಲ್ಲಿ ನೀರೂರತೊಡಗಿತು.

ಪ್ರತಿ ಗಂಡಿನಲ್ಲಿಯೂ ತಂದೆ ಮತ್ತು ಗಂಡನನ್ನು ಜಾಗ್ರತಗೊಳಿಸುವದೇ ಹೆಣ್ಣಿನ

ಜಗತ್ತಾಗಿದೆ. ಆ ಪರಿಯಿಂದ ಮಗನ್ ಕೈಚಾಚಿದ್ದ—ಅವಳನ್ನು ತನ್ನ ತೋಳು ಗಳಲ್ಲಿ ತುಂಬಿಕೊಂಡು ಎದೆಗೆ ಅಪ್ಪಿ, "ನನ್ನ ಹೃದಯವೆ, ಚಿಂತಿಸಬೇಡ,....ನಾನಿರು ವೆನಲ್ಲ" ಎಂದು ಹೇಳಲು; ಆದರೆ ಕೀರ್ತಿ ಅದನ್ನು ಕೊಡಹಿದಳು. ಮದನ್ ನಿಸ್ತೇಜಗೊಂಡ. ಆದರೆ ಏನೂ ಆಗಿಲ್ಲವೇನೊ ಎನ್ನುವಂತೆ ಅವನು ತೋರಿಸಿದ. ದಾಳ ಅವನ ಕೈಯಲ್ಲಿಯೇ ಇತ್ತು. ರೋಲ್ ಟಾಪ್ ಮೇಲಿಂದ ಅವನು ವುಡ್ ವರ್ಕ್‌ನ್ನು ಅದನ್ನು ಕೀರ್ತಿಯತ್ತ ಚಾಚುತ್ತ, "ನನಗೆ ಇದರ ಅವಶ್ಯಕತೆ ಇಲ್ಲ" ಎಂದನು.

ಅಲ್ಲಿಯವರೆಗೆ ಕೀರ್ತಿ ಏನೋ ಸ್ವಲ್ಪ ವಿಚಾರಿಸಿದ್ದಳು. ಅವಳು ಮೊದಲು ಮುಖ ಕೆಳಗೆ ಮಾಡಿದಳು. ಬಳಿಕ ತಟ್ಟನೆ ತಲೆ ಮೇಲೆತ್ತಿ, "ಮುಂದಿನ ಸಲ ನ್ಯೂಡನ್ನೇ ತರುವೆ. ಈಗ ನೀನು ಇದನ್ನೇ ತೆಗೆದುಕೊ" ಎಂದಳು.

"ಖಂಡಿತವಾಗಿಯೂ?"—ಮಗನ್ ಮುಗುಳುನಗುತ್ತ ಕೇಳಿದ.

ಕೀರ್ತಿ ತಲೆಯಲ್ಲಾಡಿಸಿದಳು. ಕೀರ್ತಿ ನಕ್ಕುಬಿಡುವಳೆಂದು ಮಗನ ಟಕಲಾ ಯೋಚಿಸಿದ್ದ. ಆದರೆ ಅವಳು ಇನ್ನಷ್ಟು ಗಂಭೀರವಾದಳು. ಅವನು ರೋಲ್ ಟಾಪ್ ಎತ್ತಿದ. ಮೇಜ ಒಳಗಿನಿಂದ ಹತ್ತು ರೂಪಾಯಿಯ ಒಂದು ಮುದುಡೆ ಗೊಂಡ ನೋಟನ್ನು ಹೊರದೆಗೆದು ಅದನ್ನು ಕೀರ್ತಿಯತ್ತ ಚಾಚಿದ, "ತೆಗೆದುಕೊ."

"ಹತ್ತು ರೂಪಾಯಿ?"—ಕೀರ್ತಿ ಕೇಳಿದಳು.

"ಹಾಂ. ನಿನಗೆ ಹೇಳಲಿಲ್ಲವೆ, ನನಗೆ ಇವೆಲ್ಲ ನಿರರ್ಥಕವೆಂದು. ನಾನು ಇದಕ್ಕೂ ಹೆಚ್ಚು ಕೊಡಲಾರೆ."

"ಇದರಿಂದಂತೂ—" ಕೀರ್ತಿ ವಾಕ್ಯವನ್ನೂ ಪೂರ್ತಿಗೊಳಿಸಲಿಲ್ಲ. ಅವಳಲ್ಲಿ ಬಹುಶಃ ಶಬ್ದಗಳನ್ನು ಅರುಹುವ ಶಕ್ತಿ ಕುಂದಿತ್ತು—ದಣಿದಿತ್ತು. ಆದರೆ ಅರ್ಥವು ಸ್ಪಷ್ಟವಿತ್ತು. "ಇದರಿಂದಂತೂ ಬಾಟ್ಲಿ ಬರುವದಿಲ್ಲ", "ಔಷಧಿಯ ಖರ್ಚು ಪೂರ್ತಿಯಾಗಿ ಹೊಂದುವದಿಲ್ಲ", "ಅಡಿಗೆ ಆಗುವದಿಲ್ಲ"—ಈ ಬಗೆಯ ವಾಕ್ಯಗಳಿರ ಬಹುದೆಂದು ಮಗನ್ ತಿಳಿದುಕೊಂಡ. ಎಲ್ಲ ನಿಸ್ಸಹಾಯಕ ಮತ್ತು ಅನಾಥ ಜನರು ಕಕ್ಕಿಕೊಳ್ಳುವ ಮಾತುಗಳಿವು. ಅವನು ಕೀರ್ತಿಯತ್ತ ನೋಡುತ್ತ, "ಅದನ್ನು ತಂದುಕೊಡು ಸಾಕು. ನಾನು ನಿನಗೆ ಚೆನ್ನಾದ ಹಣ ಕೊಡುವೆ" ಎಂದ.

ಅವನು ಹೀಗೆ ಹೇಳುವಾಗ, ತನ್ನ ಎರಡು ಕೈಬೆರಳುಗಳಿಂದ ಉಂಗುರ ಮಾಡಿ ಸ್ವಲ್ಪ ಕಣ್ಣು ಹೊಡೆದನು—ವಾದ್ಯಗಾರ ಮತ್ತು ಪರಿಚಾರಕರು ನಾಯಕೆಯತ್ತ ಮೆಚ್ಚಿಕೆ ಸೂಚಿಸುತ್ತ ಕಣ್ಣು ಹೊಡೆಯುವ ಹಾಗೆ.

ಕೀರ್ತಿ ಹೊರಹೊರಟಾಗ ತುಟಿ ಕಚ್ಚಿದ್ದಳು; ಸ್ವಲ್ಪ ತೇಕುತ್ತಿದ್ದಳು. ಹಿಂದಿರುಗು ವಾಗ ಕೀರ್ತಿ ಯಾವಾಗಲೂ ವಿರುದ್ಧ ದಿಕ್ಕಿನಲ್ಲಿ ಹೋಗುತ್ತಿದ್ದಳು. ಇದರಿಂದ ಅವಳಿಗೆ ಮೈಲು ಒಂದೂವರೆ ಮೈಲು ಸುತ್ತ ಆಗುತ್ತಿತ್ತು. ಸಿರಾಜನ ಜೊತೆ

ಮುಖಾಮುಖಿ ಆಗುವುದು ಅವಳಿಗೆ ಇಷ್ಟವಿರಲಿಲ್ಲ. ಆದರೆ ಇಂದು ಅವಳು ಈ ದಿಕ್ಕಿನಲ್ಲಿ ಹೊರಟಳು. ಅವಳಲ್ಲಿ ಯಾವುದೋ ರಕ್ಷಣಾ ಬಲವು ಹೊರಹೊಮ್ಮಿತ್ತು. ಮೈಕಲ್ ಆದಾಗಲೇ ಬಂದಿದ್ದ ಮತ್ತು ಸಿರಾಜನ ಜೊತೆ ಏನೋ ತಿನ್ನುತ್ತಿದ್ದ. ಕೀರ್ತಿ ಮುಖವನ್ನು ಮೇಲೆತ್ತಿ ಮೂಗು ಹಿಗ್ಗಿಸಿಕೊಂಡು ಅವರ ಸಮೀಪದಿಂದ ಹೋಗುವಾಗ ಸಿರಾಜ ಏನೋ ಅಂದನು. ಮಗನ್‌ಗೆ ಅದು ಕೇಳಿಸಲಿಲ್ಲ. ಕೀರ್ತಿ ವಿದ್ರೋಹಗೊಂಡ ಚೇತನೆಯಾಗಿದ್ದಳೊ ಅಥವಾ ವೈರಿಗಳ ಜೊತೆಯೂ ತಮಗೆ ಕೆಲಸ ಬೀಳಬಹುದೇನೋ ಎನ್ನುವಹಾಗೆ ಅವರೊಂದಿಗೆ ಹೊಂದಿಕೊಂಡು ಹೋಗುವದನ್ನು ಯೋಚಿಸುವ ಆ ತೊಂದರೆಗೀಡಾದ ಜನರಲ್ಲಿ ಒಬ್ಬಳೊ, ಏನೋ! ಅಥವಾ ಇದು ಬಹುಶಃ ಹೆಣ್ಣಿನ ಜಾಣ್ಮೆಯ ವಿಶೇಷತೆ ಇದೆ ಏನೋ. ಅದಕ್ಕಾಗಿಯೆ ಇರಬೇಕು, ತನ್ನನ್ನು ನೋಡಿ ಅವನು ಒಮ್ಮೆ ಸೀಟಿ ಬಾರಿಸಿದ್ದನೆಂದೊ ಇಲ್ಲವೆ ತನ್ನ ಎದೆಯ ಮೇಲೆ ಕೈ ಇಟ್ಟುಕೊಂಡು ಶೀತಲ ನಿಟ್ಟುಸಿರು ಬಿಟ್ಟಿದ್ದನೆಂದೊ, ತನ್ನ ಜೊತೆ ಯಾವ ಸಂಬಂಧವೂ ಇಲ್ಲದ ಗಂಡಸನ್ನು ಹೆಣ್ಣು ತನ್ನ ಬೆನ್ನುಹಚ್ಚಿ ಕೊಳ್ಳುವುದು.

ಸಿರಾಜ ಖಂಡಿತವಾಗಿಯೂ ಯಾವುದೊ "ಎಫ್ರೊಡಿಜಿಯಾಕ್" (ಕಾಮೋದ್ದೀಪಕ) ತಿನ್ನುತ್ತಲಿದ್ದ. ಬಹುಶಃ ಮೈಕಲ್ ಅವನಿಗೋಸ್ಕರ ತಂಪ 'ಪಾಯ' ಇದ್ದಿರಬಹುದು. ಅವರಿಬ್ಬರೂ ಸೇರಿ ಮಗನ್ ಟಕಲಾನ ಅಂಗಡಿಗೆ ಬಂದು ಅವನನ್ನು ಎಷ್ಟು ಪೇಚು ಇಕ್ಕಟ್ಟುಗಳಲ್ಲಿ ಸಿಗಿಸುತ್ತಿದ್ದರೇನೋ. ಆದರೆ ಮಗನ್ ಆದಾಗಲೆ ಅಂಗಡಿ ಮುಚ್ಚಿದ್ದ. ಒಳಗಿನಿಂದ ಬಾಗಿಲು ಹಾಕಿಕೊಂಡು ಅವನು ಕೀರ್ತಿಯ ವುಡ್‌ವರ್ಕ್ ನೋಡಿದ. ಅದು ಬಹಳ ಚೆನ್ನಾಗಿತ್ತು. ಶೇಷನಾಗದ ಕೆಳಭಾಗವು ಸುಂದರವಾಗಿ ಇದ್ದೇ ಇತ್ತು. ಆದರೆ ಮೇಲ್ಭಾಗದ ಅದರ ಚಿಕ್ಕಚಿಕ್ಕೆಯ ಚರ್ಮದಲ್ಲ ಅವಳು ಕೇವಲ ಹಚ್ಚೆಯ ಸೂಜಿಯಿಂದ ಬಣ್ಣ ತುಂಬಿದ್ದಳು. ಶ್ರದ್ಧಾಳು ಹೆಣ್ಣು ಗಂಡಿನಲ್ಲಿ ಕಾಣಲಿಚ್ಛಿಸುವದೆಲ್ಲವೂ ವಿಷ್ಣುವಿನಲ್ಲಿತ್ತು. ಆದರೆ ಲಕ್ಷ್ಮಿ ಗುಡ್ಡೆಯಂತೆ ಬಿದ್ದಿದ್ದಳು. ಅವಳ ದೇಹದ ಏರಿಳಿವುಗಳು ಸ್ಪಷ್ಟವಿರಲಿಲ್ಲ. ಬಹುಶಃ ಕೀರ್ತಿ ಲಕ್ಷ್ಮಿಯನ್ನು ಅವಳ ಯಾವದೇ ರೂಪದಲ್ಲಿ ನೋಡಿರಲಿಲ್ಲವೇನೋ. ವಾಸ್ತವದಲ್ಲಿ ಅವಳನ್ನು ರೋಚಕ ಮಾಡುವದು ಎಷ್ಟು ಸುಲಭವಾಗಿತ್ತು. ಕಾಲು ಒತ್ತಲು ಹೆಣ್ಣು ಬಗ್ಗಿದಾಗ ಅವಳ ಎರಡೂ ಕೈಗಳು ತೋಳಬಂದಿಯಿಂದ ಬೇರೆಯಾಗುತ್ತವೆ ಎಂಬುದು ಸ್ಪಷ್ಟವಾಗಿದೆ. ಮತ್ತು ಹೆಣ್ಣಿನ ಸಮೃದ್ಧಿಯು ನಿಚ್ಚಳವಾಗಿ ಎದುರಿಗೆ ಕಾಣಿಸುತ್ತದೆ. ಮಗ್ಗಲು ಕುಳಿತ ಮೇಲಿನ ಹೆಣ್ಣು ಕೆಳಗಿನ ಹೆಣ್ಣಿನಿಂದ ಎಷ್ಟು ನಾಚಿದಂತಿತ್ತು ಮತ್ತು ಗಂಡಿನ ಕಣ್ಣುಗಳಿಗೆ ಯಾವಯಾವದು ಉಚ್ಚ-ನೀಚವೆಂಬುದನ್ನು ತಿಳಿಸುವ ಹಾಗೆ ಇತ್ತು. ಕೀರ್ತಿ ಹೆಣ್ಣು ಇದ್ದುದರಿಂದ ಅವಳಿಗೆ ಹೆಣ್ಣಿಗಿಂತ ಗಂಡಿನಲ್ಲಿ ಅಧಿಕ ಆಸಕ್ತಿ ಇತ್ತು ಎಂಬುದು ತಪ್ಪು ವಿಚಾರ. ಯಾಕೆಂದರೆ, ತನ್ನ ಸೌಂದರ್ಯದ ವಿಷಯದಲ್ಲಿ ಹೆಣ್ಣು

ಆದಿಯಿಂದ ಅಂತ್ಯದವರೆಗೂ ಸ್ವಯಂಪೂಜಿತಳು. ಅವಳ ಈ ಸ್ವಯಂಪೂಜೆಯು ಅವಳ ಸಹನೆಯನ್ನು ಮೀರಿದಾಗ ಯಾವುದಾದರೂ ಗಂಡಿನ ಸಹಾಯದಿಂದ ಅದನ್ನು ಕೊಡುತ್ತಾಳೆ.

ಮಗನ್ ಒಂದು ಕೈಯಲ್ಲಿ ಕೀರ್ತಿಯ ವುಡ್‌ವರ್ಕ್ ತೆಗೆದುಕೊಂಡು ಇನ್ನೊಂದು ಕೈಯಲ್ಲಿ ಚಾಕು ಎತ್ತಿಕೊಂಡು ಅದರ ಮೇಲೆ " ಸಿದ್ಧಂ ನಮಃ " ಎಂದು ಕೆತ್ತಿದ. ಆಮೇಲೆ ಹಿಂದಿನ ಕೋಣೆಗೆ ಹೋದನು. ಅಲ್ಲಿ ನೆಲ ಹಸಿಯಾಗಿತ್ತು. ಅದನ್ನು ಅಗಿದು ಅವನು ಈ ವುಡ್‌ವರ್ಕ್ ಕೆಳಗಿಟ್ಟು ಬೇರೊಂದು ಮೂರ್ತಿಯನ್ನು ಹೊರ ತೆಗೆದ. ಅದನ್ನು ಕೀರ್ತಿಯೇ ಮಾಡಿದ್ದ. ತಗ್ಗನ್ನು ಮುಚ್ಚಿ ಅದರ ಮೇಲೆ ಕಾಚಿನ ನೀರು ಸಿಂಪಡಿಸಿದ. ಹಳೆಯ ಮೂರ್ತಿಯ ಮೇಲಿಂದ ಮಣ್ಣನ್ನು ಒರೆಸಿ ನೋಡಿದಾಗ ಅದರ ಮೇಲೆ ದೊಡ್ಡ ದೊಡ್ಡ ಗೆರೆಗಳು ಬಿರುಕುಗಳು ಬಿದ್ದಿದ್ದು ಕಂಡುಬಂದಿತು. ಈಗ ಅದು ನೂರಾರು ವರ್ಷಗಳಷ್ಟು ಹಳೆಯದಾಗಿ ಕಾಣಿಸುತ್ತಿತ್ತು. ಮರುದಿನ ಅವನು ಅದನ್ನು ಟೂರಿಸ್ಟರ (ಪ್ರವಾಸಿಗರ) ಬಳಿ ತೆಗೆದುಕೊಂಡು ಹೋದಾಗ ಅವರು ಬಹಳ ಸಂತೋಷಪಟ್ಟರು. ಅವರಿಗೆ ಮಗನ್ ಹೇಳಿದ್ದು ಹೀಗೆ:— ಕಾಳಿದಾಸನ ರಘುವಂಶದಲ್ಲಿ ಈ ಮೂರ್ತಿಯ ಪ್ರಸ್ತಾಪವಿದೆ. ರಘುರಾಜನು ಕೊಂಕಣ ಪ್ರದೇಶದಲ್ಲಿ ತ್ರಿಕೂಟ ಎಂಬ ಹೆಸರಿನ ಒಂದು ಪಟ್ಟಣವನ್ನು ನಿರ್ಮಿಸಿದ. ಅಲ್ಲಿಯೇ ಈ ಮೂರ್ತಿ ಸಿಕ್ಕಿದೆ. ಕೆಲವು ಮೂರ್ತಿಗಳು ಮೈಸೂರಿನ ಚಾಮರಾಜ ಒಡೆಯರ ಬಳಿ ಇವೆ ಮತ್ತು ಕೆಲವು ತನ್ನ ಬಳಿ ಉಂಟು. ಮಗನ್ ಅದನ್ನು ಮಾರಿದ್ದು ಐದುನೂರಾ ಐವತ್ತು ರೂಪಾಯಿಗಳಿಗೆ. ಆದರೆ ಕೀರ್ತಿಗೆ ಕೊಟ್ಟದ್ದು ಕೇವಲ ಐದು ರೂಪಾಯಿಗಳನ್ನು ಮಾತ್ರ.

ಈ ಘಟನೆಯ ಬಳಿಕ ಒಂದು ವಾರದೊಳಗೆಯೇ ಕೀರ್ತಿ ನ್ಯೂಡ್ ತಂದಳು. ಅವಳು ಎಂದಿನಂತೆ ವ್ಯಾಕುಲವಾಗಿದ್ದಳು. ಅವಳ ತಾಯಿಯಂತು ರೋಗಿ ಇದ್ದೇ ಇದ್ದಳು. ಇಂದು ತಾನು ಕೂಡ ರೋಗಿಯಾಗಿದ್ದಳು. ಅವಳಿಗೆ ಹತ್ತಿರ ಹತ್ತಿರ ನ್ಯೂಮೋನಿಯಾ ಆಗುವಂತಿತ್ತು. ಅವಳು ಕೆಮ್ಮುತ್ತಿದ್ದಳು ಮತ್ತು ಆಗಾಗ ತನ್ನ ಕುತ್ತಿಗೆಯನ್ನು ಮುಟ್ಟಿಕೊಳ್ಳುತ್ತಿದ್ದಳು. ಅದರಮೇಲೆ ಅರಳೆಯ ಪಟ್ಟಿಯನ್ನು ಹಳೆಯ ಬಟ್ಟೆಯಿಂದ ಕಟ್ಟಿಗೊಂಡಿದ್ದಳು.

ಕೀರ್ತಿ ಮಾಮೂಲಿನಂತೆ ಶಿಲ್ಪವನ್ನು ಮಗನ್ ಟಕಲಾನ ಎದುರು ಇಟ್ಟಳು. ಅದನ್ನು ಅವಳು ಕಟ್ಟಿಗೆಯ ಬದಲು ಕಲ್ಲಿನಲ್ಲಿ ಕೆತ್ತಿದ್ದಳು. ಬಳಿಕ ಅವಳು ಆಶೆ-ಭಯ ಬೆರೆತ ದೃಷ್ಟಿಯಿಂದ ಮಗನ್ ಟಕಲಾನತ್ತ ನಿಟ್ಟಿಸುತ್ತಿದ್ದಳು. ಒಂದು ವೇಳೆ ಮಗನ್ ತನ್ನ ಅಸಂತೋಷವನ್ನು ವ್ಯಕ್ತ ಮಾಡಿದ್ದರೆ ಅದು ಒಂದು ಭಾರಿ ಸುಳ್ಳು

ಆಗುತ್ತಿತ್ತು. ಆದ್ದರಿಂದ ಅವನು ಅದನ್ನು ಒಪ್ಪಿಕೊಂಡದ್ದಲ್ಲದೆ ಮನಸಾರೆ ಹೊಗಳಿದನು. ಅದು ತೀರ ಚಿಕ್ಕದಿದೆ ಎಂದು ಮಾತ್ರ ಅತೃಪ್ತಿ ತೋರಿಸಿದ. ಅವಳು ಅದನ್ನು ಆಳೆತ್ತರ ಮಾಡಿದ್ದಳೆಂದರೆ ಅವಳಿಗಷ್ಟೇ ಅಲ್ಲ, ಮಗನ್ ಟಕಲೆಗೂ ಕೂಡ ಬಹಳ ಲಾಭವಾಗುತ್ತಿತ್ತು.

ಅವನು "ಯಕ್ಷಿ" ನ್ಯೂಡ್‌ನ್ನು ಕೈಯಲ್ಲಿ ತೆಗೆದುಕೊಂಡು ಬಹಳ ದಿಟ್ಟಿಸಿ ನೋಡಿದ. ಆದರೂ ಕೀರ್ತಿಗೆ ನಿಜವಾದ ನ್ಯೂಡ್ ಮಾಡಲಾಗಿರಲಿಲ್ಲ. ಮೂರ್ತಿಯ ಮೈಯಮೇಲೆ ಒದ್ದೆ ಬಟ್ಟೆಯಿತ್ತು. ಅದರ ಕೌಶಲ್ಯವು ಏನೆಂದರೆ, ಈಗಲೂ ಆ ಬಟ್ಟೆಯಿಂದ ನೀರು ತೊಟ್ಟಕ್ಕುತ್ತಿದ್ದ ಹಾಗೆ ಅನಿಸುತ್ತಿತ್ತು. ಬಟ್ಟೆ ಕೆಲವೆಡೆ ಮೈಗ ಅಂಟಕೊಂಡಿತ್ತು ಮತ್ತು ಹಲವು ಕಡೆ ಬೇರೆಯಾಗಿತ್ತು. ಹೀಗೆ ಮರೆ ಮಾಡುವ ಕಾರ್ಯದಲ್ಲಿ ಅದು ಹೆಣ್ಣಿನ ದೇಹವನ್ನು ಮತ್ತಷ್ಟು ಸ್ಪಷ್ಟವಾಗಿ ಪ್ರದರ್ಶಿಸುತ್ತಿತ್ತು.

ಮೂರ್ತಿಯ ಮೇಲಿಂದ ದೃಷ್ಟಿಯನ್ನು ಸರಿಸಿ ಮಗನ್ ಟಕಲಾ ಕೀರ್ತಿಯತ್ತ ನೋಡಿದ. ಅಂಕೆ ಮೀರಿ ಅವನ ಬಾಯಿಯಿಂದ "ವ್ಹಾ!" ಎಂದು ಹೊರಟಿತು. ಕೀರ್ತಿ ಬೆಚ್ಚಿದಳು ಮತ್ತು ಆ ನೀರಲ ಬಣ್ಣದ ಸೀರೆಯನ್ನು ಮುಂದಕ್ಕೆ ಜಗ್ಗಿಕೊಂಡು ಹಿಂದೆ ಮುಚ್ಚಿಕೊಳ್ಳತೊಡಗಿದಳು. ಆದರೆ ಮಗನ್ ಅವಳು ಬತ್ತಲೆಯಾಗಿ ತನ್ನನ್ನೇ ಕನ್ನಡಿಯಲ್ಲಿ ನೋಡಿ ನೋಡಿ ಈ ಶಿಲ್ಪವನ್ನು ಮಾಡಿದ್ದಾಳೆ ಎಂಬುದನ್ನು ತಿಳಿದುಬಿಟ್ಟದ್ದ. ಅನೇಕ ಸಲ ಬಟ್ಟೆಯನ್ನು ತೋಯಿಸಿ ಅವಳು ತನ್ನ ದೇಹದ ಮೇಲೆ ಇಟ್ಟುಕೊಂಡಿರಬೇಕು. ಆದ್ದರಿಂದ ಅವಳಿಗೆ ನೆಗಡಿಯಾಗಿತ್ತು. ಈಗ ಕೆಮ್ಮುತ್ತಿದ್ದಾಳೆ. ಇದು ಕೇವಲ ಹಣದ ಪ್ರಶ್ನೆಯಾಗಿರಲಿಲ್ಲ, ಹೆಣ್ಣಿನಲ್ಲಿಯ ಪ್ರದರ್ಶನ ಮತ್ತು ಸ್ವಯಂ ಅರ್ಪಣೆಯ ವಿಷಯವೂ ಆಗಿತ್ತು. ಮಗನ್ ಎಲ್ಲ ತಿಳಿದುಕೊಂಡಿದ್ದ. ಆದರೆ ಏನೂ ಅರಿಯದವನ ಹಾಗೆ ತೋರಿಸಿಕೊಳ್ಳುತ್ತ ಅವಳನ್ನು "ನಿನ್ನ ತಾಯಿ ಹೇಗೆ ಇದ್ದಾಳೆ?" ಎಂದು ಕೇಳಿದ.

ಕೀರ್ತಿ ಒಮ್ಮೆಲೆ ಸಿಡಿದೆದ್ದಳು! ಅವಳ ಕೆಮ್ಮಿನ ಉದ್ರೇಕ ತೀವ್ರಗೊಂಡಿತು ಮತ್ತು ಸ್ವಯಂ ಸುಧಾರಿಸಿಕೊಳ್ಳಬೇಕಾದರೆ ಸಾಕಷ್ಟು ಸಮಯ ಬೇಕಾಯಿತು. ಮಗನ್ ಗಾಬರಿಗೊಂಡ; ಜೊತೆಗೆ ಲಜ್ಜಿತನೂ ಆದನು. ಆಮೇಲೆ ತಲೆಯಲ್ಲಾಡಿಸುತ್ತ ಕೇಳಿದ—"ಹಾಗಾದರೆ ಮಾಡೆಲ್ ಸಿಕ್ಕಿತೆ?"—ಪ್ರಶ್ನೆ ಅನಾವಶ್ಯಕವಿತ್ತು.

ಕೀರ್ತಿ ಮೊದಲಿಗಂತು ತಲೆ ತಗ್ಗಿಸಿದಳು. ಬಳಿಕ ಅಂಗಡಿಯ ಹೊರಗೆ, ರಸ್ತೆ ಆಕಾಶವನ್ನು ಮುಟ್ಟುತ್ತ ಒಮ್ಮೆಲೆ ಕೆಳಗೆ ಇಳಿಯುವ ಕಡೆ ನೋಡತೊಡಗಿದಳು. ಮಗನ್ ಅವಳನ್ನು ಈ ದುರ್ಬಲ ಪರಿಸ್ಥಿತಿಯಲ್ಲಿಯೇ ಹೊಗಳಬೇಕೆಂದು ಯೋಚಿಸಿದ. ಅವಳು ಅದಕ್ಕೆ ಯೋಗ್ಯಳಾಗಿದ್ದಳು. ಅಲ್ಲದೆ ಅದನ್ನು ಬಯಸುತ್ತಿದ್ದಳೇನೋ. ಆದರೆ ಹೀಗೆ ಮಾಡುವದರಿಂದ ಬೆಲೆಯು ಏರುವದೆಂದು ಅವನಿಗನಿಸಿತು. ಕೀರ್ತಿಗೆ ನೂರು ರೂಪಾಯಿ ಕೊಡುವದೆಂದು ತನ್ನ ಮನದಲ್ಲಿ ನಿರ್ಧರಿಸಿದನು. ಬಾಟ್ಲ

ಮತ್ತು ಇತರ ವಸ್ತುಗಳಿಗೆ ಬಹುಶಃ ಅದು ಸಾಕಾಗಲಿಕ್ಕಿಲ್ಲ. ಆದರೆ ಅವನು ನೂರೇ ಕೊಡುವವನು. ಎಲ್ಲಿಯಾದರೂ ಕೀರ್ತಿ ಹೆಚ್ಚಿನ ಬೆಲೆ ಕೇಳಬಹುದೆಂದು ಒಳಗಿಂದೊಳಗೆ ಅವನಿಗೆ ಭಯವೂ ಇತ್ತು.

" ಇದಕ್ಕೆ ಎಷ್ಟು ಕೊಡಲಿ ? "—ಅವನು ಅನಿಶ್ಚಿತ ರೀತಿಯಲ್ಲಿ ಕೇಳಿದ.

ಕೀರ್ತಿ ನಿರ್ಲಕ್ಷ್ಯ ದೃಷ್ಟಿಯಿಂದ ಅವನತ್ತ ನೋಡಿ, " ಇದಕ್ಕೆ ನಾನು ಐವತ್ತು ರೂಪಾಯಿ ತೆಗೆದುಕೊಳ್ಳುವೆ " ಎಂದಳು.

" ಐವತ್ತು ? "

" ಹಾಂ—ಪೈಸಾ ಕಡಿಮೆ ಇಲ್ಲ."

ಮಗನ್ ಸಮಾಧಾನದ ಭಾವನೆಯಿಂದ ರೋಲ್ ಟಾಪ್ ಎತ್ತಿ ನಲ್ವತ್ತು ರೂಪಾಯಿ ಹೊರತೆಗೆದು ಕೀರ್ತಿಯ ಎದುರು ಇಟ್ಟು: " ನೀನು ಹೇಳಿದಂತೆಯೇ ಆಗಲಿ—ಆದರೆ ಈಗ ನನ್ನಲ್ಲಿ ನಲವತ್ತೇ ಇವೆ—ಹತ್ತು ರೂಪಾಯಿ ಆಮೇಲೆ ತೆಗೆದುಕೋ " ಎಂದು ಹೇಳಿದ.

ಕೀರ್ತಿ ರೂಪಾಯಿಗಳನ್ನು ಕೈಯಲ್ಲಿ ತೆಗೆದುಕೊಂಡು, " ಒಳ್ಳೆಯದು " ಎಂದಳು. ಅವಳು ಹೋಗುವವಳೇ ಇದ್ದಳು. ಅಷ್ಟರಲ್ಲಿ ಮಗನ್ ಅವಳನ್ನು, " ಕೇಳಿಲ್ಲಿ " ಎಂದು ತಡೆದ.

ಕೀರ್ತಿ ಹೆಜ್ಜೆ ಇಡುತ್ತಿದ್ದಂತೆ ಮಧ್ಯ ನಿಂತು " ನನ್ನನ್ನು ಹಿಡಿದುಕೋ " ಎಂಬ ರೀತಿಯಲ್ಲಿ ಆ ಕಡೆ ನೋಡತೊಡಗಿದಳು. ಅವಳ ಮುಖದ ಮೇಲೆ ಉದಾಸಭಾವವು ತೇಲಿಹೋಗುವ ಬದಲು ಇನ್ನಿಷ್ಟು ಹಬ್ಬಿತ್ತು. ಆಗ ಮಗನ್ ಟಕಲಾ, " ಇಷ್ಟು ಹಣದಿಂದ ನಿನ್ನ ಕೆಲಸವು ನಡೆಯುವದೆ ? " ಎಂದು ಕೇಳಿದ.

ಕೀರ್ತಿ ತಲೆಯಲ್ಲಾಡಿಸಿದಳು. ಮತ್ತು ಇನ್ನೇನು ಮಾಡಬೇಕು ಎಂಬ ಅರ್ಥದಲ್ಲಿ ಕೈಗಳನ್ನು ಚಾಚಿದಳು. ಆಮೇಲೆ ಅವಳು, " ಅವ್ವನ ಆಪರೇಷನ್ ಮಾಡಿಸಬೇಕಾಗಿದೆ. ಅದಕ್ಕೆ ನೂರಾರು ರೂಪಾಯಿ ಬೇಕು. ನಾನು ಹೇಳುವದೆಂದರೆ ನೋಡು...." ಎಂದು ಹೇಳಿ ಸ್ವಲ್ಪ ತಡೆದು ನಂತರ, " ಅವ್ವ ಎಷ್ಟು ಬೇಗ ಸಾಯುವಳೋ ಅಷ್ಟು ಒಳ್ಳೆಯದು ನೋಡು " ಎಂದಳು. ಬಳಿಕ ಅಲ್ಲಿಯೇ ನಿಂತು ಅವಳು ಕಾಲಿನ ಹೆಬ್ಬೆರಳಿನಿಂದ ನೆಲವನ್ನು ಕೆರೆಯತೊಡಗಿದಳು. ಕೊನೆಗೆ ಅವಳೇ, " ಹೀಗೆ ಕಷ್ಟ ಸೋಸುವದಕ್ಕಿಂತ ಸಾಯುವುದು ಒಳ್ಳೆಯದು " ಎಂದಳು.

ಮಗನ್ ಅವಳ ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ಕೀರ್ತಿ ಹದಿನೆಂಟು, ಹತ್ತೊಂಬತ್ತು ವರ್ಷದ ಹುಡುಗಿಯ ಬದಲು, ಜೀವನದ ಪ್ರತಿ ಪೆಟ್ಟನ್ನು ತಾನೇ ಸಹಿಸಿಕೊಂಡು ಎಲ್ಲ ಆಘಾತಗಳನ್ನೂ ದಿಟ್ಟತನದಿಂದ ಎದುರಿಸುವ ಮುವ್ವತ್ತೈದು, ನಲ್ವತ್ತು ವರ್ಷದ ತುಂಬಿಕೊಂಡ ಹೆಣ್ಣಿನಂತೆ ಕಂಡಳು.

" ಒಂದು ಮಾತು ಹೇಳಲೇ ? "—ಟಕಲೆ ಅವಳ ಸಮೀಪಕ್ಕೆ ಬರುತ್ತ ಹೇಳಿದ—

"ನೀನು ಮಿಥುನ ಮಾಡಿ ಕೊಡು. ಆಪರೇಶನ್ನಿನ ಮತ್ತು ಇತರ ಎಲ್ಲ ಖರ್ಚು ನಾನು ಕೊಡುವೆ."

"ಮಿಥುನ ?" ಎಂದು ಕೀರ್ತಿ ಕಂಪಿಸಿದಳು.

"ಹಾಂ. ಅದರ ಬೇಡಿಕೆ ಬಹಳ ಇದೆ. ಟೂರಿಸ್ಟ್ ಅದಕ್ಕಾಗಿ ಹುಚ್ಚರಾಗಿದ್ದಾರೆ...."—ಎಂದು ಮಗನ್ ಹೇಳಿದ.

"ಆದರೆ"

"ನನಗೆ ಅರ್ಥವಾಯಿತು"—ಮಗನ್ ತಲೆಯಲ್ಲಾಡಿಸುತ್ತ ನುಡಿದ—"ನಿನಗೆ ಗೊತ್ತಿರದಿದ್ದರೆ ಒಂದು ಸಲ ಖುಜರಾಹೊ ಹೋಗಿ ನೋಡಿ ಬಾ. ನಾನು ಅದಕ್ಕೆ ಮುಂಗಡ ಹಣ ಕೊಡಲು ಸಿದ್ಧನಿರುವೆ."

"ನೀನು ?"—ಕೀರ್ತಿ ತಿರಸ್ಕಾರದಿಂದ ಅವನತ್ತ ನೋಡಿ ಸ್ವಲ್ಪ ತಡೆದು, "ನಿನ್ನ ಬಳಿ ಮತ್ತೆ ದುಡ್ಡೇ ಇಲ್ಲವೆಂದು ಹೇಳುತ್ತಿದ್ದೆಯಲ್ಲ ?" ಎಂದಳು.

ಮಗನ್ ತಕ್ಷಣ ಸುಳ್ಳನ್ನು ತಿದ್ದಿಕೊಂಡು "ನಿಜವಾಗಿಯೂ ನನ್ನಲ್ಲಿ ದುಡ್ಡು ಇಲ್ಲ. ಅಂಗಡಿಯ ಬಾಡಿಗೆ ಕೊಡಲೆಂದು ಸ್ವಲ್ಪ ಬೇರೆ ಇಟ್ಟಿದ್ದೆ."

ನಂತರ ಅವನು ಹಣ ಕೊಡಲು ಪ್ರಯತ್ನಿಸಿದ. ಆದರೆ ಕೀರ್ತಿ ತನ್ನ ಅಹಂಭಾವದಲ್ಲಿ ಅದನ್ನು ತೆಗೆದುಕೊಳ್ಳದೆ ಅಲ್ಲಿಂದ ಹೊರಟುಹೋದಳು. ಆಗ ಟಕಲೆ ಹಿಂದಿರುಗಿ ಬಂದು "ಯಕ್ಷಿ"ಯನ್ನು ನೋಡಿದ. ನಂತರ ಒಂದು ಚಿಕ್ಕ ಸುತ್ತಿಗೆಯಿಂದ ಅದರ ಮೂಗು ಮುರಿದ. ಕಾಲು ಮುರಿದ ಮತ್ತು ಅದರ ತಲೆಯ ಶೃಂಗಾರದ ಮೇಲೆ ಹಗುರಾಗಿ ಪೆಟ್ಟು ಹಾಕಿದ. ಅದರಿಂದ ಕೆಲವು ಗೀಚುಗಳು ಬಿದ್ದವು. ಬಳಿಕ ಒಳಗೆ ಹೋಗಿ ಅವನು ಅದಕ್ಕೊಂದು ಹಗ್ಗ ಕಟ್ಟಿ ಉಪ್ಪಿನ ತೇಜಾಬದಲ್ಲಿ ಮುಳುಗಿಸಿದ. ಹೊಗೆಯ ಮೋಡವೇ ಎದ್ದಿತು. ಮಗನ್ ಹಗ್ಗವನ್ನು ಜಗ್ಗಿ "ಯಕ್ಷಿ"ಯನ್ನು ಹೊರದೆಗೆದು ಅದನ್ನು ನೀರಿನಲ್ಲಿ ಹಾಕಿದ. ಸ್ವಲ್ಪ ತಡೆದು ಹೊರದೆಗೆದಾಗ "ಯಕ್ಷಿ"ಯ ರೂಪರೇಖೆ ಮಸಕುಮಸಕಾಗಿದ್ದವು. ಅಲ್ಲಲ್ಲಿ "ಚಟ್ ಚಟ್" ಎಂದು ಛಿದ್ರಗಳು ಬಿದ್ದವು. ಈಗ ಅದು ಒಂದು ಸಾವಿರದ ಒಂದು ರೂಪಾಯಿಗೆ ಮಾರಾಟವಾಗಲು ಸಿದ್ಧವಾಗಿತ್ತು.

ಈಸಲ ಕೀರ್ತಿ ತಂದ ಶಿಲ್ಪವು ಮಿಥುನವೇ ಆಗಿತ್ತು. ಆಳಿನೆತ್ತರದ ಶಿಲ್ಪವು ಗೋಣಿತಟ್ಟಿನಲ್ಲಿ ಕಟ್ಟಿದ ಒಂದು ಮೂಟೆಯಲ್ಲಿ ಬಂದಿತ್ತು. ಕೆಲವು ಕೂಲಿಕಾರರು ಅದನ್ನು ಹೊತ್ತು ತಂದು ಮಗನ್ ಟಕಾಲನ ಅಂಗಡಿಯಲ್ಲಿಟ್ಟು ತಮ್ಮ ಕೂಲಿ ಪಡೆದು ಹೊರಟುಹೋದರು.

ಕೀರ್ತಿ ಮತ್ತು ತನ್ನನ್ನು ಏಕಾಂತದಲ್ಲಿ ಕಂಡು, ಮಗನ್ ತೀವ್ರವಾಗಿ ಉಸಿರಾಡಿ

ಸುತ್ತ ಮೂಟೆಯ ಹಗ್ಗ ಕತ್ತರಿಸಿದ. ಮತ್ತು ಒಂದಿಷ್ಟು ಉನ್ಮತ್ತ ರೀತಿಯಲ್ಲಿ ಚಟ್ಟನ್ನು ಶಿಲ್ಪದ ಮೇಲಿಂದ ಸರಿಸಿದ. ಈಗ ಶಿಲ್ಪವು ಎದುರಿಗಿತ್ತು. ಪರಫೆಕ್ಟ್.... ಮಗನ್ ಅದನ್ನು ನೋಡಿದಾಗ ಅವನ ಗಂಟಲು ಒಣಗಿತ್ತು. ಕೀರ್ತಿ ತನ್ನೆದಿರು ಈ ಶಿಲ್ಪವನ್ನು ನೋಡಗೊಡಲಿಕ್ಕಿಲ್ಲವೆಂದು ಅವನು ಊಹಿಸಿದ್ದ. ಆದರೆ ಅವಳು ಅಲ್ಲಿಯೇ—ಅವನ ಎದುರು ನಿಂತಿದ್ದಳು; ಯಾವುದೇ ಆವೇಶದಿಂದ ಮುಕ್ತಳಾಗಿ ನಿಂತಿದ್ದಳು. ಶಿಲ್ಪದಲ್ಲಿನ ಹೆಣ್ಣು ಪರಿಪೂರ್ಣಳಾಗಿದ್ದಳು. ಸ್ವಯಂ ತನ್ಮಯಗೊಂಡ ಗಂಡು ಅವಳನ್ನು ಎರಡೂ ಭುಜಗಳಿಂದ ಹಿಡಿದುಕೊಂಡಿದ್ದ. ಅದನ್ನು ಟಕಲಾ ಲಕ್ಷ್ಯದಿಂದ ನೋಡಲಿಲ್ಲ. ಬಹುಶಃ ಅವನು ಅದನ್ನು ವಿರಾಮದಲ್ಲಿ ನೋಡ ಬಯಸುತ್ತಿದ್ದನೇನೊ ?

" ಆಪರೇಶನ್‌ಗೆ ಎಷ್ಟು ರೂಪಾಯಿ ಬೇಕು ? "—ಅವನು ಕೇಳಿದ.

" ಆಪರೇಶನ್‌ಕ್ಕಲ್ಲ—ನನಗೆ."

" ನನಗೆ ? ?....ಅವ್ವ........"

" ಸತ್ತಳು....ಒಂದು ವಾರವಾಯ್ತು."

ಮಗನ್ ತನ್ನ ಮುಖದ ಮೇಲೆ ದುಃಖ ಮತ್ತು ವಿಷಾದಗಳ ಭಾವನೆಗಳನ್ನು ತರಲು ಪ್ರಯತ್ನಿಸಿದ. ಆದರೆ ಕೀರ್ತಿ ಅದನ್ನು ಬಯಸಿದಂತೆ ಕಾಣಿಸಲಿಲ್ಲ. ಅವಳು ತುಟಿಯನ್ನು ಹಾಗೆಯೇ ಕಚ್ಚಿದ್ದಳು; ಅವಳು ಹಾಗೆಯೇ ವ್ಯಾಕುಲವಾಗಿ ನಿಂತಿದ್ದಳು. ಆಮೇಲೆ ಅವಳು, " ನಾನು ಒಂದು ಸಾವಿರ ರೂಪಾಯಿ ತೆಗೆದು ಕೊಳ್ಳುವೆ " ಎಂದಳು.

ಮಗನ್ ಸ್ತಂಭಿತನಾದನು. ಅವನ ನಾಲಿಗೆ ತಡವರಿಸುತ್ತಿತ್ತು: " ಯಾರಾದರೂ ಇದಕ್ಕೆ ಒಂದು ಸಾವಿರ ರೂಪಾಯಿ ಕೊಟ್ಟರೇನು ? "

" ಹಾಂ, ನಾನು ಮಾತುಕತೆ ಮಾಡಿ ಬಂದಿರುವೆ. ಬಹುಶಃ ನನಗೆ ಹೆಚ್ಚೂ ಸಿಗಬಹುದು. ಆದರೆ ನಿನಗೆ ನಾನು ಮಾತು ಕೊಟ್ಟಿದ್ದೆ" ಕೀರ್ತಿ ಉತ್ತರ ಕೊಟ್ಟಳು.

" ನಾನಂತೂ....ನಾನಂತೂ ಐದು ನೂರು ಕೊಡಬಲ್ಲೆ "

" ಇಲ್ಲ "—ಎಂದು ಕೀರ್ತಿ ಹೊರಗೆ ಕೂಲಿಕಾರರನ್ನು ನೋಡತೊಡಗಿದಳು. ಮಗನ್ ಟಕಲಾ ಅವಳನ್ನು ತಡೆದು, " ನೂರು, ಇನ್ನೂರು ಹೆಚ್ಚು ತೆಗೆದುಕೊ " ಎಂದ.

" ಸಾವಿರಕ್ಕಿಂತ ಕಡಿಮೆ ಇಲ್ಲ."

ಮಗನ್ ಆಶ್ಚರ್ಯಗೊಂಡು ಕೀರ್ತಿಯ ಕಡೆ ನೋಡಿದ. ಇಂದು ಅವಳ ಮುಖ ಲಕ್ಷಣವೇ ಬೇರೆ ಇತ್ತು. ಅವಳು ಖುಜರಾಹೊ ಹೋಗಿದ್ದಳೇನು ? ಟೂರಿಸ್ಟರನ್ನು ಕಂಡಿದ್ದಳೇನು ? ಎಷ್ಟೇ ಬೆಲೆ ಕೊಟ್ಟಾದರೂ ಕಲಾಕಾರರನ್ನು ಮಾರ್ಕೆಟ್ಟಿನಿಂದ ದೂರವೇ ಇಡಬೇಕು. ಆದರೆ....ಒಳ್ಳೆಯದು....ಅವನು ರೋಲ್ ಟಾಪ್ ಎತ್ತಿ

ಎಂಟು ನೂರು ರೂಪಾಯಿಗಳ ನೋಟುಗಳನ್ನು ಎಣಿಸಿ ಕೀರ್ತಿಯ ಎದುರು ಇಟ್ಟ, ಕೀರ್ತಿ ಅವುಗಳನ್ನು ಬೇಗ ಬೇಗ ಎಣಿಸಿ ಅವನ ಮುಖಕ್ಕೆ ಎಸೆದಳು.

" ಸಾವಿರಕ್ಕಿಂತ ಕಡಮೆ ಇಲ್ಲವೆಂದು ನಾನು ಹೇಳಲಿಲ್ಲವೆ ? "

" ಒಳ್ಳೆಯದು. ಒಂಭೈನೂರು ತೆಗೆದುಕೊ."

" ಇಲ್ಲ."

" ಒಂಭೈನೂರಾ ಐವತ್ತು,....ಒಂಭೈನೂರಾ ಎಪ್ಪತ್ತು ಐದು."

ಆದರೆ ಕೀರ್ತಿಯ ಕಣ್ಣಲ್ಲಿ ಯಾವುದೋ ದೃಢ ನಿಶ್ಚಯವನ್ನು ನೋಡಿ ಅವನು ನೂರರ ಹತ್ತು ನೋಟುಗಳನ್ನು ಅವಳ ಕೈಯಲ್ಲಿಟ್ಟು ಅಮಲಿನ ಸ್ಥಿತಿಯಲ್ಲಿ ಮಿಥುನ ದತ್ತ ಧಾವಿಸಿದ. ಕೀರ್ತಿ ನಿಂತಿದ್ದಳು. ಅವಳು ತನ್ನ ತಲೆಯ ಪ್ರಶಂಸೆ ಪಡೆಯಲು ನಿಂತ ಹಾಗೆ ಇತ್ತು. ಮಗನ್ ಮಿಥುನದಲ್ಲಿಯ ಹೆಣ್ಣನ್ನು ನೋಡಿದ. ನಂತರ ಕೀರ್ತಿಯನ್ನು ನೋಡಿದ. ಅವಳ ಕಣ್ಣಲ್ಲಿ ನೀರಿತ್ತು....ಅದು ಸಂತೋಷದ ಉತ್ಕಟತೆಯ ಭಾರವೋ ಅಥವಾ ಯಾವುದೋ ಬಲಾತ್ಕಾರದ ಅನುಭವವೋ ?.... ಅದು ದುಃಖ ಮತ್ತು ಸುಖ, ನೋವು ಮತ್ತು ನಲಿವುಗಳ ಸಂಪೂರ್ಣ ರೂಪ ಪಡೆದ ಸಂಬಂಧವಾಗಿತ್ತೋ ? ಬಳಿಕ ಅವನು ಗಂಡಿನತ್ತ ನೋಡಿದ. ಮೇಲಿನಿಂದ ಅದು ಚೆಲುವಾಗಿತ್ತು....ಆದರೆ ಕೆಳಗೆ ಅಳತೆ ಮೀರಿ ಅಸಹ್ಯವಾಗಿತ್ತು....ಏಕೆ ?....ಕೀರ್ತಿ ಗಂಡನ್ನು....ಮನುಷ್ಯನ "ಮೃಗವ್ಯಕ್ತಿತ್ವ"ದ ಮೇಲೆ ಹೆಚ್ಚು ಒತ್ತು ಕೊಟ್ಟಿದ್ದಳು ?.... ಇದು ಮಿಥುನ ನಿಜ....ಆದರೆ ಪುರುಷ ಮತ್ತು ಪ್ರಕೃತಿಗಳ ಮಿಥುನವಲ್ಲ....ಅಡ್ಡಿಯಿಲ್ಲ. ಬದಲಾಗಿ ಹೆಚ್ಚು ಹಣ ಸಿಗುವದು.

ಮಗನ್ ಟಕಲಾ ಮೇಲಿನ ದೀಪವನ್ನು ಕೆಳಗೆ ಎಳೆದುಕೊಂಡು ಗಂಡಿನತ್ತ ನೋಡತೊಡಗಿದ. ಬಳಿಕ, "ಇದು—ನಾನು ಇವನನ್ನು ಎಲ್ಲಿಯೋ ನೋಡಿರುವೆ !" ಎಂದನು.

ಕೀರ್ತಿ ಉತ್ತರಿಸಲಿಲ್ಲ.

" ನೀನು—" ಮಗನ ಪತ್ತೆ ಹಚ್ಚಿದ ಹಾಗೆ ನುಡಿದ—" ನೀನು ಸಿರಾಜನ ಜೊತೆ ಹೋಗಿದ್ದೆಯಾ ? "

ಕೀರ್ತಿ ಮುಂದಕ್ಕೆ ಬಂದು ಜೋರಾಗಿ ಅವನ ಮುಖಕ್ಕೊಮ್ಮೆ ಹೊಡೆದಳು. ಮತ್ತು ನೋಟುಗಳನ್ನು ಕೈಯಲ್ಲಿ ಹಿಡಿದುಕೊಂಡು ಅಂಗಡಿಯಿಂದ ಹೊರಬಿದ್ದಳು.

## ನಿಮ್ಮ ದುಃಖ ನನಗೆ ಕೊಡಿ

ಮದುವೆಯ ರಾತ್ರಿ ಮದನ ಯೋಚಿಸಿದ್ದಹಾಗೆ ಎಷ್ಟೂ ನಡೆಯಲಿಲ್ಲ. ಚಕಲಿ ಭಾಭಿ ಮದನನನ್ನು ಪುಸಲಾಯಿಸಿ ನಡುವಿನ ಕೋಣೆಯಲ್ಲಿ ನೂಕಿದಾಗ ಇಂದೂ ಶಾಲಿನಲ್ಲಿ ಮುದುಡಿಕೊಂಡು ಕತ್ತಲೆಯ ಒಂದು ಭಾಗವಾಗುತ್ತಿದ್ದಳು. ಹೊರಗೆ ಚಕಲಿ ಭಾಭಿ, ದರಿಯಾಬಾದನ ಸೋದರತ್ತೆ ಮತ್ತು ಇತರ ಹೆಂಗಸರ ನಗೆಯು ಇರುಳಿನ ಮೌನಜಲದಲ್ಲಿ ಕಲ್ಲುಸಕ್ಕರೆಯಂತೆ ಮೆಲ್ಲಮೆಲ್ಲನೆ ಕರಗುತ್ತಿತ್ತು. ಇಷ್ಟು ದೊಡ್ಡವನಾದರೂ ಮದನಗೆ ಏನೂ ಗೊತ್ತಿಲ್ಲವೆಂದು ಹೆಂಗಸರು ತಿಳಿದುಕೊಂಡಿದ್ದರು. ಯಾಕೆಂದರೆ, ಮಧ್ಯರಾತ್ರಿಯ ನಿದ್ರೆಯಿಂದ ಅವನನ್ನು ಎಚ್ಚರಿಸಿದಾಗ, " ನನ್ನನ್ನು ಎಲ್ಲಿಗೆ ಒಯ್ಯುತ್ತಿರುವಿರಿ ? " ಎಂದು ಬಡಬಡಿಸುತ್ತಿದ್ದ.

ಆ ಹೆಂಗಸರಿಗೆ ಅವರವರ ದಿನಗಳು ಕಳೆದುಹೋಗಿದ್ದವು. ಪ್ರಥಮ ರಾತ್ರಿಯ ಒಗ್ಗೆ ಅವರ ತುಂಟ ಗಂಡಂದಿರು ಏನೆಲ್ಲ ಹೇಳಿದ್ದರೋ ಮತ್ತು ಒಪ್ಪಿಕೊಂಡಿದ್ದರೋ ಆ ವಿಷಯಗಳ ಗುಂಜನವು ಕೂಡ ಅವರ ಕಿವಿಗಳಲ್ಲಿ ಉಳಿದಿರಲಿಲ್ಲ. ಅವರು ಸ್ವಯಂ ರಸಾಸ್ವಾದನೆ ಮಾಡಿದ್ದರು ಮತ್ತು ಈಗ ತಮ್ಮ ಮತ್ತೊಬ್ಬ ಸೋದರಿಯನ್ನು ಅದಕ್ಕೆ ಅನುವುಗೊಳಿಸುವದರಲ್ಲಿ ತತ್ಪರರಾಗಿದ್ದರು. ಧರಿತ್ರಿಯ ಈ ಪುತ್ರಿಯರು ಗಂಡನ್ನು ಒಂದು ಮೋಡದ ತುಂಡು ಎಂದು ತಿಳಿಯುತ್ತಿದ್ದರು. ಮಳೆಗಾಗಿ ಮುಖವೆತ್ತಿ ಆದರ ಕಡೆ ನೋಡಲೇಬೇಕಾಗುತ್ತದೆ. ಅದು ಮಳೆಗರೆಯದಿದ್ದರೆ ಹರಕೆಗಳನ್ನು ಹೊರಬೇಕಾಗುತ್ತದೆ, ಮುಡುಪುಗಳನ್ನು ಕಟ್ಟಬೇಕಾಗುತ್ತದೆ, ಮಂತ್ರ ತಂತ್ರಗಳನ್ನು ಮಾಡಬೇಕಾಗುತ್ತದೆ. ವಾಸ್ತವದಲ್ಲಿ ಮದನ್ ಕಾಲ್ಕಾಜಿಯ ಆ ಹೊಸ ಆವೇಶನದಲ್ಲಿ ಮನೆಯ ಮುಂದಿನ ಬೈಲು ಜಾಗೆಯಲ್ಲಿ ಮಲಗಿ ಅದೇ ಸಮಯದ ನಿರೀಕ್ಷಣೆಯಲ್ಲಿದ್ದ. ಆದರೆ, ಒಂದು ಅಪಶಕುನದಂತೆ ನೆರೆಮನೆಯ ಸಿಬತೆನ ಎಮ್ಮೆಯನ್ನು ಮದನನ ಪಲ್ಲಂಗಕ್ಕೇನೆ ಕಟ್ಟಲಾಗಿತ್ತು. ಅದು ಪದೇಪದೇ ಮುಸುಗುಡುತ್ತ ಅವನನ್ನು ಮೂಸಿ ನೋಡುತ್ತಿತ್ತು. ಅವನು ಕೈ ಎತ್ತಿ ಎತ್ತಿ ಅದನ್ನು ದೂರ ಸರಿಸಲು ಯತ್ನಿಸುತ್ತಿದ್ದ. ಇಂತಹದರಲ್ಲಿ ನಿದ್ರೆಯ ಪ್ರಶ್ನೆ ಎಲ್ಲಿದೆ?

ಸಮುದ್ರದ ಅಲೆಗಳು ಮತ್ತು ಹೆಂಗಸರ ಋತು—ಇವುಗಳಿಗೆ ಮಾರ್ಗದರ್ಶಕನಾದ ಚಂದ್ರನು ಒಂದು ಕಿಡಕಿಯ ಮಾರ್ಗದಿಂದ ತೂರಿ ಬಂದಿದ್ದನು ಮತ್ತು ಬಾಗಿಲಿನ ಆಚೆ ನಿಂತಿದ್ದ ಮದನನು ತನ್ನ ಮುಂದಿನ ಹೆಜ್ಜೆಯನ್ನು ಎಲ್ಲಿ ಇಡುವನೆಂದು ನೋಡುತ್ತಿದ್ದನು. ಮದನನ ಅಂತರಂಗ ದುಗುಡದಿಂದ ತುಂಬಿತ್ತು. ತಾನು

ಒಂದು ವಿದ್ಯುತ್ ಕಂಬವಿದ್ದಹಾಗೆ ಎಂದು ಮತ್ತು ಅದಕ್ಕೆ ಕಿವಿ ಹಚ್ಚಿದರ ಒಳಗಿನ ಅಬ್ಬರವನ್ನು ಕೇಳಬಹುದೆಂದು ಅವನಿಗೆ ತನ್‌ತಾನೇ ಅನಿಸಹತ್ತಿತ್ತು. ಕೆಲ ಸಮಯ ಹೀಗೆಯೇ ನಿಂತ ಬಳಿಕ ಅವನು ಮುಂದಕ್ಕೆ ಸಾಗಿ, ಮದುಮಗಳ ಮುಖವನ್ನಾದರೂ ನೋಡಬಹುದೆಂದು ಪಲ್ಲಂಗವನ್ನು ಎಳೆದು ಬೆಳದಿಂಗಳಲ್ಲಿ ಇರಿಸಿದ. ಆದರೆ ಅವನು ಏಕಾಏಕಿ ನಿಂತಬಿಟ್ಟ. ಆಗಲೇ ಅವನು ಯೋಚಿಸಿದ: ಇಂದೂ ನನ್ನ ಹೆಂಡತಿ ಯಾರನ್ನು ಮುಟ್ಟಬಾರದೆಂದು ಬಾಲ್ಯದಿಂದಲೂ ಓದುತ್ತ ಬಂದಿರುವೆನೊ ಆ ಪರಸ್ತ್ರೀ ಏನೂ ಅಲ್ಲ. ಶಾಲಿನಲ್ಲಿ ಮುದುಡಿಕೊಂಡು ಕುಳಿತಿದ್ದ ಮದುಮಗಳನ್ನು ನೋಡಿ ಅವನು, ಇಂದೂವಿನ ಮುಖವು ಎಲ್ಲಿ ಇರಬಹುದೆಂದು ಕಲ್ಪಿಸತೊಡಗಿದ ಮತ್ತು ಕೈಚಾಚಿ ಆ ಮೂಟೆಯನ್ನು ಸ್ಪರ್ಶಿಸಿದಾಗ ಅಲ್ಲಿಯೇ ಇಂದೂವಿನ ಮುಖ ವಿತ್ತು. ಅವಳು ತನ್ನ ಮುಖವನ್ನು ಸುಲಭವಾಗಿ ತನಗೆ ತೋರಿಸಲಿಕ್ಕಿಲ್ಲವೆಂದು ಅವನು ಭಾವಿಸಿದ್ದ. ಆದರೆ ಇಂದೂ ಹಾಗೇನು ಮಾಡಲಿಲ್ಲ—ಕಳೆದ ಎಷ್ಟೋ ವರ್ಷಗಳಿಂದ ಅವಳೂ ಇದೇ ಕ್ಷಣದ ನಿರೀಕ್ಷೆಯಲ್ಲಿದ್ದಳು ಎನ್ನುವ ಹಾಗೆ; ಮತ್ತು ಯಾವುದೋ ಕಾಲ್ಪನಿಕ ಎಮ್ಮೆಯು ಮೂಸಿ ನೋಡುತ್ತಿದ್ದರಿಂದ ಅವಳಿಗೂ ನಿದ್ರೆ ಬಂದಿರಲಿಲ್ಲವೆನ್ನುವ ಹಾಗೆ. ಮಾಯವಾದ ನಿದ್ರೆ ಮತ್ತು ಮುಚ್ಚಿದ ಕಣ್ಣುಗಳ ವೇದನೆಯು ಕತ್ತಲೆ ಇದ್ದರೂ ಕೂಡ ಎದುರಿಗೆ ಚಡಪಡಿಸುತ್ತಿದ್ದಂತೆ ಕಾಣಿಸು ತ್ತಿತ್ತು. ಸಾಮಾನ್ಯವಾಗಿ ಮುಖವು ಗದ್ದದವರೆಗೆ ಮುಟ್ಟುತ್ತಿದ್ದಂತೆ ಚೂಪಾಗುತ್ತದೆ. ಆದರೆ ಇಲ್ಲಿ ಎಲ್ಲವೂ ದುಂಡಗೆ ಇತ್ತು. ಬಹುಶಃ ಇದರಿಂದಲೋ ಏನೋ ಬೆಳದಿಂಗಳ ಕಡೆಯ ಕೆನ್ನೆ ಮತ್ತು ತುಟಿಗಳ ಮಧ್ಯೆ, ಎರಡು ಹಚ್ಚಹಸಿರಾದ ದಿನ್ನೆಗಳ ನಡುವೆ ಇರುವಂತೆ ಒಂದು ನೆರಳಿನ ಗೆರೆ ಮೂಡಿದೆ. ಹಣೆ ಸ್ವಲ್ಪ ಚಿಕ್ಕದಿತ್ತು. ಆದರೆ ಅದರ ಮೇಲೆ ಒಮ್ಮೆಲೆ ಪ್ರಾರಂಭವಾಗುವ ಗುಂಗರುಗೂದಲು ಇತ್ತು.

ಅವಾಗಲೆ ಇಂದೂ ತನ್ನ ಮುಖವನ್ನು ಮುಚ್ಚಿಕೊಂಡಳು—ನೋಡಲು ಅನು ಮತಿಯನ್ನೇನೋ ಕೊಡುವಳು ಆದರೆ ಇಷ್ಟು ಸಮಯದವರೆಗಲ್ಲ ಎನ್ನುವ ಹಾಗೆ. ಕೊನೆಗೆ ನಾಚಿಕೆಗೂ ಕೂಡ ಒಂದು ಮಿತಿ ಇದೆ. ಮದನ ಸ್ವಲ್ಪ ಬಿರುಸಾಗಿ ಹೀಗೆಯೇ—ಸಿ, ಹುಂ, ಹಾಂ, ಮಾಡುತ್ತಾ ಮದುಮಗಳ ಮುಖವನ್ನು ಪುನಃ ಮೇಲಕ್ಕೆತ್ತಿದ. ಮತ್ತು ಅಮಲೇರಿದ ಧ್ವನಿಯಲ್ಲಿ, "ಇಂದೂ" ಎಂದು ಕರೆದ.

ಇಂದೂ ಸ್ವಲ್ಪ ಹೆದರಿದಳು. ಜೀವನದಲ್ಲಿ ಮೊದಲ ಸಲ ಯಾವನೋ ಅಪರಿ ಚಿತ ಅವಳ ಹೆಸರನ್ನು ಈ ಪರಿಯಲ್ಲಿ ಕರೆದಿದ್ದ. ಮತ್ತು ಆ ಅಪರಿಚಿತ ಯಾವುದೋ ದೈವಿ ಹಕ್ಕಿನಿಂದ ರಾತ್ರಿಯ ಕತ್ತಲೆಯಲ್ಲಿ ಮೆಲ್ಲಮೆಲ್ಲನೆ ಈ ಏಕಾಕಿ, ಅಸಹಾಯಕ ಳಾದ ಹೆಣ್ಣಿನ ಸರ್ವಸ್ವ ಆಗಲಿದ್ದ. ಇಂದೂ ಮೊದಲ ಸಲ ದೃಷ್ಟಿ ಮೇಲೆತ್ತಿ ನೋಡುತ್ತಿದ್ದಂತೆ ಪುನಃ ಕಣ್ಣು ಮುಚ್ಚಿದಳು. ಮತ್ತು "ಜೀ" ಎಂದು ಅಷ್ಟೇ ನುಡಿದಳು. ಅವಳಿಗೆ ಸ್ವಯಂ ತನ್ನ ಧ್ವನಿಯು ಯಾವುದೋ ಪಾತಾಳದಿಂದ

ಹೊರಬಂದ ಹಾಗೆ ಕೇಳಿಸಿತು.

ಸಾಕಷ್ಟು ಸಮಯದವರೆಗೆ ಸ್ವಲ್ಪ ಹೀಗೆಯೇ ನಡೆಯಿತು. ನಂತರ ಮೆಲ್ಲ ಮೆಲ್ಲಗೆ ಮಾತಿಗಾರಂಭವಾಯಿತು. ಹೀಗೆ ಪ್ರಾರಂಭಗೊಂಡದ್ದು ಹಾಗೆಯೇ ಮುಂದುವರಿಯಿತು. ಅದಕ್ಕೆ ಅಂತ್ಯವೇ ಇರಲಿಲ್ಲ. ಇಂದೂವಿನ ತಂದೆ, ಇಂದೂವಿನ ತಾಯಿ, ಇಂದೂವಿನ ಸೋದರರು, ಮದನನ ಸೋದರ ಸೋದರಿಯರು, ತಂದೆ ಅವರ ರೇಲ್ವೆ ಮೇಲ್ ಸರ್ವಿಸ್‌ನಲ್ಲಿಯ ನೌಕರಿ, ಅವರ ಸ್ವಭಾವ, ಬಟ್ಟೆಗಳ ಮೆಚ್ಚಿಕೆ, ಊಟದ ರೂಢಿ ಇವೆಲ್ಲವುಗಳ ಪರಿಶೀಲನೆ ನಡೆದಿತ್ತು. ಮಧ್ಯೆ ಮಧ್ಯೆ ಮದನ ಮಾತುಕತೆ ಮುರಿದು ಬೇರೆ ಏನನ್ನೊ ಮಾಡಲಿಚ್ಛಿಸುತ್ತಿದ್ದ. ಆದರೆ ಇಂದೂ ನುಣುಚಿಕೊಳ್ಳುತ್ತಿದ್ದಳು. ವಿಷಣ್ಣತೆ ಮತ್ತು ವಿವಶತೆಗಳ ಚರಮ ಸ್ಥಿತಿಯಲ್ಲಿ ಮದನ ತನ್ನ ತಾಯಿಯ ವಿಷಯವನ್ನು ಎತ್ತಿದ. ಆಕೆ ಮದನ ಏಳು ವರ್ಷದವನಿದ್ದಾಗ ಕ್ಷಯರೋಗದಿಂದ ಸತ್ತಿದ್ದಳು. ಮದನ ಹೇಳ ಹತ್ತಿದ. "ಎಷ್ಟು ದಿನ ಆ ನಿರ್ಭಾಗ್ಯೆ ಬದುಕಿದ್ದಳೋ ಅಷ್ಟು ದಿನ ಬಾಬೂಜಿಯ ಕೈಯಲ್ಲಿ ಔಷಧಿಗಳ ಸೀಸೆಗಳೇ ಇದ್ದವು. ನಾವು ಆಸ್ಪತ್ರೆಯ ಮೆಟ್ಟಲುಗಳ ಮೇಲೆ ಮತ್ತು ಸಣ್ಣ ಪಾಶಿ ಮನೆಯಲ್ಲಿಯೆ ಇರುವೆಗಳ ಮಧ್ಯೆ ಮಲಗುತ್ತಿದ್ದೆವು. ಕೊನೆಗೊಂದು ದಿನ—ಮಾರ್ಚ ೨೮ರ ಸಂಜೆ"— ಮದನ್ ಸುಮ್ಮನಾದ. ಕೆಲವೆ ಕ್ಷಣಗಳಲ್ಲಿ ಅವನು ಅಳುವಿಕೆಯಿಂದ ಸ್ವಲ್ಪ ಇತ್ತ, ಮತ್ತು ಬಿಕ್ಕಳಿಕೆಯಿಂದ ಸ್ವಲ್ಪ ಅತ್ತ ವಿರುವ ಪರಿಸ್ಥಿತಿಯನ್ನು ತಲುಪಿದ್ದನು. ಇಂದೂ ಗಾಬರಿಗೊಂಡು ಮದನನ ತಲೆಯನ್ನು ತನ್ನ ಎದೆಗೆ ಅವಚಿಕೊಂಡಳು. ಆ ಅಳುವು ಇಂದೂಳನ್ನು ಕೂಡ ತನ್ನತನದಿಂದ ಇತ್ತ ಮತ್ತು ಪರಕೀಯತೆಯಿಂದ ಅತ್ತ ಮುಟ್ಟಿಸಿತ್ತು........ಮದನ ಇಂದೂನ ಬಗ್ಗೆ ಇನ್ನೂ ಹೆಚ್ಚು ತಿಳಿದುಕೊಳ್ಳಲು ಇಚ್ಛಿಸುತ್ತಿದ್ದ. ಆದರೆ ಇಂದೂ ಅವನ ಕೈಗಳನ್ನು ಹಿಡಿದುಕೊಂಡು ಹೇಳಿದಳು: "ನಾನಂತೂ ಓದಿದ ಹುಡುಗಿಯಲ್ಲ. ಆದರೆ ನಾನು ತಂದೆ ತಾಯಿ ನೋಡಿದ್ದೇನೆ. ಅಣ್ಣ ಅತ್ತಿಗೆಯರನ್ನು ನೋಡಿದ್ದೇನೆ. ಇನ್ನೂ ಹತ್ತಿಪ್ಪತ್ತು ಜನರನ್ನು ನೋಡಿದ್ದೇನೆ. ಹೀಗಾಗಿ ನಾನು ಅಷ್ಟಿಷ್ಟು ತಿಳಿದುಕೊಂಡಿರುವೆ. ನಾನು ಈಗ ನಿಮ್ಮವಳು ನನ್ನನ್ನು ನಾನು ನಿಮಗೆ ಅರ್ಪಿಸುವುದಕ್ಕೆ ಪ್ರತಿಯಾಗಿ ನಿಮ್ಮಿಂದ ಒಂದೇ ವಸ್ತುವನ್ನು ಬೇಡುತ್ತೇನೆ—"

ಅಳುತ್ತಿರುವಾಗ ಮತ್ತು ಆಮೇಲೆ ಕೂಡ ಒಂದು ಮಾದಕತೆಯಂತಹದು ಇತ್ತು. ಮದನ ಸ್ವಲ್ಪ ಅಸಹನೆ ಮತ್ತು ಸ್ವಲ್ಪ ಉದಾರತೆಗಳು ಬೆರೆತ ಶಬ್ದಗಳಲ್ಲಿ ಹೇಳಿದ.

"ಏನನ್ನು ಬೇಡುವೆ?....ನೀನು ಏನನ್ನೇ ಕೇಳು ನಾನು ಕೊಡುವೆ."

"ಪಕ್ಕಾ (ಖಂಡಿತವಾಗಿಯೂ)"—ಇಂದೂ ಕೇಳಿದಳು.

ಮದನ ಸ್ವಲ್ಪ ಅಸಹನೆಯಿಂದ ಹೇಳಿದ—"ಹಾಂ, ಹಾಂ....ಪಕ್ಕಾ ಎಂದೇ ಹೇಳಿವೆನಲ್ಲ." ಆದರೆ ಈ ಮಧ್ಯೆ ಮದನನ ಮನದಲ್ಲಿ ಒಂದು ಸಂಶಯ ತಲೆ

ದೋರಿತು—ನನ್ನ ವ್ಯಾಪಾರ ಮೊದಲೇ ಮಂದವಿದೆ. ಒಂದು ವೇಳೆ ಇಂದೂ ನನ್ನ ಅಳತೆಗೆ ಮೀರಿದ ಯಾವುದಾದರೂ ವಸ್ತುವನ್ನು ಕೇಳಿದಳೆಂದರೆ ಏನು ಮಾಡಬೇಕು ?

ಆದರೆ ಇಂದೂ ಮದನನ ಬಿರುಸಾದ ಚಾಚಿದ ಕೈಗಳನ್ನು ತನ್ನ ಮೃದುವಾದ ಕೈಗಳಲ್ಲಿ ಹಿಡಿದುಕೊಂಡು ಅವುಗಳ ಮೇಲೆ ತನ್ನ ಕೆನ್ನೆಯನ್ನು ಇರಿಸುತ್ತ ಹೇಳಿದಳು—

"ನಿಮ್ಮ ದುಃಖ ನನಗೆ ಕೊಡಿ."

ಮದನಗೆ ಅತ್ಯಧಿಕ ಆಶ್ಚರ್ಯ ಉಂಟಾಯಿತು. ಮತ್ತು ಜೊತೆಗೆ ತನ್‌ತಾನೆ ಒಂದು ದೊಡ್ಡ ಭಾರ ಇಳಿಯುತ್ತಿದ್ದಂತೆ ಅನಿಸಿತು. ಅವನು ಪುನಃ ಬೆಳದಿಂಗಳಲ್ಲಿ ಇಂದೂನ ಮುಖವನ್ನು ನೋಡಲು ಪ್ರಯತ್ನಿಸಿದ. ಆದರೆ ಏನನ್ನೂ ತಿಳಿದುಕೊಳ್ಳಲಾಗಲಿಲ್ಲ. ಇಂದೂ ಹೇಳಿದ್ದ ಬಹುಶಃ ಅವಳ ತಾಯಿ ಅಥವಾ ಯಾರೋ ಗೆಳತಿ ಹೇಳಿಕೊಟ್ಟ, ಬಾಯಿಪಾಠ ಮಾಡಿದ ವಾಕ್ಯವಿರಬಹುದೆಂದು ಅವನು ಯೋಚಿಸಿದ. ಆಗಲೆ ಬಿಸಿಯಾದ ಕಂಬನಿ ಮದನನ ಕೈಯ ಹಿಂಭಾಗದ ಮೇಲೆ ಉದುರಿತು. ಅವನು ಇಂದೂಳನ್ನು ಗಾಢವಾಗಿ ಅಪ್ಪಿಕೊಳ್ಳುತ್ತ ಹೇಳಿದ, "ಕೊಟ್ಟೆ" ಆದರೆ ಈ ಎಲ್ಲ ಮಾತುಗಳು ಮದನನಿಂದ ಅವನ ಸಂಶಯ ಪ್ರವೃತ್ತಿಯನ್ನು ಕಸಿದುಕೊಂಡಿದ್ದವು.

ಅತಿಥಿಗಳು ಒಬ್ಬೊಬ್ಬರಂತೆ ಎಲ್ಲರೂ ಬೀಳ್ಕೊಂಡರು. ಚಕಲಿ ಅತ್ತಿಗೆ ಇಬ್ಬರು ಮಕ್ಕಳನ್ನು ಬೆರಳುಗಳಿಗೆ ಅಂಟಿಸಿಕೊಂಡು, ಮೆಟ್ಟಲುಗಳ ಏರಿಳಿತದಿಂದ ಸಂಭಾಳಿಸಿಕೊಳ್ಳುತ್ತ ಬೇಗನೆ ಹೊರಟುಹೋದಳು. ದರಯಾಬಾದನ ಸೋದರತ್ತೆ ತನ್ನ "ನೌಲಖಹಾರ" ಮಾಯವಾದ ಬಗ್ಗೆ ಬೊಬ್ಬೆ ಇಟ್ಟಳು, ಚೀರಿದಳು ಮತ್ತು ಎಚ್ಚರದಪ್ಪಿದಳು. ಆ ಹಾರವು ಬಚ್ಚಲಲ್ಲಿ ಸಿಕ್ಕಿತು. ಜಹೇಜನಲ್ಲಿ ಬಂದ ತನ್ನ ಪಾಲಿನ ಮೂರು ಬಟ್ಟೆಗಳನ್ನು ತೆಗೆದುಕೊಂಡು ಹೊರಟುಹೋದಳು. ನಂತರ ಚಾಚಾ ಹೋದರು. ತಾವು ಜೆ. ಪಿ. ಆದ ವಿಷಯವು ಅವರಿಗೆ ತಾರ್ ಮುಖಾಂತರ ತಿಳಿದಿತ್ತು. ಬಹುಶಃ ಅದಕ್ಕಾಗಿಯೊ ಏನೋ ಅವರು ಪ್ರಜ್ಞೆಯಿಲ್ಲದೆ ಮದನನ ಬದಲು ಮದುಮಗಳ ಮುಖವನ್ನು ಚುಂಬಿಸಹೊರಟಿದ್ದರು.

ಮನೆಯಲ್ಲಿ ಮುದಿ ತಂದೆ ಮತ್ತು ತಮ್ಮ-ತಂಗಿಯರು ಉಳಿದರು. ಪುಟ್ಟ ದುಲಾರಿಯಂತು ಯಾವಾಗಲು ಭಾಭಿಯ ಬಗಲಲ್ಲಿಯೇ ಅಡಗಿರುತ್ತಿದ್ದಳು. ಮೊಹಲ್ಲಾಓಣಿಯ ಯಾವ ಹೆಂಗಸು ಮದುಮಗಳನ್ನು ನೋಡಬೇಕು ಅಥವಾ ನೋಡಬಾರದು, ನೋಡಿದರೆ ಎಷ್ಟು ವೇಳೆಯವರೆಗೆ ನೋಡಬೇಕು—ಇದೆಲ್ಲ ಅವಳ ಅಧಿಕಾರದಲ್ಲಿತ್ತು. ಕೊನೆಗೆ ಇದೆಲ್ಲ ಮುಗಿಯಿತು ಮತ್ತು ಇಂದೂ ಮೆಲ್ಲಮೆಲ್ಲಗೆ ಹಳಬಳಾಗತೊಡಗಿದಳು. ಆದರೆ ಕಾಲ್ಕಾಜಿಯ ಆ ಹೊಸ ಆವೇಶನದ ಜನರು ಇವೊತ್ತು ಕೂಡ ಹೋಗುವಾಗ ಬರುವಾಗ ಮದನನ ಎದುರು ನಿಂತುಬಿಡುತ್ತಿದ್ದರು ಮತ್ತು ಏನಾದರೂ ನೆಪ ಹೂಡಿ ಒಳಗೆ ಬಂದುಬಿಡುತ್ತಿದ್ದರು. ಇಂದೂ ಅವರನ್ನು

ನೋಡುತ್ತಲೇ ತಕ್ಷಣ ಮುಸುಕು ಎಳೆದುಕೊಳ್ಳುತ್ತಿದ್ದಳು. ಆದರೆ ಇಷ್ಟು ಅಲ್ಪ ಸಮಯದಲ್ಲಿ ಅವರಿಗೆ ಏನೆಲ್ಲ ಕಾಣಿಸುತ್ತಿತ್ತೋ ಅದು ಮುಸುಕು ಇಲ್ಲದಿದ್ದಾಗಲೂ ಕಾಣಲು ಶಕ್ಯವಿರಲಿಲ್ಲ.

ಮದನನ ವ್ಯಾಪಾರವು ಹೊಲಸು ಬಿರೋಜಾ (ಗಿಡಗಳಿಂದ ಸ್ರವಿಸುವ ಅಂಟಿನಂತಹ ವಸ್ತು)ದ್ದು ಇತ್ತು. ಎಲ್ಲಿಯೋ ದೊಡ್ಡ ಸಪ್ಲಾಯ್ ಮಾಡುವ ಎರಡು ಮೂರು ಅರಣ್ಯಗಳಲ್ಲಿ ಚೀಡ್ ಮತ್ತು ದೇವದಾರ ವೃಕ್ಷಗಳನ್ನು ಅರಣ್ಯದ ಬೆಂಕಿ ಸುಟ್ಟಿತ್ತು ಮತ್ತು ಅವು ಧಡ್ ಧಡ್ ಎಂದು ಸುಡುತ್ತ ಬೂದಿಗಪ್ಪಾಗಿ ಉಳಿದುಕೊಂಡಿದ್ದವು. ಮೈಸೂರು ಮತ್ತು ಆಸಾಮ ಕಡೆಯಿಂದ ತರಿಸಿದ ಬಿರೋಜಾ ತುಟ್ಟಿಯಾಗುತ್ತಿತ್ತು. ಜನರು ಅದಕ್ಕೆ ಹೆಚ್ಚು ಬೆಲೆ ತೆತ್ತು ಕೊಳ್ಳಲು ಸಿದ್ಧರಿರಲಿಲ್ಲ. ಮೊದಲೇ ಆದಾಯ ಕಡಿಮೆಯಾಗಿತ್ತು. ಅದರ ಮೇಲೆ ಮದನ ಬೇಗನೆ ಅಂಗಡಿ ಮತ್ತು ಅದರ ಜೊತೆಯ ಆಫೀಸ್ ಮುಚ್ಚಿ ಮನೆಗೆ ಬರುತ್ತಿದ್ದ. ಮನೆ ತಲುಪಿದ ಮೇಲೆ ಅವನ ಪ್ರಯತ್ನವೆಲ್ಲವೂ ಎಲ್ಲರೂ ಉಣ್ಣಲಿ, ಕುಡಿಯಲಿ ಮತ್ತು ತಮ್ಮ ತಮ್ಮ ಹಾಸಿಗೆಯೊಳಗೆ ನುಸುಳಿಕೊಳ್ಳಲಿ ಎಂಬುದೇ ಆಗಿರುತ್ತಿತ್ತು. ಅದಕ್ಕಾಗಿಯೇ ಊಟದ ಸಮಯದಲ್ಲಿ ಸ್ವತಃ ಅವನೇ ತಾಟುಗಳನ್ನು ತಂದು ತಂದು ತಂದೆ ಹಾಗೂ ತಂಗಿಯರ ಮುಂದೆ ಇಡುತ್ತಿದ್ದ ಮತ್ತು ಅವರು ಉಂಡ ಬಳಿಕ ಎಂಜಲು ಪಾತ್ರೆಗಳನ್ನು ಒಟ್ಟುಗೂಡಿಸಿ ನಳದ ಕೆಳಗೆ ಇಡುತ್ತಿದ್ದ. ಬಹೂ–ಭಾಭಿ ಮದನನ ಕಿವಿಯಲ್ಲಿ ಏನೋ ಊದಿದ್ದಾಳೆ. ಆದಕ್ಕೆಂತಲೆ ಇಂದು ಮನೆಗೆಲಸದಲ್ಲಿ ಆಸಕ್ತಿವಹಿಸುತ್ತಲಿದ್ದಾನೆ ಎಂದು ಎಲ್ಲರೂ ತಿಳಿದುಕೊಂಡಿದ್ದರು. ಮದನ ಎಲ್ಲರಿಗಿಂತಲೂ ಹಿರಿಯ. ಕುಂದನ ಅವನಿಗಿಂತ ಚಿಕ್ಕವ ಮತ್ತು ಪಾಷಿ ಎಲ್ಲರಿಗಿಂತಲೂ ಚಿಕ್ಕವನು. ತನ್ನ ಅತ್ತಿಗೆ ಎಲ್ಲರ ಜೊತೆ ಕುಳಿತು ಊಟ ಮಾಡಬೇಕೆಂದು ಕುಂದನ ಹಟ ಮಾಡಿದಾಗ, ತಂದೆ ಧನಿರಾಮ ಅಲ್ಲಿಯೆ ಗದ್ದರಿಸುತ್ತಿದ್ದ. "ನೀನು ಉಣ್ಣು, ಅವರು ಕೂಡ ಊಟ ಮಾಡುವರು." ನಂತರ ಅಡಿಗೆಮನೆಯಲ್ಲಿ ಅಲ್ಲಿ ಇಲ್ಲಿ ನೋಡಹತ್ತುತ್ತಿದ್ದ. ಬಹೂ ಊಟ ಮುಗಿಸಿ ಪಾತ್ರೆಗಳತ್ತ ಲಕ್ಷ್ಯ ಕೊಡಹೋದಾಗ ಬಾಬೂ ಧನಿರಾಮ ಅವಳನ್ನು ತಡೆಯುತ್ತ ಹೇಳುತ್ತಿದ್ದರು, "ಇರಲಿ ಬಿಡು ಬಹೂ, ಪಾತ್ರೆ ಬೆಳಗ್ಗೆ ತೊಳೆಯಬಹುದು." ಇಂದೂ ಹೇಳುತ್ತಿದ್ದಳು, "ಇಲ್ಲ ಬಾಬೂಜಿ, ನಾನು ಈಗಲೆ ಮುಗಿಸಿಬಿಡುವೆ ಚಟ್ಟನೆ." ಆಗ ಬಾಬೂ ಧನಿರಾಮ ಒಂದು ಕಂಪಿಸುವ ಧ್ವನಿಯಲ್ಲಿ, "ಮದನನ ತಾಯಿ ಇದ್ದಿದ್ದರೆ, ಬಹೂ, ಇವೆಲ್ಲವನ್ನೂ ನಿನಗೆ ಮಾಡಲು ಬಿಡುತ್ತಿದ್ದಳೇ ?" ಕೇಳುವರು. ಇಂದೂ ಒಮ್ಮೆಲೆ ತನ್ನ ಕೈಗಳನ್ನು ತಡೆದುಕೊಳ್ಳುತ್ತಿದ್ದಳು.

ಸಣ್ಣ ಪಾಷಿ ಅತ್ತಿಗೆಯೆಂದರೆ ನಾಚುತ್ತಿದ್ದ. ಮದುಮಗಳ ಉಡಿ ಬೇಗನೆ ತುಂಬಲಿ ಎಂದು ಚಕಲಿ ಅತ್ತಿಗೆ ಮತ್ತು ದರಿಯಾಬಾದನ ಸೋದರತ್ತೆಯರು ಒಂದು ಆಚರಣೆಯಲ್ಲಿ ಪಾಷಿಯನ್ನೇ ಇಂದೂಳ ಉಡಿಯಲ್ಲಿ ಹಾಕಿದ್ದರು. ಅಂದಿನಿಂದ

ಇಂದೂ ಅವನನ್ನು ಕೇವಲ ದೇವರ್ (ಮೈದುನ) ಎಂದಷ್ಟೇ ಅಲ್ಲ, ತನ್ನ ಮಗನೆಂದು ಭಾವಿಸಹತ್ತಿದ್ದಳು. ಪಾಷಿಯನ್ನು ಪ್ರೀತಿಯಿಂದ ತನ್ನ ತೋಳುಗಳಲ್ಲಿ ತುಂಬಿ ಕೊಳ್ಳಲು ಪ್ರಯತ್ನಿಸಿದಾಗಲೆಲ್ಲ ಅವನು ಗಾಬರಿಗೊಳ್ಳುತ್ತಿದ್ದ ಮತ್ತು ತನ್ನನ್ನು ತಾನು ಬಿಡಿಸಿಕೊಂಡು ಮಾರು ದೂರ ನಿಂತುಕೊಳ್ಳುತ್ತಿದ್ದ, ನೋಡುತ್ತಿದ್ದ, ನಗುತ್ತಿದ್ದ; ಆದರೆ ಸಮೀಪ ಮಾತ್ರ ಬರುತ್ತಿದ್ದಿಲ್ಲ—ದೂರ ಸರಿಯುತ್ತಿದ್ದಿಲ್ಲ. ಒಂದು ವಿಚಿತ್ರ ಸಂಘಟನೆಯೆನ್ನುವಂತೆ, ಇಂಥ ಸಮಯದಲ್ಲಿ ಬಾಬೂಜಿ ಯಾವಾಗಲೂ ಅಲ್ಲಿಯೇ ಇರುತ್ತಿದ್ದರು. ಅವರು ಪಾಷಿಯನ್ನು ಗದ್ದರಿಸುತ್ತ ಹೇಳುತ್ತಿದ್ದರು— "ಲೋ ಹೋಗೋ, ಪ್ರೀತಿ ಮಾಡುತ್ತಾಳೆ. ಈಗನಿಂದಲೆ ಗಂಡಸಾದೇನು?...." ದುಲಾರಿಯಂತೂ ಬೆನ್ನೇ ಬಿಡುತ್ತಿದ್ದಿಲ್ಲ. "ನಾನಂತೂ ಅತ್ತಿಗೆಯ ಜೊತೆ ಮಲಗುವೆ" ಎಂಬ ಅವಳ ಹಟವು ಬಾಬೂಜಿಯ ಅಂತರಂಗದಲ್ಲಿ ಯಾವುದೋ ಜನಾರ್ದನನನ್ನು ಜಾಗ್ರತಗೊಳಿಸಿತ್ತು. ಒಂದು ರಾತ್ರಿ ಇದೇ ಮಾತಿಗೆ ದುಲಾರಿಗೆ ಜೋರಾಗಿ ಏಟು ಬಿತ್ತು. ಅವಳು ಮನೆಯ ಅರ್ಧ ಪಕ್ಕಾ ಮತ್ತು ಅರ್ಧ ಕಚ್ಚಾ ಚರಂಡಿಯಲ್ಲಿ ಹೋಗಿ ಬಿದ್ದಳು. ಇಂದೂ ಧಾವಿಸಿ ಅವಳನ್ನು ಹಿಡಿದುಕೊಂಡಾಗ ತಲೆಯಮೇಲಿಂದ ದುಪ್ಪಟ್ಟಾ ಹಾರಿಹೋಯಿತು. ಮುಡಿದಿದ್ದ ಹೂವು ಮತ್ತು ಗುಬ್ಬಿಗಳು, ಬೈತಲೆಯ ಕುಂಕುಮ, ಕಿವಿಯಲ್ಲಿಯ ಕರ್ಣಫೂಲ—ಇವೆಲ್ಲ ಕಾಣಿಸಿ ದವು. "ಬಾಬೂಜಿ!" ಇಂದೂ ಉಸಿರೆಳೆಯುತ್ತ ಹೇಳಿದಳು. ದುಲಾರಿಯನ್ನು ಹಿಡಿದುಕೊಳ್ಳುವದು ಮತ್ತು ತಲೆಯಮೇಲೆ ದುಪ್ಪಟ್ಟಾ ಹೊತ್ತುಕೊಳ್ಳುವದು— ಇವುಗಳನ್ನು ಒಂದೇ ಸಲಕ್ಕೆ ಮಾಡುತ್ತ ಇಂದೂ ಬೆವರಿದಳು. ತಾಯಿ ಇಲ್ಲದ ಮಗುವನ್ನು ಎದೆಗೆ ಅವಚಿಕೊಂಡು ಇಂದೂ ಅವಳನ್ನು ಒಂದು ಹಾಸಿಗೆಯಮೇಲೆ ಮಲಗಿಸಿದಳು. ಆ ಹಾಸಿಗೆಯ ಮೇಲೆ ಬೇಕಾದಷ್ಟು ತಲೆದಿಂಬುಗಳು ಮತ್ತು ತೆಕ್ಕೆಗಳಿದ್ದವು. ಎಲ್ಲೂ ಕಾಲದಿಂಬುಗಳಿರಲಿಲ್ಲ ಮತ್ತು ಕಟ್ಟಿಗೆಯ ತೋಳುಗಳಿರ ಲಿಲ್ಲ. ಪೆಟ್ಟ ಒಂದೆಡೆ ಇರಲಿ, ಎಲ್ಲಿಯೂ ಯಾವದೇ ಚುಚ್ಚುವ ವಸ್ತು ಇರಲಿಲ್ಲ. ನಂತರ ಇಂದೂನ ಕೈ ಬೆರಳುಗಳು ದುಲಾರಿಯ ಬುಗುಟಿ ಎದ್ದ ತಲೆಯಮೇಲೆ ಚಲಿಸುತ್ತ ಅವಳಿಗೆ ನೋವಿನ ಜೊತೆಗೆ ಕಚಗುಳಿ ಕೊಡುತ್ತಿದ್ದವು. ದುಲಾರಿಯ ಕೆನ್ನೆಯಮೇಲೆ ದೊಡ್ಡ ದೊಡ್ಡ ಮತ್ತು ಸುಂದರವಾದ ಗುಳಿಗಳು ಬೀಳುತ್ತಿದ್ದವು. ಇಂದೂ ಈ ಗುಳಿಗಳನ್ನು ನಿರೀಕ್ಷಿಸುತ್ತ ಹೇಳಿದಳು—"ಹಾಯ್ ರೆ ಮುನ್ನಿ! ನಿನ್ನ ಅತ್ತೆ ಸಾಯಲಿ. ಎಂಥ ಗುಳಿ ಬೀಳುತ್ತಿವೆ ನಿನ್ನ ಕೆನ್ನೆಗಳಮೇಲೆ!...." ಮುನ್ನಿ ಮುನ್ನಿಯ ಹಾಗೆಯೇ ಹೇಳಿದಳು—"ಗುಳಿ, ನಿಮಗೂ ಬೀಳುತ್ತಿವೆ ಅತ್ತಿಗೆ!"

"ಹಾಂ ಮುನ್ನು"—ಎಂದು ಇಂದೂ ಒಂದು ತಣ್ಣನೆಯ ಉಸಿರು ಎಳೆದಳು.

ಮದನನಿಗೆ ಯಾವುದೋ ಮಾತಿನ ಬಗ್ಗೆ ಕೋಪವಿತ್ತು. ಅವನು ಸಮೀಪ ದಲ್ಲಿಯೆ ನಿಂತು ಇದೆಲ್ಲವನ್ನೂ ಕೇಳುತ್ತಲಿದ್ದನು.

"ಒಂದು ದೃಷ್ಟಿಯಿಂದ ಒಳ್ಳೆಯದೇ ಆಯಿತಲ್ಲವೆ?"—ಮದನ ಹೇಳಿದ.

"ಯಾಕೆ? ಒಳ್ಳೆಯದೇಕೆ?"—ಇಂದೂ ಕೇಳಿದಳು.

"ಹಾಂ—ಬಿದಿರು ಅಂಕುರಿಸಲಿಲ್ಲ, ಕೊಳಲು ಊದಲಿಲ್ಲ,—ಅತ್ತೆ ಇಲ್ಲದಿದ್ದರೆ ಜಗಳವೇ ಇರುವದಿಲ್ಲ."

ಇಂದೂ ಏಕಾಏಕಿ ಕೋಪಗೊಂಡು ನುಡಿದಳು,—"ನೀವು ಹೋಗಿ ಮಲಗಿರಿ. ಮಹಾ ಹೇಳಲಿಕ್ಕೆ ಬಂದಿದ್ದಾರೆ. ಮನುಷ್ಯ ಬದುಕಿದ್ದರೆ ಕಾದಾಡುತ್ತಾನೆ ಅಲ್ಲವೆ? ಸ್ಮಶಾನದ ಮೌನಕ್ಕಿಂತ ಜಗಳ ಒಳ್ಳೆಯದು. ನೀವು ಹೋಗಿ ಅಂದ್ರೆ! ಅಡಿಗೆ ಮನೆಯಲ್ಲಿ ನಿಮಗೇನು ಕೆಲಸ?"

ಮದನ ಅಳುಮುಖ ಮಾಡಿದ. ಬಾಬೂ ಧನಿರಾಮನ ಗದ್ದರಿಕೆಗೆ ಬಾಕಿ ಹುಡುಗರಂತೂ ಮೊದಲೇ ತಮ್ಮ ತಮ್ಮ ಹಾಸಿಗೆಗಳ ಮೇಲೆ ಹೋಗಿ ಬಿದ್ದು ಕೊಂಡಿದ್ದರು—ಅಂಚೆ ಕಚೇರಿಯಲ್ಲಿ ಪತ್ರಗಳು ಸಾರ್ಟ್ ಆದಹಾಗೆ. ಆದರೆ ಮದನ ಅಲ್ಲಿಯೇ ನಿಂತಿದ್ದ. ಬಯಕೆಯು ಅವನನ್ನು ಹಟಮಾರಿ ಮತ್ತು ನಿರ್ಲಜ್ಜ ನನ್ನಾಗಿ ಮಾಡಿತ್ತು. ಆದರೆ ಆ ಸಮಯದಲ್ಲಿ ಇಂದೂ ಕೂಡ ಅವನನ್ನು ಗದ್ದರಿಸಿ ದಾಗ ಅವನು ಅಳುವವನಂತೆ ಮುಖಮಾಡಿ ಒಳಗೆ ಹೊರಟುಹೋದ.

ಸಾಕಷ್ಟು ಸಮಯದವರೆಗೆ ಮದನ ಹಾಸಿಗೆಯ ಮೇಲೆ ಬಿದ್ದುಕೊಂಡು ಹೊರಳಾ ಡುತ್ತಲಿದ್ದ. ಆದರೆ ಬಾಬೂಜಿಯ ಯೋಚನೆಯಿಂದ ಇಂದೂಳನ್ನು ಕರೆಯುವ ಧೈರ್ಯ ಬರಲಿಲ್ಲ. ಮುನ್ನಿಯನ್ನು ಮಲಗಿಸಲು ಇಂದೂ ಹಾಡಿದ ಜೋಗುಳ— "ತೂ ಆ ನಿಂದಿಯಾ ರಾನಿ, ಬೋರಾಯಿ ಮಸ್ತಾನಿ" (ನೀ ಬಾರೆ ನಿದ್ರಾರಾಣಿ, ದಿವಾನಿ, ಮಸ್ತಾನಿ)—ಅವನಿಗೆ ಕೇಳಿಸಿದಾಗ ಅವನ ಅಸಹನೆಯು ಮಿತಿಮೀರಿತು.

ಯಾವ ಜೋಗುಳವು ಮುನ್ನಿಯನ್ನು ಮಲಗಿಸುತ್ತಿತ್ತೋ ಅದೇ ಮದನನ ನಿದ್ರೆ ಯನ್ನು ಓಡಿಸುತ್ತಿತ್ತು. ತನ್ನಮೇಲೆ ತಾನು ಬೇಸತ್ತು ಅವನು ಜೋರಾಗಿ ಚಾದರ ಎಳೆದುಕೊಂಡ. ಬಿಳಿಯ ಚಾದರನ್ನು ತಲೆಯಮೇಲೆ ಎಳೆದುಕೊಂಡದ್ದ ರಿಂದ ಮತ್ತು ಉಸಿರಾಟ ನಿಲ್ಲಿಸಿದ್ದರಿಂದ ಉದ್ದೇಶವಿಲ್ಲವೆ ಒಂದು ಹೆಣದ ಕಲ್ಪನೆ ಮೂಡಿತು. ಮದನನಿಗೆ ಹೀಗೆ ಅನಿಸಹತ್ತಿತು, ತಾನು ಸತ್ತಿದ್ದಾನೆ, ತನ್ನ ಹೆಂಡತಿ ಇಂದೂ ತನ್ನ ಪಕ್ಕದಲ್ಲಿ ಕುಳಿತು ಜೋರಾಗಿ ತಲೆ ಬಡಿದುಕೊಳ್ಳುತ್ತಿದ್ದಾಳೆ, ಗೋಡೆಗೆ ಮುಂಗೈ ಬಡಿದು ಬಡಿದು ಬಳೆಗಳನ್ನು ಒಡೆದುಹಾಕುತ್ತಿದ್ದಾಳೆ. ಮತ್ತು ಏಳುತ್ತ, ಬೀಳುತ್ತ, ಚೀರುತ್ತ ಅಡಿಗೆಮನೆಗೆ ಹೋಗುತ್ತಾಳೆ, ಒಲೆಯ ಬೂದಿಯನ್ನು ತಲೆಯಮೇಲೆ ಸುರುವಿಕೊಳ್ಳುತ್ತಿದ್ದಾಳೆ, ನಂತರ ಹೊರಗೆ ಓಡಿಬರುತ್ತಾಳೆ ಮತ್ತು ಕೈಯೆತ್ತಿ ಓಣಿಯಲ್ಲಿನ ಮೊಹಲ್ಲಾದಲ್ಲಿನ ಜನರ ಬಳಿ ದುಃಖ ತೋಡಿಕೊಳ್ಳುತ್ತಾಳೆ— "ಅಯ್ಯೋ, ನಾನು ಹಾಳಾದೆ ಲೋಗರೆ!" ಈಗ ಅವಳಿಗೆ ದುಪ್ಪಟ್ಟಾದ ಪರವೆ ಇಲ್ಲ, ಕಮೀಜಿನ ಪರವೆ ಇಲ್ಲ. ಬೈತಲೆಯ ಕುಂಕುಮ, ತುರುಬಿನಲ್ಲಿಯ ಹೂವು, ಗುಬ್ಬಿ

*

ಗಳೆಲ್ಲ ನಗ್ನವಾಗಿವೆ. ಭಾವನೆಗಳ, ವಿಚಾರಗಳ ಕಲ್ಪನೆ ಕೂಡ ಹಾರಿಹೋಗಿತ್ತು.

ಮದನನ ಕಣ್ಣುಗಳಿಂದ ಎಲ್ಲೆ ಮೀರಿ ನೀರು ಸುರಿಯುತ್ತಿತ್ತು. ವಾಸ್ತವದಲ್ಲಿ ಇಂದೂ ಅಡಿಗೆಮನೆಯಲ್ಲಿ ನಗುತ್ತಿದ್ದಳು, ಕ್ಷಣದಲ್ಲಿಯೆ ತನ್ನ ಸೌಭಾಗ್ಯವು ಅಳಿದು ಪುನಃ ಮರಳಿ ಬಂದುದರ ಕಲ್ಪನೆಯೂ ಇಲ್ಲದೆ. ಮದನ ವಾಸ್ತವ ಲೋಕಕ್ಕೆ ಬಂದಾಗ ಕಣ್ಣೀರು ಒರಸಿಕೊಳ್ಳುತ್ತ ತನ್ನ ಅಳುವಿನ ಬಗ್ಗೆ ನಗಹತ್ತಿದ. ಅಲ್ಲಿ ಇಂದೂ ನಗುತ್ತಿದ್ದಳಾದರೂ ಅವಳ ನಗು ಅದುಮಿದ ಹಾಗೆ ಇತ್ತು. ಬಾಬೂಜಿಯ ಯೋಚನೆಯಿಂದ ಅವಳು ಎಂದೂ ಎತ್ತರದ ಧ್ವನಿಯಲ್ಲಿ ನಗುತ್ತಿದ್ದಿಲ್ಲ. ಕಿಲಿಕಿಲಿ ನಗುವು ನಗ್ನತೆ ಇದ್ದಂತೆ; ಮೌನವು ದುಪ್ಪಟ್ಟಾ ಇದ್ದಹಾಗೆ ಮತ್ತು ಅದುಮಿದ ನಗುವು ಮುಸುಕು ಇದ್ದಂತೆ. ನಂತರ ಮದನ ಇಂದೂಳನ್ನು ತನ್ನ ಕಲ್ಪನಾಮೂರ್ತಿ ಮಾಡಿದ. ಅದರ ಜೊತೆ ನೂರಾರು ಮಾತಾಡಿದ, ತಾನು ಈವರೆಗೂ ಮಾಡದಿದ್ದಷ್ಟು ಪ್ರೀತಿ ಮಾಡಿದ. ಅವನು ಪುನಃ ತನ್ನ ಜಗತ್ತಿಗೆ ಹಿಂದಿರುಗಿದರೆ ತನ್ನ ಪಕ್ಕದ ಹಾಸಿಗೆ ಖಾಲಿ ಇತ್ತು. ಅವನು ಮೆಲ್ಲಗೆ ಕೂಗಿದ—ಇಂದೂ ! ಬಳಿಕ ಸುಮ್ಮನಾದ. ಆ ಕಸವಿಸಿಯಲ್ಲಿ ಆ ದಿವಾನಿ, ಮಸ್ತಾನಿ ನಿದ್ರೆಯು ಅವನನ್ನು ಅಪ್ಪಿಕೊಂಡಿತು. ಒಂದು ತೂಕಡಿಕೆ ಬಂದಂತಾಯಿತು. ಆದರೆ ಅದರ ಜೊತೆಯೆ ಮದುವೆಯ ರಾತ್ರಿ ನೆರೆಮನೆಯ ಸಿಬಕೆನ ಎಮ್ಮೆ ಮುಖದ ಹತ್ತಿರ ಮಸುಗುಡುತ್ತಿರುವಂತೆ ಅನ್ನಿಸ ಹತ್ತಿತ್ತು. ಅವನು ಒಂದು ಪ್ರಕ್ಷುಬ್ಧ ಮನಃಸ್ಥಿತಿಯಲ್ಲಿ ಎದ್ದು ಕುಳಿತು ಅಡಿಗೆಯ ಮನೆಯ ಕಡೆ ನೋಡುತ್ತ, ತಲೆ ತುರಿಸುತ್ತ, ಎರಡು-ಮೂರು ಸಲ ಆಕಳಿಸಿ ಅಡ್ಡಾದ. ನಿದ್ರೆ ಹತ್ತಿತು.

ಮದನ ತನ್ನ ಕಿವಿಗಳಿಗೆ ಸಂದೇಶವನ್ನು ಕೊಟ್ಟು ಮಲಗಿದ್ದನೇನೋ ಎನ್ನುವಂತೆ, ಇಂದೂಳ ಬಳೆಗಳು ಹಾಸಿಗೆಯ ಸುಕ್ಕುಗಳನ್ನು ಸರಿಮಾಡುತ್ತ ಕಣಕಣ ಮಾಡಿದಾಗ ಅವನು ಗಡಬಡಿಸಿ ಎದ್ದುಕುಳಿತನು. ಹೀಗೆ ಒಮ್ಮೆಲೆ ಎಚ್ಚರಗೊಂಡಿದ್ದರಿಂದ ಪ್ರೇಮದ ಭಾವನೆಯು ಇನ್ನಿಷ್ಟು ಹೆಚ್ಚು ತೀವ್ರಗೊಂಡಿತ್ತು. ಪ್ರೇಮದ ಮಗ್ಗಲುಗಳನ್ನು ಮುರಿಯದೆ ಮನುಷ್ಯ ಮಲಗಿ ಆಮೇಲೆ, ಒಮ್ಮೆಲೆ ಎದ್ದರೆ ಪ್ರೇಮವು ಉಸಿರುಗಟ್ಟಿಸುತ್ತದೆ. ಮದನನ ದೇಹವೆಲ್ಲ ಒಳಗಿನ ಬೆಂಕಿಯಿಂದ ದಹಿಸುತ್ತಿತ್ತು. ಇದೇ ಅವನ ಸಿಟ್ಟಿನ ಕಾರಣವಾಗಿತ್ತು. ಅದಕ್ಕೆಂದೇ ಅವನು ಉದ್ರಿಕ್ತ ರೀತಿಯಲ್ಲಿ ಅಂದ—" ಓ........ನೀನು ಬಂದೆಯಾ ? "

" ಹಾಂ. "

" ಮುನ್ನಿ ಸತ್ತಳೇನು ? "

ಇಂದೂ ಬಾಗಿದ್ದವಳು ತಟ್ಟನೆ ನೆಟ್ಟಗೆ ನಿಂತಳು. "ಹಾಯ್ ರಾಮ"—ಅವಳು ಮೂಗಿನಮೇಲೆ ಬೆರಳಿಡುತ್ತ, ಕೈ ಹಿಚುಕಿಕೊಳ್ಳುತ್ತ ಅಂದಳು :

" ಏನು ಮಾತಾಡುತ್ತಿರುವಿರಿ ? ....ಅವಳೇಕೆ ಸಾಯಬೇಕು ? ಬಡಪಾಯಿ....

ತಂದೆತಾಯಿಯರಿಗೆ ಒಬ್ಬಳೇ ಮಗಳಾಗಿದ್ದಾಳೆ."

"ಹಾಂ....ಅತ್ತಿಗೆಗೆ ಒಬ್ಬಳೇ ನಾದಿನಿ."—ಮದನ ಹೇಳಿದ. ನಂತರ ಒಮ್ಮೆಲೆ ದರ್ಪಯುಕ್ತ ಧ್ವನಿಯನ್ನು ಗ್ರಹಿಸಿ, "ಹೆಚ್ಚು ಸಲಿಗೆ ಕೊಡಬೇಡ ಆ ದೆವ್ವಕ್ಕೆ" ಎಂದು ಹುಕುಂ ಕೊಟ್ಟ.

"ಯಾಕೆ? ಅದರಲ್ಲೇನು ಪಾಪವಿದೆ?"

"ನಿನ್ನ ಬೆನ್ನನ್ನೇ ಬಿಡುವದಿಲ್ಲ—ಇದೇ ಒಂದು ಪಾಪ. ಯಾವಾಗ ನೋಡು ಆವಾಗ ಜಿಗಳೆ ಹಾಗೆ ಅಂಟಿಕೊಂಡಿರುತ್ತಾಳೆ. ದೂರವೇ ಸರಿಯುವದಿಲ್ಲ"—ಮದನ ಮತ್ತಿಷ್ಟು ಕೆರಳುತ್ತ ಹೇಳಿದ.

"ಹಾಂ"—ಇಂದೂ ಮದನನ ಚಾರಪಾಯಿಯ ಮೇಲೆ ಕೂಡುತ್ತ ಹೇಳಿದಳು—"ಅಕ್ಕತಂಗಿಯರನ್ನು, ಹೆಣ್ಣುಮಕ್ಕಳನ್ನು ಹೀಗೆ ಧಿಕ್ಕರಿಸಬಾರದು. ಪಾಪ, ಎರಡು ದಿನಗಳ ಅತಿಥಿಗಳವು. ಇಂದಿಲ್ಲ ನಾಳೆ, ನಾಳೆ ಇಲ್ಲ ನಾಡದು—ಒಂದು ದಿನ ಹೊರಟೇ ಹೋಗುತ್ತಾರೆ." ಅನಂತರ ಇಂದೂ ಏನೋ ಹೇಳಬಯಸಿದ್ದಳು. ಆದರೆ ಅವಳು ಸುಮ್ಮನಾದಳು. ಅವಳ ಕಣ್ಣುಗಳೆದುರು ತನ್ನ ತಾಯಿ-ತಂದೆ, ಸೋದರ-ಸೋದರಿಯರು, ಚಾಚಾ, ತಾಯಾ—ಎಲ್ಲರೂ ಸುಳಿದು ಹೋದರು. ಎಂದೋ ಅವಳು ಕೂಡ ಅವರೆಲ್ಲರ ಅಕ್ಕರೆಯ ಕೂಸಾಗಿದ್ದಳು. ಏವೆಯಿಕ್ಕುವಷ್ಟರಲ್ಲಿ ಅನ್ಯಳಾದಳು. ಬಳಿಕ ಹಗಲು ರಾತ್ರಿ ಅವಳನ್ನು ಹೊರಹಾಕುವ ಮಾತುಕತೆ ನಡೆದವು—ಮನೆಯಲ್ಲಿ ಒಂದು ದೊಡ್ಡ ಹುತ್ತವಿದೆ, ಅದರಲ್ಲಿ ಒಂದು ಹೆಣ್ಣು ನಾಗರವಿದೆ, ಅದನ್ನು ಹಿಡಿದು ಹೊರಹಾಕದವರೆಗೆ ಮನೆಯ ಜನರು ಆರಾಮಾಗಿ ನಿದ್ರೆಮಾಡಲಾರರು ಎನ್ನುವ ಹಾಗೆ. ದೂರದೂರದಿಂದ ಮಂತ್ರವಾದಿಗಳು, ಮೂಗು ಚುಚ್ಚುವವರು, ಹಲ್ಲು ಮುರಿಯುವವರು ಮತ್ತು ಹಾವಾಡಿಗರನ್ನು ಕರೆಯಿಸಲಾಯಿತು. ದೊಡ್ಡ ದೊಡ್ಡ ಧನ್ವಂತರಿಗಳು ಮತ್ತು ಮೋತಿಸಾಗರರು ಬಂದರು. ಕೊನೆಗೊಂದು ದಿನ, ಉತ್ತರ-ಪಶ್ಚಿಮದ ಕಡೆಯಿಂದ ಕೆಂಪು ಬಿರುಗಾಳಿ ಬಂದಿತು. ಅದು ಸ್ವಚ್ಛವಾದ ನಂತರ ಒಂದು ಲಾರಿ ನಿಂತಿತ್ತು. ಅದರಲ್ಲಿ ಗೋಟಾದಂಚಿನ ಉಡಿಗೆಯುಟ್ಟ ಓರ್ವ ಮದುಮಗಳು ಕುಳಿತಿದ್ದಳು. ಹಿಂದೆ ಮನೆಯಲ್ಲಿ, ಒಂದು ಸುರ್ ಬಾರಿಸುತ್ತಿದ್ದ ಶಹನಾಯಿ ಬೀನ್‌ದ ಧ್ವನಿಯ ಹಾಗೆ ಅನಿಸುತ್ತಿತ್ತು. ನಂತರ ಧಡಮ್ಮನೆ ಲಾರಿ ಹೊರಟಿತು.......

ಮದನ ಒಂದಿಷ್ಟು ರೇಗಿ, "ನೀವು ಹೆಂಗಸರು ಬಹಳ ಧೂರ್ತರಿರುವಿರಿ. ಇನ್ನೂ ನಿನ್ನೆ ತಾನೆ ಈ ಮನೆಗೆ ಬಂದಿರುವೆ. ಇಲ್ಲಿಯ ಎಲ್ಲ ಜನರು ನನಗಿಂತ ಹೆಚ್ಚು ಅಚ್ಚುಮೆಚ್ಚಿನವರಾಗಿಬಿಟ್ಟಿದ್ದಾರೆ" ಅಂದ.

"ಹಾಂ!"—ಇಂದೂ ಸಾಕ್ಷಿ ಕೊಟ್ಟಹಾಗೆ ಹೇಳಿದಳು.

"ಇದೆಲ್ಲ ಸುಳ್ಳು....ಹೀಗೆ ಆಗಲು ಶಕ್ಯವೇ ಇಲ್ಲ."

" ನಿಮ್ಮ ಅಭಿಪ್ರಾಯದಲ್ಲಿ....ನಾನು...."

" ಇದೆಲ್ಲ ತೋರಿಕೆ. ಹಾಂ...."

" ಹೌದೆ ? " ಇಂದೂ ಕಣ್ಣಲ್ಲಿ ನೀರು ತರುತ್ತ ಕೇಳಿದಳು. " ನನ್ನದಿದೆಲ್ಲ ತೋರಿಕೆಯೇನು ? " ಇಂದೂ ಎದ್ದು ತನ್ನ ಹಾಸಿಗೆಯ ಮೇಲೆ ಹೋದಳು. ತಲೆದಿಂಬಿನಲ್ಲಿ ಮುಖ ಮುಚ್ಚಿಕೊಂಡು ಬಿಕ್ಕಹತ್ತಿದಳು. ಮದನ ಅವಳನ್ನು ಸಮಾಧಾನ ಮಾಡುವವನೇ ಇದ್ದ. ಅಷ್ಟರಲ್ಲಿ ಸ್ವತಃ ಅವಳೇ ಎದ್ದು ಮದನನ ಹತ್ತಿರ ಬಂದಳು. ಮತ್ತು ಗಟ್ಟಿಯಾಗಿ ಅವನ ಕೈಗಳನ್ನು ಹಿಡಿದುಕೊಳ್ಳುತ್ತ ಕೇಳಿದಳು— " ನೀವು ಯಾವಾಗಲೂ ಹೊಟ್ಟೆಯುರಿಸುವ ಹಾಗೆ ಮಾತಾಡುವಿರಿ. ಏನಾಗಿದೆ ನಿಮಗೆ ? "

ಪತಿಯ ಪ್ರತಿಷ್ಠೆ ಮತ್ತು ವರ್ಚಸ್ಸುಗಳನ್ನು ಬೀರಲು ಮದನನಿಗೆ ಒಂದು ನೆಪ ಕೈಗೆ ಸಿಕ್ಕಿತು—" ಹೋಗು ಹೋಗು....ಹೋಗಿ ಮಲಗು. ನನಗೆ ನಿನ್ನಿಂದ ಏನನ್ನೂ ಪಡೆಯಬೇಕಿಲ್ಲ "—ಮದನ ಹೇಳಿದ.

" ನಿಮಗೇನೂ ಪಡೆಯುವದು ಬೇಕಿಲ್ಲ. ಆದರೆ ನನಗೆ ಪಡೆಯುವದಿದೆ, ಜೀವನದುದ್ದಕ್ಕೂ ಪಡೆಯುವದಿದೆ "—ಇಂದೂ ಹೇಳಿದಳು.

ಬಳಿಕ ಅವಳು ತಾನು ಪಡೆಯಬೇಕಾದುದನ್ನು ಫಕ್ಕನೆ ಕಿತ್ತುಕೊಂಡು ಓಡಿ ಹೋಗುವ ಹೊಂಚುಹಾಕಹತ್ತಿದಳು. ಮದನ ಅವಳನ್ನು ದೂರ ತಳ್ಳುತ್ತಿದ್ದ. ಅವಳು ಅವನನ್ನು ಅಪ್ಪುತ್ತಿದ್ದಳು, ತಬ್ಬಿಕೊಳ್ಳುತ್ತಿದ್ದಳು. ಅವಳು ಪ್ರವಾಹದಲ್ಲಿ ತೇಲಿಹೋಗುವ ಬದಲು ಜಲಪಾತದ ತೀವ್ರ ಧಾರೆಯನ್ನು ಕತ್ತರಿಸುತ್ತ ಕೇವಲ ಮೇಲಕ್ಕೆ ಮಾತ್ರ ಮುಟ್ಟಲು ಬಯಸುವ ಮೀನಿನ ಹಾಗಿದ್ದಳು. ಚಿವುಟುತ್ತ, ಕೈಗಳನ್ನು ಹಿಡಿದುಕೊಳ್ಳುತ್ತ, ಅಳುತ್ತ ನಗುತ್ತ, ಅವಳು ಹೇಳುತ್ತಿದ್ದಳು :

" ಪುನಃ ನನಗೆ ಕುಟಿಲೆ, ದುಷ್ಟ ಹೆಂಗಸು ಎನ್ನುವಿರೇನು ? "

" ಹಾಗಂತೂ ಎಲ್ಲ ಹೆಂಗಸರೂ ಇರುತ್ತಾರೆ."

" ತಡೆಯಿರಿ....ನಿಮ್ಮದಂತು...." ಇಂದೂ ಬೈಯುತ್ತಿರಬಹುದೆಂದು ಅನಿಸುತ್ತಿತ್ತು. ಅವಳು ಬಾಯಿಯಲ್ಲಿಯೇ ಏನನ್ನೋ ಬಡಬಡಿಸಿದಳು. ಮದನ ಅವಳ ಕಡೆ ಹೊರಳುತ್ತ, " ಏನಂದೆ ? " ಎಂದು ಕೇಳಿದ. ಈ ಸಲ, ಇಂದೂ ಅವನಿಗೆ ಕೇಳಿಸುವಷ್ಟು ಧ್ವನಿಯಲ್ಲಿ ಅದನ್ನು ಪುನಃ ಹೇಳಿದಳು. ಮದನ ಕಿಲಿಕಿಲಿ ನಕ್ಕ. ಮರುಕ್ಷಣದಲ್ಲಿಯೆ ಇಂದೂ ಮದನನ ತೋಳುಗಳಲ್ಲಿದ್ದಳು ಮತ್ತು ಹೇಳುತ್ತಿದ್ದಳು :

" ನೀವು ಗಂಡಸರಿಗೆ ಏನು ಗೊತ್ತು ? ಯಾರಲ್ಲಿ ಪ್ರೇಮವಿರುತ್ತದೆಯೋ ಅವನ ಎಲ್ಲ ಸಣ್ಣವರು ದೊಡ್ಡವರು ಅಚ್ಚುಮೆಚ್ಚಾಗಿಬಿಡುವರು. ತಂದೆ, ಅಣ್ಣ ತಮ್ಮ ಅಕ್ಕ ತಂಗಿ, ಅಷ್ಟೇ ಏಕೆ ? " ನಂತರ ಏಕಾಏಕಿ ದೂರ ನೋಡುತ್ತ,

" ನಾನಂತು ದುಲಾರಿ ಮುನ್ನಿಯ ಮದುವೆ ಮಾಡುವೆ " ಎಂದಳು.

"ಅಳತೆ ಮೀರಿತು. ಇನ್ನೂ ಒಂದು ಕೈ ಎತ್ತರ ಬೆಳೆದಿಲ್ಲ, ಆಗಲೇ ಅವಳ ಮದುವೆಯ ಬಗ್ಗೆಯೂ ಯೋಚಿಸತೊಡಗಿದೆ?"—ಮದನ ಅಂದ.

"ನಿಮಗೆ ಒಂದು ಕೈ ಎತ್ತರ ಕಾಣಿಸುತ್ತಾಳೆ ಅಲ್ಲವೆ?" ಇಂದೂ ಹೇಳಿದಳು. ನಂತರ ಎರಡೂ ಕೈಗಳನ್ನು ಮದನನ ಕಣ್ಣುಗಳ ಮೇಲೆ ಇಡುತ್ತ "ಸ್ವಲ್ಪ ಕಣ್ಣು ಮುಚ್ಚಿಕೊಳ್ಳಿರಿ. ಆಮೇಲೆ ತೆರೆಯಿರಿ" ಎಂದಳು.

ಮದನ ನಿಜವಾಗಿಯೂ ಕಣ್ಣು ಮುಚ್ಚಿಕೊಂಡ. ಆದರೆ ಸ್ವಲ್ಪ ಸಮಯದವರೆಗೆ ಅವನು ಕಣ್ಣು ತೆರೆಯದಿದ್ದಾಗ, "ಈಗ ತೆರೆಯಿರಲ್ಲ! ಇಷ್ಟು ಸಮಯದಲ್ಲಿ ನಾನು ಮುದುಕಿ ಆಗುವೆನು" ಇಂದೂ ಹೇಳಿದಳು. ಮದನ ಕಣ್ಣು ತೆರೆದ ಕೂಡಲೆ ಒಂದು ಕ್ಷಣದವರೆಗೆ ತನ್ನೆದುರು ಕುಳಿತವಳು ಇಂದೂ ಅಲ್ಲ, ಮತ್ತೆ ಯಾರೋ ಕುಳಿತಿರುವರು ಎಂದು ಅವನಿಗೆ ಭಾಸವಾಯಿತು. ಅವನು ವಿವಶನಾದ.

"ನಾನಂತು ಈಗಿನಿಂದಲೆ, ನಾಲ್ಕು ಸೂಟ್ (ಉಡುಪು) ಮತ್ತು ಕೆಲವು ಪಾತ್ರೆಗಳನ್ನೂ ಬೇರೆ ಇಟ್ಟಿರುವೆ ಅವಳಿಗಾಗಿ"—ಇಂದೂ ಹೇಳಿದಳು.

ಮದನ ಉತ್ತರಿಸದಿದ್ದಾಗ, ಅವನನ್ನು ಅಲ್ಲಾಡಿಸುತ್ತ ಇಂದೂ ಹೇಳಿದಳು: "ನೀವೇಕೆ ಚಿಂತೆ ಮಾಡುವಿರಿ? ನಮ್ಮ ವಚನ ನೆನಪಿಲ್ಲವೆ? ನೀವು ನಿಮ್ಮ ದುಃಖ ನನಗೆ ಕೊಟ್ಟುಬಿಟ್ಟಿರುವಿರಿ." "ಉಂ" ಮದನ ಮೆಟ್ಟಿಬಿದ್ದವನಂತೆ ಹೇಳಿದ ಮತ್ತು ನಿಶ್ಚಿಂತನಾದವನಂತೆ ಕಂಡ. ಆದರೆ ಈಗ ಅವನು ಇಂದೂಳನ್ನು ಅಪ್ಪಿಕೊಂಡಾಗ, ಅದು ಕೇವಲ ಒಂದು ದೇಹವಾಗಿರಲಿಲ್ಲ. ಜೊತೆಜೊತೆಗೆ ಒಂದು ಆತ್ಮವೂ ಬೆರೆತಿತ್ತು.

ಮದನನಿಗೆ ಇಂದೂ ಕೇವಲ ಆತ್ಮವಾಗಿದ್ದಳು. ಅವಳ ದೇಹವೂ ಇತ್ತು. ಆದರೆ ಅದು ಯಾವಾಗಲೂ ಒಂದಿಲ್ಲ ಒಂದು ಕಾರಣದಿಂದ ಮದನನ ಕಣ್ಣುಗಳಿಂದ ಮರೆಯಾಗಿಯೇ ಇರುತ್ತಿತ್ತು. ಸ್ವಪ್ನಗಳ ಎಳೆಗಳಿಂದ ನೇಯ್ದ, ನಿಟ್ಟುಸಿರುಗಳ ಹೊಗೆಯಿಂದ ಬಣ್ಣ ಕೊಟ್ಟ, ಕಿಲಕಿಲ ನಗುವಿನ ಜರತಾರಿಯಿಂದ ಕಣ್ಣು ಕೋರೈಸುವ ಒಂದು ಪರದೆ ಯಾವಾಗಲೂ ಇಂದೂಳನ್ನು ಮುಚ್ಚಿಯೇ ಇಡುತ್ತಿತ್ತು. ಮದನನ ಕಣ್ಣು ಮತ್ತು ಕೈಗಳ ದುಶ್ಶಾಸನರು, ಸಾಮಾನ್ಯರ ಭಾಷೆಯಲ್ಲಿ ಹೆಂಡತಿಯೆಂದು ಕರೆಯಲ್ಪಡುವ ದ್ರೌಪದಿಯ ಚರಿತ್ರ ಹರಣ ಮಾಡುತ್ತಲೇ ಬಂದಿದ್ದರು. ಆದರೆ ಯಾವಾಗಲೂ ಅವಳಿಗೆ ಆಕಾಶಗಳಿಂದ ಥಾನುಗಟ್ಟಲೆ, ಗಜಗಟ್ಟಲೆ ಬಟ್ಟೆಯು ನಗ್ನತೆಯನ್ನು ಮುಚ್ಚಲು ಸಿಗುತ್ತಲೇ ಬಂದಿತ್ತು. ದುಶ್ಶಾಸನರು ದಣಿದು, ಸೋತು, ಅಲ್ಲಿ ಇಲ್ಲಿ ಬಿದ್ದುಕೊಂಡಿದ್ದರು. ಆದರೆ ದ್ರೌಪದಿ ಅಲ್ಲಿಯೇ ನಿಂತಿದ್ದಳು. ಮಾನ ಮತ್ತು ಪವಿತ್ರತೆಗಳ ಸೀರೆಯಲ್ಲಿ ಅಲಂಕೃತಳಾದ ಆಕೆ ದೇವಿಯ ಹಾಗೆ ಕಾಣಿಸುತ್ತಿದ್ದಳು....ಮತ್ತು....ಮದನನ ಹಿಂದಕ್ಕೆ ಸರಿಯುತ್ತಿದ್ದ ಕೈಗಳು ಲಜ್ಜೆಯ ಬೆವರಿನಿಂದ

ತೊಯ್ಯುತ್ತಿದ್ದವು. ಒಣಗಿಸಲೆಂದು ಅವನು ಅವುಗಳನ್ನು ಗಾಳಿಯಲ್ಲಿ ಮೇಲಕ್ಕೆ ಎತ್ತಿ ಹಿಡಿಯುತ್ತಿದ್ದ. ಬಳಿಕ ಹಸ್ತಗಳನ್ನು ಸಂಪೂರ್ಣವಾಗಿ ಹಿಗ್ಗಿಸುತ್ತ, ಒಂದು ಆಘಾತದ ಸ್ಥಿತಿಯಲ್ಲಿ ಕಂಪಿಸುತ್ತ, ತನ್ನ ಕಣ್ಣುಗಳ ಅರಳುವ ಕರಗುವ ಆಲಿಗಳೆದುರು ಇಡುತ್ತಿದ್ದ ಮತ್ತು ಬೆರಳುಗಳ ಸಂದಿಯೊಳಗಿಂದ ಇಣಕುತ್ತಿದ್ದ—ಇಂದೂಳ ಅಮೃತ ಶಿಲೆಯ ದೇಹ, ಮೋಹಕ ಬಣ್ಣ ಮತ್ತು ಮಾಂಸಲ ದೇಹ ಎದುರಿಗೆ ಬಿದ್ದುಕೊಂಡಿದೆ....ಉಪಯೋಗಕ್ಕೆ ಸಮೀಪ ಆದರೆ ಉಪಭೋಗಕ್ಕೆ ದೂರ.... ಎಂದಾದರೂ ಇಂದೂಳನ್ನು ಅಡ್ಡಗಟ್ಟಿದಾಗ, ಈ ಬಗೆಯ ಮಾತುಕತೆಯಾಗುತ್ತಿತ್ತು:

"ಹಾಯ್! ಮನೆಯಲ್ಲಿ ಸಣ್ಣವರು, ದೊಡ್ಡವರು ಎಲ್ಲರೂ ಇದ್ದಾರೆ. ಅವರೇನೂ ಅನ್ನುವದಿಲ್ಲವೆ?"

"ಸಣ್ಣವರಿಗೆ ತಿಳಿಯುವದಿಲ್ಲ; ದೊಡ್ಡವರು ತಿಳಿದುಕೊಳ್ಳುತ್ತಾರೆ"—ಮದನ ಉತ್ತರಿಸುತ್ತಿದ್ದ.

ಈ ನಡುವೆ, ಧನಿರಾಮನಿಗೆ ಸಹರಾನಪೂರಕ್ಕೆ ವರ್ಗವಾಗಿತ್ತು. ಅಲ್ಲಿ ಅವರು ರೇಲ್ವೆ ಮೇಲ್ ಸರ್ವೀಸದಲ್ಲಿ ಸಿಲೆಕ್ಶನ್ ಗ್ರೇಡ್‌ದ ಹೆಡ್ ಕ್ಲಾರ್ಕ್ ಆದರು. ಎಂಟು ಮನೆತನಗಳು ಒಟ್ಟಾಗಿ ಇರುವಷ್ಟು ದೊಡ್ಡ ಕ್ವಾರ್ಟರ್ ಅವರಿಗೆ ಸಿಕ್ಕಿತ್ತು. ಆದರೆ ಬಾಬೂ ಧನಿರಾಮ ಅದರಲ್ಲಿ ಒಬ್ಬರೇ ಕಾಲು ಚಾಚಿಕೊಂಡು ಬಿದ್ದುಕೊಂಡಿರುತ್ತಿದ್ದರು. ಇಡೀ ಜೀವಿತದಲ್ಲಿ ಅವರು ತಮ್ಮ ಮಕ್ಕಳಿಂದ ಎಂದೂ ಅಗಲಿರಲಿಲ್ಲ. ಪಕ್ಕಾ ಗೃಹಾಸಕ್ತ ವ್ಯಕ್ತಿಯಾಗಿದ್ದರು. ಜೀವನದ ಕೊನೆಯಲ್ಲಿಯ ಈ ಒಂಟಿತನವು ಅವರ ಮನಸ್ಸಿನಲ್ಲಿ ವಿಷಣ್ಣತೆ ಹುಟ್ಟಿಸಿತು. ಆದರೆ ಅನಿವಾರ್ಯವಿತ್ತು. ಮಕ್ಕಳೆಲ್ಲ ದಿಲ್ಲಿಯಲ್ಲಿ ಮದನ ಮತ್ತು ಇಂದೂರ ಬಳಿ ಇದ್ದರು ಮತ್ತು ಅಲ್ಲಿಯೇ ಸ್ಕೂಲ್‌ದಲ್ಲಿ ಓದುತ್ತಿದ್ದರು. ವರ್ಷ ಮುಗಿಯುವ ಮೊದಲೆ ಅವರನ್ನು ಮಧ್ಯದಲ್ಲಿ ಕರೆತರುವದು ಅವರ ಅಭ್ಯಾಸಕ್ಕೆ ಒಳ್ಳೆಯದಾಗಿರಲಿಲ್ಲ. ಬಾಬೂಜಿಯವರಿಗೆ ಹೃದಯಾಘಾತಗಳು ಆಗಹತ್ತಿದವು.

ಅಂತೂ ಕೊನೆಗೊಮ್ಮೆ ಬೇಸಿಗೆಯ ರಜೆ ಬಂದವು. ಬಾಬೂಜಿಯವರು ಮೇಲಿಂದ ಮೇಲೆ ಬರೆದನಂತರ ಮದನ ಇಂದೂಳನ್ನು ಕುಂದನ, ಪಾಶಿ ಮತ್ತು ದುಲಾರಿಯರ ಜೊತೆ ಸಹಾರನಪುರಕ್ಕೆ ಕಳುಹಿಸಿಕೊಟ್ಟ. ಧನಿರಾಮರ ಜಗತ್ತು ಕಲರವಗೊಂಡಿತು. ಅವರಿಗೆ ಆಫೀಸ್ ಮುಗಿದ ಬಳಿಕ ಪುರಸತ್ತೇ ಪುರಸತ್ತು ಇರುತ್ತಿತ್ತು. ಆದರೆ ಈಗ ಅವರಿಗೆ ಕೈತುಂಬ ಕೆಲಸ. ಮಕ್ಕಳು ಮಕ್ಕಳ ಹಾಗೆ ಎಲ್ಲಿ ಬಟ್ಟೆಗಳನ್ನು ಕಳಚುತ್ತಿದ್ದರೊ ಅಲ್ಲಿಯೇ ಅವುಗಳನ್ನು ಬಿಟ್ಟಿರುತ್ತಿದ್ದರು. ಬಾಬೂಜಿ ಅವುಗಳನ್ನು ಕೂಡ ಹಾಕುತ್ತ ತಿರುಗುತ್ತಿದ್ದರು. ತನ್ನ ಮದನನಿಂದ ದೂರವಿದ್ದು ಬೇಸರಗೊಂಡ ರತಿ,

—ಇಂದೂಳಂತೂ ತನ್ನ ಉಡುಗೆ-ತೊಡುಗೆಗಳಲ್ಲಿಯೂ ಅನಾಸಕ್ತಳಾಗಿದ್ದಳು. ಕೊಂಡವಾಡೆಯಲ್ಲಿಯ ಅವಳು ಹೊರಗಡೆ ಮುಖವೆತ್ತಿ ತನ್ನ ಮಾಲಕನನ್ನು ಹುಡುಕು ವಂತೆ, ಅವಳು ಅಡಿಗೆಮನೆಯಲ್ಲಿ ಅಲೆಯುತ್ತಿದ್ದಳು. ಕೆಲಸಗಳೆಲ್ಲ ಮುಗಿದಮೇಲೆ ಅವಳು ಯಾವಾಗಲಾದರೂ ಒಳಗೆ ಟ್ರಂಕ್‌ಗಳಮೇಲೆ ಒರಗುತ್ತಿದ್ದಳು. ಎಂದಾದರೂ ಹೊರಗೆ ಕಣಗಿಲದ ಪೊದೆಯ ಹತ್ತಿರ ಮತ್ತು ಒಮ್ಮೊಮ್ಮೆ ಅಂಗಳದಲ್ಲಿ ನೂರಾರು, ಸಾವಿರಾರು ದಿನಗಳನ್ನು ಹಣೆಗೆ ಹಚ್ಚಿಕೊಂಡು ನಿಂತಿದ್ದ ಮಾವಿನಗಿಡದ ಕೆಳಗೆ ಮಲಗುತ್ತಿದ್ದಳು.

ಶ್ರಾವಣವು ಭಾದ್ರಪದದಲ್ಲಿ ಕರಗಹತ್ತಿತು. ಅಂಗಳದಿಂದ ಹೊರಗಿನ ಕಿಟಕಿ ಯನ್ನು ತೆರೆದರೆ ಸಾಕು. ಅವಿವಾಹಿತೆಯರು ನವವಿವಾಹಿತೆಯರು ಜೀತವನ್ನು ಏರಿಸುತ್ತ ಹಾಡುತ್ತಿರುವರು—ಝೂಲಾ ಕಿಸನೆ ಡಾರೋರೆ ಅಮರ್‍ೈಯ್ಯಾ (ಯಾರು ಮಾವಿನ ತೋಪಿಗೆ ಉಯ್ಯಾಲೆ ಹಾಕಿದರು)? ಮತ್ತು ಗೀತದ ಬೋಲಿನ ಪ್ರಕಾರ ಇಬ್ಬರು ಜೀಕುತ್ತಿದ್ದರು ಮತ್ತು ಇಬ್ಬರು ತೂಗುತ್ತಿದ್ದರು. ಎಲ್ಲಾದರೂ ನಾಲ್ವರು ಸೇರಿದರಂತು ತೊಡಕಿನ ವಿಷಯವಾಗುತ್ತಿತ್ತು. ಮಧ್ಯ ವಯಸ್ಸಿನ ಮತ್ತು ಮುದಿ ಹೆಂಗಸರು ಒಂದು ಕಡೆ ದಿಟ್ಟಿಸಿ ನೋಡುತ್ತಿದ್ದರು. ತಾನೂ ಅವರಲ್ಲಿ ಸೇರಿರುವ ಹಾಗೆ ಇಂದೂಗೆ ಅನಿಸಹತ್ತಿತು. ತಟ್ಟನೆ ಅವಳು ಮುಖವನ್ನು ತಿರುವಿಕೊಂಡು ತಣ್ಣನೆ ಉಸಿರು ಎಳೆಯುತ್ತ ಮಲಗುತ್ತಿದ್ದಳು. ಬಾಬೂಜಿ ಸಮೀಪದಿಂದ ಹಾಯ್ದು ಹೋದರೆ ಅವಳನ್ನು ಎಚ್ಚರಿಸುವ ಮತ್ತು ಎಬ್ಬಿಸುವ ಎಳ್ಳಷ್ಟೂ ಪ್ರಯತ್ನವನ್ನು ಮಾಡುತ್ತಿರಲಿಲ್ಲ. ಆದರೆ ಸಮಯ ನೋಡಿ, ಸೊಸೆಯು ಸೀರೆಯುಟ್ಟು ಬದಲಿಸಿದ ಶಲ್ವಾರನ್ನು—ಅದನ್ನು ಅವಳು ಯಾವಾಗಲೂ ಅತ್ತೆಯ ಗಂಧದ ಸಂದೂಕದ ಮೇಲೆ ಚೆಲ್ಲಿ ಬಂದಿರುತ್ತಿದ್ದಳು—ಎತ್ತಿಕೊಂಡು ಗೂಟಕ್ಕೆ ತೂಗುಹಾಕುತ್ತಿದ್ದರು. ಇಂಥ ಕೆಲಸದಲ್ಲಿ ಅವರಿಗೆ ಎಲ್ಲರ ಕಣ್ಣು ತಪ್ಪಿಸಬೇಕಾಗುತ್ತಿತ್ತು. ಆದರೆ ಶಲ್ವಾರ್ ಅನ್ನು ಹಿಡಿದುಕೊಂಡು ಹೊರಳುವಷ್ಟರಲ್ಲಿ ಅವರ ದೃಷ್ಟಿಯು ಕೆಳಗೆ ಮೂಲೆಯಲ್ಲಿ ಸೊಸೆಯ ಮೊಲೆಕಟ್ಟು (ಬ್ರೆಸಿಯರ್)ನ ಮೇಲೆ ಬೀಳುತ್ತಿತ್ತು. ಆಗ ಅವರ ಧೈರ್ಯವು ಉಡುಗುತ್ತಿತ್ತು ಮತ್ತು ಎಲ್ಲಿಯೋ ಹಾವಿನ ಮರಿಯು ಬಿಲದಿಂದ ಹೊರಬಂದಿದೆ ಯೆನ್ನುವಂತೆ ಅವರು ಲಗುಬಗೆಯಿಂದ ಕೋಣೆಯಿಂದ ಹೊರಗೆ ಓಡುತ್ತಿದ್ದರು. ನಂತರ ಪಡಸಾಲೆಯಲ್ಲಿ ಅವರ ಧ್ವನಿ ಕೇಳಬರುತ್ತಿತ್ತು—'ಓಂ ನಮೋ ಭಗವತೇ ವಾಸುದೇವಾಯ.'

ನೆರೆಹೊರೆಯ ಹೆಂಗಸರು ಬಾಬೂಜಿಯ ಸೊಸೆಯ ಸೌಂದರ್ಯದ ಕಥೆಗಳನ್ನು ಬಹಳ ದೂರದವರೆಗೆ ಮುಟ್ಟಿಸಿದ್ದರು. ಯಾರೋ ಹೆಂಗಸು ಸೊಸೆಯ ಸಹೃದಯತೆ ಮತ್ತು ಸದೃಢ ದೇಹದ ಬಗ್ಗೆ ಮಾತೆತ್ತಿದರೆ ಸಾಕು ಬಾಬೂಜಿ ಉಬ್ಬಿಹೋಗು ತ್ತಿದ್ದರು. ಮತ್ತು "ನಾವಂತು ಧನ್ಯರಾದೆವು. ಅಮಿಚಂದನ ತಾಯಿ, ದೇವರ

ಕೃಪೆ, ನಮ್ಮ ಮನೆಯಲ್ಲಿಯೂ ಯಾರೋ ಆರೋಗ್ಯವಂತ ವ್ಯಕ್ತಿ ಬಂದಿತಲ್ಲ!" ಎಂದು ಅನ್ನುವರು. ಹೀಗೆ ಅನ್ನುತ್ತಿದ್ದಂತೆ ಅವರ ದೃಷ್ಟಿಯು ಎಲ್ಲಿಯೋ ಬಹಳ ದೂರ—ಕ್ಷಯ ರೋಗಿಗಳು, ಔಷಧಿಯ ಸೀಸೆಗಳು, ಆಸ್ಪತ್ರೆಯ ಮೆಟ್ಟಿಲುಗಳು ಮತ್ತು ಇರುವೆಯ ಬಿಲಗಳು ಇದ್ದ ಅಲ್ಲಿ—ಹೋಗುತ್ತಿತ್ತು. ದೃಷ್ಟಿಯು ಸಮೀಪಕ್ಕೆ ಬಂತೆಂದರೆ ಅವರಿಗೆ, ದಪ್ಪದಪ್ಪ, ದಷ್ಟಪುಷ್ಟ ದೇಹದ ಅನೇಕ ಮಕ್ಕಳು ಬಗಲಲ್ಲಿ, ತೊಡೆಗಳಮೇಲೆ, ಕತ್ತಿನಮೇಲೆ ಏರುತ್ತ ಇಳಿಯುತ್ತ ಇದ್ದಹಾಗೆ ಭಾಸವಾಗುತ್ತಿತ್ತು ಮತ್ತು ಇನ್ನೂ ಬೇರೆ ಬರುತ್ತಿರುವಂತೆ ಅನಿಸುತ್ತಿತ್ತು. ಪಕ್ಕದಲ್ಲಿ ಮಲಗಿದ ಸೊಸೆಯ ಟೊಂಕವು ನೆಲಕ್ಕೆ ಮತ್ತು ಕುಂಡಿಗಳು ಮಾಳಿಗೆಗೆ ತಾಕುತ್ತಿವೆ ಮತ್ತು ದಡಾದಡಾ ಮಕ್ಕಳನ್ನು ಹಡೆಯುತ್ತಿದ್ದಾಳೆ ಮತ್ತು ಆ ಮಕ್ಕಳ ವಯಸ್ಸಿನಲ್ಲಿ ಯಾವ ಅಂತರವೂ ಇಲ್ಲ, ಯಾರೂ ದೊಡ್ಡವರಿಲ್ಲ ಮತ್ತು ಸಣ್ಣವರಿಲ್ಲ. ಎಲ್ಲರೂ ಒಂದೇ ತರದ ಅವಳಿ ಜವಳಿಗಳು....ತ್ರಾಂ....ಓಂ ಭಗವತೀ....

ಅಕ್ಕಪಕ್ಕದ ಜನರಿಗೆಲ್ಲ, ಇಂದೂ ಬಾಬೂಜಿಯವರ ಅಚ್ಚುಮೆಚ್ಚಿನ ಸೊಸೆಯೆಂದು ಗೊತ್ತಾಗಿತ್ತು. ಆದ್ದರಿಂದ ಹಾಲು ಮತ್ತು ಮಜ್ಜಿಗೆಯ ಗಡಿಗೆಗಳು ಧನಿರಾಮನ ಮನೆಗೆ ಬರಹತ್ತಿದವು. ಬಳಿಕ ಒಂದು ದಿನ ಸಲಾಮುದ್ದೀನ ಗುಜರ (ಗೌಳಿ) ಇಂದೂಳಲ್ಲಿ ತನ್ನ ಇಚ್ಛೆಯನ್ನು ಹೇಳಿಕೊಂಡ—ಬೀಬಿ, ನನ್ನ ಮಗನಿಗೆ ಆರ್. ಎಮ್. ಎಸ್. ದಲ್ಲಿ ಕೆಲಸ ಕೊಡಿಸಿರಿ, ದೇವರು ನಿಮಗೆ ಕಲ್ಯಾಣ ಮಾಡುತ್ತಾನೆ." ಇಂದೂಳ ಸನ್ನೆಯದೇ ತಡವಿತ್ತು. ಸಲಾಮುದ್ದೀನನ ಮಗನಿಗೆ ನೌಕರಿ ಸಿಕ್ಕಿತು. ಅದೂ ಸಾರ್ಟರ್ ಎಂದು. ಬೇರೆಯವರಿಗೆ ಆಗದ್ದು. ಅಸಾಮಿಗಳೇ ಜಾಸ್ತಿಯಿರಲಿಲ್ಲ.

ಸೊಸೆಯ ಊಟ-ಉಪಚಾರ ಮತ್ತು ಆರೋಗ್ಯದ ಬಗ್ಗೆ ಬಾಬೂಜಿ ವಿಶೇಷ ಕಾಳಜಿ ಮಾಡುತ್ತಿದ್ದರು. ಹಾಲು ಕುಡಿಯಲು ಇಂದೂಗೆ ಹಟವಿತ್ತು. ಅವರು ರಾತ್ರಿಯ ಹೊತ್ತು ಸ್ವತಃ ಹಾಲನ್ನು ಬಾಳೆಯ ಜೊತೆ ಕಲಸಿ ಗ್ಲಾಸಿನಲ್ಲಿ ಹಾಕಿಕೊಂಡು ಸೊಸೆಗೆ ಕುಡಿಸಲೆಂದು ಅವಳ ಚಾರಪಾಯಿಯ ಸಮೀಪಕ್ಕೆ ಬರುತ್ತಿದ್ದರು. ಇಂದೂ ತನ್ನಷ್ಟಕ್ಕೆ ತಾನೆ ಮುದುಡಿಕೊಳ್ಳುತ್ತ ಎದ್ದು ಕುಳಿತು, "ಇಲ್ಲ ಬಾಬೂಜಿ, ನನಗೆ ಕುಡಿಯಲು ಆಗುವದಿಲ್ಲ" ಅನ್ನುವಳು.

"ನಿನ್ನ ಮಾವ ಕೂಡ ಕುಡಿಯುವನು" ಅವರು ಚೇಷ್ಟೆಯಲ್ಲಿ ಹೇಳುವರು.

"ಹಾಗಾದರೆ ನೀವೇ ಕುಡಿದುಬಿಡಿ"—ಇಂದೂ ನಗುತ್ತ ಉತ್ತರಿಸುವಳು.

ಬಾಬೂಜಿ ಕೃತ್ರಿಮ ಸಿಟ್ಟಿನಿಂದ ಗದ್ದರಿಸುವರು—"ನಿನ್ನ ಪ್ರಕೃತಿಯು ನಿನ್ನ ಅತ್ತೆಯ ಹಾಗೆ ಆಗಲೆಂದು ಬಯಸುವೆ ಏನು?"

"ಹುಂ, ಹುಂ" ಎಂದು ಇಂದೂ ಪ್ರೀತಿಯಿಂದ ಮುನಿದುಕೊಳ್ಳುತ್ತಿದ್ದಳು. ಅವಳೇಕೆ ಮುನಿದುಕೊಳ್ಳಬಾರದು? ಸಮಾಧಾನ ಮಾಡುವವರು ಇಲ್ಲದವರು

ಮಾತ್ರ ಮುನಿದುಕೊಳ್ಳುವುದಿಲ್ಲ. ಇಲ್ಲಿಯಂತೂ ಎಲ್ಲರೂ ಸಮಾಧಾನ ಮಾಡುವವರೇ, ಮುನಿದುಕೊಳ್ಳುವವರು ಮಾತ್ರ ಒಬ್ಬರು. ಇಂದೂ ಅವರ ಕೈಯಲ್ಲಿಂದ ಗ್ಲಾಸನ್ನು ತೆಗೆದುಕೊಳ್ಳುತ್ತಿದ್ದಾಗ ಅವರು ಅದನ್ನು ಚಾರಪಾಯಿಯ ಸಮೀಪ, ತಲೆದಿಂಬಿನ ಕೆಳಗೆ ಇಡುತ್ತಿದ್ದರು ಮತ್ತು, "ಇಲ್ಲಿ ಇಟ್ಟಿದೆ ನೋಡು, ನಿನ್ನ ಮರ್ಜಿ ಇದ್ದರೆ ಕುಡಿ, ಇಲ್ಲದಿದ್ದರೆ ಬಿಡು" ಎಂದು ಹೇಳುತ್ತ ಹೊರಟುಹೋಗುತ್ತಿದ್ದರು.

ತಮ್ಮ ಹಾಸಿಗೆಯನ್ನು ತಲುಪಿ ಅವರು ದುಲಾರಿ ಮುನ್ನಿಯ ಜೊತೆಗೆ ಆಟವಾಡಲಾರಂಭಿಸುತ್ತಿದ್ದರು. ದುಲಾರಿಗೆ ಅವರ ನಗ್ನ ತೊಡೆಗೆ ತೊಡೆ ಸೇರಿಸಿ ಹೊಟ್ಟೆಯ ಮೇಲೆ ಮುಖವಿಟ್ಟು 'ಫುರ್' ಎಂದು ಮಾಡುವ ಚಟವಿತ್ತು. ಈ ದಿನ ಬಾಬೂಜಿ ಮತ್ತು ಮುನ್ನಿ ಈ ಆಟವನ್ನು ಆಡುತ್ತ, ನಕ್ಕು ನಗಿಸುತ್ತಿದ್ದಾಗ ಮುನ್ನಿ ಅತ್ತಿಗೆಯ ಕಡೆ ನೋಡುತ್ತ "ಹಾಲು ಕೆಟ್ಟುಹೋಗುತ್ತದೆ ಬಾಬೂಜಿ, ಅತ್ತಿಗೆಯಂತು ಕುಡಿಯುತ್ತಲೇ ಇಲ್ಲ" ಅಂದಳು.

"ಕುಡಿಯುತ್ತಾಳೆ, ಅವಶ್ಯ ಕುಡಿಯುತ್ತಾಳೆ ಮಗಳೆ" ಎನ್ನುತ್ತ ಬಾಬೂಜಿ ಇನ್ನೊಂದು ಕೈಯಿಂದ ಪಾಷಿಯನ್ನು ಅಪ್ಪಿಕೊಳ್ಳುತ್ತ "ಹೆಂಗಸರು, ಮನೆಯಲ್ಲಿ ಯಾವದೇ ವಸ್ತುವು ಕೆಡುವದನ್ನು ನೋಡಲು ಸಾಧ್ಯವಿಲ್ಲ" ಅಂದರು. ಇನ್ನೂ ಈ ವಾಕ್ಯವು ಬಾಬೂಜಿಯವರ ಬಾಯಲ್ಲಿ ಇರುವಷ್ಟರಲ್ಲಿ ಒಂದು ಕಡೆಯಿಂದ, "ಹುಶ್! ಏ ಗಂಡನನ್ನು ತಿನ್ನುವವಳೆ" ಎಂಬ ಧ್ವನಿ ಕೇಳಿಬರುತ್ತಿತ್ತು. ಸೊಸೆ ಬೆಕ್ಕನ್ನು ಓಡಿಸುತ್ತಿದ್ದಾಳೆ ಎಂದು ಗೊತ್ತಾಗುತ್ತಿತ್ತು. ನಂತರ ಎಂಥದೋ 'ಗುಟ್ ಗುಟ್' ಶಬ್ದವು ಕೇಳಿಬರುತ್ತಿತ್ತು ಮತ್ತು ಎಲ್ಲರೂ ಸೊಸೆ-ಅತ್ತಿಗೆ ಹಾಲು ಕುಡಿದಳೆಂದು ತಿಳಿದುಕೊಂಡರು. ಸ್ವಲ್ಪ ಸಮಯದ ನಂತರ ಕುಂದನ ಬಾಬೂಜಿಯ ಹತ್ತಿರ ಬಂದು ಹೇಳುತ್ತಿದ್ದ:

"ಬಾಬೂಜಿ—ಅತ್ತಿಗೆ ಅಳುತ್ತಿದ್ದಾಳೆ."

"ಹಾಯ್!" ಎಂದು ಬಾಬೂಜಿ ಎದ್ದು ಕತ್ತಲೆಯಲ್ಲಿ ದೂರ ಅದೇ ಕಡೆಗೆ, ಸೊಸೆಯ ಚಾರಪಾಯಿ ಇರುವ ಕಡೆಗೆ ನೋಡಹತ್ತುವರು. ಸ್ವಲ್ಪ ಸಮಯ ಹೀಗೆಯೇ ಕುಳಿತ ನಂತರ ಅ ರು ಪುನಃ ಮಲಗುತ್ತಿದ್ದರು. ಮತ್ತು ಸ್ವಲ್ಪ ಅರ್ಥ ಮಾಡಿಕೊಂಡಂತೆ, ಕುಂದನಗೆ "ಹೋಗು, ನೀನು ಮಲಗು. ಅವಳು ತಂತಾನೆ ಮಲಗುವಳು" ಅನ್ನುವರು.

ಪುನಃ ಮಲಗುತ್ತ ಬಾಬೂ ಧನಿರಾಮ ಆಕಾಶದಲ್ಲಿ ಅರಳಿರುವ. ಪರಮಾತ್ಮನ ಹೂದೋಟವನ್ನು ನೋಡಹತ್ತುವರು. ತಮ್ಮ ಮನದಲ್ಲಿಯೇ ದೇವರನ್ನು ಕೇಳಿಕೊಳ್ಳುವರು: "ಬೆಳ್ಳಿಯ ಈ ಅರಳುತ್ತಿರುವ ಮತ್ತು ಮುಚ್ಚಿಕೊಳ್ಳುತ್ತಿರುವ ಹೂಗಳಲ್ಲಿ ನನ್ನ ಹೂವು ಎಲ್ಲಿದೆ?" ಬಳಿಕ ಅವರಿಗೆ ಇಡೀ ಆಕಾಶವೇ ಒಂದು ನೋವಿನ ನದಿಯಾಗಿ ಕಾಣಿಸುತ್ತಿತ್ತು ಮತ್ತು ಕಿವಿಗಳಲ್ಲಿ ಒಂದು ನಿರಂತರ ನರಳುವಿಕೆಯ

ಧ್ವನಿಯು ಕೇಳಿಬರುತ್ತಿತ್ತು. ಅದನ್ನು ಕೇಳುತ್ತ ಅವರು, "ಜಗತ್ತು ಹುಟ್ಟಿದಂದಿನಿಂದ ಮನುಷ್ಯ ಎಷ್ಟು ಅತ್ತಿದ್ದಾನೆ" ಅನ್ನುವರು. ಮತ್ತು ಅಳುತ್ತ ಅಳುತ್ತ ಮಲಗಿಬಿಡುತ್ತಿದ್ದರು.

ಇಂದೂ ಹೋದ ಬಳಿಕ ಇಪ್ಪತ್ತು ಇಪ್ಪತ್ತೈದು ದಿನಗಳಲ್ಲಿಯೇ ಮದನ ಗೊಣಗಾಡಹತ್ತಿದ. "ಬಾಜಾರದ ರೊಟ್ಟಿ ತಿಂದು ತಿಂದು ಬೇಸತ್ತಿರುವೆ, ನನಗೆ ಮಲಬದ್ಧತೆ ಆಗಿದೆ, ನನಗೆ ಮೂತ್ರಪಿಂಡದ ನೋವು ಸುರು ಆಗಿದೆ" ಎಂದು ಪತ್ರ ಬರೆದ. ಕಚೇರಿಯ ಜನರು ರಜೆಯ ಅರ್ಜಿಯ ಜೊತೆಗೆ ಡಾಕ್ಟರ್‌ರ ಸರ್ಟಿಫಿಕೇಟ್ ಕಳಿಸಿಕೊಡುವ ಹಾಗೆ ಮದನ ಬಾಬೂಜಿಯ ಓರ್ವ ಗೆಳೆಯರಿಂದ ಸಿಫಾರಸು ಮಾಡಿದ ಪತ್ರವನ್ನು ಬರೆಯಿಸಿ ಕಳಿಸಿದ. ಇದರ ಮೇಲೂ ಏನೂ ಆಗದಿದ್ದಾಗ ಒಂದು ಡಬಲ್ ತಾರು—ಉತ್ತರ ಸಹಿತ ಕಳುಹಿಸಿದ.

ಉತ್ತರ ಸಹಿತ ತಾರಿನ ದುಡ್ಡು ಹಾಳಾಯಿತು. ಆದರೆ ಯಾವ ಪರವೆ ಇಲ್ಲದಂತೆ ಇಂದೂ ಮತ್ತು ಮಕ್ಕಳು ಹಿಂದಿರುಗಿ ಬಂದಿದ್ದರು. ಮದನ ಇಂದೂಳ ಜೊತೆ ಎರಡು ದಿನ ಸರಿಯಾಗಿ ಮಾತಾಡಲಿಲ್ಲ. ಈ ದುಃಖವು ಕೂಡ ಇಂದೂಳದೇ ಇತ್ತು. ಒಂದು ದಿನ ಮದನ ಒಬ್ಬನೇ ಸಿಕ್ಕಾಗ, ಅವಳು ಹಿಡಿದು ಕುಳಿತುಕೊಂಡಳು ಮತ್ತು "ಇಷ್ಟೊಂದು ಮುಖ ಉಬ್ಬಿಸಿ ಕುಳಿತಿರುವಿರಿ. ನಾನೇನು ಮಾಡಿರುವೆ?" ಅಂದಳು. ಮದನ ತನ್ನನ್ನು ಬಿಡಿಸಿಕೊಳ್ಳುತ್ತ,

"ಬಿಡು, ನನ್ನ ಕಣ್ಣಿಂದ ದೂರ ಸರಿ, ಕೆಟ್ಟವಳೆ!" ಅಂದ.

"ಇದನ್ನೇ ಹೇಳಲು, ಅಷ್ಟು ದೂರದಿಂದ ಕರೆಯಿಸಿದಿರೇನು?"

"ಹಾಂ."

"ಸಾಕು ಬಿಡಿ, ಈಗ."

"ಖಬರದಾರ್....ಇದೆಲ್ಲ ನೀನೆ ಮಾಡಿದ್ದು. ನೀನು ಬರಬೇಕೆಂದಿದ್ದರೆ ಬಾಬೂಜಿ ತಡೆಗಟ್ಟುತ್ತಿದ್ದರೇನು?"

"ಹಾಯ್‌ಜಿ, ನೀವಂತು ಮಗುವಿನಂತೆ ಮಾತಾಡುತ್ತಿರುವಿರಿ. ನಾನು ಅವರಿಗೆ ಹೇಗೆ ಹೇಳಲು ಸಾಧ್ಯವಿತ್ತು? ನಿಜ ಹೇಳಬೇಕೆಂದರೆ, ನೀವು ನನ್ನನ್ನು ಕರೆಯಿಸಿ ಕೊಂಡು ಬಾಬೂಜಿಯಮೇಲೆ ದೊಡ್ಡ ಅನ್ಯಾಯ ಮಾಡಿದ್ದೀರಿ"—ಎಂದು ಅಸಹಾಯಕಳಂತೆ ಹೇಳಿದಳು.

"ಅಂದರೆ, ಏನರ್ಥ?"

"ಅರ್ಥವೇನೂ ಇಲ್ಲ. ಮಕ್ಕಳ ಜೊತೆ ಅವರ ಮನಸ್ಸು ಬಹಳ ಒಗ್ಗಿತ್ತು."

"ಮತ್ತು ನನ್ನ ಮನಸ್ಸು?"

"ನಿಮ್ಮ ಮನಸ್ಸೇ?....ಅದನ್ನು ನೀವು ಎಲ್ಲಿಯಾದರೂ ಒಗ್ಗಿಸಿಕೊಳ್ಳಬಲ್ಲಿರಿ...." ಇಂದೂ ತುಂಟತನದಿಂದ ಹೇಳಿದಳು ಮತ್ತು ಮದನನ ಕಡೆ ಯಾವ ಪರಿಯಲ್ಲಿ ನೋಡಿದಳೆಂದರೆ ಅವನ ರಕ್ಷಣೆಯ ಶಕ್ತಿಗಳೆಲ್ಲ ಅಂತ್ಯಗೊಂಡವು. ಹಾಗೆ ಕೂಡ ಅವನು ಒಂದು ಒಳ್ಳೆಯ ನೆಪದ ಶೋಧನೆಯಲ್ಲಿದ್ದ. ಅವನು ಇಂದೂಳನ್ನು ಹಿಡಿದು ಕೊಂಡು ಆಲಂಗಿಸಿಕೊಂಡ.

"ಬಾಬೂಜಿ ನಿನ್ನ ಬಗ್ಗೆ ಸಂತೋಷದಿಂದ ಇದ್ದರೆ?" ಎಂದು ಕೇಳಿದ.

"ಹಾಂ. ಒಂದು ದಿನ ನಾನು ಎಚ್ಚರಗೊಂಡಾಗ ಅವರು ನನ್ನ ತಲೆದೆಸೆಯಲ್ಲಿ ನಿಂತು ನನ್ನನ್ನು ನೋಡುತ್ತಲಿದ್ದುದನ್ನು ಕಂಡೆ" ಇಂದು ಹೇಳಿದಳು.

"ಇದು ಆಗಲು ಸಾಧ್ಯವಿಲ್ಲ."

"ನನ್ನ ಆಣೆ."

"ನಿನ್ನದಲ್ಲ, ನನ್ನ ಆಣೆ ಮಾಡು."

"ನಿಮ್ಮ ಆಣೆಯನ್ನಂತೂ ಮಾಡಲಾರೆ. ಯಾರೇ ಏನೇ ಕೊಡಲಿ."

"ಹಾಂ,....ಪುಸ್ತಕಗಳಲ್ಲಿ ಇದಕ್ಕೆ ಸೆಕ್ಸ್ ಎಂದೆನ್ನುತ್ತಾರೆ" ಮದನ ಯೋಚಿಸುತ್ತ ಹೇಳಿದ.

"ಸೆಕ್ಸ್?....ಅದೇನು?"—ಇಂದು ಕೇಳಿದಳು.

"ಅದೇ ಗಂಡು-ಹೆಣ್ಣಿನ ನಡುವೆ ಇರುತ್ತದೆಯಲ್ಲ."

"ಹಾಯ್ ರಾಮ!"—ಇಂದೂ ತಟ್ಟನೆ ಹಿಂದಕ್ಕೆ ಸರಿಯುತ್ತ ಹೇಳಿದಳು—"ಹೊಲಸು, ಬಾಬೂಜಿಯವರ ಬಗ್ಗೆ ಹೀಗೆ ಯೋಚಿಸಲು ನಿಮಗೆ ನಾಚಿಕೆ ಬರುವದಿಲ್ಲವೇ?"

"ನಿನ್ನನ್ನು ನೋಡುತ್ತ ಬಾಬೂಜಿಗೆ ನಾಚಿಕೆ ಬರಲಿಲ್ಲವೇ?"

"ಯಾಕೆ? ಅವರು ತಮ್ಮ ಸೊಸೆಯನ್ನು ನೋಡಿ ಸಂತೋಷಪಡುತ್ತಿದ್ದರು."

"ಯಾಕಾಗಬಾರದು? ಸೊಸೆ ನಿನ್ನಂಥವಳು ಇದ್ದ ಮೇಲೆ."

"ನಿಮ್ಮ ಮನಸ್ಸು ಹೊಲಸಾಗಿದೆ"—ಇಂದೂ ತಿರಸ್ಕಾರದಿಂದ ಅಂದಳು—"ಆದ್ದರಿಂದಲೆ ನಿಮ್ಮ ವ್ಯವಹಾರ ಕೂಡ ಹೊಲಸು ಬೆರೋಜಾದ್ದಾಗಿದೆ. ನಿಮ್ಮ ಪುಸ್ತಕಗಳ ತುಂಬೆಲ್ಲ ಹೊಲಸು ತುಂಬಿದೆ. ನಿಮಗೆ ಮತ್ತು ನಿಮ್ಮ ಪುಸ್ತಕಗಳಿಗೆ ಇದರ ಹೊರತು ಏನೂ ಕಾಣಿಸುವದಿಲ್ಲ. ಹಾಗೆಂದರೆ, ನಾನು ದೊಡ್ಡವಳಾದಮೇಲೆ ನನ್ನ ತಂದೆ ನನ್ನನ್ನು ಅಧಿಕವಾಗಿ ಪ್ರೀತಿಸಲು ಶುರುಮಾಡಿದ್ದರು. ಅಂದರೆ ಅದೂ ಕೂಡ....ಅದೇ ಕೊಳಕು....ಇತ್ತೇನು? ಇದೀಗ ಅದರ ಹೆಸರು ಹೇಳಿದಿರಲ್ಲ?" ಸ್ವಲ್ಪ ತಡೆದು ಮತ್ತೆ, ಇಂದೂ ಹೇಳಿದಳು "ಬಾಬೂಜಿಯನ್ನು ಇಲ್ಲಿಗೆ ಕರೆಯಿಸಿರಿ. ಅವರಿಗೆ ಅಲ್ಲಿ ಮನಸ್ಸು ಒಗ್ಗುತ್ತಿಲ್ಲ. ಅವರು ದುಃಖಿಗಳಾದರೆ ನೀವು ದುಃಖಿಗಳಾಗುವದಿಲ್ಲವೇನು?"

ಮದನ ತನ್ನ ತಂದೆಯನ್ನು ಬಹಳ ಪ್ರೀತಿಸುತ್ತಿದ್ದ—ಮನೆಯಲ್ಲಿ ತಾಯಿಯ ಮರಣವು, ಮದನನೆ ದೊಡ್ಡವನಿದ್ದ ಕಾರಣ, ಎಲ್ಲರಿಗಿಂತ ಹೆಚ್ಚು ಪರಿಣಾಮ ಅವನ ಮೇಲೆಯೇ ಮಾಡಿತ್ತು. ಅವನಿಗೆ ಚೆನ್ನಾಗಿ ನೆನಪಿತ್ತು : ತಾಯಿಗೆ ಕಾಹಿಲೆ ಆಗಿದ್ದ ಕಾರಣ ಆಕೆಯ ಮರಣದ ಯೋಚನೆ ತನ್ನ ಮನದಲ್ಲಿ ಬರುತ್ತಲೇ ಅವನು ಕಣ್ಣು ಮುಚ್ಚಿಕೊಂಡು ಪ್ರಾರ್ಥನೆ ಶುರು ಮಾಡುತ್ತಿದ್ದ—'ಓಂ ನಮೋ ಭಗವತೇ ವಾಸುದೇವಾಯ....ಓಂ ನಮೋ........' ಈಗ ತಂದೆಯ ಛತ್ರಛಾಯಾ ಕೂಡ ತನ್ನ ತಲೆಯಮೇಲಿಂದ ಸರಿಯಲಿ ಎಂದು ಅವನು ಇಷ್ಟಪಡುತ್ತಿದ್ದಿಲ್ಲ. ವಿಶೇಷವಾಗಿ ಅದೂ, ತನ್ನ ವ್ಯಾಪಾರ ಕೂಡ ಸರಿಯಾಗಿ ಕುದುರದೆ ಇದ್ದಾಗ. ಅವನು ವಿಶ್ವಾಸ ರಹಿತ ಧ್ವನಿಯಲ್ಲಿ ಇಂದೂಗೆ ಹೇಳಿದ : "ಸದ್ಯ ಬಾಬೂಜಿ ಅಲ್ಲಿಯೇ ಇರಲಿ ಬಿಡು. ಮದುವೆಯ ನಂತರ ನಾವಿಬ್ಬರೂ ಮೊದಲ ಸಲ ಸ್ವತಂತ್ರವಾಗಿ ಒಟ್ಟಿಗೆ ಇರಲು ಸಾಧ್ಯವಾಗಿದೆ."

ಮೂರನೆಯ, ನಾಲ್ಕನೆಯ ದಿನಕ್ಕೆ ಬಾಬೂಜಿಯ ಕಣ್ಣೀರಿನಲ್ಲಿ ಮುಳುಗಿದ ಪತ್ರ ಬರುತ್ತಿತ್ತು. ನನ್ನ ಪ್ರಿಯ ಮದನ ಎಂಬ ಸಂಬೋಧನೆಯಲ್ಲಿ ನನ್ನ ಪ್ರಿಯ ಶಬ್ದಗಳು ಉಪ್ಪುನೀರಿನಲ್ಲಿ ತೊಳೆದುಹೋಗಿದ್ದವು. ಬರೆದದ್ದು ಇಷ್ಟು : "ಸೊಸೆ ಇಲ್ಲಿ ಇದ್ದುದರಿಂದ ನನ್ನ ಆ ಹಳೆಯ ದಿನಗಳು ಮರಳಿ ಬಂದಿದ್ದವು. ನಿನ್ನ ತಾಯಿಯ ದಿನಗಳು ನಮ್ಮ ಮದುವೆಯ ಹೊಸತರಲ್ಲಿ ಆಕೆಯು ಹೀಗೆಯೆ ಅಜಾಗ್ರತಳಾಗಿ ಇದ್ದಳು. ಹೀಗೆಯೆ ಬಿಚ್ಚಿದ್ದ ಬಟ್ಟೆಗಳನ್ನು ಅಲ್ಲಿ ಇಲ್ಲಿ ಚೆಲ್ಲಿರುತ್ತಿದ್ದಳು ಮತ್ತು ಪಿತಾಜಿಯವರು ಅವುಗಳನ್ನು ಎತ್ತಿ ಕೂಡಿಡುತ್ತಿದ್ದರು. ಅದೇ ಗಂಧದ ಪೆಟ್ಟಿಗೆ ಇದೆ. ಅದೇ ಇಪ್ಪತ್ತು ಜಗಳಗಳು........ನಾನು ಬಾಜಾರಕ್ಕೆ ಹೋಗುತ್ತೇನೆ, ಬರುತ್ತೇನೆ. ಏನಿಲ್ಲದಿದ್ದರೂ ಮೊಸರು-ವಡೆ ಅಥವಾ ರಬಡಿ ತರುತ್ತೇನೆ. ಈಗ ಮನೆಯಲ್ಲಿ ಯಾರೂ ಇಲ್ಲ. ಗಂಧದ ಪೆಟ್ಟಿಗೆಯು ಬಿದ್ದುಕೊಂಡಿರುವ ಜಾಗೆಯು ಖಾಲಿ ಇದೆ." ನಂತರ ಒಂದೆರಡು ಸಾಲುಗಳು ತೊಳೆದುಹೋಗಿದ್ದವು. ಕೊನೆಯಲ್ಲಿ ಬರೆಯಲಾಗಿತ್ತು. "ಕಚೇರಿಯಿಂದ ಮರಳಿ ಬರುವಾಗ, ಇಲ್ಲಿಯ ದೊಡ್ಡ ದೊಡ್ಡ ಕತ್ತಲೆ ಕವಿದ ಕೋಣೆಗಳಲ್ಲಿ ಪ್ರವೇಶಿಸುತ್ತ ನನ್ನ ಮನಸ್ಸಿನಲ್ಲಿ ಒಂದು ಉದ್ವೇಗವು ಏಳುತ್ತದೆ........" ಮತ್ತೆ ನಂತರ "ಸೊಸೆಯ ಬಗ್ಗೆ ಕಾಳಜಿ ಇಡು........ಅವಳನ್ನು ಅಂಥಿಂಥ ದಾಯಿಯ ಕೈಗೆ ಒಪ್ಪಿಸಬೇಡ."

ಇಂದೂ ಎರಡೂ ಕೈಗಳಿಂದ ಪತ್ರವನ್ನು ಹಿಡಿದುಕೊಂಡಳು. ಉಸಿರು ಎಳೆದುಕೊಂಡಳು. ಕಣ್ಣು ಅರಳಿಸಿದಳು. ನಾಚಿಕೆಯಿಂದ ನೀರು ನೀರಾಗಿ ಹೇಳಿದಳು, "ಅಯ್ಯೋ, ನಾನು ಸತ್ತೆ ! ಬಾಬೂಜಿಗೆ ಹೇಗೆ ಗೊತ್ತಾಯಿತು ? "

ಮದನ ಪತ್ರ ಬಿಡಿಸಿಕೊಳ್ಳುತ್ತ, "ಬಾಬೂಜಿ ಮಗುವೇನು ? ಜಗತ್ತನ್ನು ನೋಡಿದ್ದಾರೆ....ನಮ್ಮನ್ನು ಹುಟ್ಟಿಸಿದ್ದಾರೆ" ಅಂದ.

"ಹಾಂ! ಆದರೆ, ಇನ್ನೂ ದಿನಗಳಷ್ಟೇ ಆಗಿತ್ತು"—ಇಂದೂ ಹೇಳಿದಳು.

ಬಳಿಕ ಅವಳು ಒಂದು ತೀಕ್ಷ್ಣದೃಷ್ಟಿಯನ್ನು ತನ್ನ ಹೊಟ್ಟೆಯತ್ತ ಹರಿಸಿದಳು. ಅದು ಇನ್ನೂ ಬೆಳೆಯಲು ಆರಂಭವಾಗಿದ್ದಿಲ್ಲ. ಬಾಬೂಜಿ ಅಥವಾ ಮತ್ತಾರೋ ನೋಡುತ್ತಿರುವರೋ ಎನ್ನುವಂತೆ, ಸೀರೆಯ ಸೆರಗನ್ನು ಅದರ ಮೇಲೆ ಎಳೆದು ಕೊಂಡಳು ಮತ್ತು ಏನನ್ನೋ ಯೋಚಿಸಹತ್ತಿದಳು. ಅಷ್ಟರಲ್ಲಿಯೇ ಒಂದು ಹೊಳಪು ಅವಳ ಮುಖದ ಮೇಲೆ ತೇಲಿ ಬಂದಿತು. ನಂತರ ಅವಳು,

"ನಿಮ್ಮ ಮಾವನ ಮನೆಯಿಂದ ಮಿಠಾಯಿ ಬರುವದು" ಅಂದಳು.

"ನನ್ನ ಮಾವನ ಮನೆ?....ಓ....ಹೌದು" ಎಂದು ಮದನ ದಾರಿಯನ್ನು ಕಾಣುತ್ತ "ಎಷ್ಟು ನಾಚಿಕೆಯ ವಿಷಯ! ಮದುವೆಯಾಗಿ ಇದೀಗ ಎಂಟು ತಿಂಗಳಾಯಿತು. ಅಷ್ಟರಲ್ಲಿಯೇ ಬಂದು ಬಿಟ್ಟಿದ್ದಾನೆ." ಅವನು ಇಂದೂಳ ಹೊಟ್ಟೆಯ ಕಡೆ ಸಂಕೇತ ಮಾಡಿದ.

"ಅವನೇ ಬಂದು ಬಿಟ್ಟಿದ್ದಾನೋ ಅಥವಾ ನೀವು ಕರೆದು ತಂದಿರೋ?"

"ನೀನು—ಈ ತಪ್ಪೆಲ್ಲ ನಿನ್ನದು. ಕೆಲವು ಹೆಂಗಸರು ಇರುವುದೇ ಹೀಗೆ."

"ನಿಮಗೆ ಇಷ್ಟವಿಲ್ಲವೆ?"

"ಎಳ್ಳಷ್ಟೂ ಇಲ್ಲ."

"ಯಾಕೆ?"

"ನಾಲ್ಕು ದಿನವಾದರೂ ಜೀವನದ ಮಜಾ ಮಾಡಬಹುದಾಗಿತ್ತು."

"ಇದು ಜೀವನದ ಮಜಾ ಅಲ್ಲವೇನು?"—ಇಂದೂ ಆಘಾತಗೊಂಡವಳ ಹಾಗೆ ಕೇಳಿದಳು—"ಗಂಡು ಹೆಣ್ಣು ಮದುವೆ ಮಾಡಿಕೊಳ್ಳುವುದು ಯಾಕೆ? ದೇವರು ಬೇಡಿಕೊಳ್ಳದಲೆ ಕೊಟ್ಟನಲ್ಲವೆ? ಯಾರಿಗೆ ಆಗುವುದಿಲ್ಲವೋ ಅವರನ್ನು ಕೇಳಿರಿ, ಅವರು ಏನೆಲ್ಲ ಮಾಡುತ್ತಾರೆಂದು. ಪೀರರ, ಫಕೀರರ ಬಳಿ ಹೋಗುತ್ತಾರೆ. ಸಮಾಧಿಗಳ ಮತ್ತು ಮಜಾರ (ಗೋರಿ)ಗಳ ಮೇಲೆ ಜಡೆ ಕಟ್ಟಿಕೊಳ್ಳುವರು, ಹರಕೆ ಹೊರುವರು, ಲಜ್ಜೆ ನಾಚಿಕೆ ಬಿಟ್ಟು ನದಿಗಳ ದಂಡೆಗಳಮೇಲೆ ನಗ್ನರಾಗಿ ಗಲಗುಗಳನ್ನು ಕಡಿಯುತ್ತಾರೆ....ಸ್ಮಶಾನದಲ್ಲಿ ಹೊಗೆಯನ್ನು ಎಬ್ಬಿಸುತ್ತಾರೆ."

"ಒಳ್ಳೆಯದು! ಒಳ್ಳೆಯದು! ನೀನು ವ್ಯಾಖ್ಯಾನವನ್ನೇ ಶುರುಮಾಡಿದೆ. ಮಕ್ಕಳ ಸಲುವಾಗಿ ವಯಸ್ಸು ಹೆಚ್ಚಾಗಿದೆ ಏನು?"—ಮದನ ಅಂದ. "ಮಗು ಆದಮೇಲೆ, ನೀವು ಅದಕ್ಕೆ ಕೈ ಹಚ್ಚಬೇಡಿ, ಅದು ನಿಮ್ಮದಲ್ಲ ನನ್ನ ಮಗು. ನಿಮಗಂತು ಅದರ ಅವಶ್ಯಕತೆ ಇಲ್ಲ. ಆದರೆ ಅದರ ದಾದಾಗೆ ಬಹಳವಿದೆ. ಇದೆಲ್ಲ ನನಗೆ ಗೊತ್ತು"—ಇಂದೂ ಗದ್ದರಿಸುವ ರೀತಿಯಲ್ಲಿ ಹೇಳಿದಳು.

ನಂತರ ಸ್ವಲ್ಪ ನಾಚಿಕೆ ಮತ್ತು ಸ್ವಲ್ಪ ಆಘಾತಪಟ್ಟವಳಂತೆ ಆಗಿ ಇಂದೂ ತನ್ನ ಮುಖವನ್ನು ಎರಡೂ ಕೈಗಳಲ್ಲಿ ಮುಚ್ಚಿಕೊಂಡಳು. ಹೊಟ್ಟೆಯಲ್ಲಿ ಆ ಪುಟ್ಟ ಜೀವ

ವನ್ನು ಬೆಳೆಯಿಸುವ ಸಂಬಂಧದಲ್ಲಿ, ಆ ಜೀವಿಯ ಹತ್ತಿರದವನು ಹೊಂದಿದವನು ಅಷ್ಟಿಷ್ಟು ಸಹಾನುಭೂತಿ ತೋರಿಸಿಯೇ ತೋರಿಸುವನು ಎಂದು ಯೋಚಿಸಿದಳು. ಆದರೆ ಮದನ ಸುಮ್ಮನೇ ಕುಳಿತಿದ್ದ. ಒಂದು ಶಬ್ದವೂ ಅವನ ಬಾಯಿಂದ ಹೊರಡಲಿಲ್ಲ. ಇಂದೂ ಮುಖದ ಮೇಲಿಂದ ಕೈಗಳನ್ನು ಸರಿಸಿಕೊಂಡು ಮದನನ ಕಡೆ ನೋಡಿದಳು ಮತ್ತು ಚೊಚ್ಚಲು ಗರ್ಭಿಣಿಯ ವಿಶೇಷ ರೀತಿಯಲ್ಲಿ ಅಂದಳು, "ನಾನು ಹೇಳುತ್ತಿರುವ ಎಲ್ಲವು ಆ ಬಳಿಕ ಆಗುವದು. ಮೊದಲಂತು ನಾನು ಬದುಕುವದೇ ಇಲ್ಲ....ನನಗೆ ಚಿಕ್ಕಂದಿನಿಂದಲೂ ಇದರ ಬಗ್ಗೆ ಭಯವಿದೆ."

ಮದನ ಭಯಗೊಂಡವನಂತೆ ಆದ. ಈ "ಸುಂದರ ವಸ್ತು" ಯಾವುದು ಗರ್ಭನಿಂತ ನಂತರ ಇನ್ನಷ್ಟು ಸುಂದರವಾಗಿದೆಯೋ–ಸತ್ತು ಹೋಗುವದೆ ? ಅವನು ಬೆನ್ನಿನ ಕಡೆಯಿಂದ ಇಂದೂಳನ್ನು ಹಿಡಿದುಕೊಂಡ. ನಂತರ ಎಳೆದುಕೊಂಡು ತನ್ನ ತೋಳುಗಳಲ್ಲಿ ತುಂಬಿಕೊಂಡು ಹೇಳಿದ, —"ನಿನಗೆ ಏನೂ ಆಗುವದಿಲ್ಲ ಇಂದೂ,....ನಾನಂತು ಸಾವಿನ ಬಾಯಿಂದಲೂ ಸಹ ನಿನ್ನನ್ನು ಕಸಿದುಕೊಂಡು, ಕರೆತರುವೆನು....ಈಗ ಸಾವಿತ್ರಿಯ ಸರತಿ ಇಲ್ಲ, ಸತ್ಯವಾನನ ಬಾರಿ ಇದೆ."

ಮದನನನ್ನು ತಬ್ಬಿಕೊಂಡು ಇಂದೂ ತನಗೂ ಒಂದು ದುಃಖವಿದೆ ಎಂಬುದನ್ನು ಮರತೇಬಿಟ್ಟಳು.

ಆ ನಂತರ ಬಾಬೂಜಿ ಏನನ್ನೂ ಬರೆಯಲಿಲ್ಲ. ಆದರೆ ಸಹರಾನಪುರದಿಂದ ಒಬ್ಬ ಸಾರ್ಟರ್ ಬಂದಿದ್ದ. ಬಾಬೂಜಿಗೆ ಪುನಃ ಹೃದಯಾಘಾತವಾಗುತ್ತಲಿದೆ. ಒಂದು ಆಘಾತದಲ್ಲಂತು ಅವರು ಸತ್ತಂತೆ ಆಗಿತ್ತು. ಇಷ್ಟೇ ಅವನು ಹೇಳಿದ್ದ. ಮದನ ಹೆದರಿದನು ಮತ್ತು ಇಂದೂ ಅಳಹತ್ತಿದಳು. ಸಾರ್ಟರ್ ಹೋದ ಬಳಿಕ ಮದನ ಎಂದಿನಂತೆ ಕಣ್ಣುಗಳನ್ನು ಮುಚ್ಚಿಕೊಂಡು, ಮನದಲ್ಲಿಯೇ ಓದಹತ್ತಿದ....'ಓಂ ನಮೋ ಭಗವತೇ ವಾಸುದೇವಾಯ.'

ಮರುದಿನವೆ ಮದನ ತಂದೆಗೆ ಪತ್ರ ಬರೆದ—"ಬಾಬೂಜಿ! ಹೊರಟುಬನ್ನಿರಿ ; ಮಕ್ಕಳು ಬಹಳ ನೆನೆಸುತ್ತಾರೆ....ನಿಮ್ಮ ಸೊಸೆಯು ಕೂಡ...." ಆದರೆ ಎಷ್ಟೆಂದರೂ ನೌಕರಿಯ ವಿಷಯವಿತ್ತು. ತನ್ನ ಕೈಯಲ್ಲಿಯ ವಿಷಯವಂತು ಅಲ್ಲವಲ್ಲ. ಧನಿರಾಮರ ಪತ್ರದ ಪ್ರಕಾರ ಅವರು ರಜೆಯ ವ್ಯವಸ್ಥೆ ಮಾಡುತ್ತಲಿದ್ದರು. ಅವರ ಬಗ್ಗೆ ದಿನ ದಿನಕ್ಕೂ ಮದನನ ಪಾಪ-ಭಾವನೆಯು ಬೆಳೆಯಹತ್ತಿತು— "ನಾನು ಇಂದೂಳನ್ನು ಅಲ್ಲಿಯೇ ಇರಲು ಬಿಟ್ಟಿದ್ದರೆ ನನ್ನದೇನು ಕೆಡುತ್ತಿತ್ತು ? "

ವಿಜಯದಶಮಿಯಂದು ಒಂದು ರಾತ್ರಿ ಮೊದಲು, ವಿವಶತೆಯ ಸ್ಥಿತಿಯಲ್ಲಿ ಮದನ ನಡುವಿನ ಕೋಣೆಯ ಹೊರಗಿನ ಪಡಸಾಲೆಯಲ್ಲಿ ಅಲೆದಾಡುತ್ತಿದ್ದ. ಅಷ್ಟರಲ್ಲಿ, ಒಳಗಿನಿಂದ ಮಗು ಅಳುವ ಧ್ವನಿ ಬಂದಿತು. ಅವನು ಬೆಚ್ಚಿಬಿದ್ದು ಬಾಗಿಲು ಕಡೆ ಧಾವಿಸಿದ. ದಾಯಿ ಬೇಗಮ್ ಹೊರಗೆ ಬಂದು, "ಶುಭವಾಗಲಿ ಬಾಬೂಜಿ,

ಗಂಡು ಮಗುವಾಗಿದೆ" ಅಂದಳು.

"ಗಂಡು ಮಗು" ಎಂದು ಮದನ ಭಯಗ್ರಸ್ತ ಧ್ವನಿಯಲ್ಲಿ ಕೇಳಿದ; "ಬೀಬಿ ಹೇಗಿದ್ದಾಳೆ?"

"ಚೆನ್ನಾಗಿ ಇದ್ದಾಳೆ. ಈವರೆಗೂ ಆಕೆಗೆ ಹುಡುಗಿ ಎಂದು ಹೇಳಿದ್ದೇನೆ. ಬಾಣಂತಿ ಬಹಳ ಸಂತೋಷಗೊಂಡರೆ, ಮಾಸು ಬೀಳುವದಿಲ್ಲ ಅಲ್ಲವೇ?"—ಬೇಗಂ ಹೇಳಿದಳು.

"ಓ....ಮದನ" ಮೂರ್ಖರ ಹಾಗೆ ಕಣ್ಣು ಬಡಿಯುತ್ತ ಅಂದ ಮತ್ತು ಕೋಣೆಯಲ್ಲಿ ಒಳಹೋಗಲು ಮುಂದಕ್ಕೆ ಸಾಗಿದ. ಬೇಗಮ್ ಅವನನ್ನು ಅಲ್ಲಿಯೇ ತಡೆದು, "ನಿಮಗೆ ಒಳಗೇನು ಕೆಲಸ?" ಎಂದು ಏಕಾಏಕಿ ಬಾಗಿಲು ಮುಚ್ಚಿಕೊಂಡು ಒಳಗೆ ಧಾವಿಸಿದಳು.

ಮದನನ ಕಾಲುಗಳು ಈವರೆಗೂ ಕಂಪಿಸುತ್ತಿದ್ದವು. ಈ ಸಲ ಭಯದಿಂದಲ್ಲ, ನೆಮ್ಮದಿಯಿಂದ, ಇಲ್ಲವೆ ಬಹುಶಃ ಈ ಜಗತ್ತಿನಲ್ಲಿ ಯಾರಾದರೂ ಬಂದಾಗ ಸುತ್ತ ಮುತ್ತಲಿನ ಜನರ ಪರಿಸ್ಥಿತಿಯು ಇದೇ ರೀತಿ ಇರುವದರಿಂದ ಇದ್ದಿರಬಹುದು. ಗಂಡು ಮಗು ಹುಟ್ಟಿದಾಗ ಮನೆಯ ಗೋಡೆ, ಬಾಗಿಲುಗಳು ಕಂಪಿಸುತ್ತವೆ ಎಂದು ಮದನ ಕೇಳಿದ್ದ. ಹುಟ್ಟಿದವನು ದೊಡ್ಡವನಾದಮೇಲೆ ತಮ್ಮನ್ನು ಮಾರುವನೊ ಇಲ್ಲವೆ ಇಟ್ಟುಕೊಳ್ಳುವನೊ ಎಂಬ ಭಯವಿದ್ದಹಾಗಿತ್ತು ಆ ಗೋಡೆ ಬಾಗಿಲುಗಳಿಗೆ. ನಿಜವಾಗಿಯೂ ಗೋಡೆಗಳು ಅದರುತ್ತಿದ್ದವು ಎಂದು ಮದನನಿಗೆ ಭಾಸವಾಯಿತು........

....ಬಾಣಂತಿತನಕ್ಕೆ ಚಕಲಿ ಭಾಭಿಯಂತು ಬರಲಿಲ್ಲ. ಯಾಕೆಂದರೆ, ಅವಳ ಸ್ವಂತ ಮಗು ಬಹಳ ಸಣ್ಣದಿತ್ತು. ಆದರೆ ದರಯಾಬಾದದ ಸೋದರತ್ತೆ ಮಾತ್ರ ಅವಶ್ಯ ಬಂದಿದ್ದಳು. ಹಡೆಯುವ ಸಮಯದಲ್ಲಿ ಅವಳು 'ರಾಮ ರಾಮ' ಎಂದು ಜಪಿಸುತ್ತಿದ್ದಳು. ಈಗ ಅದೇ ಜಪವು ಮಂದವಾಗುತ್ತಲಿತ್ತು.

ಇಡೀ ಜೀವನದಲ್ಲಿ, ಮದನನಿಗೆ ತನ್ನಷ್ಟಕ್ಕೆ ತಾನು ಇಷ್ಟು ವ್ಯರ್ಥ ಮತ್ತು ನಿರುಪಯೋಗಿ ಎಂದು ಅನಿಸಿದ್ದಿಲ್ಲ. ಅಷ್ಟರಲ್ಲಿ ಪುನಃ ಬಾಗಿಲು ತೆರೆಯಿತು ಮತ್ತು ಸೋದರತ್ತೆ ಹೊರಬಂದಳು. ಪಡಸಾಲೆಯ ಮಂದ ಪ್ರಕಾಶದಲ್ಲಿ ಅವಳ ಮುಖವು ಭೂತದ ಮುಖದ ಹಾಗೆ ಒಮ್ಮೆಲೆ ಹಾಲಿನಂತೆ ಬೆಳ್ಳಗೆ ಕಾಣಿಸುತ್ತಿತ್ತು. ಮದನ ಅವಳನ್ನು ಅಡ್ಡಗಟ್ಟುತ್ತ ಕೇಳಿದ—

"ಇಂದೂ ಸರಿಯಾಗಿ ಇದ್ದಾಳಲ್ಲವೇ ಸೋದರತ್ತೆ?"

"ಸರಿಯಾಗಿ ಇದ್ದಾಳೆ, ಸರಿಯಾಗಿ ಇದ್ದಾಳೆ, ಸರಿಯಾಗಿ ಇದ್ದಾಳೆ." ಸೋದರತ್ತೆ ಮೂರು ನಾಲ್ಕು ಸಲ ಹೇಳಿದಳು ಮತ್ತು ತನ್ನ ನಡುಗುವ ಕೈಯನ್ನು ಮದನನ ತಲೆಯ ಮೇಲಿಟ್ಟು ಅದನ್ನು ಬಾಗಿಸಿ, ಚುಂಬಿಸಿ ಹೊರಗೆ ಧಾವಿಸಿದಳು.

ಸೋದರತ್ತೆ ಪಡಸಾಲೆಯ ಬಾಗಿಲಲ್ಲಿಂದ ಹೊರಗೆ ಹೋಗುತ್ತಿದ್ದುದು ಕಾಣು

ತ್ತಿದ್ದಿತು. ಅವಳು ಬೈಠಕ್ಕ್ಕೆ ತಲುಪಿದಳು. ಅಲ್ಲಿ ಬಾಕಿ ಮಕ್ಕಳು ಮಲಗಿದ್ದರು. ಸೋದರತ್ತೆ ಒಬ್ಬೊಬ್ಬರಂತೆ ತಲೆಯಮೇಲೆ ಪ್ರೀತಿಯಿಂದ ಕೈಯಾಡಿಸಿದಳು. ನಂತರ ಮಾಳಿಗೆಯ ಕಡೆ ಕಣ್ಣು ಎತ್ತಿ ಬಾಯಲ್ಲಿ ಏನನ್ನೋ ಅಂದಳು. ಬಳಿಕ ದಣಿದವಳಂತೆ ಆಗಿ ಮುನ್ನಿಯ ಪಕ್ಕದಲ್ಲಿ ಒರಗಿದಳು—ಬೆನ್ನು ಮೇಲಾಗಿ. ಅವಳ ಹೊಯ್ದಾಡುತ್ತಿದ್ದ ಭುಜಗಳಿಂದ ಅವಳು ಅಳುತ್ತಿದ್ದಳೆಂದು ಕಂಡುಬರುತ್ತಿತ್ತು. ಮದನನಿಗೆ ಆಶ್ಚರ್ಯವಾಯಿತು....ಸೋದರತ್ತೆಯಂತು ಅನೇಕ ಬಾಣಾಂತಿತನಗಳನ್ನು ಅನುಭವಿಸಿದ್ದಾಳೆ....ಅಂದಮೇಲೆ ಅವಳ ಆತ್ಮವು ಕೂಡ ಯಾಕೆ ಕಂಪಿಸುತ್ತಲಿದೆ?

ನಂತರ ಆ ಕಡೆಯ ಕೋಣೆಯಿಂದ ಹರಮಲ್‌ದ ವಾಸನೆಯು ಹೊರಬಂದಿತು. ಹೊಗೆಗಳ ಒಂದು ಮುಸುಕು ಎದ್ದು ಮದನನನ್ನು ಸುತ್ತುವರೆಯಿತು. ಅವನ ತಲೆ ತಿರುಗಿತು. ಅಷ್ಟರಲ್ಲಿಯೇ ದಾಯಿಬೇಗಂ ಬಟ್ಟೆಯಲ್ಲಿ ಏನನ್ನೋ ಸುತ್ತಿಕೊಂಡು ಹೊರಗೆ ಬಂದಳು. ಬಟ್ಟೆಯ ಮೇಲೆ ರಕ್ತವೇ ರಕ್ತವಿತ್ತು. ಅದರಲ್ಲಿಂದ ಕೆಲವು ಹನಿಗಳು ಫರಶಿಯ ಮೇಲೆ ಬೀಳುತ್ತಿದ್ದವು. ಮದನಗೆ ಎಚ್ಚರ ತಪ್ಪಿತು. ತಾನು ಎಲ್ಲಿದ್ದೇನೆ ಎಂದು ಅವನಿಗೆ ತಿಳಿದಿರಲಿಲ್ಲ. ಕಣ್ಣು ತೆರೆದಿದ್ದವು. ಆದರೆ ಏನೂ ಕಾಣಿಸುತ್ತಿರಲಿಲ್ಲ. ಮಧ್ಯದಲ್ಲಿ ಇಂದೂಳ ಒಂದು ಸಾಯುವಂತಹ ಧ್ವನಿ ಬಂದಿತು—"ಹಾ....ಯ್." ಬಳಿಕ ಮಗು ಅಳುವ ಧ್ವನಿ....

ಮೂರು ನಾಲ್ಕು ದಿನಗಳಲ್ಲಿ ಬಹಳಷ್ಟು ನಡೆಯಿತು. ಮದನ ಮನೆಯ ಒಂದು ಕಡೆ ತಗ್ಗು ನೋಡಿ ಮಾಸವನ್ನು ಹುಗಿದ. ನಾಯಿಗಳು ಒಳಗೆ ಬರದ ಹಾಗೆ ತಡೆಗಟ್ಟಿದ. ಆದರೆ ಅವನಿಗೆ ಎಳ್ಳಷ್ಟು ನೆನಪಿರಲಿಲ್ಲ. ಹರಮಲ್‌ದ ವಾಸನೆ ತಲೆ ಸೇರಿದ ಬಳಿಕ ಇಂದೇ ತನಗೆ ಎಚ್ಚರ ಬಂದಿದೆ ಏನೊ ಎಂದು ಅವನಿಗೆ ಅನಿಸಿತು. ಕೋಣೆಯಲ್ಲಿ ಅವನೊಬ್ಬನೇ ಇದ್ದ ಮತ್ತು ಇಂದೂ—ನಂದ ಮತ್ತು ಯಶೋಧಾ—ಮತ್ತೊಂದು ಕಡೆ ನಂದಲಾಲ....ಇಂದೂ ಮಗುವಿನ ಕಡೆ ನೋಡಿದಳು ಮತ್ತು ಏನನ್ನೋ ಹುಡುಕಿದಂತಹ ರೀತಿಯಲ್ಲಿ ಹೇಳಿದಳು. "ತದ್ರೂಪ ನಿಮ್ಮನ್ನೇ ಹೋಲುತ್ತಾನೆ."

"ಇರಬಹುದು" ಎಂದು ಮದನ ಮಗುವಿನಮೇಲೆ ಒಂದು ವ್ಯಸ್ತ ದೃಷ್ಟಿಯನ್ನು ಬೀರುತ್ತ ಹೇಳಿದ—"ದೇವರ ದಯೆಯಿಂದ ನೀನು ಬದುಕಿದೆ."

"ಹಾಯ್! ನಾನು ಅಂದುಕೊಂಡಿದ್ದೆ...." ಇಂದೂ ಅಂದಳು.

"ಶುಭವನ್ನು ಹೇಳು"—ಮದನ ಇಂದೂಳ ಮಾತನ್ನು ತಟ್ಟನೆ ತಡೆಯುತ್ತ ಹೇಳಿದ—"ಇಲ್ಲಿಯಂತು ಏನೆಲ್ಲ ಆಗಿದೆಯೊ........ನಾನಂತು ನಿನ್ನ ಒಳಿ ಕೂಡ ಹಾಯುವದಿಲ್ಲ" ಮದನ ನಾಲಿಗೆಯನ್ನು ಹಲ್ಲುಗಳಲ್ಲಿ ಒತ್ತಿ ಹಿಡಿದ.

"ಗಲ್ಲ ಬಡಿದುಕೊಳ್ಳಿರಿ"—ಇಂದು ಹೇಳಿದಳು.

ಮದನ ಅದೇ ಕ್ಷಣದಲ್ಲಿ ಕಿವಿಗಳನ್ನು ತನ್ನ ಕೈಗಳಿಂದ ಹಿಡಿದುಕೊಂಡ. ಇಂದೂ

ನಿಶ್ಶಕ್ತ ಧ್ವನಿಯಲ್ಲಿ ನಗಹತ್ತಿದಳು.

ಮಗು ಹುಟ್ಟಿದ ಬಳಿಕ ಎಷ್ಟೋ ದಿನಗಳ ತನಕ ಇಂದೂಳ ನಾಭಿಯು ತನ್ನ ಜಾಗೆಗೆ ಬರಲಿಲ್ಲ. ಅದು ಸುತ್ತಿ ಸುತ್ತಿ ತನ್ನಿಂದ ಆಚೆ, ಹೊರಗಿನ ಜಗತ್ತಿಗೆ ಬಂದ, ತನ್ನ ಮೂಲ ತಾಯಿಯನ್ನೇ ಮರೆತ ಆ ಮಗುವನ್ನು ಶೋಧಿಸುತ್ತಿತ್ತು.

ಈಗ ಎಲ್ಲವೂ ಸರಿಯಾಗಿತ್ತು. ಇಂದೂ ಶಾಂತಿಯಿಂದ ಈ ಜಗತ್ತನ್ನು ನಿಟ್ಟಿಸುತ್ತಿದ್ದಳು. ಅವಳು ಮದನನ ಅಪರಾಧಗಳನ್ನಷ್ಟೇ ಅಲ್ಲ, ಇಡೀ ಜಗತ್ತಿನ ಎಲ್ಲ ಅಪರಾಧಿಗಳ ಅಪರಾಧಗಳನ್ನು ಸಹಿತ ಕ್ಷಮಿಸಿಬಿಟ್ಟಿದ್ದಾಳೆಂದು ತೋರುತ್ತಿತ್ತು. ಮತ್ತು ಈಗ ದೇವಿಯಾಗಿ ದಯೆ ಮತ್ತು ಕರುಣೆಗಳ ಪ್ರಸಾದವನ್ನು ಹಂಚುತ್ತಿದ್ದಾಳೆ....

ಮದನ ಇಂದೂಳ ಮುಖದತ್ತ ನೋಡಿದ ಮತ್ತು ಯೋಚಿಸಹತ್ತಿದ. ಈ ಎಲ್ಲ ಗಂಡಾಂತರದ ಬಳಿಕ ಒಂದಿಷ್ಟು ತೆಳ್ಳಗಾಗಿ ಇಂದೂ ಇನ್ನಿಷ್ಟು ಚೆನ್ನಾಗಿ ಕಾಣಿಸುತ್ತಿದ್ದಳು....ಅಷ್ಟರಲ್ಲಿಯೆ ಏಕಾಏಕಿ ಇಂದೂ ಎರಡೂ ಕೈಗಳನ್ನು ತನ್ನ ಎದೆಗಳಮೇಲೆ ಇಟ್ಟುಕೊಂಡಳು.

"ಏನಾಯಿತು?"—ಮದನ ಕೇಳಿದ.

"ಏನೂ ಇಲ್ಲ"—ಇಂದೂ ಒಂದಿಷ್ಟು ಏಳುವ ಪ್ರಯತ್ನ ಮಾಡುತ್ತ ಹೇಳಿದಳು—"ಇವನಿಗೆ ಹಸಿವಾಗಿದೆ" ಎಂದು ಮಗುವಿನತ್ತ ಸಂಕೇತ ಮಾಡಿದಳು.

"ಇವನಿಗೆ?—ಹಸಿವು?—" ಮದನ ಮೊದಲು ಮಗುವಿನತ್ತ ಮತ್ತು ನಂತರ ಇಂದೂಳ ಕಡೆ ನೋಡುತ್ತ ಹೇಳಿದ—"ನಿನಗೆ ಹೇಗೆ ಗೊತ್ತಾಯಿತು?"

"ಕಾಣಿಸುವದಿಲ್ಲವೆ?"—ಇಂದೂ ಕೆಳಗಡೆ ನೋಡುತ್ತ ಹೇಳಿದಳು—"ಎಲ್ಲ ತೋಯ್ದು ಬಿಟ್ಟಿದೆ."

ಮದನ ಲಕ್ಷ್ಯದಿಂದ ಇಂದೂಳ ಸಡಿಲಾದ ದಗಲೆಯ ಕಡೆ ನೋಡಿದ. ಝುರ್ ಝುರ್ ಎಂದು ಹಾಲು ಜಿನಗುತ್ತಿತ್ತು ಮತ್ತು ಒಂದು ವಿಶೇಷ ರೀತಿಯ ವಾಸನೆ ಬರುತ್ತಿತ್ತು. ನಂತರ ಇಂದೂ ಮಗುವಿನತ್ತ ಕೈ ಚಾಚುತ್ತ ಹೇಳಿದಳು—"ಅವನನ್ನು ನನಗೆ ಕೊಡಿ."

ಮದನ ಕೈಗಳನ್ನು ತೊಟ್ಟಿಲಿನ ಕಡೆ ಚಾಚಿದ ಮತ್ತು ಅದೇ ಕ್ಷಣದಲ್ಲಿ ಹಿಂದಕ್ಕೆಳೆದುಕೊಂಡ. ನಂತರ ಸ್ವಲ್ಪ ಧೈರ್ಯದಿಂದ ಅವನು ಮಗುವನ್ನು, ಅದು ಸತ್ತ ಇಲಿ ಇದೆ ಎನ್ನುವ ಹಾಗೆ, ಎತ್ತಿಕೊಂಡು ಇಂದೂಳ ಉಡಿಯಲ್ಲಿಟ್ಟ. ಇಂದೂ ಮದನನ ಕಡೆ ನೋಡುತ್ತ ಹೇಳಿದಳು—

"ನೀವು ಹೋಗಿರಿ....ಹೊರಗೆ."

"ಯಾಕೆ?—ಹೊರಗೆ ಏಕೆ ಹೋಗಬೇಕು?"—ಮದನ ಕೇಳಿದ.

"ಹೋಗಿ ಅಂದ್ರೆ"—ಇಂದೂ ಸ್ವಲ್ಪು ಬಳಕುತ್ತ, ಸ್ವಲ್ಪ ನಾಚುತ್ತ ಅಂದಳು—

" ನಿಮ್ಮೆದುರು ನಾನು ಹಾಲು ಕುಡಿಸಲಾರೆ."

" ಅರೆ, ನನ್ನೆದುರು........ಕುಡಿಸಲಾರಿ ಅಲ್ಲವೆ? "—ಮದನ ಆಶ್ಚರ್ಯದಿಂದ ಹೇಳಿದ. ಬಳಿಕ ತಿಳಿಯದವನ ರೀತಿಯಲ್ಲಿ ತಲೆ ಕೊಡಹಿ ಹೊರಗೆ ಹೊರಟ. ಬಾಗಲ ಬಳಿ ತಲುಪಿದಮೇಲೆ ಹೊರಳಿ ಇಂದೂಳ ಕಡೆ ದೃಷ್ಟಿ ಬೀರಿದ—ಇಷ್ಟು ಚೆಲುವೆಯಾಗಿ ಇಂದೂ ಈವರೆಗೂ ಕಾಣಿಸಿರಲಿಲ್ಲ.

ಬಾಬೂ ಧನಿರಾಮ ರಜೆಗೆಂದು ಮನೆಗೆ ಬಂದಾಗ ಮೊದಲಿನ ಅರ್ಧ ಮಾತ್ರ ಕಾಣಿಸುತ್ತಿದ್ದರು. ಇಂದೂ ಮೊಮ್ಮಗನನ್ನು ಅವರ ಉಡಿಯಲ್ಲಿ ಕೊಟ್ಟಾಗ ಸಂತೋಷಪಟ್ಟರು. ಅವರ ಹೊಟ್ಟೆಯಲ್ಲಿ ಹುಣ್ಣು ಆಗಿ, ಅದು ಇಪ್ಪತ್ತಾನ್ಲಲ್ಕು ಗಂಟೆಯೂ ಅವರನ್ನು ಶೂಲಕ್ಕೇರಿಸಿದ ಹಾಗೆ ಇಟ್ಟಿತ್ತು. ಒಂದು ವೇಳೆ ಮುನ್ನಾ ಇರದೇ ಇದ್ದರೆ ಬಾಬೂಜಿಯ ಪರಿಸ್ಥಿತಿಯು ಇದಕ್ಕಿಂತಲೂ ಹತ್ತು ಪಟ್ಟು ಕೆಟ್ಟದಾಗಿರುತ್ತಿತ್ತು.

ಅನೇಕ ಉಪಚಾರಗಳನ್ನು ಮಾಡಲಾಯಿತು. ಬಾಬೂಜಿಯ ಕೊನೆಯ ಉಪಚಾರದಲ್ಲಿ ಡಾಕ್ಟರ್ ಅರ್ಧ ಆಣೆ ಗಾತ್ರದ ಗುಳಿಗೆಯನ್ನು ದಿನಕ್ಕೆ ಹದಿನೈದು-ಇಪ್ಪತ್ತರ ಮಾತ್ರೆಯಲ್ಲಿ ನುಂಗಲು ಕೊಟ್ಟರು. ಮೊದಲನೆಯ ದಿನವೇ ಅವರಿಗೆ ಎಷ್ಟು ಬೆವರು ಬಂದಿತೆಂದರೆ, ಮೂರು ಮೂರು, ನಾಲ್ಕು ನಾಲ್ಕು ಸಲ ಬಟ್ಟೆಗಳನ್ನು ಬದಲಿಸಬೇಕಾಯಿತು. ಪ್ರತಿ ಸಲವು ಮದನ ಬಟ್ಟೆಗಳನ್ನು ಕಳಚಿ ಬಕೀಟ್‌ದಲ್ಲಿ ಹಿಂಡುತ್ತಿದ್ದ. ಕೇವಲ ಬೆವರಿನಿಂದಲೇ ಕಾಲು ಭಾಗ ಬಕೀಟ್ ತುಂಬಿತು. ರಾತ್ರಿ ಅವರಿಗೆ ವಾಂತಿಯಾಗಹತ್ತಿತು ಮತ್ತು ಅವರೇ ಕೂಗಿದರು—

" ಬಹೂ, ಸ್ವಲ್ಪ ಹಲ್ಲುಜ್ಜುವ ಕಡ್ಡಿಯನ್ನು ಕೊಡು....ಬಾಯಿ ರುಚಿ ಬಹಳ ಕೆಡ ಹತ್ತಿದೆ." ಸೊಸೆ ಓಡುತ್ತ ಹೋದಳು ಮತ್ತು ಹಲ್ಲುಜ್ಜುವ ಕಡ್ಡಿಯನ್ನು ತಂದಳು. ಬಾಬೂಜಿ ಎದ್ದು ಕುಳಿತು ಹಲ್ಲುಜ್ಜುವ ಕಡ್ಡಿಯನ್ನು ಅಗಿಯುತ್ತಿದ್ದರು. ಅಷ್ಟರಲ್ಲೇ ಒಂದು ಉಬ್ಬಳಿಕೆ ಹೇಗೆ ಬಂದಿತೆಂದರೆ, ಅದು ಜೊತೆಗೆ ರಕ್ತದ ಹರಿಣಾಳಿಗೆಯನ್ನೇ ತಂದಿತು. ಮಗನು ವಾಪಸ್ ತಲೆದಿಂಬಿನ ಕಡೆ ಮಲಗಿಸಿದ ಕೂಡಲೇ ಅವರ ಕಣ್ಣುಗುಡ್ಡೆಗಳು ತಿರುಗಿಬಿಟ್ಟಿದ್ದವು. ಕೆಲವೇ ಕ್ಷಣಗಳಲ್ಲಿ ಅವರು ಮೇಲಿನ ಆಕಾಶದ ಹೂದೋಟವನ್ನು ತಲುಪಿದ್ದರು. ಅಲ್ಲಿ ಅವರು ತಮ್ಮ ಹೂವನ್ನು ಗುರುತಿಸಿದ್ದರು.

ಮುನ್ನಾ ಹುಟ್ಟಿ ಒಟ್ಟು ಇಪ್ಪತ್ತು, ಇಪ್ಪತ್ತೈದು ದಿನಗಳಾಗಿದ್ದವು. ಇಂದೂ ಮುಖವನ್ನು ಕೆರೆದುಕೊಂಡು, ತಲೆ ಮತ್ತು ಎದೆಯನ್ನು ಬಡಿದುಕೊಂಡು ತನ್ನನ್ನು ತಾನೇ ನೀಲಿ ಮಾಡಿಕೊಂಡಿದ್ದಳು. ಮದನನ ಎದುರು, ತಾನು ಕಲ್ಪನೆಯಲ್ಲಿ ಸತ್ತಾಗ ಕಂಡ ದೃಶ್ಯವೇ ಇತ್ತು. ವ್ಯತ್ಯಾಸವಿದ್ದದ್ದು ಕೇವಲ ಇಷ್ಟೆ; ಇಂದೂ ಬಳೆಗಳನ್ನು ಒಡೆದುಕೊಳ್ಳುವ ಬದಲು ಅವುಗಳನ್ನು ಬಿಚ್ಚಿ ಬೇರೆಡೆ ಇಟ್ಟಿದ್ದಳು; ತಲೆಯ ಮೇಲೆ ಬೂದಿ ಸುರುವಿಕೊಂಡಿದ್ದಿಲ್ಲ; ಆದರೆ ಭೂಮಿಯಮೇಲಿಂದ ಮಣ್ಣು ಅಂಟ

ಕೊಂಡಿದ್ದರಿಂದ ಮತ್ತು ಕೂದಲು ಕೆದರಿದ್ದರಿಂದ ಮುಖವು ಭಯಾನಕವಾಗಿತ್ತು. "ಜನರೇ! ನಾನು ಹಾಳಾದೆ" ಎಂಬುದರ ಜಾಗೆಯಲ್ಲಿ ಅವಳು ಒಂದು ಹೃದಯ ಭೇದಕ ಧ್ವನಿಯಲ್ಲಿ ಚೀರಲು ಪ್ರಾರಂಭಿಸಿದ್ದಳು—"ಜನರೇ! ನಾವು ಹಾಳಾದೆವು."

ಮನೆತನದ ಎಷ್ಟು ಭಾರ ತನ್ನ ಮೇಲೆ ಬಿದ್ದಿದೆ ಎಂಬುದರ ಅಂದಾಜು ಇನ್ನೂ ಮದನನಿಗೆ ಆಗಿರಲಿಲ್ಲ. ಬೆಳಕು ಹರಿಯುವಷ್ಟರಲ್ಲಿ, ಅವನ ಹೃದಯವು ಧಾವಿಸಿ ಬಾಯಿಗೆ ಬಂದಿತ್ತು. ಅವನು ಮನೆಯ ಹೊರಗೆ ಮೋರಿಯ ದಂಡೆಯ ತೇವಗೊಂಡ ಮಣ್ಣಿನಮೇಲೆ ಬೋರಲಾಗಿ ಬಿದ್ದುಕೊಂಡು ತನ್ನ ಹೃದಯವನ್ನು ನೆಲೆಗೆ ತರದೆ ಇದ್ದಿದ್ದರೆ ಅವನು ಬಹುಶಃ ಉಳಿಯುತ್ತಿರಲಿಲ್ಲವೇನೋ? ಧರಿತ್ರಿಮಾತೆಯು ಎದೆಗೆ ಅವಚಿಕೊಂಡು ತನ್ನ ಮಗುವನ್ನು ಉಳಿಸಿಕೊಂಡಿದ್ದಳು. ಗೂಡಿನ ಮೇಲೆ ಗಿಡಗವು ದಾಳಿ ಮಾಡಿದಾಗ ಗುಬ್ಬಿಯ ಮರಿಗಳು ಚುಂಚನ್ನು ಎತ್ತಿ ಎತ್ತಿ, ಚಿಂ ಚಿಂ ಎನ್ನುವ ಹಾಗೆ ಚಿಕ್ಕ ಮಕ್ಕಳು—ಕುಂದನ, ದುಲಾರಿ, ಮುನ್ನಿ ಮತ್ತು ಪಾಷಿ—ಚೀರುತ್ತಿದ್ದರು. ಇವರನ್ನು ಯಾರಾದರೂ ರೆಕ್ಕೆಗಳಡಿಯಲ್ಲಿ ಒಂದುಗೂಡಿಸಿ ಇಟ್ಟುಕೊಂಡವರು ಎಂದರೆ ಇಂದೂ ಮಾತ್ರ.

ಮೋರಿಯ ದಂಡೆಯಮೇಲೆ ಬಿದ್ದುಕೊಂಡು ಮದನ ಯೋಚಿಸಿದ: ನನ್ನ ಪಾಲಿಗೆ ಈ ಜಗತ್ತು ಮುಗಿದಂತಾಯಿತು. ನಾನು ಬದುಕಬಲ್ಲೆನೇ? ಜೀವನದಲ್ಲಿ ಎಂದಾದರೂ ನಗಬಲ್ಲೆನೇ?....ಅವನು ಎದ್ದು ಮನೆಯ ಒಳಗೆ ಹೋದನು.

ಮೆಟ್ಟಲುಗಳ ಕೆಳಗೆ ಜಳಕದ ಕೋಣೆಯಿತ್ತು. ಅದರೊಳಗೆ ಹೊಕ್ಕು ಒಳಗಿಂದ ಕದವನ್ನು ಮುಚ್ಚಿಕೊಳ್ಳುತ್ತ ಮದನ ಒಂದು ಬಾರಿ ಪುನಃ ಆ ಪ್ರಶ್ನೆಯನ್ನು ಪುನರುಚ್ಚರಿಸಿದನು: ನಾನು ಎಂದಾದರೂ ನಗಲು ಕೂಡ ಸಾಧ್ಯವೇ? ಅವನು ಕಿಲಕಿಲ ನಗುತ್ತಿದ್ದ. ವಾಸ್ತವದಲ್ಲಿ ಅವನ ತಂದೆಯ ಹೆಣವು ಇನ್ನೂ ಪಕ್ಕದಲ್ಲಿಯೇ ಪಡಸಾಲೆಯಲ್ಲಿ ಬಿದ್ದುಕೊಂಡಿತ್ತು.

ತಂದೆಯನ್ನು ಅಗ್ನಿಗೆ ಒಪ್ಪಿಸುವ ಮೊದಲು ಮದನ, ಸಿದಿಗೆಯ ಮೇಲೆ ಬಿದ್ದಿದ್ದ ದೇಹದೆದುರು ಸಾಷ್ಟಾಂಗ ಪ್ರಣಾಮ ಮಾಡಿದ. ಇದು ಅವನು ತನ್ನ ಜನ್ಮದಾತನಿಗೆ ಮಾಡಿದ ಕೊನೆಯ ನಮಸ್ಕಾರವಾಗಿತ್ತು. ಈಗಲೂ ಕೂಡ ಅವನು ಅಳುತ್ತಿದ್ದಿಲ್ಲ. ಅವನ ಈ ಪರಿಸ್ಥಿತಿಯನ್ನು ನೋಡಿ ಮೃತ್ಯುಶೋಕದಲ್ಲಿ ಭಾಗವಹಿಸಿದ್ದ ಸಂಬಂಧಿಕರು ಮತ್ತು ಮೊಹಲ್ಲಾದ ಜನರು ಸ್ತಬ್ಧರಾಗಿದ್ದರು.

ನಂತರ ಹಿಂದೂ ಪದ್ಧತಿಯ ಪ್ರಕಾರ ಜ್ಯೇಷ್ಠ ಪುತ್ರನ ಅಳವಿನಿಂದ ಮದನ ಚಿತೆ ಉರಿಸಬೇಕಾಯಿತು. ಉರಿಯುತ್ತಿದ್ದ ತಲೆಬುರುಡೆಯ ಮೇಲೆ ಕಪಾಲ ಕ್ರಿಯೆಯ ಕೋಲನ್ನು ಹೊಡೆಯಬೇಕಾಯಿತು....ಹೆಂಗಸರು ಹೊರಗಿನಿಂದಲೇ ಸ್ಮಶಾನದ ಬಾವಿಯಲ್ಲಿ ಮಿಂದು ಮನೆಗೆ ಮರಳಿದ್ದರು. ಮದನ ಮನೆ ಮುಟ್ಟಿದಾಗ ಕಂಪಿಸುತ್ತಿದ್ದ. ಧರಿತ್ರಿಮಾತೆಯು ಕೊಂಚ ಸಮಯದವರೆಗೆ ತನ್ನ ಮಗನಿಗೆ ಕೊಟ್ಟಿದ್ದ ಶಕ್ತಿಯು

ರಾತ್ರಿಗೆ ಮನೆಗೆ ಬಂದ ಬಳಿಕ ಪುನಃ ಬಯಕೆಯು ರೂಪ ತಾಳಿತು. ಅವನಿಗೆ ಯಾವುದಾದರೂ ಆಸರೆ ಬೇಕಿತ್ತು. ಮೃತ್ಯುವಿಗಿಂತಲೂ ಮಿಗಿಲಾದ ಭಾವನೆಯ ಆಶ್ರಯ. ಈ ಸಲ ಧರಿತ್ರಿಮಾತೆಯ ಮಗಳು, ಜನಕನ ಪ್ರೇಮಪುತ್ರಿ—ಇಂದೂ ಯಾವುದೋ ಕೊಡದಲ್ಲಿಂದ ಹುಟ್ಟಿ ಈ ರಾಮನನ್ನು ತನ್ನ ತೋಳುಗಳಲ್ಲಿ ತುಂಬಿ ಕೊಂಡಳು....ಆ ರಾತ್ರಿ ಒಂದು ವೇಳೆ, ಇಂದೂ ತನ್ನ ಸತ್ವವನ್ನು ಹೀಗೆ ಮದನನ ಮೇಲೆ ಅರ್ಪಣೆ ಮಾಡದೇ ಇದ್ದಿದ್ದರೆ, ಇಷ್ಟು ದೊಡ್ಡ ದುಃಖವು ಮದನನನ್ನು ಎಳೆದು ಕೊಂಡು ಮುಳುಗುತ್ತಿತ್ತು.

ಕೇವಲ ಹತ್ತು ತಿಂಗಳ ಒಳಗೆ, ಇಂದೂಗೆ ಎರಡನೆಯ ಮಗುವಾಯಿತು. ಹೆಂಡತಿಯನ್ನು ಈ ನರಕದ ಬೆಂಕಿಯಲ್ಲಿ ನೂಕಿ ಮದನ ಸ್ವಯಂ ತನ್ನ ದುಃಖವನ್ನು ಮರೆತಿದ್ದ. ಒಂದು ವೇಳೆ ನಾನು ಮದುವೆಯ ನಂತರ ಬಾಬೂಜಿಯ ಬಳಿಗೆ ಹೋಗಿದ್ದ ಇಂದೂಳನ್ನು ಕರೆಯಿಸದೆ ಇದ್ದಿದ್ದರೆ ಬಹುಶಃ ಅವರು ಇಷ್ಟು ಬೇಗ ಹೋಗುತ್ತಿರಲಿಲ್ಲವೆಂದು ಅವನಿಗೆ ಆಗಾಗ ವಿಚಾರ ಬರುತ್ತಿತ್ತು. ಆದರೆ ಪುನಃ ಅವನು ತಂದೆಯ ಸಾವಿನಿಂದ ಉಂಟಾಗುವ ಹಾನಿಗಳನ್ನು ತುಂಬಿಕೊಳ್ಳಲು ನಿರತನಾಗುತ್ತಿದ್ದ. ಮೊದಲು ನಿಷ್ಕಾಳಜಿಯಿಂದ ನಿಂತುಹೋಗಿದ್ದ ವ್ಯಾಪಾರವು ಅನಿವಾರ್ಯದಿಂದ ಪ್ರಾರಂಭವಾಯಿತು.

ಆ ಅವಧಿಯಲ್ಲಿ ಹಿರಿಯ ಮಗನನ್ನು ಮದನನ ಹತ್ತಿರ ಬಿಟ್ಟು, ಕಿರಿಯನನ್ನು ಎದೆಗೆ ಅವಚಿಕೊಂಡು ಇಂದೂ ತವರುಮನೆಗೆ ಹೋಗಿದ್ದಳು. ಇಲ್ಲಿ ಮುನ್ನಾ ಬಗೆ ಬಗೆಯ ಹಟಗಳನ್ನು ಮಾಡುತ್ತಿದ್ದ. ಕೆಲವು ಸಲ ಅವುಗಳನ್ನು ಒಪ್ಪಿಕೊಂಡರೆ ಹಲವು ಸಲ ಸಾಧ್ಯವಾಗುತ್ತಿರಲಿಲ್ಲ. ತವರಿನಿಂದ ಇಂದೂಳ ಪತ್ರ ಬಂದಿತು: ನನಗೆ ಇಲ್ಲಿ ನನ್ನ ಮಗನು ಅಳುವ ಧ್ವನಿಯು ಕೇಳಿಸುತ್ತಿದೆ. ಅವನನ್ನು ಯಾರಾದರೂ ಬಡಿಯುತ್ತಿಲ್ಲವಷ್ಟೆ?....ಮದನನಿಗೆ ಬಹಳ ಆಶ್ಚರ್ಯವಾಯಿತು. ಓರ್ವ ತಿಳಿಗೇಡಿ, ನಿರಕ್ಷರಿ ಹೆಂಗಸು....ಇಂಥ ಮಾತುಗಳನ್ನು ಹೇಗೆ ಬರೆಯಲು ಸಾಧ್ಯ?....ಬಳಿಕ ಅವನು ತನ್ನಷ್ಟಕ್ಕೆ ತಾನೇ ಕೇಳಿಕೊಂಡ—“ಇದೂ ಕೂಡ ಯಾವುದೋ ಬಾಯಿ ಪಾಠ ಮಾಡಿದ ವಾಕ್ಯವೇನು?”

ವರ್ಷಗಳು ಉರುಳಿದವು. ವಿಲಾಸ ಮಾಡುವಷ್ಟು ಹಣವು ಎಂದಿಗೂ ಬರದೇ ಇದ್ದರೂ, ಜೀವನ ನಿರ್ವಹಣೆಗೆ ತಕ್ಕಂತೆ ಆದಾಯವು ನಿಶ್ಚಯವಾಗಿ ಇರುತ್ತಿತ್ತು. ಯಾವುದಾದರೂ ದೊಡ್ಡ ಖರ್ಚು ಎದುರು ಬಂದಾಗ ಮಾತ್ರ ತೊಂದರೆಯಾಗುತ್ತಿತ್ತು....ಕುಂದನಗೆ ಪ್ರವೇಶ ಕೊಡಿಸುವದಿದೆ, ದುಲಾರಿ ಮುನ್ನಿಯ ಶಗುನ್ ಕಳಿಸುವದಿದೆ, ಅಂಥ ವೇಳೆಯಲ್ಲ ಮದನ ಮುಖ ತಗ್ಗಿಸಿಕೊಂಡು ಕುಳಿತುಬಿಡುತ್ತಿದ್ದ.

ನಂತರ ಒಂದು ಕಡೆಯಿಂದ ಇಂದೂ ಬರುತ್ತಿದ್ದಳು, ಮುಗುಳುನಗುತ್ತ "ಯಾಕೆ ದುಃಖಿಯಾಗುತ್ತಿರುವಿರಿ?" ಅನ್ನುವಳು. ಮದನ ಅವಳ ಕಡೆ ಆಶೆ ತುಂಬಿದ ಕಣ್ಣುಗಳಿಂದ ನೋಡುತ್ತ, "ದುಃಖಿಯಾಗಬೇಡ? ಕುಂದನನಿಗೆ ಬಿ.ಎ.ಕ್ಕೆ ಪ್ರವೇಶ ಕೊಡಿಸುವದಿದೆ....ಮುನ್ನಿ...." ಎಂದು ಅನ್ನುತ್ತಿದ್ದ. ಇಂದೂ ಪುನಃ ನಗುತ್ತಿದಳು ಮತ್ತು "ನನ್ನ ಜೊತೆ ನಡೆಯಿರಿ" ಅನ್ನುತ್ತಿದ್ದಳು. ಮದನ ಕುರಿಯ ಮರಿಯ ಹಾಗೆ ಇಂದೂಳ ಹಿಂದೆ ಹೊರಡುತ್ತಿದ್ದ. ಇಂದೂ ಗಂಧದ ಪೆಟ್ಟಿಗೆಯ ಹತ್ತಿರ ಹೋಗುತ್ತಿದ್ದಳು. ಅದಕ್ಕೆ ಯಾರೂ—ಮದನ ಕೂಡ—ಕೈ ಹಚ್ಚುವ ಅನುಮತಿ ಇರಲಿಲ್ಲ. ಆಗಾಗ ಈ ಮಾತಿನ ಬಗ್ಗೆ ಸಿಟ್ಟಿಗೆದ್ದು ಮದನ ಹೇಳುತ್ತಿದ್ದ—"ಸತ್ತ ಮೇಲೆ ಇದನ್ನು ಎದೆಯಮೇಲೆ ಹೇರಿಕೊಂಡು ಹೋಗು." ಇಂದೂ, "ಹಾಂ ಒಯ್ಯುತ್ತೇನೆ" ಅನ್ನುತ್ತಿದ್ದಳು. ನಂತರ ಇಂದೂ ಅದರಲ್ಲಿಂದ ಅವಶ್ಯವಿದ್ದಷ್ಟು ಹಣ ವನ್ನು ತೆಗೆದುಕೊಂಡು ಅವನೆದುರು ಇಡುತ್ತಿದ್ದಳು.

"ಇದು ಎಲ್ಲಿಂದ ಬಂದಿತು?"

"ಎಲ್ಲಿಂದಲೋ ಬರಲಿಯಂತೆ....ನಿಮಗೆ ಹಣ್ಣು ತಿನ್ನುವದಿದೆಯೋ ಅಥವಾ ಗಿಡ ಎಣಿಸುವದಿದೆಯೊ?"

"ಆದರೂ."

"ನೀವು ಹೋಗಿ ನಿಮ್ಮ ಕೆಲಸ ಮುಗಿಸಿಕೊಳ್ಳಿರಿ."

ಮದನ ಬಹಳ ಹಟ ಮಾಡಿದಾಗ, ಇಂದೂ, "ನಾನು ಒಬ್ಬ ಸೇಠ ಗೆಳೆಯನನ್ನು ಮಾಡಿಕೊಂಡಿದ್ದೇನೆ" ಅಂದು ಪುನಃ ನಗಲು ಪ್ರಾರಂಭಿಸುತ್ತಿದ್ದಳು. ಅದು ಸುಳ್ಳು ಎಂದು ಗೊತ್ತಿದ್ದರೂ ಈ ವಿನೋದವು ಮದನನಿಗೆ ಸೇರುತ್ತಿರಲಿಲ್ಲ. ನಂತರ ಇಂದೂ ಹೇಳುತ್ತಿದ್ದಳು!—"ನಾನು ಕಳ್ಳಿ, ಸುಲಿಗೆಗಾರ್ತಿ...ನಿಮಗೆ ಗೊತ್ತಿಲ್ಲವೆ? ಉದಾರ ದಾನಿಯಾದ ಸುಲಿಗೆಗಾರ್ತಿ....ಒಂದು ಕೈಯಿಂದ ಸುಲಿದು ಇನ್ನೊಂದು ಕೈಯಿಂದ ಬಡಬಗ್ಗರಿಗೆ ಕೊಡುತ್ತಾಳೆ."....ಇದೇ ರೀತಿ ಮುನ್ನಿಯ ಮದುವೆಯಾಯಿತು. ಅದಕ್ಕೆ ಹೀಗೆಯೇ ಆಭರಣಗಳು ತುಂಡುತುಂಡಾಗಿ ಮಾರಾಟಗೊಂಡವು. ಸಾಲವು ಏರಿತು. ನಂತರ ಇಳಿದೂ ಹೋಯಿತು.

ಹೀಗೆಯೆ ಕುಂದನನ ಮದುವೆ ಮಾಡಲಾಯಿತು. ಈ ಮದುವೆಗಳಲ್ಲಿ ಇಂದೂಳೇ ಹಿರಿಯತನ ಮಾಡುತ್ತಿದ್ದಳು ಮತ್ತು ತಾಯಿಯ ಸ್ಥಾನದಲ್ಲಿ ನಿಂತು ಕೊಳ್ಳುತ್ತಿದ್ದಳು. ಆಕಾಶದಿಂದ ಬಾಬೂಜಿ ಮತ್ತು ತಾಯಿ ನೋಡುತ್ತ ಹೂಗಳನ್ನು ಸುರಿಸುತ್ತಿದ್ದರು. ಇದು ಯಾರ ಕಣ್ಣಿಗೂ ಕಾಣಿಸುತ್ತಿದ್ದಿಲ್ಲ. ನಂತರ ಹೀಗಾಯಿತು. ಮೇಲೆ ಮಾಜಿ ಮತ್ತು ಬಾಬೂಜಿಯರ ನಡುವೆ ಜಗಳವೆದ್ದಿತು. ಮಾಜಿ ಬಾಬೂಜಿಗೆ ಹೇಳಿದರು—"ನೀವು ಬಹೂಳ ಕೈಯ ಅಡಿಗೆ ಊಟಮಾಡಿ ಬಂದಿದ್ದೀರಿ. ಅವಳ ಸುಖವನ್ನು ಕಂಡಿದ್ದೀರಿ. ಆದರೆ ದುರ್ಭಾಗ್ಯಳಾದ ನಾನು ಏನನ್ನೂ ಕಂಡಿಲ್ಲ"—

ಈ ಜಗಳವು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರವರೆಗೆ ಮುಟ್ಟಿತು. ಅವರು ತಾಯಿಯ ಪರವಾಗಿ ನಿರ್ಣಯ ಕೊಟ್ಟರು—ಹೀಗೆ ತಾಯಿ ಮೃತ್ಯುಲೋಕದಲ್ಲಿ ಬಂದು ಬಹೂಳ ಗರ್ಭದಲ್ಲಿ ಬಿದ್ದಳು—ಮತ್ತು ಇಂದೂಗೆ ಒಂದು ಹೆಣ್ಣುಕೂಸು ಹುಟ್ಟಿತು.

ನಂತರ ಇಂದೂ ಅಂಥ ದೇವಿ ಏನೂ ಆಗಿರಲಿಲ್ಲ. ಎಂದಾದರೂ ತತ್ತ್ವದ ಮಾತು ಬಂದಿತೆಂದರೆ ಮೈದುನ, ನೆಗಣ್ಣಿಯರೇಕೆ ಸ್ವತಃ ಮದನನ ಜೊತೆ ಕೂಡ ಉರಿದೇಳುತ್ತಿದ್ದಳು. ಮದನ ಸಿಟ್ಟಿಗೆದ್ದು, ಸತ್ಯಕ್ಕೆ ಅಂಟಿಕೊಂಡ ಈ ಮೂರ್ತಿಯನ್ನು ಹರಿಶ್ಚಂದ್ರನ ಮಗಳು ಎಂದು ಅನ್ನುತ್ತಿದ್ದ. ಯಾಕೆಂದರೆ, ಇಂದೂಳ ಮಾತುಗಳಲ್ಲಿ ತೊಡಕು ಇದ್ದರೂ ಕೂಡ ಸತ್ಯ ಮತ್ತು ಧರ್ಮಗಳು ಸದಾ ಇರುತ್ತಿದ್ದವು. ಆದ್ದರಿಂದ ಮದನ ಮತ್ತು ಮೊಹಲ್ಲಾದ ಬಾಕಿ ಜನರ ಕಣ್ಣುಗಳು ಇಂದೂಳ ಎದುರು ತಗ್ಗಿಯೇ ಇರುತ್ತಿದ್ದವು. ಜಗಳವು ಎಷ್ಟೇ ಬೆಳೆಯಲಿ, ಮದನ ತಾನು ಗಂಡನೆಂಬ ಅಭಿಮಾನದಲ್ಲಿ ಇಂದೂಳ ಮಾತನ್ನು ಎಷ್ಟೆ ತಳ್ಳಿಹಾಕಿದರೂ ಕೂಡ ಕೊನೆಯಲ್ಲಿ ಎಲ್ಲರೂ ತಲೆ ತಗ್ಗಿಸಿ, ಇಂದೂಳಿಗೆ ಶರಣು ಬರುತ್ತಿದ್ದರು ಮತ್ತು ಕ್ಷಮೆ ಕೇಳುತ್ತಿದ್ದರು.

ಹೊಸ ಭಾಭಿ ಬಂದಳು—ಹೇಳಲಿಕ್ಕೆಂತು ಅವಳು ಕೂಡ ಪತ್ನಿ ಇದ್ದಳು. ಆದರೆ ಇಂದೂ ಪತ್ನಿ ಎಂದು ಕರೆಯಲ್ಪಡುತ್ತಿದ್ದ ಹೆಣ್ಣಾಗಿದ್ದಳು. ಅದರ ವಿರುದ್ಧವಾಗಿ, ಚಿಕ್ಕ ಭಾಭಿರಾಣಿ ಹೆಣ್ಣೆಂದು ಕರೆಯಲ್ಪಡುತ್ತಿದ್ದ ಪತ್ನಿಯಾಗಿದ್ದಳು. ರಾಣಿಯ ಕಾರಣದಿಂದ ಅಣ್ಣತಮ್ಮಂದಿರಲ್ಲಿ ಜಗಳವಾಯಿತು. ಮತ್ತು ಜೆ. ಪಿ. ತಾತಾನ ಮುಖಾಂತರ ಆಸ್ತಿಯು ವಿಭಜನೆಯಾಯಿತು. ಅವರಲ್ಲಿ ತಂದೆತಾಯಿಯರ ಆಸ್ತಿ ಒತ್ತಟ್ಟಿಗಿರಲಿ, ಇಂದೂ ತಾನು ಸ್ವಂತ ಮಾಡಿದ ವಸ್ತುಗಳು ಕೂಡ ವಿಭಜನೆಯ ಲೆಕ್ಕದಲ್ಲಿ ಬಂದವು. ಇಂದೂಳ ಹೃದಯವು ಹಿಂಡಿದಂತಾಯಿತು.

ಎಲ್ಲಿ ಎಲ್ಲವೂ ಜೊತೆಯಲ್ಲೂ ಮತ್ತು ಬೇರೆಯಾಗಿಯೂ ಕೂಡ ಕುಂದನ ಮತ್ತು ರಾಣಿ ಅನ್ಯೋನ್ಯವಾಗಿರಲು ಶಕ್ಯವಾಗಲಿಲ್ಲವೋ ಅಲ್ಲಿ ಇಂದೂಳ ಮನೆ ಕೆಲವೇ ದಿನಗಳಲ್ಲಿಯೆ ಝಗಝಗಿಸಹತ್ತಿತು.

ಹೆಣ್ಣುಮಗು ಹುಟ್ಟಿದ ಬಳಿಕ ಇಂದೂಳ ಆರೋಗ್ಯವು ಮೊದಲಿನ ಹಾಗೆ ಇರಲಿಲ್ಲ. ಮಗು ಯಾವಾಗಲೂ ಅವಳ ಮೊಲೆಗಳನ್ನು ಕಚ್ಚಿಕೊಂಡೇ ಇರುತ್ತಿತ್ತು. ಆ ಮಾಂಸದ ಮುದ್ದೆಯನ್ನು ನೋಡಿ ಎಲ್ಲರೂ ಥೂಥೂ ಮಾಡುತ್ತಿದ್ದರೆ ಇಂದೂ ಅದನ್ನು ಅವಚಿಕೊಂಡೇ ಅಲೆದಾಡುತ್ತಿದ್ದಳು. ಆದರೆ ಒಮ್ಮೊಮ್ಮೆ ಅವಳು ಸ್ವತಃ ವ್ಯಾಕುಲಗೊಂಡು ಮಗುವನ್ನು ಎದುರಿಗೆ ಮುರಿದ ಹೊರಸಿನಮೇಲೆ ಒಗೆದು, "ನೀನು ನನ್ನನ್ನು ಉಳಿಸುವಿಯಾ—ತಾಯಿ ?" ಅನ್ನುತ್ತಿದ್ದಳು. —ಆಗ ಮಗು ಚೀರಿ ಚೀರಿ ಅಳುತ್ತಿತ್ತು.

ಮದನ ಇಂದೂಳಿಂದ ದೂರವಾಗಹತ್ತಿದ. ಮದುವೆಯಾದಂದಿನಿಂದ ಈವರೆಗೂ

ಅವನು ಯಾವ ಹೆಣ್ಣನ್ನು ಶೋಧಿಸುತ್ತಿದ್ದನೋ ಆಕೆ ದೊರತಿರಲಿಲ್ಲ. ಹೊಲಸು ಬೆರೋಜಾ ಮಾರಾಟವಾಗಹತ್ತಿತು. ಮದನ ಬಹಳಷ್ಟು ಹಣವನ್ನು ಇಂದೂಳಿಗೆ ತಿಳಿಯದಂತೆ ಖರ್ಚುಮಾಡಲಾರಂಭಿಸಿದ. ಬಾಬೂಜಿ ಹೊರಟುಹೋದ ಬಳಿಕ ಕೇಳುವವರು ಯಾರೂ ಇರಲಿಲ್ಲ. ಸಂಪೂರ್ಣ ಸ್ವಾತಂತ್ರ್ಯವಿತ್ತು.

ಪಕ್ಕದ ಮನೆಯ ಸಿಬತೆನ ಎಮ್ಮೆ ಪುನಃ ಮದನನ ಮುಖದ ಹತ್ತಿರ ಮುಸುಗುಡಲು ಪ್ರಾರಂಭಿಸಿದಂತೆ ಆಯಿತು. ಆದರೆ ಅದು ಪದೇ ಪದೇ ಮುಸುಗುಡ ಹತ್ತಿತು. ಮದುವೆಯ ರಾತ್ರಿಯ ಆ ಎಮ್ಮೆಯಂತು ಮಾರಲ್ಪಟ್ಟಿತ್ತು. ಆದರೆ ಅದರ ಮಾಲಕನು ಬದುಕಿದ್ದ. ಮದನ ಅವನ ಜೊತೆ, ಇಂಥ ಸ್ಥಳಗಳಿಗೆ—ಅಲ್ಲಿ ಬೆಳಕು ಮತ್ತು ನೆರಳು, ವಿಚಿತ್ರ ಮತ್ತು ಅಕ್ರಮ ಆಕೃತಿಗಳನ್ನು ರಚಿಸುತ್ತವೆ—ಹೋಗಹತ್ತಿದ. ಮೂಲೆಯಲ್ಲಿ ಒಮ್ಮೊಮ್ಮೆ ಕತ್ತಲೆಯ ತ್ರಿಕೋಣವು ರೂಪ ತಾಳುತ್ತಿದ್ದಂತೆ ಮೇಲಿನಿಂದ ಚಟ್ಟನೆ ಬೆಳಕಿನ ಒಂದು ಚತುಷ್ಕೋಣವು ಬಂದು ಅದನ್ನು ಮುರಿಯುತ್ತಿತ್ತು. ಆದ್ದರಿಂದ ಯಾವ ಚಿತ್ರವೂ ಪೂರ್ತಿಯಾಗಿ ಸಿದ್ಧವಾಗುತ್ತಿದ್ದಿಲ್ಲ. ಪಕ್ಕದಿಂದ ಒಂದು ಪೈಜಾಮ ಹೊರಬಿದ್ದು ಆಕಾಶದತ್ತ ಹಾರಿಹೋಯಿತೊ ಅಥವಾ ಯಾವದೋ ಕೋಟು (coat) ನೋಡುತ್ತಿದ್ದವನ ಮುಖವನ್ನು ಪೂರ್ತಿ ಮುಚ್ಚಿತೊ ಮತ್ತು ಯಾವನೊ ಉಸಿರಾಡಿಸಲು ಒದ್ದಾಡಹತ್ತಿದನೊ—ಎಂದು ಅನಿಸುತ್ತಿತ್ತು. ಅಷ್ಟರಲ್ಲಿಯೇ ಬೆಳಕಿನ ಚತುಷ್ಕೋಣವು ಒಂದು ಚೌಕಟ್ಟಿನ ಹಾಗೆ ಆಯಿತು ಮತ್ತು ಅದರಲ್ಲಿಂದ ಒಂದು ಆಕೃತಿಯು ಬಂದು ನಿಂತುಕೊಂಡಿತು. ನೋಡುತ್ತಿದ್ದವನು ಕೈ ಚಾಚಿದರೆ ಅದು ಈಚೆಯಿಂದ ಆಚೆಗೆ ಹೋಯಿತು ಮತ್ತು ಅಲ್ಲಿ ಏನೂ ಇರಲಿಲ್ಲ. ಹಿಂದೆ ಯಾವುದೋ ನಾಯಿ ಅಳಹತ್ತಿತು. ಮೇಲೆ ತಬಲಾ ಅದರ ಧ್ವನಿಯನ್ನು ಮುಳುಗಿಸಿಬಿಟ್ಟಿತು........

ಮದನನಿಗೆ ಅವನ ಕಲ್ಪನೆಯ ಬೆಡಗು-ಬಿನ್ನಾಣಗಳು ದೊರೆತವು. ಆದರೆ ಪ್ರತಿ ಸ್ಥಳದಲ್ಲೂ, ಕಲಾಕಾರನಿಂದ ಒಂದು ಕಪ್ಪು ಗೆರೆ ಮೂಡಿದೆಯೆಂದೊ ಅಥವಾ ನಗೆಯ ಧ್ವನಿಯು ಅವಶ್ಯಕತೆಗಿಂತ ಹೆಚ್ಚು ಉಚ್ಚವಾಗಿದೆಯೆಂದೊ ಅನಿಸುತ್ತಿತ್ತು. ಮದನನು ಕಳಂಕರಹಿತ ಕಲಾಕೃತಿ ಮತ್ತು ಉಚಿತವಾದ ನಗೆಗಳ ಶೋಧನೆಯಲ್ಲಿ ಮಗ್ನನಾದನು.

ಅವನ ಬೇಗಮ್ ಮದನನನ್ನು ಓರ್ವ ಆದರ್ಶ ಪತಿಯ ಸ್ಥಾನದಲ್ಲಿ ಸಿಬತೆನ ಎದುರು ಸೂಚಿಸಿದಾಗ, ಸೂಚಿಸಿದ್ದಷ್ಟೇ ಅಲ್ಲ; ಅವನ ಮುಖದ ಮೇಲೆ ಹೊಡೆದ ಹಾಗೆ ಹೇಳಿದಾಗ, ಸಿಬತೆ ತನ್ನ ಹೆಂಡತಿಯ ಜೊತೆ ಮಾತನಾಡಿದ. ಅದನ್ನು ಎತ್ತಿಕೊಂಡು ಸಿಬತೆ ಬೇಗಮ್ಳ ಮುಖಕ್ಕೆ ಎಸೆದ. ಅದು ಒಂದು ಖೂನಿ ಕರಬೂಜ ಹಣ್ಣಿನ ತಿರಳು ಇದ್ದಂತೆ ಮತ್ತು ಅದರ ಎಳೆ, ನಾರುಗಳೆಲ್ಲ ಬೇಗಮ್ಳ ಮೂಗು, ಅವಳ ಕಣ್ಣು ಮತ್ತು ಕಿವಿಗಳ ಮೇಲೆ ಅಂಟಿಕೊಂಡಿದ್ದವು ಎಂಬಂತೆ ಅನಿಸಿತು.

ಕೋಟಿ ಕೋಟಿ ಬೈಗಳನ್ನು ಬೊಗಳುತ್ತ ಬೇಗಮ್, ಸ್ಮರಣೆಯ ಬುಟ್ಟಿಯಲ್ಲಿ ತಿರಳು ಮತ್ತು ಬೀಜಗಳನ್ನು ತುಂಬಿಕೊಂಡು ಹೋಗಿ ಇಂದೂಳ ಚೊಕ್ಕಟವಾದ ಅಂಗಳದಲ್ಲಿ ಚೆಲ್ಲಾಪಿಲ್ಲಿ ಮಾಡಿದಳು.

ಒಬ್ಬ ಇಂದೂಳ ಬದಲು ಇಬ್ಬರು ಇಂದೂಗಳಾದರು. ಒಬ್ಬಳಂತು ಇಂದೂ ಸ್ವಯಂ ಇದ್ದಳು. ಇನ್ನೊಬ್ಬಳು ಒಂದು ಕಂಪಿಸುತ್ತಿದ್ದ ಗೆರೆ. ಅದು ಇಂದೂಳ ಪೂರ್ಣ ದೇಹವನ್ನು ಆವರಿಸಿತ್ತು ಮತ್ತು ಕಣ್ಣಿಗೆ ಕಾಣಿಸುತ್ತಿದ್ದಿಲ್ಲ.

ಮದನ ಎಲ್ಲಿಗೆ ಹೋದರೂ ಕೂಡ ಮನೆಗೆ ಹೋಗಿ....ಸ್ನಾನ ಮಾಡಿ, ಒಳ್ಳೆಯ ಬಟ್ಟೆಗಳನ್ನು ತೊಟ್ಟು, ಸುಗಂಧಿಕ ಖವಾಮ್ (ಒಂದು ಬಗೆಯ ಮಸಾಲಾ) ಹಚ್ಚಿದ ಎರಡು ಮಘಯಿ ಬೀಡಾಗಳನ್ನು ಬಾಯಲ್ಲಿ ತುಂಬಿಕೊಂಡು....ಹೋಗುತ್ತಿದ್ದ.' ಆದರೆ ಆ ದಿನ ಮದನ ಮನೆಗೆ ಬಂದಾಗ ಇಂದೂಳ ಸ್ವರೂಪವೇ ಬೇರೆ ಇತ್ತು. ಅವಳು ಮುಖಕ್ಕೆ ಪೌಡರ್ ಮೆತ್ತಿಕೊಂಡಿದ್ದಳು, ಕೆನ್ನೆಗಳ ಮೇಲೆ ರೋಜ್ ಹಚ್ಚಿದ್ದಳು, ಲಿಪ್‌ಸ್ಟಿಕ್ ಇಲ್ಲದ್ದರಿಂದ, ಹಣೆಯ ಬಿಂದಿಯಿಂದಲೇ ತುಟಗಳನ್ನು ಲೇಪಿಸಿದ್ದಳು. ಕೂದಲನ್ನು ಎಂಥ ರೀತಿಯಲ್ಲಿ ರಚಿಸಿದ್ದಳೆಂದರೆ ಮದನನ ದೃಷ್ಟಿಯು ಅದರಲ್ಲಿಯೇ ಸಿಕ್ಕಿಕೊಂಡಿತು.

"ಇಂದು ವಿಶೇಷವೇನಿದೆ ?"—ಮದನ ಆಶ್ಚರ್ಯದಿಂದ ಕೇಳಿದ.

"ಏನೂ ಇಲ್ಲ"—ಇಂದೂ ಮದನನಿಂದ ಕಣ್ಣು ತಪ್ಪಿಸುತ್ತ, ನಸುನಾಚಿ, ಅಂದಳು—"ಈ ದಿನ ಪುರಸತ್ತು ಸಿಕ್ಕಿದೆ."

ಮದುವೆಯಾಗಿ ಹದಿನೈದು ವರ್ಷ ಕಳೆದಮೇಲೆ ಇಂದೂಳಿಗೆ ಈ ದಿನ ಪುರಸತ್ತು ಸಿಕ್ಕಿತು ! ಅದು ಕೂಡ, ಮುಖದಮೇಲೆ ಗೆರೆಗಳು ಮೂಡಿದಾಗ, ಮೂಗಿನಮೇಲೆ ಒಂದು ಕಪ್ಪು ಗೆರೆ ಬಿದ್ದಾಗ ಮತ್ತು ಬ್ಲೌಜ್ ಕೆಳಗೆ ನಗ್ನ ಹೊಟ್ಟೆಯ ಹತ್ತಿರ ಕಟಿಯ ಮೇಲೆ ನೆಣದ ಎರಡು ಮೂರು ಮಡಿಕೆಗಳು ಕಾಣಿಸಹತ್ತಿದಾಗ. ಈ ದಿನ ಇಂದೂ, ಆ ಐಬುಗಳಲ್ಲಿ ಒಂದು ಕೂಡ ಕಣ್ಣಿಗೆ ಬೀಳದ ಹಾಗೆ ವ್ಯವಸ್ಥೆ ಮಾಡಿದ್ದಳು. ಹೀಗೆ ಸಿಂಗರಿಸಿ, ಸಡಗರಿಸಿ, ಬಿಗಿದು ಎಳೆದು, ಅವಳು ಅತ್ಯಂತ ಸುಂದರಳಾಗಿ ಕಾಣುತ್ತಿದ್ದಳು. "ಇದು ಆಗಲು ಸಾಧ್ಯವಿಲ್ಲ"—ಎಂದು ಮದನ್ ಯೋಚಿಸಿದಂತೆ ಅವನಿಗೆ ಒಂದು ಬಗೆಯ ಆಘಾತವಾದಂತಾಯಿತು. ಅವನು ಮತ್ತೊಮ್ಮೆ ಹೊರಳಿ ಇಂದೂಳ ಕಡೆ ನೋಡಿದ, ಕುದುರೆಯ ವ್ಯಾಪಾರಿಗಳು ಯಾವುದೋ ಹೆಸರಾದ ಹೆಣ್ಣು ಕುದುರೆಯ ಕಡೆ ನೋಡಿದ ಹಾಗೆ. ಅಲ್ಲಿ ಹೆಣ್ಣು ಕುದುರೆಯು ಇತ್ತು ಮತ್ತು ಲಗಾಮು ಕೂಡ ಇತ್ತು............ಇಲ್ಲಿ, ಮೂಡಿದ ಕಪ್ಪು ಗೆರೆಗಳು ಸೆರೆ ಕುಡುಕನ ಕಣ್ಣುಗಳಿಗೆ ಕಾಣಿಸುತ್ತಿದ್ದಿಲ್ಲ....ಇಂದೂ ನಿಜವಾಗಿಯೂ ಚೆಲುವೆ ಇದ್ದಳು. ಇಂದೂ ಕೂಡ ಹದಿನೈದು ವರ್ಷಗಳ ನಂತರ ಫೂಲಾ, ರಶೀದಾ, ಮಿಸೆಸ್ ರಾಬರ್ಟ್ ಮತ್ತು ಅವಳ ತಂಗಿಯರು ಇಂದೂಳ ಎದುರು ನೀರು ತುಂಬುತ್ತಿದ್ದರು...ನಂತರ

ಮದನನಿಗೆ ಕನಿಕರ ಬರಹತ್ತಿತು ಮತ್ತು ಭಯವು ಕೂಡ.

ಆಕಾಶದಲ್ಲಿ ಅಂಥ ವಿಶೇಷ ಮೋಡಗಳು ಕೂಡ ಇರಲಿಲ್ಲ. ಆದರೆ ಮಳೆ ಬೀಳಲು ಶುರು ಆಯಿತು. ಮನೆಯ ಗಂಗೆಯಲ್ಲಿ ಮಹಾಪೂರ ಬಂದಿತ್ತು. ಆದರ ನೀರು ದಂಡೆಗಳನ್ನು ದಾಟ ದಾಟ ಪೂರ್ತಿ ಮೈದಾನ ಮತ್ತು ಅದರ ಅಕ್ಕ ಪಕ್ಕದಲ್ಲಿ ನೆಲೆಸಿರುವ ಹಳ್ಳಿ ಮತ್ತು ಕಸಬಾ (ದೊಡ್ಡ ಹಳ್ಳಿ)ಗಳನ್ನು ತನ್ನ ವಲಯದಲ್ಲಿ ಸೇರಿಸಿಕೊಂಡಿತು. ಇದೇ ವೇಗದಿಂದ ನೀರು ಹರಿಯುತ್ತಲಿದ್ದರೆ ಅದರಲ್ಲಿ ಕೈಲಾಸ ಪರ್ವತವು ಕೂಡ ಮುಳುಗಬಹುದು ಎಂದು ಅನಿಸುತ್ತಿತ್ತು....ಅತ್ತ ಹೆಣ್ಣು ಮಗು ಅಳಹತ್ತಿತು....ಈವರೆಗೂ ಅದು ಅಳದೇ ಇದ್ದಂಥ ಅಳುವು.

ಮದನ ಅದರ ಧ್ವನಿ ಕೇಳಿ ಕಣ್ಣು ಮುಚ್ಚಿಕೊಂಡ. ಕಣ್ಣು ತೆರೆದರೆ ಹೆಣ್ಣು ಮಗು ಎದುರಿಗೆ ನಿಂತಿತ್ತು, ಹರೆಯದ ಹೆಣ್ಣಾಗಿ....ಇಲ್ಲ ಇಲ್ಲ....ಅವಳು ಇಂದೂ ಇದ್ದಳು—ತನ್ನ ತಾಯಿಯ ಮಗಳು, ತನ್ನ ಮಗಳ ತಾಯಿ, ತನ್ನ ಕಣ್ಣುಗಳ ಕೊನೆಯಿಂದ ಮುಗುಳು ನಕ್ಕಳು ಮತ್ತು ತುಟಿಗಳ ಮೂಲೆಯಿಂದ ನೋಡಹತ್ತಿದಳು.

ಒಂದು ದಿನ ಆ ಕೋಣೆಯಲ್ಲಿ ಹರಮಲ್‌ದ ಹೊಗೆಯು ಮದನನ ತಲೆ ತಿರುಗಿಸಿ ಬಿಟ್ಟಿತ್ತು. ಇಂದು ಅಲ್ಲ ಲಾವಂಚದ ಬೇರಿನ ಸುವಾಸನೆಯು ಅವನನ್ನು ಗಾಬರಿಗೊಳಿಸಿತ್ತು. ಹಗುರಾದ ಮಳೆಯು ಪ್ರಚಂಡ ಮಳೆಗಿಂತ ಹೆಚ್ಚು ಅಪಾಯಕರ ವಿರುತ್ತದೆ. ಆದ್ದರಿಂದಲೇ ಹೊರಗಿನ ನೀರು ಮೇಲೆ ಯಾವುದೊ ಜಂತಿಯಿಂದ ತೊಟ್ಟಿಕ್ಕುತ್ತ ಇಂದೂ ಮತ್ತು ಮದನರ ಮಧ್ಯೆ ಹನಿಸಹತ್ತಿತು....ಆದರೆ ಮದನ ನಂತು ಸೆರೆ ಕುಡುಕನಾಗುತ್ತಲಿದ್ದ. ಆ ಅಮಲಿನಲ್ಲಿ ಅವನ ಕಣ್ಣುಗಳು ಮುದುರಹತ್ತಿದವು ಮತ್ತು ಉಸಿರಾಟವು ತೀವ್ರಗೊಂಡು ಮಾನವನ ಉಸಿರಾಟವಾಗಿ ಉಳಿಯಲಿಲ್ಲ.

"ಇಂದೂ—" ಮದನ ಅಂದನು...ಅವನ ಧ್ವನಿಯು ಮದುವೆಯ ರಾತ್ರಿಯ ಧ್ವನಿಗಿಂತ ಎರಡು ಸುರ್ ಉಚ್ಚವಾಗಿತ್ತು. ಮತ್ತು ಇಂದೂ ಆಚೆ ನೋಡುತ್ತ "ಜೀ" ಅಂದಳು. ಆವಳ ಧ್ವನಿಯು ಎರಡು ಸುರ್ ಕೆಳಗೆ ಇತ್ತು....ಅಲ್ಲದೆ ಇಂದು ಬೆಳದಿಂಗಳ ಬದಲು ಅಮಾವಾಸ್ಯೆ ಇತ್ತು.

ಮದನ ಇಂದೂಳ ಕಡೆ ಕೈಚಾಚುವ ಮೊದಲೇ, ಇಂದೂ ಸ್ವತಃ ಮದನನನ್ನು ತಬ್ಬಿಕೊಂಡಳು. ನಂತರ ಮದನ ಕೈಯಿಂದ ಇಂದೂಳ ಗದ್ದವನ್ನು ಮೇಲೆ ಎತ್ತಿ, ತಾನು ಏನು ಕಳೆದುಕೊಂಡನು ಮತ್ತು ಏನು ಪಡೆದುಕೊಂಡನು ಎಂದು ನೋಡಹತ್ತಿದ.

....ಇಂದೂ ಒಂದು ದೃಷ್ಟಿ ಮದನನ ಕಪ್ಪಾಗುತ್ತಿದ್ದ ಮುಖದತ್ತ ಬೀರಿದಳು. ನಂತರ ಕಣ್ಣುಗಳನ್ನು ಮುಚ್ಚಿಕೊಂಡಳು.

"ಇದೇನು? ನಿನ್ನ ಕಣ್ಣುಗಳು ಊದಿಕೊಂಡಿವೆ?"—ಮದನ ಬೆಚ್ಚಿ ಕೇಳಿದ.

"ಹೀಗೆಯೇ!" ಎಂದು ಇಂದೂ ಹೆಣ್ಣು ಮಗುವಿನ ಕಡೆ ಸನ್ನೆ ಮಾಡುತ್ತ ಹೇಳಿದಳು—"ರಾತ್ರಿಯೆಲ್ಲ ಜಾಗರಣೆ ಮಾಡಿಸಿದ್ದಾಳೆ ಈ ಕೆಟ್ಟ ತಾಯಿ."

ಹೆಣ್ಣು ಮಗು ಇಷ್ಟರಲ್ಲಿ ಸುಮ್ಮನಾಗಿತ್ತು, ಉಸಿರು ಹಿಡಿದು ಈಗ ಏನಾಗುವದಿದೆ ಎಂದು ನೋಡುತ್ತಿದ್ದ ಹಾಗೆ. ಆಕಾಶದಿಂದ ಮಳೆ ಬೀಳುವದು ನಿಂತಿತ್ತು. ಮದನ ಪುನಃ ಲಕ್ಷ್ಯಗೊಟ್ಟು ಇಂದೂಳ ಕಣ್ಣುಗಳ ಕಡೆ ನೋಡುತ್ತ, "ಹಾಂ. ಆದರೆ—ಈ ಕಣ್ಣೀರು?" ಅಂದ.

"ಸಂತೋಷದ್ದು, ಈ ರಾತ್ರಿ ನನ್ನದು"—ಇಂದೂ ಉತ್ತರಿಸಿದಳು. ಬಳಿಕ ಒಂದು ವಿಚಿತ್ರವಾದಂಥ ನಗೆಯನ್ನು ನಗುತ್ತ ಅವಳು ಮದನನನ್ನು ಆಲಂಗಿಸಿದಳು. ಒಂದು ಸ್ವಾದದ ಅನುಭವದಿಂದ ಮದನ ಹೇಳಿದ—"ಈ ದಿನ ವರ್ಷಗಳ ಬಳಿಕ ನನ್ನ ಮನದ ಬಯಕೆ ಪೂರ್ತಿಯಾಯಿತು ಇಂದೂ! ನಾನು ಯಾವಾಗಲೂ ಬಯಸಿದ್ದೆ."

"ಆದರೆ ನೀವು ಹೇಳಲಿಲ್ಲ"—ಇಂದೂ ಅಂದಳು—"ನೆನಪಿದೆಯೆ? ಮದುವೆಯ ರಾತ್ರಿ ನಾನು ನಿಮ್ಮಿಂದ ಏನೊ ಬೇಡಿದ್ದೆ."

"ಹಾಂ! ನಿಮ್ಮ ದುಃಖ ನನಗೆ ಕೊಡಿ"—ಮದನ ಹೇಳಿದನು.

"ನೀವಂತು ನನ್ನಿಂದ ಏನೂ ಕೋರಲಿಲ್ಲ."

"ನಾನು?"—ಮದನ ಆಶ್ಚರ್ಯಗೊಳ್ಳುತ್ತ ಅಂದ—"ನಾನೇನು ಕೇಳಬೇಕಿತ್ತು? ನಾನು ಏನೆಲ್ಲವನ್ನು ಬೇಡಬೇಕಿತ್ತೊ ಅದೆಲ್ಲವನ್ನು ನೀನು ಕೊಟ್ಟುಬಿಟ್ಟೆ. ನನ್ನ ಆತ್ಮೀಯರಿಗೆ ಪ್ರೇಮ—ಅವರ ವಿದ್ಯಾಭ್ಯಾಸ, ಮದುವೆ....ಈ ಮುದ್ದು ಮುದ್ದಾದ ಮಕ್ಕಳು....ಇವೆಲ್ಲವನ್ನು ನೀನೆ ಕೊಟ್ಟಿರುವೆ."

"ನಾನು ಕೂಡ ಇದನ್ನೇ ತಿಳಿದುಕೊಂಡಿದ್ದೆ. ಆದರೆ ಈಗ ಹೋದ ಬಳಿಕ, ಹಾಗಲ್ಲವೆಂದು ಪತ್ತೆ ಹತ್ತಿತು"—ಇಂದೂ ಹೇಳಿದಳು.

"ಇದರ ಅರ್ಥವೇನು?"

"ಏನೂ ಇಲ್ಲ"—ಪುನಃ ಇಂದೂ ತಡೆದು ಹೇಳಿದಳು—"ನಾನು ಕೂಡ ಒಂದು ವಸ್ತುವನ್ನು ಇಟ್ಟುಕೊಂಡೆ."

"ಯಾವ ವಸ್ತುವನ್ನು ಇಟ್ಟುಕೊಂಡೆ?"

ಇಂದೂ ಸ್ವಲ್ಪ ಹೊತ್ತು ಸುಮ್ಮನಿದ್ದಳು. ನಂತರ ತನ್ನ ಮುಖವನ್ನು ಆಚೆ ಮಾಡುತ್ತ ಅಂದಳು, "ನನ್ನ ಸಂತೋಷ,....ಆಗ ನೀವು ಕೂಡ, ನಿನ್ನ ಸುಖವನ್ನು ನನಗೆ ಕೊಡು ಎಂದು ಹೇಳಿದ್ದರೆ....ನಾನು"....ಇಂದೂಳ ಕಂಠವು ತುಂಬಿ ಬಂದಿತು.

ಸ್ವಲ್ಪ ಸಮಯದ ಬಳಿಕ ಹೇಳಿದಳು, "ಈಗಂತು ನನ್ನ ಬಳಿ ಏನೂ ಉಳಿಯಲಿಲ್ಲ."

ಮದನನ ಕೈಗಳ ಹಿಡಿತವು ಸಡಿಲಗೊಂಡಿತು. ಅವನು ಭೂಮಿಯಲ್ಲಿ ಇಳಿದು

ಹೋದ....ಈ ನಿರಕ್ಷರಿ ಹೆಂಗಸು?....ಯಾವುದೊ ಬಾಯಿಪಾಠ ಮಾಡಿದ ವಾಕ್ಯ?

ಇಲ್ಲವಲ್ಲ. ಇವಳಂತು ಇದೀಗ ಎದುರಿಗೇನೆ ಜೀವನದ ಭಟ್ಟಿಯಿಂದ ಹೊರ ಬಂದಿದ್ದಾಳೆ. ಇನ್ನೂ ಇವಳ ಮೇಲೆ ಪದೇ ಪದೇ ಸುತ್ತಿಗೆಗಳು ಬೀಳುತ್ತಿವೆ ಮತ್ತು ಬೆಂಕಿಯ ಕಿಡಿಗಳು ನಾಲ್ಕೂ ಕಡೆಗೆ ಹಾರುತ್ತಿವೆ........

ಸ್ವಲ್ಪ ಸಮಯದ ಬಳಿಕ ಮದನನ ಬುದ್ಧಿಯು ಸ್ತಿಮಿತಕ್ಕೆ ಬಂದಿತು. "ನನಗೆ ಅರ್ಥವಾಯಿತು ಇಂದೂ" ಅಂದನು. ಬಳಿಕ ಅಳುತ್ತಲೇ ಮದನ ಮತ್ತು ಇಂದೂ ಒಬ್ಬರನ್ನೊಬ್ಬರು ತಬ್ಬಿಕೊಂಡರು. ಇಂದೂ ಮದನನ ಕೈ ಹಿಡಿದು ಕೊಂಡಳು. ಮತ್ತು ಮನುಷ್ಯನು ಸತ್ತ ನಂತರವೇ ತಲಪುವಂತಹ ಲೋಕದಲ್ಲಿ ಅವನನ್ನು ಕರೆದೊಯ್ದಳು.

"ಹಥ್ ಲಾಈಯೋಂ ಕುಮ್ಲಾನ ನೀ ಲಾಜವಂತೀ ದೇ ಬೂಟೀ"
(ಕೈ ತಗಲಿಸಿದರು ಸಹಿತ ಮುದುಡುವವು ಓ ಗೆಳತಿ,
ಮುಟ್ಟಲು ಮುದುಕಿಯ ಈ ಸಸ್ಯಗಳು)

—ಒಂದು ಪಂಜಾಬಿ ಗೀತೆ

ದೇಶ-ವಿಭಜನೆ ಆಯಿತು. ಗಾಯಹೊಂದಿದ ಅಗಣಿತ ಜನರು ಎದ್ದು ತಮ್ಮ ದೇಹದ ಮೇಲಿಂದ ರಕ್ತವನ್ನು ಒರೆಸಿ ಹಾಕಿದರು. ನಂತರ ಎಲ್ಲರೂ ಸೇರಿ, ದೇಹವು ಕ್ಷೇಮದಿಂದಿದ್ದು ಆದರೆ ಹೃದಯವು ಗಾಯಗೊಂಡಿದ್ದ ಜನರ ಬಗ್ಗೆ ಆಸಕ್ತರಾದರು.

ಓಣಿ ಓಣಿ, ಮೊಹಲ್ಲಾ ಮೊಹಲ್ಲಾಗಳಲ್ಲಿ, ಮರುವಸತಿ ಸಮಿತಿಗಳು ರಚಿಸಲ್ಪಟ್ಟವು. ಮೊದಮೊದಲಿಗೆ ಬಹಳ ಆವೇಶದಿಂದ "ವ್ಯಾಪಾರದಲ್ಲಿ ನೆಲೆಗೊಳಿಸಿರಿ", "ಭೂಮಿಯ ಸಾಗುವಳಿಯಲ್ಲಿ ನೆಲೆಗೊಳಿಸಿರಿ" ಮತ್ತು "ಮನೆಗಳಲ್ಲಿ ನೆಲೆಗೊಳಿಸಿರಿ" ಪ್ರೋಗ್ರಾಮ್‌ಗಳನ್ನು ಶುರು ಮಾಡಲಾಗಿತ್ತು. ಆದರೆ ಒಂದು ಪ್ರೋಗ್ರಾಮ್‌ನತ್ತ ಯಾರೂ ಲಕ್ಷ್ಯಕೊಟ್ಟಿರಲಿಲ್ಲ. ಆ ಪ್ರೋಗ್ರಾಮ್ ಅಪಹರಿಸಲ್ಪಟ್ಟ ಹೆಂಗಸರಿಗೆ ಸಂಬಂಧಪಟ್ಟದ್ದಿತ್ತು. ಅದರ ಸ್ಲೋಗನ್ "ಹೃದಯದಲ್ಲಿ ನೆಲೆಗೊಳಿಸಿರಿ" ಎಂದಿತ್ತು. ಈ ಪ್ರೋಗ್ರಾಮ್ ಇಗೆ ನಾರಾಯಣ ಬಾವಾ ಮಂದಿರ ಮತ್ತು ಅದರ ಅಕ್ಕ ಪಕ್ಕದಲ್ಲಿ ವಾಸಿಸುತ್ತಿದ್ದ ಸಾಂಪ್ರದಾಯಿ ವರ್ಗದ ಕಡೆಯಿಂದ ಬಹಳ ವಿರೋಧವಿತ್ತು.

ಈ ಪ್ರೋಗ್ರಾಮ್ ಅನ್ನು ಕಾರ್ಯ ರೂಪದಲ್ಲಿ ತರಲು ಮಂದಿರಕ್ಕೆ ಸಮೀಪದ "ಮಿಲಾಪಕೂರ್" ಮೊಹಲ್ಲಾದಲ್ಲಿ ಒಂದು ಕಮಿಟಿಯು ಸ್ಥಾಪಿತವಾಯಿತು. ಹನ್ನೊಂದು ಮತಗಳ ಹೆಚ್ಚಳದಿಂದ ಸುಂದರಲಾಲ ಬಾಬೂನನ್ನು ಅದರ ಸೆಕ್ರೆಟರಿಯನ್ನಾಗಿ ಆರಿಸಲಾಯಿತು. ಅಧ್ಯಕ್ಷ ವಕೀಲ ಸಾಹೇಬರು, ಚೌಕಿ ಕಲಾಮ್‌ದ ಮುದುಕ ಕಾರಕೂನ ಮತ್ತು ಮೊಹಲ್ಲಾದ ಇತರ ವಿಶ್ವಾಸಪಾತ್ರ ಜನರ ಅಭಿಪ್ರಾಯವು, ಸುಂದರಲಾಲನಿಗಿಂತ ಹೆಚ್ಚು ಯಾರೂ ಈ ಕೆಲಸವನ್ನು ಅತ್ಯಧಿಕ ಪರಿಶ್ರಮದಿಂದ ಮಾಡಲು ಶಕ್ಯವಿಲ್ಲವೆಂದಿತ್ತು. ಬಹುಶಃ ಸುಂದರಲಾಲನ ಹೆಂಡತಿಯು ಅಪಹರಿಸಲ್ಪಟ್ಟದ್ದು ಇದರ ಕಾರಣವಿದ್ದಿರಬಹುದು. ಅವಳ ಹೆಸರು

ಲಾಜೂ—ಲಾಜವಂತಿ ಎಂದಿತ್ತು.

ಆದ್ದರಿಂದ ಪ್ರಭಾತ ಫೇರಿಯನ್ನು ಹೊರಡಿಸುತ್ತ, ಸುಂದರಲಾಲ ಬಾಬೂ, ಅವನ ಸಂಗಡಿಗರಾದ ರಸಾಲೂ ಮತ್ತು ನೇಕಿರಾಮ ಮುಂತಾದವರು ಸೇರಿ, "ಹಥ್ ಲಾಈಯೋಂ ಕುಮ್ಲಾನ ನೀ ಲಾಜವಂತೀ ದೇ ಬೂಟೇ" ಎಂದು ಹಾಡುತ್ತಿದ್ದರೆ ಸುಂದರಲಾಲನ ಧ್ವನಿಯು ಒಮ್ಮಿಂದೊಮ್ಮೆಲೆ ನಿಂತುಬಿಡುತ್ತಿತ್ತು ಮತ್ತು ಅವನು ಮೌನದಿಂದ ನಡೆಯುತ್ತ ನಡೆಯುತ್ತ ಲಾಜವಂತಿಯ ಬಗ್ಗೆ—ಅವಳು ಎಲ್ಲಿ ಇರುವಳೊ ಏನೋ, ಯಾವ ಸ್ಥಿತಿಯಲ್ಲಿ ಇದ್ದಿರಬಹುದು, ನಮ್ಮ ಬಗ್ಗೆ ಏನು ಯೋಚಿಸುತ್ತಿರಬಹುದು, ಅವಳು ಎಂದಾದರೂ ಬರಬಹುದೊ ಇಲ್ಲವೊ........ಎಂದು ಯೋಚಿಸುತ್ತಿದ್ದ.....ಕಲ್ಲಿನ ಫರಶಿಯ ಮೇಲೆ ನಡೆಯುತ್ತ ನಡೆಯುತ್ತ ಅವನ ಕಾಲು ಹೊಯ್ದಾಡುತ್ತಿದ್ದವು.

ಈಗಂತು, ಅವನು ಲಾಜವಂತಿಯ ಬಗ್ಗೆ ಯೋಚಿಸುವದನ್ನು ಬಿಟ್ಟಂಥ ಸ್ಥಿತಿಯು ಬಂದಿತ್ತು. ಅವನ ದುಃಖವು ಈಗ ಜಗತ್ತಿನ ದುಃಖವಾಗಿತ್ತು. ತನ್ನ ದುಃಖ ದಿಂದ ತಪ್ಪಿಸಿಕೊಳ್ಳಲು ಅವನು ಲೋಕ ಸೇವೆಯಲ್ಲಿ ತನ್ನನ್ನೇ ಮಗ್ನಗೊಳಿಸಿದ. ಹಾಗೆ ಇದ್ದರೂ, ಇತರ ಸಂಗಡಿಗರ ಧ್ವನಿಯಲ್ಲಿ ತನ್ನ ಧ್ವನಿಯನ್ನು ಬೆರೆಸುತ್ತ ಅವನಿಗೆ ಈ ವಿಚಾರವು ಅವಶ್ಯವಾಗಿ ಬರುತ್ತಿತ್ತು — ಮನುಷ್ಯನ ಹೃದಯವು ಎಷ್ಟು ನಾಜೂಕು. ಸಣ್ಣ ವಿಷಯದಿಂದಲೂ ಅದಕ್ಕೆ ಪೆಟ್ಟು ಹತ್ತಬಲ್ಲದು. ಅದು ಮುಟ್ಟಲ ಮುರುಕಿ ಸಸ್ಯದ ಹಾಗೆ ಇದೆ. ಅದರ ಕಡೆ ಕೈ ಚಾಚಿದರೂ ಸಹ, ಅದು ಮುದುಡಿಹೋಗುತ್ತದೆ. ಆದರೆ ಅವನು ತನ್ನ ಲಾಜವಂತಿಯ ಜೊತೆ ದುರ್ವರ್ತನೆಯಿಂದ ವ್ಯವಹರಿಸುವದರಲ್ಲಿ ಯಾವ ಲೋಪವನ್ನೂ ಉಳಿಸಿರಲಿಲ್ಲ.

ಲಾಜವಂತಿ ಒಂದು ತೆಳುವಾದ ಶಹತೂಕ(ಕಂಬಳಿ ಹಣ್ಣಿನ ವೃಕ್ಷದಂತಹದು)ದ ಟೊಂಗೆಯಂತಹ ನಾಜೂಕಾದ ಹಳ್ಳಿಯ ಹುಡುಗಿ ಇದ್ದಳು. ಬಿಸಿಲಿಗೆ ಹೆಚ್ಚು ಬೀಳುತ್ತಿದ್ದುದರಿಂದ ಅವಳ ಬಣ್ಣವು ಸಾದಗಪ್ಪಿತ್ತು. ಸ್ವಭಾವದಲ್ಲಿ ಒಂದು ವಿಚಿತ್ರ ಬಗೆಯ ವಿವಶತೆ ಇತ್ತು. ಅವಳ ವಿವಶತೆಯು ಮುತ್ತುಗದ ದೊಡ್ಡ ಎಲೆಯ ಮೇಲೆ ಒಮ್ಮೆ ಇತ್ತ ಒಮ್ಮೆ ಅತ್ತ ಹೊಯ್ದಾಡುವ ಇಬ್ಬನ್ನಿಯ ಹನಿಯ ಹಾಗೆ ಇತ್ತು. ಅವಳು ತೆಳ್ಳಗಿದ್ದುದಕ್ಕೆ ಕಾರಣ ಅನಾರೋಗ್ಯವಾಗಿರಲಿಲ್ಲ. ಅದು ಆರೋಗ್ಯವಂತಿಕೆಯ ಲಕ್ಷಣವಾಗಿತ್ತು. ಅದನ್ನು ನೋಡಿ ಸ್ಥೂಲಕಾಯದ ಸುಂದರಲಾಲ ಮೊದಲಿಗಂತು ಗಾಬರಿಯಾಗಿದ್ದ. ಆದರೆ ಲಾಜೂ ಎಲ್ಲ ಬಗೆಯ ಭಾರ, ಎಲ್ಲ ರೀತಿಯ ಆಘಾತ, ಅಷ್ಟೇ ಏಕೆ, ಹೊಟ್ಟೆಯ ಭಾರವನ್ನು ಸಹಿಸಿಕೊಳ್ಳ ಬಲ್ಲಳು ಎಂದು ಅವನು ಕಂಡುಕೊಂಡಮೇಲೆ, ತನ್ನ ದುರ್ವರ್ತನೆಯನ್ನು ಹಂತ ದಿಂದ ಹಂತಕ್ಕೆ ಹೆಚ್ಚಿಸುತ್ತ ಹೋದನು. ಯಾವ ಸೀಮೆಗಳನ್ನು ಮುಟ್ಟಿದ ನಂತರ ಮನುಷ್ಯನ ಸ್ಥೈರಣೆಯು ಕಡಿದುಹೋಗುತ್ತದೆಯೋ ಅವುಗಳ ಯೋಚನೆಯನ್ನೇ

ಅವನು ಮಾಡಲಿಲ್ಲ. ಆ ಸೀಮೆಗಳನ್ನು ಮಸುಕುಗೊಳಿಸುವುದರಲ್ಲಿ ಲಾಜವಂತಿ ಸ್ವಯಂ ಸಹಾಯಕಳಾಗಿದ್ದಳು. ಯಾಕೆಂದರೆ ಅವಳಿಗೆ ಬಹಳ ಹೊತ್ತಿನವರೆಗೆ ಖಿನ್ನಳಾಗಿ ಕೂತಿರಲು ಸಾಧ್ಯವಿರಲಿಲ್ಲ. ಆದ್ದರಿಂದ ಅತಿ ದೊಡ್ಡ ಜಗಳದ ನಂತರವೂ ಸುಂದರಲಾಲ ಕೇವಲ ಒಂದು ಬಾರಿ ಮುಗುಳನಕ್ಕನೆಂದರೆ ಅವಳಿಗೆ ತನ್ನ ನಗೆಯನ್ನು ತಡೆದುಕೊಳ್ಳಲು ಆಗುತ್ತಿರಲಿಲ್ಲ. ಧಾವಿಸಿ ಅವನ ಬಳಿಗೆ ಬಂದುಬಿಡುತ್ತಿದ್ದಳು. ಮತ್ತು ಕೊರಳಲ್ಲಿ ತೋಳುಗಳನ್ನು ಹಾಕುತ್ತ, "ಪುನಃ ಹೊಡೆದರೆ ನಾನು ನಿಮ್ಮ ಜೊತೆ ಮಾತಾಡುವದಿಲ್ಲ" ಅನ್ನುತ್ತಿದ್ದಳು. ಅವಳು ಒಮ್ಮಿಂದೊಮ್ಮೆಲೆ ಎಲ್ಲ ಏಟು ಪೆಟ್ಟುಗಳನ್ನು ಮರೆತುಬಿಟ್ಟಿದ್ದಾಳೆಂದು ಸ್ಪಷ್ಟವಾಗಿ ಕಾಣಿಸುತ್ತಿತ್ತು. ಗಂಡಸು ಹೀಗೆಯೆ ವರ್ತಿಸುತ್ತಾನೆ ಎಂದು ಹಳ್ಳಿಯ ಇತರ ಹುಡುಗಿಯರಂತೆ ಅವಳು ಕೂಡ ಅರಿತಿದ್ದಳು. ಆದರೆ ಹೆಂಗಸರಲ್ಲಿ ಯಾವಳಾದರೂ ಉದ್ದಂಡತನ ಮಾಡಿದರೆ, ಹುಡುಗಿಯರು ಸ್ವತಃ ಮೂಗಿನ ಮೇಲೆ ಬೆರಳಿಟ್ಟು, "ನೋಡಿ, ಹೆಂಗಸನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳದವನೂ ಒಬ್ಬ ಗಂಡಸೇ" ಅನ್ನುತ್ತಿದ್ದರು. ಈ ಏಟು ಪೆಟ್ಟುಗಳು ಅವರ ಗೀತಗಳಲ್ಲಿ ಹರಿದು ಬರುತ್ತಿತ್ತು. ಸ್ವತಃ ಲಾಜೂ ಹಾಡುತ್ತಲಿದ್ದಳು. "ನಾನು ಪಟ್ಟಣದ ಹುಡುಗನನ್ನು ಮದುವೆ ಆಗುವದಿಲ್ಲ. ಅವನು ಬೂಟು ಹಾಕಿಕೊಳ್ಳುತ್ತಾನೆ. ನನ್ನ ಸೊಂಟವು ಬಹಳ ತೆಳುವಾಗಿದೆ." ಆದರೆ ಮೊದಲ ಅವಕಾಶದಲ್ಲಿಯೇ ಲಾಜೂ ಪಟ್ಟಣದ ಓರ್ವ ಹುಡುಗನಿಗೆ ಮನ ಸೋತಳು. ಅವನ ಹೆಸರು ಸುಂದರಲಾಲ. ಅವನು ಒಂದು ಬಾರಾತ (ಮದುವಣಿಗನ ಮೆರವಣಿಗೆ)ದ ಜೊತೆ ಲಾಜವಂತಿಯ ಹಳ್ಳಿಗೆ ಬಂದಿದ್ದ. ಅವನು ಮದುಮಗನ ಕಿವಿಯಲ್ಲಿ ಕೇವಲ ಇಷ್ಟೇ ಹೇಳಿದ್ದ—"ನಿನ್ನ ಸಾಲಿ (ಹೆಂಡತಿಯ ಸೋದರಿ) ಯಂತೂ ಬಹಳ ಉಪ್ಪುಪ್ಪು (ಲಾವಣ್ಯವತಿ) ಇದ್ದಾಳೆ ನೋಡಯ್ಯ. ಹೆಂಡತಿಯೂ ಚುರುಕಾಗಿ ಇರಬಹುದು." ಲಾಜವಂತಿ ಸುಂದರಲಾಲನ ಮಾತನ್ನು ಕೇಳಿದ್ದಳು. ಸುಂದರಲಾಲ ಎಷ್ಟು ದೊಡ್ಡ ಮತ್ತು ಅಸಹ್ಯವಾದ ಬೂಟುಗಳನ್ನು ಹಾಕಿಕೊಳ್ಳುತ್ತಾನೆ ಮತ್ತು ತನ್ನ ಸೊಂಟವು ಎಷ್ಟು ತೆಳುವಾಗಿ ಇದೆ ಎಂಬುದನ್ನೂ ಕೂಡ ಅವಳು ಮರೆತೇಬಿಟ್ಟಳು.

ಪ್ರಭಾತ ಫೇರಿಯ ಸಮಯದಲ್ಲಿ ಇಂಥವೇ ಮಾತುಗಳು ಸುಂದರಲಾಲಗೆ ನೆನಪಾಗುತ್ತಿದ್ದವು. ಮತ್ತು ಅವನು ಇದನ್ನೇ ಯೋಚಿಸುತ್ತಿದ್ದ—ಒಂದು ಸಲ ಕೇವಲ ಒಂದು ಸಲ ಲಾಜೂ ಸಿಕ್ಕಳೆಂದರೆ ನಾನು ಅವಳನ್ನು ನಿಜವಾಗಿಯೂ ಹೃದಯದಲ್ಲಿ ನೆಲೆಗೊಳ್ಳಿಸಿಕೊಳ್ಳುವೆನು ಮತ್ತು ಜನರಿಗೆಲ್ಲ ತಿಳಿಸಿಕೊಡುವೆನು. ಈ ನಿಸ್ಸಹಾಯಕ ಹೆಂಗಸರು ಅಪಹರಿಸಲ್ಪಟ್ಟಿದ್ದರಲ್ಲಿ ಅವರದು ಯಾವ ತಪ್ಪು ಇಲ್ಲ. ಜಾತೀಯ ಗಲಭೆ ಮಾಡುವವರ ವಿಷಯಲಾಲಸೆಗೆ ಬಲಿಯಾಗುವದರಲ್ಲಿ ಅವರದೇನೂ ದೋಷವಿಲ್ಲ. ಈ ಮುಗ್ಧ ಮತ್ತು ನಿರಪರಾಧಿ ಹೆಂಗಸರನ್ನು ಸ್ವೀಕಾರ

ಮಾಡದೇ ಇರುವ, ಅವರನ್ನು ತನ್ನವರನ್ನಾಗಿ ಮಾಡಿಕೊಳ್ಳದೇ ಇರುವ ಸಮಾಜವು ಹಳಸಿದ-ಕೊಳೆತ ಸಮಾಜವಾಗಿದೆ. ಅದನ್ನು ಮುಗಿಸಿಬಿಡಬೇಕು.....ಅವನು ಈ ಹೆಂಗಸರನ್ನು ಮನೆಗಳಲ್ಲಿ ನೆಲೆಗೊಳಿಸುವ ಉಪದೇಶ ಮಾಡುತ್ತಿದ್ದ ಮತ್ತು ಅವರಿಗೆ ಮನೆಯಲ್ಲಿ ಯಾವದೇ ಹೆಂಗಸು, ಯಾವದೇ ತಾಯಿ, ಮಗಳು, ಅಕ್ಕ-ತಂಗಿ ಅಥವಾ ಹೆಂಡತಿಗೆ ಕೊಡಲಾಗುವ ಸ್ಥಾನಮಾನವನ್ನು ಕೊಡುವ ಪ್ರೇರಣೆ ಕೊಡುತ್ತಿದ್ದ........ನಂತರ ಅವನು ಹೇಳುತ್ತಿದ್ದ—ಇವರ ಜೊತೆ ನಡೆದ ವಿಷಯಗಳನ್ನು ಸನ್ನೆ, ಸಂಕೇತಗಳಿಂದಲೂ ಕೂಡ ಇವರಿಗೆ ನೆನಪಿಸಬಾರದು. ಯಾಕೆಂದರೆ, ಇವರ ಹೃದಯಗಳು ಗಾಯಗೊಂಡಿವೆ. ಅವು ಮುಚ್ಚಲ ಮುರುಕಿಯ ಹಾಗೆ ನಾಜೂಕಾಗಿವೆ. ಕೈ ತಾಕಿಸಿದರೂ ಕೂಡ ಮುದುಡಿಹೋಗುತ್ತವೆ....ಹಾಗೆ ಎಂಬಂತೆ, "ಹೃದಯದಲ್ಲಿ ನೆಲೆಗೊಳಿಸಿರಿ" ಪ್ರೋಗ್ರಾಮ್ ಅನ್ನು ಕಾರ್ಯರೂಪದಲ್ಲಿ ತರಲು ಮಿಲಾಪತೂರ್ ಮೊಹಲ್ಲಾದ ಆ ಕಮಿಟಿಯವರು ಎಷ್ಟೋ ಪ್ರಭಾತ ಫೇರಿಗಳನ್ನು ತೆಗೆದಿದ್ದರು. ಪ್ರಾತಃಕಾಲದ ನಾಲ್ಕು-ಐದು ಗಂಟೆಯ ಸಮಯವು ಅವರಿಗೆ ಅತಿಯೋಗ್ಯವಾದ ಸಮಯವಾಗಿತ್ತು. ಜನರ ಗದ್ದಲವೂ ಇಲ್ಲ, ಟ್ರೇಫಿಕ್‌ದ ತೊಂದರೆಯೂ ಇಲ್ಲ. ರಾತ್ರಿಯೆಲ್ಲ ಚೌಕಿದಾರಿ (ಪಹರೆ) ಮಾಡಿದ ನಾಯಿಗಳು ಕೂಡ ಆರಿಹೋದ ತಂದೂರ (ರೊಟ್ಟಿ ಮಾಡುವ ಭಟ್ಟಿ)ಗಳಲ್ಲಿ ತಲೆಯಿಟ್ಟು ಮಲಗಿಕೊಂಡಿರುತ್ತಿದ್ದವು. ತಮ್ಮ ತಮ್ಮ ಹಾಸಿಗೆಗಳಲ್ಲಿ ಮುದುಡಿ ಬಿದ್ದುಕೊಂಡ ಜನರು ಪ್ರಭಾತ ಫೇರಿಯ ಜನರ ಧ್ವನಿಯನ್ನು ಕೇಳಿ, "ಓ, ಅದೇ ಮಂಡಲಿ" ಎಂದು ಇಷ್ಟೇ ಅನ್ನುತ್ತಿದ್ದರು. ಒಮ್ಮೊಮ್ಮೆ ಸಹನೆಯಿಂದ ಮತ್ತು ಮತ್ತೊಮ್ಮೆ ಸಿಡಿಮಿಡಿಗೊಂಡು ಸುಂದರಲಾಲನ ಪ್ರೊಪೆಗಂಡಾವನ್ನು ಕೇಳುತ್ತಿದ್ದರು. ಬಹಳ ರಕ್ಷಣೆಯಿಂದ ಆ ಕೊನೆಯನ್ನು ಮುಟ್ಟಿದ್ದ ಆ ಹೆಂಗಸರು ಹೂ ಕೋಸುಗಳ ಹಾಗೆ ಪಸರಿಸಿ ಬಿದ್ದುಕೊಂಡಿರುತ್ತಿದ್ದರು. ಅವರ ಗಂಡಂದಿರು ಅವರ ಪಕ್ಕದಲ್ಲಿ ಮೂಲಂಗಿಯ ದೇಂಟುಗಳ ಹಾಗೆ ಸೆಟೆದು ಬಿದ್ದುಕೊಂಡು, ಪ್ರಭಾತ ಫೇರಿಯ ಗದ್ದಲದ ಬಗ್ಗೆ ದೂರುತ್ತ, ಬಾಯಲ್ಲಿ ಏನನ್ನೋ ಗೊಣಗಿಕೊಳ್ಳುತ್ತ ಹೋಗುವರು. ಅಥವಾ ಎಲ್ಲಿಯೋ ಯಾವದೋ ಮಗು ಸ್ವಲ್ಪ ಸಮಯದವರೆಗೆ ಕಣ್ಣು ತೆರೆಯುವದು ಮತ್ತು "ಹೃದಯದಲ್ಲಿ ನೆಲೆಗೊಳಿಸಿರಿ" ಅದರ ಪ್ರಾರ್ಥಿಸುವ ಮತ್ತು ದುಃಖ ಭರಿತ ಪ್ರೊಪೆಗಂಡಾವನ್ನು ಕೇವಲ ಒಂದು ಹಾಡೆಂದು ತಿಳಿದುಕೊಂಡು ಪುನಃ ಮಲಗಿಬಿಡುತ್ತಿತ್ತು.

ಆದರೆ ಮುಂಜಾನೆಯ ಸಮಯದಲ್ಲಿ ಕಿವಿಯಲ್ಲಿ ಬಿದ್ದ ಶಬ್ದವು ನಿರರ್ಥಕವಾಗುತ್ತಿದ್ದಿಲ್ಲ. ಅದು ದಿನವೆಲ್ಲ ಒಂದು ಪುನರಾವೃತ್ತಿಯಿಂದ ತಲೆಯಲ್ಲಿ ಸುತ್ತುತ್ತಲಿತ್ತು. ಕೆಲವು ಸಲ ಮನುಷ್ಯ ಇದರ ಅರ್ಥವನ್ನು ಕೂಡ ತಿಳಿದುಕೊಂಡಿರುವದಿಲ್ಲ. ಆದರೆ ಗುನುಗುನಿಸುತ್ತ ಹೋಗುವನು. ಇವೇ ಧ್ವನಿಯು ಮನೆ ಮಾಡಿಕೊಂಡಿದ್ದರಿಂದಲೇ

ಆ ದಿನಗಳಲ್ಲಿ ಮಿಸ್ ಮೃದುಲಾ ಸಾರಾಭಾಯಿ ಹಿಂದೂಸ್ತಾನ ಮತ್ತು ಪಾಕಿಸ್ತಾನಗಳ ಮಧ್ಯೆ ಅಪಹರಿಸಲ್ಪಟ್ಟ ಹೆಂಗಸರನ್ನು ವಿನಿಮಯದಲ್ಲಿ ಕರೆತಂದಾಗ ವಿಲಾಷ. ತೂರ್ ಮೊಹಲ್ಲಾದ ಕೆಲವು ಜನರು ಅವರನ್ನು ಪುನಃ ನೆಲೆಗೊಳಿಸಲು ಸಿದ್ಧರಾದರು. ಅವರ ಸಂಬಂಧಿಕರು ಪಟ್ಟಣದಿಂದ ಹೊರಗೆ ಚೌಕಿ ಕಲಾಂದಲ್ಲಿ ಅವರನ್ನು ಭೆಟ್ಟಿಯಾಗಲು ಹೋದರು. ಅಪಹರಿಸಲ್ಪಟ್ಟ ಹೆಂಗಸರು ಮತ್ತು ಅವರ ಬಳಗದವರು ಸ್ವಲ್ಪ ಸಮಯ ಒಬ್ಬರನ್ನೊಬ್ಬರು ನೋಡುತ್ತಿದ್ದರು ಮತ್ತು ನಂತರ ತಲೆ ತಗ್ಗಿಸಿಕೊಂಡು ತಮ್ಮ ತಮ್ಮ ಹಾಳಾದ ಮನೆಗಳನ್ನು ಪುನಃ ನೆಲೆಗೊಳಿಸುವ ಕಾರ್ಯಕ್ಕೆ ಹೊರಟುಹೋಗುತ್ತಿದ್ದರು. ರಸಾಲೂ ಮತ್ತು ನೇಕಿರಾಮ ಮತ್ತು ಸುಂಧರಲಾಲ ಬಾಬೂ ಇವರು ಒಮ್ಮೊಮ್ಮೆ "ಮಹೆಂದರ ಸಿಂಗ್ ಜಿಂದಾಬಾದ" ಮತ್ತು ಒಮ್ಮೊಮ್ಮೆ "ಸೋಹನಲಾಲ ಜಿಂದಾಬಾದ್"ಗಳ ವಿಜಯ ಘೋಷಣೆ ಮಾಡುತ್ತಿದ್ದರು........ತಮ್ಮ ಗಂಟಲು ಒಣಗುವವರೆಗೆ ಜಯಕಾರ ಮಾಡುತ್ತಲೇ ಇರುತ್ತಿದ್ದರು.

ಆದರೆ ಅಪಹರಿಸಲ್ಪಟ್ಟ ಹೆಂಗಸರಲ್ಲಿ ಕೆಲವರು ಅವರ ಗಂಡಂದಿರು, ಅವರ ತಾಯಿ ತಂದೆ, ಸೋದರ ಸೋದರಿಯರು ಅವರನ್ನು ಗುರುತಿಸಲು ನಿರಾಕರಿಸಿದಂಥವರು ಕೂಡ ಇದ್ದರು. ಕೊನೆಗೆ ಅವರು ಸತ್ತೇಕೆ ಹೋಗಲಿಲ್ಲ? ತಮ್ಮ ಮಾನ ಮತ್ತು ಪಾವಿತ್ರ್ಯಗಳನ್ನು ರಕ್ಷಿಸಿಕೊಳ್ಳಲು ಅವರು ವಿಷವನ್ನೇಕೆ ತಿನ್ನಲಿಲ್ಲ? ಬಾವಿಗಳಲ್ಲಿ ಏಕೆ ಜಿಗಿಯಲಿಲ್ಲ? ಅಂಜುಗುಳಿಗಳಿದ್ದರು, ಅಂತಲೆ ಈ ರೀತಿ ಜೀವನಕ್ಕೆ ಅಂಟಕೊಂಡಿವೆ. ನೂರಾರು ಸಾವಿರಾರು ಹೆಂಗಸರು ತಮ್ಮ ಮಾನಹರಣವಾಗುವ ಮೊದಲೆ ತಮ್ಮ ಜೀವವನ್ನು ಕಳೆದುಕೊಂಡಿದ್ದರು. ಆದರೆ ಇವರಿಗೇನು ಗೊತ್ತು? —ಅವರು ಬದುಕಿ ಉಳಿದು ಎಷ್ಟು ಧೈರ್ಯದಿಂದ ಕೆಲಸಮಾಡುತ್ತಿದ್ದಾರೆ, ತಮ್ಮ ಗಂಡಂದಿರು ಕೂಡ ತಮ್ಮನ್ನು ಗುರುತಿಸಲು ನಿರಾಕರಿಸಿದ ಈ ಜಗತ್ತಿನಲ್ಲಿ ಹೇಗೆ ಕಲ್ಲಿನಂತೆ ಗಟ್ಟಿಗೊಂಡ ಕಣ್ಣುಗಳಿಂದ ಮೃತ್ಯುವನ್ನು ನಿಟ್ಟಿಸುತ್ತಿದ್ದಾರೆ. ನಂತರ ಅವರಲ್ಲಿ ಕೆಲವರು ಮನದಲ್ಲಿಯೆ ತಮ್ಮ ಹೆಸರನ್ನು ಪುನರುಚ್ಚರಿಸಿದರು....ಸುಹಾಗವಂತಿ—ಸುಹಾಗ ಇದ್ದವಳು....ಆ ಮಹಾ ಸಂದಣಿಯಲ್ಲಿ ತಮ್ಮ ತಮ್ಮನ್ನು ಕಂಡು ಕೊನೆಗೆ ಇಷ್ಟೇ ಅನ್ನುವರು: ನೀನು ಕೂಡ ನನ್ನನ್ನು ಗುರುತಿಸುವದಿಲ್ಲವೆ ಬಿಹಾರಿ....ನಾನು ನಿನ್ನನ್ನು ನನ್ನ ಉಡಿಯಲ್ಲಿ ಆಡಿಸಿದ್ದೆನಲ್ಲ ಮಗು....ಬಿಹಾರಿ ಚೀರಿ ಬಿಡಲು ಬಯಸುತ್ತಿದ್ದ. ಬಳಿಕ ಅವನು ತಾಯಿ-ತಂದೆಯ ಕಡೆ ನೋಡುತ್ತಿದ್ದ. ತಾಯಿ-ತಂದೆ ತಮ್ಮ ಎದೆಯ ಮೇಲೆ ಕೈಯಿಟ್ಟುಕೊಂಡು ನಾರಾಯಣ ಬಾಬಾನ ಕಡೆ ನೋಡುತ್ತಿದ್ದರು. ಮತ್ತು ಅಧಿಕ ವಿವಶತೆಯ ಸ್ಥಿತಿಯಲ್ಲಿ ನಾರಾಯಣ ಬಾಬಾ ಆಕಾಶದತ್ತ ನೋಡುತ್ತಿದ್ದ. ನಿಜವಾಗಿ ಆಕಾಶವು ಯಾವದೇ ಸತ್ಯವನ್ನು ಇಟ್ಟುಕೊಂಡಿರುವದಿಲ್ಲ; ಅದು ಕೇವಲ ನಮ್ಮ ಕಣ್ಣುಗಳ ಭ್ರಮೆ. ಅದು ಕೇವಲ

ಒಂದು ಸೀಮೆ—ಅದನ್ನು ದಾಟಿ ನಮ್ಮ ಕಣ್ಣುಗಳು ಕಾರ್ಯ ಮಾಡುವದಿಲ್ಲ.

ಆದರೆ ಮಿಲ್ಟ್ರಿ ಟ್ರಕ್‌ಗಳಲ್ಲಿ ಮಿಸ್ ಸಾರಾಭಾಯಿ ವಿನಿಮಯದಲ್ಲಿ ತಂದ ಹೆಂಗಸರಲ್ಲಿ ಲಾಜೂ ಇದ್ದಿಲ್ಲ. ಸುಂದರಲಾಲ ಆಶೆ-ಭಯಗಳಿಂದ ಕೊನೆಯ ಹುಡುಗಿಯು ಟ್ರಕ್‌ದಿಂದ ಕೆಳಗೆ ಇಳಿಯುವದನ್ನು ನೋಡಿದ. ನಂತರ ಅವನು ಅಧಿಕ ಮೌನ ಮತ್ತು ಹೆಚ್ಚು ನಿರ್ಧಾರದಿಂದ ತನ್ನ ಕಮಿಟಿಯ ಕಾರ್ಯಕಲಾಪ ಗಳನ್ನು ಎರಡು ಪಟ್ಟು ಮಾಡಿದನು. ಈಗ ಅವರು ಕೇವಲ ಬೆಳಗಿನ ಸಮಯದಲ್ಲಿ ಮಾತ್ರ ಪ್ರಭಾತ ಫೇರಿಯನ್ನು ಹೊರಡಿಸುತ್ತಿದ್ದಿಲ್ಲ. ಸಾಯಂಕಾಲದಲ್ಲೂ ಕೂಡ ಮೆರವಣಿಗೆಯನ್ನು ಹೊರಡಿಸಹತ್ತಿದರು. ಮತ್ತು ಆಗಾಗ ಒಂದೆರಡು ಸಣ್ಣ ದೊಡ್ಡ ಸಭೆಗಳನ್ನು ಮಾಡಹತ್ತಿದರು. ಅವುಗಳಲ್ಲಿ ಕಮಿಟಿಯ ಮುದುಕ ಅಧ್ಯಕ್ಷ ವಕೀಲ ಕಾಲಕಾ ಪ್ರಸಾದ ಸೂಫಿಯು ಕೇಕರಿಸುವದು ಬೆರೆತ ಒಂದು ಭಾಷಣ ಮಾಡುತ್ತಿದ್ದ ಮತ್ತು ರಸಾಲೂ ಒಂದು ಪೀಕದಾನಿಯನ್ನು ಹಿಡಿದುಕೊಂಡು ಡ್ಯೂಟಿಯ ಮೇಲೆ ಯಾವಾಗಲೂ ಇರುತ್ತಿದ್ದ. ಲೌಡ್ ಸ್ಪೀಕರ್‌ಗಳಿಂದ ವಿಚಿತ್ರ ವಾದ ಧ್ವನಿಗಳು ಬರುತ್ತಿದ್ದವು. ಬಳಿಕ ಎಲ್ಲಿಂದಲೊ ಚೌಕಿಯ ಕಾರಕೂನ ನೇಕಿ ರಾಮು ಏನನ್ನಾದರೂ ಹೇಳಬೇಕೆಂದು ಏಳುತ್ತಿದ್ದ. ಆದರೆ ಅವರು ಎಷ್ಟೇ ಮಾತು ಗಳನ್ನು ಹೇಳಲಿ, ಎಷ್ಟೇ ಶಾಸ್ತ್ರಗಳ ಮತ್ತು ಪುರಾಣಗಳ ಆಧಾರ ಕೊಡಲಿ, ಅಷ್ಟೇ ತಮ್ಮ ಉದ್ದೇಶದ ವಿರುದ್ಧ ಮಾತುಗಳನ್ನು ಹೇಳುತ್ತಿದ್ದರು. ಹೀಗೆ ಸಂದರ್ಭವು ಕೈಮೀರಿ ಹೋಗುತ್ತಿದ್ದುದನ್ನು ಕಂಡು ಸುಂದರಲಾಲ ಬಾಬೂ ಏಳುತ್ತಿದ್ದನು. ಆದರೆ ಅವನಿಗೆ ಎರಡು ವಾಕ್ಯಗಳಿಗಿಂತ ಹೆಚ್ಚು ಹೇಳಲು ಶಕ್ಯವಾಗುತ್ತಿರಲಿಲ್ಲ. ಅವನ ಗಂಟಲು ತುಂಬಿ ಬರುತ್ತಿತ್ತು. ಅವನ ಕಣ್ಣಿನಿಂದ ನೀರು ಸುರಿಯಹತ್ತುತ್ತಿತ್ತು ಮತ್ತು ಅವನು ರೋದಿಸಲುದ್ಯುಕ್ತನಾಗುತ್ತಿದ್ದುದರಿಂದ ಭಾಷಣವನ್ನು ಮಾಡಲು ಶಕ್ತನಾಗುತ್ತಿದ್ದಿಲ್ಲ. ಕೊನೆಗೆ ಕುಳಿತು ಬಿಡುತ್ತಿದ್ದ. ಆದರೆ ಜನಸಮೂಹದ ಮೇಲೆ ಒಂದು ವಿಚಿತ್ರ ತರದ ಮೌನವು ಆವರಿಸುತ್ತಿತ್ತು. ಸುಂದರಲಾಲನ ಆ ಎರಡು ಮಾತುಗಳ ಪ್ರಭಾವವು, ಅವು ಅವನ ಹೃದಯದ ಆಳದಿಂದ ಹೊರಬಿದ್ದ ಕಾರಣ, ವಕೀಲ ಕಾಲಕಾ ಪ್ರಸಾದ ಸೂಫಿಯು ಎಲ್ಲ ಉಪದೇಶಾತ್ಮಕ ವಾಗ್ಝರಿಗಿಂತ ಅಧಿಕ ವಾಗಿರುತ್ತಿತ್ತು. ಆದರೆ ಜನರು ಅಲ್ಲಿಯೇ ಅತ್ತುಬಿಡುತ್ತಿದ್ದರು. ತಮ್ಮ ಭಾವನೆ ಗಳನ್ನು ಶಾಂತಗೊಳಿಸಿದ ನಂತರ ಭಾವಶೂನ್ಯರಾಗಿ ಮನೆಗೆ ಹಿಂತಿರುಗುತ್ತಿದ್ದರು.

ಒಂದು ದಿನ ಕಮಿಟಿಯವರು ಸಾಯಂಕಾಲದ ಸಮಯದಲ್ಲಿಯು ಕೂಡ ಪ್ರಚಾರ ಮಾಡಲು ಬಂದರು. ತಮ್ಮ ಕಾರ್ಯವನ್ನು ಮಾಡುತ್ತ ಮಾಡುತ್ತ ಸಾಂಪ್ರ ದಾಯವಾದಿಗಳ ಪ್ರದೇಶದಲ್ಲಿ ಬಂದುಬಿಟ್ಟರು. ಮಂದಿರದ ಹೊರಗೆ ಒಂದು ಅಶ್ವತ್ಥ ವೃಕ್ಷದ ನಾಲ್ಕೂ ಕಡೆಗೂ ಸಿಮೆಂಟಿನ ಕಟ್ಟೆಯ ಮೇಲೆ ಕೆಲವು ಶ್ರದ್ಧಾಳು ಗಳು ಕುಳಿತಿದ್ದರು. ರಾಮಾಯಣದ ಕತೆ ನಡೆದಿತ್ತು. ನಾರಾಯಣ ಬಾಬಾ

ರಾಮಾಯಣದ ಈ ಭಾಗವನ್ನು ಹೇಳುತ್ತಲಿದ್ದರು: ಒಬ್ಬ ಅಗಸನು ತನ್ನ ಅಗಸಗಿತ್ತಿಯನ್ನು ಮನೆಯಿಂದ ಹೊರಗೆ ಹಾಕಿ ಅವಳಿಗೆ ಹೇಳುತ್ತಿದ್ದ—"ಇಷ್ಟು ವರ್ಷ ರಾವಣನ ಜೊತೆ ಇದ್ದು ಬಂದಮೇಲೆಯೂ ಸೀತೆಯನ್ನು ಸ್ವೀಕರಿಸಲು ನಾನು ರಾಜಾ ರಾಮಚಂದ್ರನಲ್ಲ. ಮತ್ತು ರಾಮಚಂದ್ರಜಿ ಮಹಾ ಸತ್ಯವಂತಿ ಸೀತೆಯನ್ನು ಮನೆಯಿಂದ ಹೊರ ಹಾಕಿದ—ಅವಳು ಗರ್ಭವತಿಯಾಗಿದ್ದ ಪರಿಸ್ಥಿತಿಯಲ್ಲಿ ರಾಮರಾಜ್ಯದ ಬಗ್ಗೆ ಇದಕ್ಕಿಂತಲೂ ದೊಡ್ಡದಾದ ಯಾವುದಾದರೂ ಪ್ರಮಾಣವು ಸಿಕ್ಕಬಲ್ಲದೆ?" ನಾರಾಯಣ ಬಾಬಾ ಹೇಳಿದರು—"ಇದೇ ರಾಮರಾಜ್ಯವು!—ಅದರಲ್ಲಿ ಒಬ್ಬ ಅಗಸನ ಮಾತನ್ನು ಕೂಡ ಅಷ್ಟೇ ಗೌರವದ ದೃಷ್ಟಿಯಿಂದ ಕಾಣಲಾಗುತ್ತಿತ್ತು."

ಕಮಿಟಿಯ ಮೆರವಣಿಗೆಯು ಮಂದಿರದ ಸಮೀಪ ನಿಂತಿತ್ತು. ಜನರು ರಾಮಾಯಣದ ಕತೆ ಮತ್ತು ಶ್ಲೋಕದ ವರ್ಣನೆಗಳನ್ನು ಕೇಳಲು ನಿಂತಿದ್ದರು. ಸುಂದರಲಾಲ ಕೊನೆಯ ವಾಕ್ಯವನ್ನು ಕೇಳುತ್ತಿದ್ದ ಹಾಗೆ ಹೇಳಿದ—"ನಮಗೆ ಇಂಥ ರಾಮರಾಜ್ಯವು ಬೇಕಾಗಿಲ್ಲ ಬಾಬಾ."

"ಸುಮ್ಮನಿರಿ," "ನೀವಾರು ಹೇಳಲಿಕ್ಕೆ", "ಶಾಂತರಾಗಿರಿ," "ಜನರ ಸಮೂಹದಿಂದ ಧ್ವನಿಗಳು ಬಂದವು. ಸುಂದರಲಾಲ ಮುಂದಕ್ಕೆ ಬಂದು, "ನಾನು ಮಾತನಾಡುವದನ್ನು ಯಾರೂ ತಡೆಯಲು ಸಾಧ್ಯವಿಲ್ಲ" ಎಂದ.

ಬಳಿಕ ಸಮ್ಮಿಶ್ರ ಧ್ವನಿಗಳು ಹೊರಟವು—"ಶಾಂತರಾಗಿರಿ", ನಾವು ಮಾತನಾಡಲು ಬಿಡುವದಿಲ್ಲ"; ಒಂದು ಮೂಲೆಯಿಂದ "ನಾವು ಹೊಡೆಯುವೆವು" ಎಂಬ ಧ್ವನಿ ಕೂಡ ಬಂದಿತು.

ನಾರಾಯಣ ಬಾಬಾ ಬಹಳ ಮಧುರವಾದ ಧ್ವನಿಯಲ್ಲಿ, "ನೀನು ಶಾಸ್ತ್ರಗಳ ಮಾನ ಮರ್ಯಾದೆಗಳನ್ನು ತಿಳಿಯಲಾರೆ ಸುಂದರಲಾಲ!" ಅಂದರು.

"ನನಗೆ ಒಂದು ವಿಷಯ ತಿಳಿದಿದೆ ಬಾಬಾ. ರಾಮರಾಜ್ಯದಲ್ಲಿ ಅಗಸನ ಧ್ವನಿಯನ್ನು ಕೂಡ ಕೇಳಲಾಗುತ್ತಿದೆ. ಆದರೆ ಸುಂದರಲಾಲನ ಧ್ವನಿಯನ್ನು ಇಲ್ಲ"—ಸುಂದರಲಾಲ ಅಂದನು.

ಇದೀಗ ಹೊಡೆಯಲು ಸಿದ್ಧರಾಗಿದ್ದ ಅದೇ ಜನರು ತಮ್ಮ ಕೆಳಗಿನಿಂದ ಅಶ್ವತ್ಥದ ಹಣ್ಣುಗಳನ್ನು ಸರಿಸಿ ಹಾಕಿ, ಪುನಃ ಕುಳಿತುಕೊಳ್ಳುತ್ತ ಅಂದರು—"ಕೇಳಿರಿ, ಕೇಳಿರಿ ಕೇಳಿರಿ."

ರಸಾಲೂ ಮತ್ತು ನೇಕಿರಾಮ ಇವರು ಸುಂದರಲಾಲ ಬಾಬೂನ ಬೆನ್ನು ಚಪ್ಪರಿಸಿದರು. ಸುಂದರಲಾಲ ಹೇಳಿದ—"ಶ್ರೀರಾಮ ನಮ್ಮ ನೇತಾ ಆಗಿದ್ದರು. ಆದರೆ ಇದೆಂಥ ಮಾತು ಬಾಬೂಜಿ? ಅವರು ಅಗಸನ ಮಾತನ್ನು ಸತ್ಯವೆಂದು ಭಾವಿಸಿದರು; ಆದರೆ ಅಷ್ಟು ದೊಡ್ಡ ಮಹಾರಾಣಿಯ ಸತ್ಯದ ಬಗ್ಗೆ ವಿಶ್ವಾಸ ಮಾಡಲಿಲ್ಲ."

ನಾರಾಯಣ ಬಾಬಾ ತಮ್ಮ ಗಡ್ಡವನ್ನು ತುರಿಸಿಕೊಳ್ಳುತ್ತ ಹೇಳಿದರು, "ಯಾಕೆಂದರೆ ಸೀತಾ ಅವರ ಹೆಂಡತಿ. ಸುಂದರಲಾಲ ನೀನು ಈ ವಿಷಯದ ಮಹಾನತೆಯನ್ನು ಅರ್ಥ ಮಾಡಿಕೊಂಡಿಲ್ಲ."

"ಹಾಂ, ಹಾಂ ಬಾಬಾ, ಈ ಸಂಸಾರದಲ್ಲಿ ನನಗೆ ಅರ್ಥವಾಗದ ವಿಷಯಗಳು ಬಹಳ ಇವೆ. ಆದರೆ ನಾನು ಯಾವುದನ್ನು ರಾಮರಾಜ್ಯವೆಂದು ತಿಳಿದುಕೊಂಡಿರುವೆನೊ ಅದರಲ್ಲಿ ಮನುಷ್ಯ ತನ್ನ ಮೇಲೆ ಕೂಡ ಅನ್ಯಾಯ ಮಾಡಿಕೊಳ್ಳಲಾರ. ತನ್ನ ಮೇಲೆ ತಾನೇ ಅನ್ಯಾಯ ಮಾಡಿಕೊಳ್ಳುವದು ಬೇರೊಬ್ಬರ ಮೇಲೆ ಅನ್ಯಾಯ ಮಾಡಿದಷ್ಟೇ ಮಹಾಪಾಪ........ಇಂದು ಕೂಡ, ಭಗವಾನ ರಾಮ ಸೀತೆಯನ್ನು ಮನೆಯಿಂದ ಹೊರಗೆ ಹಾಕಿದ್ದಾನೆ....ಯಾಕೆಂದರೆ, ಅವಳು ರಾವಣನ ಬಳಿ ಇದ್ದು ಬಂದಿದ್ದಾಳೆ....ಇದರಲ್ಲಿ ಸೀತೆಯ ಅಪರಾಧ ಯಾವದಿದೆ? ಅವಳು ಕೂಡ ನಮ್ಮ ಅನೇಕ ತಾಯಿಗಳಂತೆ, ಸೋದರಿಯರಂತೆ ಒಂದು ಛಲ ಮತ್ತು ಕಪಟದ ಬೇಟೆಯಾಗಿದ್ದಿಲ್ಲವೆ? ಇದರಲ್ಲಿ ಸೀತೆಯ ಸತ್ಯ ಹಾಗು ಅಸತ್ಯದ ವಿಷಯವಿದೆಯೊ, ಇಲ್ಲವೆ ಹತ್ತು ಮನುಷ್ಯರ ತಲೆಗಳಲ್ಲದೆ ಮತ್ತೊಂದು ಬಹಳ ದೊಡ್ಡ ಕತ್ತೆಯ ತಲೆಯನ್ನು ಪಡೆದಿದ್ದ ರಾಕ್ಷಸ ರಾವಣನ ಅಮಾನುಷೀಯತೆ ಇದೆಯೊ?....ಇಂದು ನಮ್ಮ ನಿರ್ದೋಷಿ ಸೀತೆ ಮನೆಯಿಂದ ಹೊರಹಾಕಲ್ಪಟ್ಟಿದ್ದಾಳೆ.... ಸೀತಾ.... ಲಾಜವಂತಿ.......” ಸುಂದರಲಾಲ ಬಾಬೂ ಅಳಹತ್ತಿದನು. ರಸಾಲೂ ಮತ್ತು ನೇಕಿರಾಮ ಇವರು ಎಲ್ಲ ಕೆಂಪು ನಿಶಾನಿಗಳನ್ನು ಎತ್ತಿಕೊಂಡರು. ಇಂದೇ ಅವುಗಳ ಮೇಲೆ ಸ್ಕೂಲಿನ ಹುಡುಗರು ಒಳ್ಳೆ ಸ್ವಚ್ಛತೆಯಿಂದ ಘೋಷಣೆ (ಸ್ಲೋಗನ್)ಗಳನ್ನು ಅಂಟಿಸಿದ್ದರು. ಬಳಿಕ ಅವರೆಲ್ಲರು "ಸುಂದರಲಾಲ ಬಾಬೂ ಜಿಂದಾಬಾದ್" ಎಂದು ಘೋಷಿಸುತ್ತ ಹೊರಟರು. ಮೆರವಣಿಗೆಯಲ್ಲಿಂದ ಒಬ್ಬನು "ಮಹಾಸತಿ ಸೀತಾ ಜಿಂದಾಬಾದ್" ಅಂದನು. ಒಂದು ಕಡೆಯಿಂದ ಧ್ವನಿ ಬಂದಿತು— "ಶ್ರೀ ರಾಮಚಂದ್ರ........"

ಬಳಿಕ ಬಹಳಷ್ಟು ಧ್ವನಿಗಳು ಹೊರಟವು. "ಶಾಂತರಾಗಿರಿ! ಶಾಂತರಾಗಿರಿ!" ನಾರಾಯಣ ಬಾಬಾನ ತಿಂಗಳುಗಳಿಂದ ಬಂದಿದ್ದ ಕತೆಯು ನಿಷ್ಪ್ರಯೋಜಕವಾಯಿತು. ಬಹಳಷ್ಟು ಜನರು ಮೆರವಣಿಗೆಯಲ್ಲಿ ಸೇರಿಕೊಂಡರು. ಮೆರವಣಿಗೆಯ ಮುಂದೆ ಮುಂದೆ ವಕೀಲ ಕಾಲಕಾ ಪ್ರಸಾದ, ಹುಕುಮ್ ಸಿಂಗ್, ಚೌಕಿ ಕಲಾಮ್‌ದ ಕಾರಕೂನ ಇವರು ಹೋಗುತ್ತಿದ್ದರು. ತಮ್ಮ ಮುಡಿ ಚಡಿಗಳನ್ನು ನೆಲಕ್ಕೆ ಕುಟ್ಟುತ್ತ ಮತ್ತು ಒಂದು ವಿಜಯದ ಧ್ವನಿಯನ್ನು ಹುಟ್ಟಿಸುತ್ತ....ಅವರ ಮಧ್ಯೆ ಸುಂದರಲಾಲ ಹೋಗುತ್ತಿದ್ದ. ಅವನ ಕಣ್ಣುಗಳಲ್ಲಿ ಈಗಲೂ ನೀರು ಸುರಿಯುತ್ತಿತ್ತು. ಈ ದಿನ ಅವನ ಮನಸ್ಸಿಗೆ ಕೆಟ್ಟ ಆಘಾತವಾಗಿತ್ತು. ಜನರು ಒಳ್ಳೆಯ ಸ್ಫೂರ್ತಿಯಿಂದ ಒಬ್ಬರಿಗೊಬ್ಬರು ಕೂಡಿಕೊಂಡು ಹಾಡುತ್ತಲಿದ್ದರು—

" ಹಥ್ ಲಾಈಯೋಂ ಕುಮ್ಲಾನ ನೀ....ಲಾಜವಂತೀ ದೇ ಬೂಟೇ...."

ಇನ್ನೂ ಹಾಡಿನ ಧ್ವನಿಯು ಕಿವಿಗಳಲ್ಲಿ ಗುಂಜಿಸುತ್ತಿತ್ತು. ಇನ್ನೂ ಬೆಳಕು ಕೂಡ ಹರಿದಿದ್ದಿಲ್ಲ. ಮತ್ತು ಮಿಲಾಷತೂರ್ ಮೊಹಲ್ಲಾದ 414 ನಂಬರ್ ಮನೆಯ ವಿಧವೆಯು ಇನ್ನೂ ತನ್ನ ಹಾಸಿಗೆಯ ಮೇಲೆ ದುಃಖದಿಂದ ಮೈ ಮುರಿಯುತ್ತಿದ್ದಳು. ಆಗ ಸುಂದರಲಾಲನ ಹಿಂಬಾಲಿಗ ಲಾಲಚಂದ—ಅವನಿಗೆ ತಮ್ಮ ಸ್ಥಾನ, ಪ್ರಭಾವ ಗಳನ್ನು ಉಪಯೋಗಿಸಿ, ಸುಂದರಲಾಲ ಮತ್ತು ಖಲೀಫಾ ಕಾಲಕಾ ಪ್ರಸಾದ ರೇಶನ್ ಡಿಪೊ ಕೊಡಿಸಿದ್ದರು—ಓಡುತ್ತ ಓಡುತ್ತ ಬಂದು ತನ್ನ ಕೈಮಗ್ಗದ ದಪ್ಪ ಚಾದರದೊಳಗಿಂದ ಕೈಗಳು ಚಾಚಿ,

" ಬಧಾಯಿ (ಅಭಿನಂದನೆ) ಸುಂದರಲಾಲ " ಅಂದ.

ಸುಂದರಲಾಲ ಬೆಲ್ಲ ಬೆರೆತ ತಂಬಾಕನ್ನು ಚಿಲುಮೆಯಲ್ಲಿ ಇಡುತ್ತ, " ಯಾವ ವಿಷಯದ ಬಗ್ಗೆ ಬಧಾಯಿ ಲಾಲಚಂದ ? " ಅಂದ.

" ನಾನು ಲಾಜೂ ಅತ್ತಿಗೆಯನ್ನು ನೋಡಿದ್ದೇನೆ."

ಸುಂದರಲಾಲನ ಕೈಯಿಂದ ಚಿಲುಮೆ ಕೆಳಗೆ ಬಿದ್ದಿತು. ಬೆಲ್ಲ ಬೆರೆತ ತಂಬಾಕು ಫರಶಿಯ ಮೇಲೆ ಚೆಲ್ಲಿತು. " ಎಲ್ಲಿ ನೋಡಿರುವೆ ? " ಎಂದು ಅವನು ಲಾಲಚಂದ ನನ್ನು ಭುಜಗಳಿಂದ ಹಿಡಿದುಕೊಳ್ಳುತ್ತ ಕೇಳಿದ. ಬೇಗ ಉತ್ತರ ಬರದಿದ್ದರಿಂದ ಪುನಃ ಕುಲಕಿದನು.

" ವಾಗ್ಹಾದ ಗಡಿಯಲ್ಲಿ."

ಸುಂದರಲಾಲ ಲಾಲಚಂದನನ್ನು ಬಿಟ್ಟನು. ಬಳಿಕ ಇಷ್ಟೇ ಹೇಳಿದ—" ಮತ್ತೆ ಯಾರೋ ಇದ್ದಿರಬಹುದು."

" ಇಲ್ಲ ಅಣ್ಣಾ, ಆಕೆ ಲಾಜೂನೆ ಇದ್ದಳು ಲಾಜೂ."

—ಲಾಲಚಂದ ವಿಶ್ವಾಸ ಕೊಡುತ್ತ ಅಂದನು.

" ನೀನು ಅವಳನ್ನು ಗುರುತಿಸುವಿಯಾ ? "

—ಸುಂದರಲಾಲ ಮತ್ತೆ ಮೀಠೆ ತಂಬಾಕನ್ನು ಫರಶಿಯ ಮೇಲಿಂದ ಎತ್ತಿಕೊಂಡು ಅಂಗೈಯಲ್ಲಿ ತಿಕ್ಕುತ್ತ ಕೇಳಿದ. ಹೀಗೆ ಮಾಡುತ್ತ ಅವನು ರಸಾಲೂನ ಹುಕ್ಕಾ ದಿಂದ ಚಿಲುಮೆಯನ್ನು ಎತ್ತಿಕೊಂಡು ಕೇಳಿದ, " ಅವಳ ಗುರುತು ಏನು ಹೇಳು ನೋಡೋಣ ? "

" ಒಂದು ಹಚ್ಚೆ ಗದ್ದದ ಮೇಲೆ ಇದೆ. ಇನ್ನೊಂದು ಗಲ್ಲದ ಮೇಲಿದೆ."

" ಹಾಂ, ಹಾಂ" ಎಂದು ಸುಂದರಲಾಲ ತಾನೇ ಹೇಳಿದ, " ಮೂರನೆಯದು ಹಣೆಯ ಮೇಲಿದೆ." ಈಗ ಯಾವುದಾದರೂ ಸಂದೇಹವು ಉಳಿಯುವದು ಅವನಿಗೆ ಇಷ್ಟವಿರಲಿಲ್ಲ. ಒಮ್ಮಿಂದೊಮ್ಮೆಲೆ ಅವನಿಗೆ ಲಾಜವಂತಿಯ ಚಿರಪರಿಚಿತ ದೇಹದ ಎಲ್ಲ ಹಚ್ಚೆಗಳು ನೆನಪಾದವು. ಅವುಗಳನ್ನು ಅವಳು ಬಾಲ್ಯದಲ್ಲಿ ತನ್ನ ದೇಹದ

ಮೇಲೆ ಚುಚ್ಚಿಸಿಕೊಂಡಿದ್ದಳು. ಮುಟ್ಟಲ ಮುರುಕಿ ಸಸ್ಯದ ಮೇಲೆ ಇರುವಂಥ ತಿಳಿಯಾದ ಹಸಿರು ಕಾಳುಗಳ ಹಾಗೆ ಕಾಣಿಸುತ್ತಿದ್ದವು. ಆ ಹಸಿರು ಕಾಳುಗಳ ಕಡೆ ಸನ್ನೆ ಮಾಡಿದರಾಯಿತು ಮುಟ್ಟಲು ಮುರುಕಿ ಸಸ್ಯವು ಮುದುಡ ಹತ್ತುತ್ತದೆ. ತದ್ರೂಪ ಅದೇ ರೀತಿ ಈ ಹಚ್ಚೆಗಳತ್ತ ಬೆರಳು ಮಾಡಿದರೆ ಲಾಜವಂತಿ ನಾಚುತ್ತಿದ್ದಳು ಮತ್ತು ಮೈಮರೆಯುತ್ತಿದ್ದಳು. ತನ್ನಷ್ಟಕ್ಕೆ ತಾನೆ ಮುದುರಿಕೊಳ್ಳುತ್ತಿದ್ದಳು— ಅವಳ ಎಲ್ಲ ರಹಸ್ಯಗಳು ಯಾರಿಗೊ ತಿಳಿದುಬಿಟ್ಟವೆ ಎನ್ನುವಂತೆ ಮತ್ತು ಯಾವುದೋ ಅಜ್ಞಾತ ಐಶ್ವರ್ಯವು ದೋಚಿಹೋಗಿದ್ದರಿಂದ ಅವಳು ಕಡು ಬಡವಿಯಾಗಿ ಬಿಟ್ಟದ್ದಾಳೇನೊ ಅನ್ನುವ ಹಾಗೆ. ಸುಂದರಲಾಲನ ಇಡೀ ದೇಹವು ಒಂದು ಅಜ್ಞಾತ ಭಯ, ಒಂದು ಅಜ್ಞಾತ ಪ್ರೇಮ ಮತ್ತು ಅದರ ಪವಿತ್ರ ಬೆಂಕಿಯಲ್ಲಿ ಜ್ವಲಿಸಹತ್ತಿತು. ಅವನು ಪುನಃ ಲಾಲಚಂದನನ್ನು ಹಿಡಿದುಕೊಂಡು ಕೇಳಿದ—

"ಲಾಜೂ ವಾಗ್ಹಾ ಹೇಗೆ ತಲುಪಿದಳು?"

"ಹಿಂದೂಸ್ತಾನ ಮತ್ತು ಪಾಕಿಸ್ತಾನಗಳ ನಡುವೆ ಹೆಂಗಸರ ವಿನಿಮಯ ನಡೆದಿತ್ತು"—ಲಾಲಚಂದ ಹೇಳಿದ.

"ಆಮೇಲೆ ಏನಾಯಿತು?"....ಸುಂದರಲಾಲ ತುದಿಗಾಲ ಮೇಲೆ ಕೂಡ್ರುತ್ತ ಕೇಳಿದ—"ಆಮೇಲೆ ಏನಾಯಿತು?"

ರಸಾಲೂ ಕೂಡ ತನ್ನ ಚಾರಪಾಯಿಯ ಮೇಲೆ ಎದ್ದು ಕುಳಿತ. ಮತ್ತು ತಂಬಾಕು ಸೇವನೆಯ ವಿಶಿಷ್ಟ ಕೆಮ್ಮನ್ನು ಕೆಮ್ಮುತ್ತ, "ನಿಜವಾಗಿಯೂ ಲಾಜವಂತಿ ಅತ್ತಿಗೆ ಬಂದಿದ್ದಾಳೇನು?" ಅಂದ.

ಲಾಲಚಂದ ತನ್ನ ಮಾತನ್ನು ಮುಂದುವರಿಸುತ್ತ ಹೇಳಿದ,—"ವಾಗ್ಹಾದಲ್ಲಿ ಹದಿನಾರು ಹೆಂಗಸರನ್ನು ಪಾಕಿಸ್ತಾನ ಕೊಟ್ಟಿತು. ಅದರ ಬದಲು ಹದಿನಾರು ಹೆಂಗಸರನ್ನು ಪಡೆಯಿತು. ಆದರೆ ಒಂದು ಜಗಳವೆದ್ದಿತು. ನಮ್ಮ ವಾಲಂಟಿಯರ್‌ಗಳು, ನೀವು ಕೊಟ್ಟ ಹೆಂಗಸರಲ್ಲಿ ಇಳಿಪ್ರಾಯದ, ಮುದುಕಿ ಮತ್ತು ನಿರುಪಯೋಗಿ ಹೆಂಗಸರೇ ಹೆಚ್ಚಿದ್ದಾರೆ ಎಂದು ಆಕ್ಷೇಪಿಸುತ್ತಿದ್ದರು. ಈ ತಕರಾರಿನಿಂದ ಜನರು ಸೇರಿದರು. ಆಗ ಆಚೆಯ ವಾಲಂಟಿಯರ್‌ಗಳು ಲಾಜೂ ಅತ್ತಿಗೆಯನ್ನು ತೋರಿಸುತ್ತ, "ನೀವು ಇವಳಿಗೆ ಮುದುಕಿ ಎನ್ನುವಿರಾ? ನೋಡಿರಿ, ನೋಡಿರಿ. ನೀವು ಕೊಟ್ಟಿರುವ ಹೆಂಗಸರಲ್ಲಿ ಒಬ್ಬಳಾದರೂ ಇವಳಿಗೆ ಸರಿಯಾಗಬಲ್ಲಳೆ?" ಅಂದರು. ಅಲ್ಲಿ ಲಾಜೂ ಅತ್ತಿಗೆ ಎಲ್ಲರ ಕಣ್ಣುಗಳೆದುರು ತನ್ನ ಹಚ್ಚೆಗಳನ್ನು ಮುಚ್ಚಿಕೊಳ್ಳುತ್ತಲಿದ್ದಳು.

ನಂತರ ಜಗಳ ಬೆಳೆಯಿತು. ಇಬ್ಬರೂ ತಮ್ಮ "ಮಾಲು" ಹಿಂದಿರುಗಿ ಪಡೆಯುವ ನಿಶ್ಚಯ ಮಾಡಿದರು. "ಲಾಜೂ, ಲಾಜೂ ಭಾಬಿ...." ಎಂದು ನಾನು ಗುಲ್ಲೆಬ್ಬಿಸಿದೆ. ಆದರೆ ನಮ್ಮ ಸೈನ್ಯದ ಸಿಪಾಯಿಗಳು ನಮ್ಮನ್ನೇ ಹೊಡೆದು ಓಡಿಸಿದರು.

ಲಾಲಚಂದ ತನ್ನ ಮೊಳಕೈಯನ್ನು ತೋರಿಸಹತ್ತಿದ. ಅದಕ್ಕೆ ಲಾಠಿಯ ಏಟು ಬಿದ್ದಿತ್ತು. ರಸಾಲೂ ಮತ್ತು ನೇಕಿರಾಮ ಮೌನವಾಗಿ ಕುಳಿತೇ ಇದ್ದರು ಮತ್ತು ಸುಂದರಲಾಲ ಎಲ್ಲೋ ದೂರ ನೋಡಹತ್ತಿದ. ಬಹುಶಃ, ಲಾಜೂ ಬಂದಳು ಕೂಡ ಆದರೆ ಬರಲಿಲ್ಲ ಎಂದು ಯೋಚಿಸಹತ್ತಿದ. ಸುಂದರಲಾಲನ ಆಕಾರದಿಂದಲೇ, ಅವನು ಬೀಕಾನೇರದ ಮರುಭೂಮಿಯನ್ನು ತುಳಿದು ಬಂದಿದ್ದಾನೆ ಮತ್ತು ಈಗ ಎಲ್ಲಿಯೋ ಗಿಡದ ನೆರಳಿನಲ್ಲಿ ನಾಲಿಗೆ ಚಾಚಿ ತೇಕುತ್ತಿದ್ದಾನೆ, "ನೀರು ಕೊಡಿ"—ಇಷ್ಟು ಕೂಡ ಅವನ ಬಾಯಿಯಿಂದ ಹೊರಡುತ್ತಿಲ್ಲ ಎಂದು ಗೊತ್ತಾಗುತ್ತಿತ್ತು. ವಿಭಜನೆಯ ಮೊದಲು ಮತ್ತು ವಿಭಜನೆಯ ನಂತರದ ಅತ್ಯಾಚಾರವು ಈವರೆಗೂ ಜಾರಿಯಲ್ಲಿದೆ; ಕೇವಲ ಅದರ ರೂಪವು ಬದಲಿಸಿದೆ ಎಂದು ಅವನಿಗೆ ಅನಿಸಹತ್ತಿತು. ಈಗ ಜನರಲ್ಲಿ ಮೊದಲಿನ ಹಾಗೆ ಸಂಕೋಚ ಕೂಡ ಉಳಿದಿರಲಿಲ್ಲ. ಯಾರನ್ನಾದರೂ, "ಸಾಂಭರವಾಲಾದಲ್ಲಿ ಲೆಹನಾಸಿಂಗ ಇರುತ್ತಿದ್ದನಲ್ಲ ಮತ್ತು ಅವನ ಅತ್ತಿಗೆ ಬಂತೂ...." ಎಂದು ಕೇಳಿದರೆ ತಕ್ಷಣ ಅವನು "ಸತ್ತು ಹೋದರು" ಎಂದು ಹೇಳಿಬಿಡುವನು. ಆ ನಂತರ ಸಾವು ಮತ್ತು ಅದರ ಅರ್ಥಗಳ ಬಗ್ಗೆ ಸಂಪೂರ್ಣವಾಗಿ ಪರಿಜ್ಞಾನವಿಲ್ಲದೆ, ಸಂಪೂರ್ಣವಾಗಿ ಶೂನ್ಯ ಮನಸ್ಕನಾಗಿ ಮುಂದಕ್ಕೆ ಹೋಗುವನು. ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ ಬಹಳ ಶಾಂತ ಮನಸ್ಸಿನಿಂದ ವ್ಯಾಪಾರಿಯು ಮನುಷ್ಯಕುಲದ ಮಾಲು, ಮನುಷ್ಯಕುಲದ ಮಾಂಸ ಮತ್ತು ಚರ್ಮಗಳ ವ್ಯಾಪಾರ ಮತ್ತು ವರ್ಗಾವರ್ಗಿ ಮಾಡಹತ್ತಿದರು. ದನಗಳನ್ನು ಕೊಳ್ಳುವವರು ಯಾವುದೋ ಒಂದು ಎಮ್ಮೆ ಅಥವಾ ಆಕಳಿನ ದವಡೆಯನ್ನು ಸರಿಸಿ ಹಲ್ಲುಗಳಿಂದ ಅದರ ವಯಸ್ಸಿನ ಅಂದಾಜು ಮಾಡುತ್ತಿದ್ದರು.

ಈಗ ಅವರು ಹರೆಯದ ಹೆಂಗಸಿನ ರೂಪ, ಅವಳ ಶೃಂಗಾರ, ಅವಳ ಆತ್ಮೀಯವಾದ ರಹಸ್ಯಗಳು, ಅವಳ ಹಚ್ಚೆಗಳನ್ನು ಸಾರ್ವಜನಿಕ ರಸ್ತೆಯಲ್ಲಿ ಪ್ರದರ್ಶಿಸಹತ್ತಿದರು. ಅತ್ಯಾಚಾರವು ಈಗ ವ್ಯಾಪಾರಿಗಳ ನರನರಗಳಲ್ಲಿ ಮನೆಮಾಡಿಕೊಂಡಿದೆ. ಮೊದಲು ಪೇಟೆಯಲ್ಲಿ ಮಾಲು ಮಾರಾಟವಾಗುತ್ತಿತ್ತು ಮತ್ತು ಧಾರಣೆಯನ್ನು ನಿರ್ಧರಿಸುವವರು ಕೈಗೂಡಿಸಿ ಅದರ ಮೇಲೊಂದು ಕರವಸ್ತ್ರವನ್ನು ಹಾಕಿಕೊಳ್ಳುತ್ತಿದ್ದರು ಹಾಗೂ ಕರವಸ್ತ್ರದ ಕೆಳಗೆ ಬೆರಳುಗಳ ಸಂಕೇತಗಳಿಂದಲೇ ವ್ಯಾಪಾರವಾಗುತ್ತಿದೆಯೆಂಬಂತೆ "ಗುಪ್ತಿ" ಮಾಡುತ್ತಿದ್ದರು. ಈಗ "ಗುಪ್ತಿ"ಯ ಕರವಸ್ತ್ರವು ಕೂಡ ದೂರವಾಗಿದ್ದು ಎದುರು ಎದುರಿನಲ್ಲೆ ವ್ಯವಹಾರಗಳಾಗುತ್ತಲಿದ್ದವು. ಜನರು ಪೇಟೆಯ ಗೌರವಗಳನ್ನು ಕೂಡ ಮರೆತಿದ್ದರು. ಈ ಎಲ್ಲ ಕೊಡುವದು-ತೆಗೆದುಕೊಳ್ಳುವದು—ಈ ಎಲ್ಲ ವ್ಯಾಪಾರವು, ಹೆಂಗಸರ ಸ್ವಾತಂತ್ರ್ಯದ ಕ್ರಯವಿಕ್ರಯದ ಕತೆಗಳನ್ನು ವರ್ಣಿಸುವ ಹಳೆಯ ಕಾಲದ ವೃತ್ತಾಂತದಂತೆ ಅನಿಸುತ್ತಿತ್ತು. ಉಜಬೆಕ್ (ಬರ್ಬರ)ನು ಅಸಂಖ್ಯ ನಗ್ನ ಹೆಂಗಸರ ಎದುರು ನಿಂತು ಅವರ ದೇಹ

ಗಳನ್ನು ದಿಟ್ಟಿಸಿ ದಿಟ್ಟಿಸಿ ನೋಡುತ್ತಿದ್ದಾನೆ. ಅವನು ಯಾವಳಾದರೂ ಹೆಂಗಸಿನ ದೇಹಕ್ಕೆ ಬೆರಳು ಹಚ್ಚಿದಾಗ ಅಲ್ಲಿ ಒಂದು ಗುಲಾಬಿಯಂಥ ಗುಳಿ ಬೀಳುತ್ತಿತ್ತು ಮತ್ತು ಅದರ ಸುತ್ತಲೂ ಒಂದು ಹಳದಿಯ ವೃತ್ತ, ಬಳಿಕ ಹಳದಿಗಳು ಮತ್ತು ಕೆಂಪು ಗಳು ಒಂದು ಮತ್ತೊಂದರ ಸ್ಥಳವನ್ನು ಪಡೆಯಲು ಓಡುತ್ತಿದ್ದವು....ಉಜಬೇಕ್ ಮುಂದಕ್ಕೆ ಹೋಗುತ್ತಿದ್ದ. ಸ್ವೀಕಾರಕ್ಕೆ ಅನರ್ಹರಾದ ಹೆಂಗಸರು ಸೋಲು ಒಪ್ಪಿ, ಲಜ್ಜಿತರಾಗಿ ಒಂದು ಕೈಯಿಂದ ಇಜಾರದ ಲಾಡಿಯನ್ನು ಹಿಡಿದುಕೊಂಡು ಇನ್ನೊಂದ ರಿಂದ ತಮ್ಮ ಮುಖವನ್ನು ಎಲ್ಲರ ಕಣ್ಣುಗಳಿಂದ ಮುಚ್ಚಿಕೊಳ್ಳುತ್ತ ಬಿಕ್ಕುತ್ತಿದ್ದರು....

ಸುಂದರಲಾಲ ಅಮೃತಸರದ ಗಡಿಗೆ ಹೋಗುವ ತಯಾರಿ ಮಾಡುತ್ತಿದ್ದಾಗ ಅವನಿಗೆ ಲಾಜೂ ಬರುವ ಸುದ್ದಿ ತಲುಪಿತು. ಒಮ್ಮೆಲೆ ಇಂಥ ಸುದ್ದಿಯು ಬಂದದ್ದ ರಿಂದ ಸುಂದರಲಾಲ ಗಾಬರಿಗೊಂಡ. ತಕ್ಷಣ ಅವನ ಒಂದು ಹೆಜ್ಜೆ ಬಾಗಿಲಿನತ್ತ ಮುಂದುವರಿಯಿತು. ಆದರೆ ಹಾಗೆಯೇ ಹಿಂದಕ್ಕೆ ಸರಿಯಿತು. ತಾನು ಮುನಿದು ಕೊಂಡು, ಕಮಿಟಿಯ ಎಲ್ಲ ಪ್ಲೆಕಾರ್ಡ್ ಮತ್ತು ಬಾವುಟಗಳನ್ನು ಹರವಿಕೊಂಡು ಕುಳಿತುಬಿಡಬೇಕು ಮತ್ತು ನಂತರ ಅಳಬೇಕು ಎಂದು ಅವನ ಮನಸ್ಸು ಬಯಸಿತ.. ಆದರೆ ಅಲ್ಲಿ ಭಾವನೆಗಳ ಈ ರೀತಿಯ ನೆರವು ಸಾಧ್ಯವಿರಲಿಲ್ಲ. ಅವನು ಪೌರುಷ ದಿಂದ ಅಂತರಂಗದ ಈ ಹೊಯ್ದಾಟವನ್ನು ಎದುರಿಸಿ ತನ್ನ ಹೆಜ್ಜೆಗಳನ್ನು ಅಳೆಯುತ್ತ ಚೌಕಿ ಕಲಾಂದ ಕಡೆ ಹೊರಟ. ಯಾಕೆಂದರೆ, ಆ ಸ್ಥಳದಲ್ಲಿಯೆ ಅಪಹರಿಸಲ್ಪಟ್ಟ ಹೆಂಗಸರ ಡೆಲಿವರಿ ಕೊಡಲಾಗುತ್ತಿತ್ತು.

ಈಗ ಲಾಜೂ ಅವನ ಎದುರಿಗೆ ನಿಂತಿದ್ದಳು. ಭಯಭೀತಳಾದ ಅವಳ ಶರೀರ ಕಂಪಿಸುತ್ತಿತ್ತು. ಅವಳೇ ಸುಂದರಲಾಲನನ್ನು ಅರ್ಥ ಮಾಡಿಕೊಂಡಿದ್ದಳು. ಅವಳ ಹೊರತು ಯಾರೂ ತಿಳಿದುಕೊಂಡಿರಲಿಲ್ಲ. ಅವನು ಮೊದಲೇ ಅವಳ ಜೊತೆ ಆ ರೀತಿ ವರ್ತಿಸುತ್ತಿದ್ದ. ಈಗ ಪರಪುರುಷನ ಜೊತೆ ಜೀವನದ ಕೆಲವು ದಿನಗಳನ್ನು ಅವಳು ಕಳೆದು ಬಂದಿರುವಾಗ ಏನು ಮಾಡುವನೊ ಏನೋ? ಸುಂದರಲಾಲ ಲಾಜೂಳ ಕಡೆ ನೋಡಿದ. ಅವಳು ಖಾಲಿಸ್ (ಶುದ್ಧ) ಇಸ್ಲಾಮಿ ಪದ್ಧತಿಯ ಕೆಂಪು ದುಪ್ಪಟೆ ಹೊದ್ದಿದ್ದಳು ಮತ್ತು ಅದನ್ನು ಎಡಕ್ಕೆ ಮಡಿಚಿ ವಿಶಿಷ್ಟ ರೀತಿಯಲ್ಲಿ ಹೊದ್ದುಕೊಂಡಿದ್ದಳು....ರೂಢಿಯಿಂದ ಕೇವಲ ರೂಢಿಯಿಂದ....ಇತರ ಹೆಂಗಸರ ಜೊತೆ ಬೆರೆಯುವ ಮತ್ತು ಕೊನೆಗೊಮ್ಮೆ ತನ್ನ ಬೇಟೆಗಾರನ ಜಾಲದಿಂದ ಓಡಿಹೋಗುವ ಅವಸರವಿತ್ತು ಮತ್ತು ಅವಳು ಸುಂದರಲಾಲನ ಬಗ್ಗೆ ಎಷ್ಟು ಹೆಚ್ಚು ಯೋಚಿಸು ತ್ತಿದ್ದಳೆಂದರೆ ಅವಳಿಗೆ ಬಟ್ಟೆ ಬದಲಿಸುವ ಅಥವಾ ದುಪ್ಪಟೆಯನ್ನು ಸರಿಯಾಗಿ ಹೊದೆದುಕೊಳ್ಳುವ ಲಕ್ಷ್ಯವೇ ಇರಲಿಲ್ಲ. ಹಿಂದೂ ಮತ್ತು ಮುಸಲ್ಮಾನರ ನಾಗರಿ

ಕತೆಯ ಮೂಲ ಅಂತರ—ಬಲಕ್ಕೆ ಮಡಚಿ ಹೊದ್ದದ್ದು ಮತ್ತು ಎಡಕ್ಕೆ ಮಡಚಿ ಹೊದ್ದದ್ದು ಇವುಗಳ ವಿಶ್ಲೇಷಣೆ ಮಾಡಲು ಅಸಮರ್ಥಳಾಗಿದ್ದಳು. ಈಗ ಅವಳು ಸುಂದರಲಾಲನ ಎದುರು ನಿಂತಿದ್ದಳು ಮತ್ತು ಒಂದು ಆಶೆ, ಮತ್ತು ಒಂದು ಭಯ—ಇವುಗಳ ಭಾವನೆಯಿಂದ ಕಂಪಿಸುತ್ತಿದ್ದಳು.

ಸುಂದರಲಾಲನಿಗೆ ಆಘಾತವಾದಂತಾಯಿತು. ಲಾಜವಂತಿಯ ಬಣ್ಣವು ಸ್ವಲ್ಪ ಎದ್ದು ಕಾಣಿಸುತ್ತಿತ್ತು ಮತ್ತು ಮೊದಲಿನ ಪ್ರಮಾಣಕ್ಕಿಂತಲೂ ಒಂದಿಷ್ಟು ಆರೋಗ್ಯ ವಂತಳಾಗಿ ಕಾಣಿಸುತ್ತಿದ್ದಳು. ಇಲ್ಲ ಅವಳು ದಪ್ಪವಾಗಿದ್ದಳು—ಸುಂದರಲಾಲನು ನೋಡಿದ, ಅವನು ಲಾಜೂಳ ಬಗ್ಗೆ ವಿಚಾರಿಸಿದ್ದೆಲ್ಲ ತಪ್ಪಾಗಿತ್ತು. ದುಃಖದಲ್ಲಿ ಕೊರಗಿದ ಬಳಿಕ ಲಾಜವಂತಿ ಪೂರ್ತಿ ಸಾಯುವಂತೆ ಆಗಿದ್ದಿರಬಹುದು ಮತ್ತು ಧ್ವನಿಯು ಅವಳ ಬಾಯಿಯಿಂದ ಹೊರಟರೂ ಹೊರಡದಂತೆ ಇದ್ದೀತು ಎಂದು ಅವನು ಯೋಚಿಸಿದ್ದ. ಅವಳು ಪಾಕಿಸ್ತಾನದಲ್ಲಿ ಸಂತೋಷದಿಂದ ಇದ್ದಳೆಂಬ ವಿಚಾರ ದಿಂದ ಅವನಿಗೆ ಆಘಾತವಾಯಿತು. ಆದರೆ ಅವನು ಸುಮ್ಮನಿರುವ ಆಣೆ ಮಾಡಿದ್ದ ರಿಂದ ಸುಮ್ಮನಿದ್ದ. ಹಾಗಾದರೆ, ಅಷ್ಟು ಸಂತೋಷದಿಂದ ಇದ್ದವಳು ಬಂದಳೇಕೆ? ಎಂಬುದು ಅವನಿಗೆ ಅರ್ಥವಾಗಲಿಲ್ಲ. ಬಹುಶಃ ಭಾರತ ಸರ್ಕಾರದ ಒತ್ತಾಯದ ಕಾರಣದಿಂದ ಅವಳು ತನ್ನ ಮನಸ್ಸಿನ ವಿರುದ್ಧ ಇಲ್ಲಿಗೆ ಬರಬೇಕಾಯಿತೇನೊ ಎಂದು ಅವನು ಯೋಚಿಸಿದನು. ಆದರೆ ಒಂದು ವಿಷಯ ಅವನಿಗೆ ಅರ್ಥವಾಗಲಿಲ್ಲ. ಲಾಜವಂತಿಯ ಅರಳಿದ ಮುಖವು ಹಳದಿ ಬಣ್ಣಕ್ಕೆ ತಿರುಗಿತ್ತು ಮತ್ತು ದುಃಖ ಕೇವಲ ದುಃಖದಿಂದ ಅವಳ ದೇಹದ ಮಾಂಸವು ಎಲುವುಗಳನ್ನು ಬಿಟ್ಟಿತ್ತು. ಅವಳು ದುಃಖದ ಹೆಚ್ಚಳದಿಂದ ದಪ್ಪವಾಗಿದ್ದಳು. ಮತ್ತು ಆರೋಗ್ಯವಂತೆಯಾಗಿ ಕಾಣಿಸುತ್ತಿದ್ದಳು. ಆದರೆ ಅದು, ಎರಡು ಹೆಜ್ಜೆ ನಡೆದ ಮೇಲೆ ಮನುಷ್ಯನು ಎದುಸಿರು ಬಿಡುವಂಥ ಆರೋಗ್ಯವಾಗಿತ್ತು.

ಅಪಹರಿಸಲ್ಪಟ್ಟವರ ಮುಖದಮೇಲೆ ಮೊದಲ ಸಲ ದೃಷ್ಟಿ ಬೀರಿದ್ದರ ಪರಿಣಾಮವು ಸ್ವಲ್ಪ ವಿಚಿತ್ರವಾಗಿ ಇತ್ತು. ಆದರೆ ಅವನು ಎಲ್ಲ ವಿಚಾರಗಳನ್ನು ಒಂದು ಖಚಿತ ವಾದ ಪೌರುಷದಿಂದ ಎದುರಿಸಿದ. ಇನ್ನೂ ಅನೇಕ ಜನರು ಉಪಸ್ಥಿತರಿದ್ದರು. ಯಾವನೊ ಅಂದನು—"ಮುಸಲ್ಮಾನ ಮುಟ್ಟಿದ ಹೆಂಗಸನ್ನು ನಾವು ತೆಗೆದುಕೊಳ್ಳು ವದಿಲ್ಲ." ಈ ಧ್ವನಿಯು ರಸಾಲೂ, ನೇಕಿರಾಮ ಮತ್ತು ಚೌಕಿ ಕಲಾಂದ ಮುದುಕ ಕಾರಕೂನರ ಜಯಕಾರಗಳಲ್ಲಿ ಅಡಗಿಹೋಯಿತು. ಈ ಎಲ್ಲ ಧ್ವನಿಗಳಿಂದ ಬೇರೆ ಯಾಗಿ ಕಾಲಕಾ ಪ್ರಸಾದನ ಒಡೆದ ಮತ್ತು ಚೀರುತ್ತಿರುವ ಧ್ವನಿಯು ಬರುತ್ತಿತ್ತು. ಅವನು ಕೆಮ್ಮುತ್ತಲು ಇದ್ದ ಮತ್ತು ಮಾತನಾಡುತ್ತಲೂ ಇದ್ದ. ಈ ದಿನ ಅವನು ಯಾವುದೋ ಹೊಸ ವೇದ, ಯಾವುದೋ ಹೊಸ ಪುರಾಣ ಮತ್ತು ಶಾಸ್ತ್ರ ಓದಿ ಕೊಂಡಿದ್ದ ಮತ್ತು ತನ್ನ ಈ ಗಳಿಕೆಯಲ್ಲಿ ಉಳಿದವರನ್ನು ಸಹ ಭಾಗಿಗಳನ್ನಾಗಿ

ಮಾಡಲು ಇಚ್ಛಿಸುತ್ತಿದ್ದಹಾಗೆ ತೋರುತ್ತಿತ್ತು....ಈ ಎಲ್ಲ ಜನರು ಮತ್ತು ಅವರ ಧ್ವನಿಗಳಲ್ಲಿ ಮುಳುಗಿದ್ದ ಲಾಜೂ ಹಾಗೂ ಸುಂದರಲಾಲರು ತಮ್ಮ ಡೇರೆಗೆ ಹೋಗುತ್ತಿದ್ದರು. ಸಾವಿರಾರು ವರ್ಷಗಳ ಮೊದಲಿನ ರಾಮಚಂದ್ರ ಮತ್ತು ಸೀತಾ ಯಾವದೋ ಬಹಳ ದೀರ್ಘವಾದ ನೈತಿಕ ವನವಾಸದ ನಂತರ ಅಯೋಧ್ಯೆಗೆ ಮರಳುತ್ತಿರುವಂತೆ ಭಾಸವಾಗುತ್ತಿತ್ತು. ಒಂದು ಕಡೆಯಂತು ಜನರು ಸಂತೋಷದ ಪ್ರಕಟನೆಯಲ್ಲಿ ದೀಪಮಾಲೆ ಮಾಡುತ್ತಲಿದ್ದರು ಹಾಗೂ ಮತ್ತೊಂದು ಕಡೆ ಇವರಿಗೆ ದೀರ್ಘವಾದ ಶಿಕ್ಷೆಯನ್ನು ಕೊಟ್ಟಿದ್ದಕ್ಕೆ ವ್ಯಸನಪಡುತ್ತಿದ್ದರು.

ಲಾಜವಂತಿ ಹಿಂದಿರುಗಿ ಬಂದ ನಂತರವು ಕೂಡ ಸುಂದರಲಾಲ ಅದೇ ಶೀಘ್ರ್ಣತೆಯಿಂದ "ಹೃದಯದಲ್ಲಿ ನೆಲೆಗೊಳಿಸಿರಿ" ಪ್ರೋಗ್ರಾಮ್ ಅನ್ನು ಮುಂದುವರಿಸಿದ. ಅವನು ಮಾತು ಮತ್ತು ಕೃತಿ, ಎರಡೂ ದೃಷ್ಟಿಯಿಂದ ಅದನ್ನು ನಿರ್ವಹಿಸಿದ. ಸುಂದರಲಾಲನ ಮಾತುಗಳಲ್ಲಿ ಅರ್ಥವಿಲ್ಲದ ಭಾವನೆಗಳನ್ನು ಕಾಣಿಸುತ್ತಿದ್ದ ಆ ಜನರು ತಮ್ಮ ತಪ್ಪನ್ನು ಒಪ್ಪಿಕೊಳ್ಳಲಾರಂಭಿಸಿದರು. ಸಾಮಾನ್ಯವಾಗಿ ಜನರ ಮನಸ್ಸಿನಲ್ಲಿ ಸಂತೋಷವಿತ್ತು ಮತ್ತು ಬಹಳ ಜನರ ಹೃದಯುದಲ್ಲಿ ದುಃಖವಿತ್ತು. ಮನೆ ನಂಬರ್ 414ರ ವಿಧವೆಯು ಅಲ್ಲದೆ ಮೊಹಲ್ಲಾ ಮಿಲಾಷತೂರ್‌ದ ಬಹಳಷ್ಟು ಹೆಂಗಸರು, ಸಮಾಜಸೇವಕ ಸುಂದರಲಾಲ ಬಾಬೂನ ಮನೆಗೆ ಬರಲು ಗಾಬರಿಗೊಳ್ಳುತ್ತಿದ್ದರು.

ಆದರೆ ಸುಂದರಲಾಲನಿಗೆ ಯಾರದೇ ನಿರ್ಲಕ್ಷ್ಯತೆ ಅಥವಾ ಅಸಹಾನುಭೂತಿಯ ಪರವೆ ಇರಲಿಲ್ಲ. ಅವನ ಹೃದಯ ರಾಣಿಯು ಬಂದುಬಿಟ್ಟಿದ್ದಳು. ಮತ್ತು ಅವನ ಹೃದಯದ ಬಯಲು ತುಂಬಿತ್ತು. ಸುಂದರಲಾಲ ಲಾಜೂಳ ಸುವರ್ಣ ಮೂರ್ತಿಯನ್ನು ತನ್ನ ಹೃದಯ ಮಂದಿರದಲ್ಲಿ ಸ್ಥಾಪಿತಗೊಳಿಸಿದ್ದ. ಮತ್ತು ಸ್ವತಃ ಬಾಗಿಲಲ್ಲಿ ಕುಳಿತುಕೊಂಡು ಅದರ ರಕ್ಷಣೆ ಮಾಡಹತ್ತಿದ್ದ. ಮೊದಲು ಭಯದಿಂದ ಸಂಕೋಚಪಡುತ್ತಿದ್ದ ಲಾಜೂ, ಸುಂದರಲಾಲನ ಅನಪೇಕ್ಷಿತ ಮೃದುವಾದ ವರ್ತನೆಯನ್ನು ಕಂಡು ಮೆಲ್ಲಮೆಲ್ಲಗೆ ಅರಳಹತ್ತಿದಳು.

ಸುಂದರಲಾಲ, ಲಾಜವಂತಿಯನ್ನು ಈಗ ಲಾಜೂ ಎಂದು ಕರೆಯುತ್ತಿದ್ದಿಲ್ಲ. ಅವನು ಅವಳನ್ನು "ದೇವಿ" ಎಂದು ಕರೆಯುತ್ತಿದ್ದ. ಮತ್ತು ಲಾಜೂ ಒಂದು ಅಜ್ಞಾತ ಸಂತೋಷದಿಂದ ಹುಚ್ಚಿಯಂತಾಗುತ್ತಿದ್ದಳು. ಸುಂದರಲಾಲನಿಗೆ ತನ್ನ ಜೀವನದಲ್ಲಿ ನಡೆದುಹೋದ ಘಟನೆಗಳನ್ನು ಹೇಳಬೇಕು ಮತ್ತು ಹೇಳುತ್ತ ಹೇಳುತ್ತ ತನ್ನ ಅಪರಾಧಗಳೆಲ್ಲ ತೊಳೆದುಹೋಗುವಷ್ಟು ಅತ್ತುಬಿಡಬೇಕು ಎಂದು ಅವಳು ಬಯಸುತ್ತಿದ್ದಳು. ಆದರೆ ಸುಂದರಲಾಲ ಲಾಜೂಳ ಆ ಮಾತುಗಳನ್ನು ಕೇಳುವದರಿಂದ ತಪ್ಪಿಸಿಕೊಳ್ಳುತ್ತಿದ್ದನು. ಲಾಜೂ ತನ್ನ ಅರಳುವಿಕೆಯಲ್ಲಿಯು ಒಂದು ಬಗೆಯಿಂದ ಮುದುಡಿಕೊಂಡು ಇರುತ್ತಿದ್ದಳು. ನಿಸ್ಸಂದೇಹವಾಗಿ, ಸುಂದರಲಾಲ

ಮಲಗಿಕೊಂಡಾಗ ಅವನನ್ನು ನೋಡುತ್ತಿರುತ್ತಿದ್ದಳು. ಆದರೆ ಅವಳ ಈ ಕಳವು ಹೊರಬಿದ್ದಾಗ, ಸುಂದರಲಾಲ ಅದರ ಕಾರಣವನ್ನು ಕೇಳಿದಾಗ, ಅವಳು "ಇಲ್ಲ", "ಹಾಗೆಯೆ", "ಉಂ ಹೂ"ಗಳ ಹೊರತು ಮತ್ತೇನೂ ಹೇಳುತ್ತಿದ್ದಿಲ್ಲ. ಇಡೀ ದಿನ ದಣಿದು ಸೋತ ಸುಂದರಲಾಲ ಪುನಃ ತೂಕಡಿಸುತ್ತಿದ್ದ....

ಆದರೆ ಪ್ರಾರಂಭದಲ್ಲಿ ಒಂದು ಸಲ ಸುಂದರಲಾಲ ಲಾಜವಂತಿಯು ಕಳೆದ ಕರಾಳ ದಿನಗಳ ಬಗ್ಗೆ ಕೇವಲ ಇಷ್ಟೇ ಕೇಳಿದ್ದ.

"ಅವನು ಯಾರಿದ್ದ?"

ಲಾಜವಂತಿ ತನ್ನ ಕಣ್ಣುಗಳನ್ನು ಕೆಳಗೆ ಮಾಡುತ್ತ, "ಜುಮ್ಮಾ" ಅಂದಳು. ನಂತರ ತನ್ನ ದೃಷ್ಟಿಯನ್ನು ಸುಂದರಲಾಲನ ಮುಖದಮೇಲೆ ಬೀರುತ್ತ ಏನೋ ಹೇಳ ಬಯಸಿದ್ದಳು. ಆದರೆ ಸುಂದರಲಾಲ ಒಂದು ವಿಚಿತ್ರ ದೃಷ್ಟಿಯಿಂದ ಲಾಜವಂತಿಯನ್ನು ನೋಡುತ್ತಲಿದ್ದ ಮತ್ತು ಅವಳ ಕೂದಲನ್ನು ನೇವರಿಸುತ್ತಿದ್ದ. ಲಾಜವಂತಿ ಮತ್ತೆ ಕಣ್ಣುಗಳನ್ನು ಕೆಳಗೆ ಮಾಡಿದಳು. ಸುಂದರಲಾಲ ಕೇಳಿದ :

"ಸರಿಯಾಗಿ ವರ್ತಿಸುತ್ತಿದ್ದನೆ?"

"ಹಾಂ."

"ಹೊಡೆಯುತ್ತಿದ್ದಿಲ್ಲ ತಾನೆ?"

ಲಾಜವಂತಿ ತನ್ನ ತಲೆಯನ್ನು ಸುಂದರಲಾಲನ ಎದೆಯ ಮೇಲೆ ಸರಿಸಿಕೊಳ್ಳುತ್ತ "ಇಲ್ಲ" ಅಂದಳು. ಬಳಿಕ, "ಅವನು ನನ್ನನ್ನು ಹೊಡೆಯುತ್ತಿದ್ದಿಲ್ಲ. ಆದರೆ ನನಗೆ ಅವನ ಬಗ್ಗೆ ಹೆಚ್ಚು ಭಯವೆನಿಸುತ್ತಿತ್ತು. ನೀವು ನನ್ನನ್ನು ಹೊಡೆಯುತ್ತಿದ್ದಿರಿ. ಆದರೆ ನನಗೆ ನಿಮ್ಮ ಬಗ್ಗೆ ಭಯವಾಗುತ್ತಿದ್ದಿಲ್ಲ. ಇನ್ನುಮೇಲಾದರೂ ಹೊಡೆಯುವದಿಲ್ಲ ಅಲ್ಲವೆ?" ಅಂದಳು.

ಸುಂದರಲಾಲನ ಕಣ್ಣುಗಳಲ್ಲಿ ನೀರು ಉಕ್ಕಿತು. ಅವನು ಅಧಿಕ ಲಜ್ಜೆ ಮತ್ತು ಅತ್ಯಂತ ದುಃಖದಿಂದ, "ಇಲ್ಲ ದೇವಿ! ಇನ್ನುಮೇಲೆ ಹೊಡೆಯುವದಿಲ್ಲ...." ಅಂದನು.

"ದೇವಿ!"—ಲಾಜವಂತಿ ಯೋಚಿಸಿದಳು ಮತ್ತು ಅವಳು ಕೂಡ ಕಣ್ಣೀರು ಸುರಿಸಹತ್ತಿದಳು.

ಆ ಬಳಿಕ ಲಾಜವಂತಿ ಎಲ್ಲವನ್ನೂ ಹೇಳಿಬಿಡಬೇಕೆಂದು ಬಯಸಿದಳು. ಆದರೆ ಸುಂದರಲಾಲ, "ಗತಿಸಿಹೋದ ವಿಷಯುಗಳು ಹೋಗಲಿ ಬಿಡು! ಅದರಲ್ಲಿ ನಿನ್ನದೇನು ಅಪರಾಧ? ಅದರಲ್ಲಿ ಅಪರಾಧವಿರುವದು ನಮ್ಮ ಸಮಾಜದ್ದು. ನಿನ್ನಂಥ ದೇವಿಯರಿಗೆ ತನ್ನಲ್ಲಿ ಗೌರವದ ಸ್ಥಾನವನ್ನು ಕೊಡದೇ ಇರುವ ಸಮಾಜದ್ದು. ಅದರಿಂದ ನಿನಗೆ ಯಾವ ಹಾನಿಯೂ ಆಗುತ್ತಿಲ್ಲ. ಆದರೆ ಸಮಾಜಕ್ಕೆ ನಷ್ಟವಾಗುತ್ತಿದೆ"—ಅಂದನು.

ಲಾಜವಂತಿಯ ಮನದ ಬಯಕೆ ಮನದಲ್ಲಿಯೇ ಉಳಿಯಿತು. ಅವಳು ಎಲ್ಲ ವಿಷಯಗಳನ್ನು ಹೇಳಲು ಶಕ್ಯವಾಗಲಿಲ್ಲ. ಸುಮ್ಮನೆ ಮುದುಡಿಕೊಂಡು ಬಿದ್ದು ಕೊಂಡಿರುತ್ತಿದ್ದಳು. ವಿಭಜನೆಯ ನಂತರ ದೇವಿಯ ದೇಹವಾಗಿದ್ದ ಆದರೆ ಲಾಜವಂತಿ ಯದಲ್ಲದ ತನ್ನ ದೇಹದತ್ತ ನೋಡುತ್ತಿದ್ದಳು. ಅವಳು ಸಂತೋಷದಿಂದ ಇದ್ದಳು, ಬಹಳ ಸಂತೋಷದಿಂದ ಇದ್ದಳು. ಆದರೆ ಇಂಥ ಸಂತೋಷದಲ್ಲಿ ಮುಳುಗಿ ಹೋಗಿದ್ದರೂ ಒಂದು ಸಂಶಯವಿತ್ತು, ಸಂದೇಹವಿತ್ತು. ಅವಳು ಮಲಗಿದ್ದ ಹಾಗೆಯೆ ಧಕ್ಕನೆ ಎದ್ದು ಕುಳಿತುಕೊಳ್ಳುವಳು, ಕೊನೆಗೊಳ್ಳುತ್ತಿರುವ ಸಂತೋಷದ ಕ್ಷಣಗಳಲ್ಲಿ ಯಾವುದೋ ಸಂದೇಹವನ್ನು ಕಂಡು ಏಕಾಏಕಿ ಆದರ ಕಡೆ ಲಕ್ಷ್ಯವಹಿಸುವ ಹಾಗೆ.

ಬಹಳ ದಿನಗಳು ಕಳೆದ ಮೇಲೆ ಸಂತೋಷದ ಸ್ಥಾನವನ್ನು ಪೂರ್ತಿಯಾಗಿ ಸಂಶಯವು ತೆಗೆದುಕೊಂಡಿತು. ಸುಂದರಲಾಲ ಪುನಃ ಅದೇ ಹಳೆಯ ದುರ್ವರ್ತನೆ ಯನ್ನು ಪ್ರಾರಂಭಿಸಿದ್ದನೆಂದಲ್ಲ ಆದರೆ ಅವನು ಲಾಜೂಳ ಜೊತೆ ಒಳ್ಳೆಯ ರೀತಿ ಯಲ್ಲಿ ನಡೆದುಕೊಳ್ಳುತ್ತಿದ್ದರಿಂದ. ಇಂಥ ವರ್ತನೆಯನ್ನು ಲಾಜೂ ಅಪೇಕ್ಷಿಸಿರಲಿಲ್ಲ. ಅವಳು ಸುಂದರಲಾಲನ ಅದೇ ಹಳೆಯ ಲಾಜೂ—ಗಜ್ಜರಿಗಾಗಿ ಕಾದಾಡಿ ಮೂಲಂಗಿಗೆ ಒಪ್ಪಿಕೊಳ್ಳುವ ಲಾಜೂ—ಆಗ ಬಯಸುತ್ತಿದ್ದಳು. ಆದರೆ ಈಗ ಜಗಳದ ಪ್ರಶ್ನೆಯೇ ಇರಲಿಲ್ಲ. ಲಾಜವಂತಿ, ಕೈ ತಾಕಿಸಿದರೆ ಒಡೆದುಹೋಗುವಂಥ ಕಾಜಿನ ಯಾವುದೋ ವಸ್ತು ಇರುವಳು ಎಂದು ಅವಳಿಗೆ ಸುಂದರಲಾಲ ಮನಗಾಣಿ ಸಿದ್ದನು. ಲಾಜವಂತಿ ಕನ್ನಡಿಯಲ್ಲಿ ತನ್ನ ನಖಶಿಖಾಂತವನ್ನು ನೋಡಿ ಕೊನೆಗೆ ಒಂದು ನಿರ್ಣಯಕ್ಕೆ ಬಂದಳು—ತಾನು ಏನೆಲ್ಲ ಆಗಬಹುದು. ಆದರೆ ಲಾಜೂ ಮಾತ್ರ ಆಗಲು ಸಾಧ್ಯವಿಲ್ಲ. ಅವಳು ನೆಲೆಗೊಂಡಳು, ಆದರೆ ಹಾಳಾದಳು.... ಸುಂದರಲಾಲನ ಬಳಿ ಅವಳ ಕಣ್ಣೀರು ನೋಡಲು ಕಣ್ಣು ಇರಲಿಲ್ಲ, ನಿಟ್ಟುಸಿರು ಕೇಳಲು ಕಿವಿ ಇರಲಿಲ್ಲ!....ಪ್ರಭಾತ ಫೇರಿಗಳು ಹೊರಡುತ್ತಲಿದ್ದವು. ಮಿಲಾಷ ತೂರ್ ಮೊಹಲ್ಲಾದ ಸುಧಾರಕ, ರಸಾಲೂ ಮತ್ತು ನೇಕಿರಾಮರ ಜೊತೆ ಕೂಡಿ ಕೊಂಡು ಅದೇ ಧ್ವನಿಯಲ್ಲಿ ಹಾಡುತ್ತಲಿದ್ದ :

" ಹಥ್ ಲಾಈಯೋಂ ಕುಮ್ಲಾನ ನೀ....ಲಾಜವಂತೀ ದೇ ಬೂಟೇ"

# ಬಬ್ಬುಲ್

ದರಬಾರಿಲಾಲ ಸಾಯಂಕಾಲ ಮನೆಯಲ್ಲಿಯೆ ಕುಳಿತು ಸೀತೆಯ ಜೊತೆ ನಿರುದ್ಯೋಗಿಯಾಗಿದ್ದ. ಓರ್ವ ವ್ಯಕ್ತಿಯು ನೋಡಲಿಕ್ಕೆ ಇವನಿಂಗ್ ನ್ಯೂಜ ಪತ್ರಿಕೆಯನ್ನೊ ಅಥವಾ ಗಾಲಿಬ್‌ನ ಗಜಲಗಳನ್ನೊ ಓದುತ್ತಿರುವನು, ಆದರೆ ಮನಸ್ಸಿನಲ್ಲಿ ಯಾರೋ ಸೀತೆಯ ಜೊತೆ ತನ್ಮಯನಾಗಿರುವನು. ಇಂಥ ಸ್ಥಿತಿಗೆ ಯಾರದೋ ಜೊತೆ ನಿರುದ್ಯೋಗಿಯಾಗುವುದು ಎಂದೆನ್ನುವರು.

ಸರಿಯಾಗಿ ಆರು ಗಂಟೆಗೆ ಆರೋರಾ ಸಿನೆಮಾದ ಕಡೆಯಿಂದ ಬರುವ ರಸ್ತೆಯ ತಿರುವಿನಲ್ಲಿ ನಿಂತಿರುತ್ತೇನೆ. ನಾಶೀಪುಡಿ ಬಣ್ಣದ ಸೀರೆಯನ್ನು ಉಟ್ಟಿರುತ್ತೇನೆಂದು ಸೀತೆ ಹೇಳಿದ್ದಳು....ಆದರೆ—

ದರಬಾರಿ ಕಿಂಗ್ಸ್ ಸರ್ಕಲ್‌ನಲ್ಲಿ ಇರುತ್ತಿದ್ದ. ಈಗ ಅದರ ಹೆಸರು ಮಹೇಶ್ವರಿ ಉದ್ಯಾನ ಎಂದಾಗಿದೆ. ಅವನು ಲೌಡ್ ಸ್ಪೀಕರ್‌ಗಳ ಒಂದು ಸಂಸ್ಥೆಯಲ್ಲಿ ಕೆಲಸಕ್ಕಿದ್ದ. ಆದಾಯ ಅಂಥ ವಿಶೇಷವೇನೂ ಇರಲಿಲ್ಲ. ಆದರೆ ಹಣದ ಅಡಚಣೆಯೂ ಇರಲಿಲ್ಲ. ತಂದೆ ಗಿರಿಧಾರಿಲಾಲ ಮೆಹತಾ ಒಂದೇ ದಿನದ ಫಾರವರ್ಡ ಟ್ರೇಡಿಂಗ್‌ದಲ್ಲಿ ಮೂರು ನಾಲ್ಕು ಲಕ್ಷ ರೂಪಾಯಿ ಮಾಡಿಕೊಂಡಿದ್ದರು. ಆಮೇಲೆ ಇದ್ದಕ್ಕಿದ್ದ ಹಾಗೆ ಹಿಂದಕ್ಕೆ ಸರಿದುಕೊಂಡವರು ಇಂದಿಗೂ ಅದೇ ರೀತಿ ಉಳಿದಿರುವರು. ಈಗಲೂ ಕಾಯಿನ್ ಎಕ್ಸಚೆಂಜಿನಲ್ಲಿ ಮೆಹತಾ ಸಾಹೇಬರ ಸಂಗಡಿಗರು ಅವರು ಬೆಣ್ಣೆಯಲ್ಲಿನ ಕೂದಲ ಹಾಗೆ ಜಾರಿಕೊಂಡ ಬಗ್ಗೆ ಬೈದರೆ ಅವರು ಉತ್ತರ ರೂಪದಲ್ಲಿ ನಕ್ಕುಬಿಡುವರು—ಇಂಥ ನಗೆಯನ್ನು ಓರ್ವ ವ್ಯಕ್ತಿ ಮೂರು ನಾಲ್ಕು ಲಕ್ಷ ರೂಪಾಯಿ ಒಳಗೆ ಹಾಕಿಕೊಂಡೇ ನಗಬಲ್ಲ.

ಆಮೇಲೆ ಅಣ್ಣ ಬಿಹಾರಿಲಾಲನ ಮದುವೆ ಮಾರವಾಡಿಗಳ ಮನೆಯಲ್ಲಾಗಿತ್ತು. ಅವರು ಇಪ್ಪತ್ತು ಸೇರಿನ ಬಂಗಾರದ ಕಡೆಗಳನ್ನು ತಮ್ಮ ಮಗಳ ಕೈಗಳಲ್ಲಿ ಹಾಕಿ ದರಬಾರಿಯ ಅತ್ತಿಗೆಯನ್ನಾಗಿ ಮಾಡಿದ್ದರು. ಒಂದು ವರ್ಷದ ನಂತರ ದರಬಾರಿಯ ಅಕ್ಕ ಸತವಂತಿ ನಾರ್ ಓರ್ವ ಲಕ್ಷಾಧೀಶ ಇಸ್ಮಾಯಲಿ ಸಾಲಹೆ ಮಹಮದ್‌ನ ಜೊತೆ ಓಡಿಹೋಗಿ ನಿಕಾಹ್ ಮಾಡಿಕೊಂಡಿದ್ದಳು. ಓಣಿಯಲ್ಲಿ, ಮೊಹಲ್ಲಾದಲ್ಲಿ, ಇಡೀ ಪಟ್ಟಣದಲ್ಲಿ ಕೋಲಾಹಲವೆದ್ದಿತು. ಎಷ್ಟೋ ವರ್ಷಗಳವರೆಗೆ ಮೆಹತಾ ಸಾಹೇಬರು ತಮ್ಮ ಮಗಳು ಮತ್ತು ಅಳಿಯ ಇಬ್ಬರನ್ನೂ "ಪ್ರೇಮ ಕುಟೀರ"—ತಮ್ಮ ಮನೆಯಲ್ಲಿ ನುಸುಳಗೊಡಲಿಲ್ಲ. ಕೊನೆಗೆ ರಾಜಿ ಆಯಿತು. ಹುಡುಗಿ

ವಿಧ್ಯುಕ್ತವಾಗಿ ಇಸ್ಲಾಂ ಧರ್ಮವನ್ನು ಸ್ವೀಕರಿಸಿದ್ದಾಳೆ ಮತ್ತು ಈಗ ಅವಳ ಹೆಸರು ಕನೀಜ ಫಾತಿಮಾ ಎಂದಿದೆ—ಹೀಗೆ ಹುಡುಗನ ಸಂಬಂಧಿಕರು ಹೇಳುತ್ತಿದ್ದರು. ಮೆಹತಾ ಸಾಹೇಬರು ಹುಡುಗನನ್ನು ಶುದ್ಧಗೊಳಿಸಿದಮೇಲೆ ಅವನಿಗೆ ಸರದಾರಿ ಮೋಹನ ಎಂಬ ಹೆಸರಿಟ್ಟಿದೆ ಎಂದು ಅನ್ನುತ್ತಿದ್ದರು. ಆದರೆ ಸರದಾರಿ ಮೋಹನ ಅಥವಾ ಸಾಲಹೆ ಮಹಮದ್ ಯಾವಾಗಲೂ ತನ್ನ ಹೆಸರನ್ನು ಎಸ್. ಎಮ್. ನವಾಬ ಎಂದೇ ಬರೆಯುತ್ತಿದ್ದ. ಹುಡುಗನ ಈ ಅನುಚಿತ ಕೃತಿಯ ಬಗ್ಗೆ ಸಿಟ್ಟು ತೀರಿಸಿಕೊಳ್ಳಲು ಬೇರೆ ಮಾರ್ಗವಿಲ್ಲದ್ದರಿಂದ ದರಬಾರಿಲಾಲನ ಅನುಯಾಯಿಗಳು ಸತವಂತಿ ನಾರಳ ಪತಿ ಅಥವಾ ಶೋಹರ್‌ನನ್ನು ಕಂಡಾಗಲೆಲ್ಲ "ಕೆಂವ್ ಬೆ ಸಾಲಾ" ಎಂದೇ ಅನ್ನುತ್ತಿದ್ದರು.

ಇಂದು ಸಾಲಹೆ ಅಥವಾ ಸರದಾರಿ ಮತ್ತು ಸತವಂತಿ ಇಬ್ಬರೂ ಮನೆಯಲ್ಲಿಯೇ ಇದ್ದರು. ಅವರ ಇಬ್ಬರು ಮಕ್ಕಳು ಅವರ ಜೊತೆಯಿದ್ದವು. ಈ ಸಲ ಬಿಹಾರಿ ಮತ್ತು ಗುಣವತಿ ಅತ್ತಿಗೆ ಇಬ್ಬರೂ ಸೇರಿ ದರಬಾರಿಯ ಮದುವೆಯ ವಿಷಯವನ್ನು ತೆಗೆದರು. ಹೆಂಗಸರು ಆದರ್ಶ ಗಂಡಸರ ಮತ್ತು ಗಂಡಸರು ಆದರ್ಶ ಹೆಂಗಸರ ಬಗ್ಗೆ ಮಾತಾಡುತ್ತ ಮಾತಾಡುತ್ತ ಜಗಳವಾಡತೊಡಗಿದರು. ದರಬಾರಿ ವರಂಡಾದಲ್ಲಿ ಕುಳಿತು, ತನ್ನ ಬಗ್ಗೆ ನಡೆಯುತ್ತಿದ್ದ ಮಾತುಕತೆ ಕೇಳುತ್ತಿದ್ದವನು ಒಮ್ಮೆಲೆ ನುಗ್ಗಿ ಕಿಡಕಿಯೊಳಗಿಂದ ತನ್ನ ಬಾಯಿಯ ಲೌಡ್ ಸ್ಪೀಕರನ್ನು ಒಳಸೇರಿಸಿ, "ನಾನು ದರಬಾರಿಲಾಲ ತಂದೆ ಗಿರಿಧಾರಿಲಾಲ ಮೆಹತಾ ಸಾಕಿನ್ ಮುಂಬಯಿ, ಎಂದಿಗೂ ಎಂದಿಗೂ ಮದುವೆ ಮಾಡಿಕೊಳ್ಳುವುದಿಲ್ಲ" ಎಂದು ಕೂಗಿದ. ಧ್ವನಿಗೆ ಎಲ್ಲರೂ ಬೆಚ್ಚಿಬಿದ್ದರು. ಹೆಂಗಸರ ಮತ್ತು ಮಕ್ಕಳ ಜೀವವೇ ಹೋದಂತಾಯಿತು.

ದರಬಾರಿಲಾಲ ಮರಳಿ ತನ್ನ ಸ್ಥಾನಕ್ಕೆ ಬಂದು ಇವಸಿಂಗ್ ನ್ಯೂಜ್‌ದ ಪುಟಗಳನ್ನು ತಿರುವಹತ್ತಿದ. ನಂತರ ಆರೋರಾ ಸಿನೆಮಾದ ಕಡೆಯಿಂದ ಮನೆಯತ್ತ ಹೊರಳುವ ರಸ್ತೆಯಲ್ಲಿ ನೋಡಹತ್ತಿದ. ಅಲ್ಲಿ ಅವನು ನಾಶೀ ಬಣ್ಣದ ಸೀರೆಯನ್ನು ಹುಡುಕುತ್ತಿದ್ದ.

ಒಳಗೆ ಎಲ್ಲರೂ ನಗುತ್ತಿದ್ದರು. ತಾಯಿಯೂ ಬಂದು ಅವರನ್ನು ಸೇರಿಕೊಂಡಳು. ದರಬಾರಿ ಮನೆಗೆಲ್ಲ ಸೊಗಸುಗಾರನಾಗಿದ್ದ. ಅವನು ಕೂದಲಿಗೆ ಹೇರ್ ಟಾನಿಕ್ ಹಚ್ಚುವ ರೀತಿ, ಶ್ರಮಪಟ್ಟು ಅದನ್ನು ಬಾಚಿ ಒಪ್ಪ ಮಾಡುತ್ತಿದ್ದ ಬಗೆ, ಕತ್ತರಿಯನ್ನು ತೆಗೆದುಕೊಂಡು ಕನ್ನಡಿ ಎದುರು ನಿಂತು ತಾಸೆರಡು ತಾಸು ಮೀಸೆಯ ತುದಿಯನ್ನು ತಿದ್ದುವವದರಲ್ಲಿ ಹಾಳು ಮಾಡುತ್ತಿದ್ದ ಪರಿ—ಇವೆಲ್ಲ ಸೊಗಸುಗಾರತನದ ಲಕ್ಷಣಗಳೇ ಆಗಿದ್ದವು. ನಿಜವಾದ ವಿಷಯವೇನಂದರೆ, ಮದುವೆಯ ಪೂರ್ವದ ವಯಸ್ಸಿನ ಈ ಅವಧಿಯಲ್ಲಿ ಹುಡುಗರು ಹುಡುಗಿಯರಂಥ ಮತ್ತು ಹುಡುಗಿಯರು ಹುಡುಗರಂಥ ಚೇಷ್ಟೆಗಳನ್ನು ಮಾಡತೊಡಗುತ್ತಾರೆ, ಮುಂದೆ ಮದುವೆಯಾಗುತ್ತದೆ.

ಬಳಿಕ ಪರಸ್ಪರ ಸಂಧಿಸುತ್ತಾರೆ. ಅನಂತರ ಎಲ್ಲಿಯೋ ಹೋಗಿ ತಮ್ಮ ತಮ್ಮ ಕೆಲಸಗಳನ್ನು ನಿರ್ವಹಿಸುತ್ತಾರೆ....ದರಬಾರಿಯ ಈ ಚೇಷ್ಟೆಗಳನ್ನು ನೋಡಿ ಮನೆಯ ಹೆಂಗಸರು, "ಇವೆಲ್ಲ ಮದುವೆಯ ಲಕ್ಷಣಗಳು" ಎಂದೆನ್ನುತ್ತಿದ್ದರೆ ಗಂಡಸರು "ಹಾಳಾಗುವ ಲಕ್ಷಣಗಳು" ಎಂದು ಹೇಳುತ್ತಿದ್ದರು.

ವರಂಡಾದಲ್ಲಿ ಜಾಳಿಗೆ ಹೊಂದಿಸುವ ಕೆಲಸವನ್ನು ಸೀಖ್ ತರಖಾನ್ ಇಂದೇ ಶುರು ಮಾಡಿದ್ದ. ದಿನವೆಲ್ಲ ಅವನು ಒಂದು ಆಕಾರವಿಲ್ಲದ, ಅಡ್ಡಾತಿಡ್ಡಿ ಮತ್ತು ಮಟ್ಟವಿಲ್ಲದ ಕಟ್ಟಿಗೆಯನ್ನು ಕೆತ್ತುತ್ತಿದ್ದ ಮತ್ತು ಉಜ್ಜುಗೊರಡು ಹಿಡಿದು ಸಮ ಮಾಡುತ್ತಿದ್ದ. ಆದ್ದರಿಂದ ಮನೆಯ ತುಂಬೆಲ್ಲ ಹರಡಿದ್ದ ಕಟ್ಟಿಗೆಯ ಸೆಕ್ಕೆ ಮತ್ತು ಕೆಳುಚಿಕ್ಕೆಗಳು ಕಾಲಿಗೆ ಅಂಟಿಕೊಳ್ಳುತ್ತಿದ್ದವು....ಅದೇ ಸಮಯಕ್ಕೆ ಎದುರಿಗಿನ ಡಾನ್ ಬಾಸ್ಕೊ ಸ್ಕೂಲಿನಲ್ಲಿ ಗಂಟೆ ಬಾರಿಸಿತು. ಬಿಳಿ ಅಂಗಿ ಮತ್ತು ನೀಲಿ ನಿಕ್ಕರ ಧರಿಸಿದ ಹುಡುಗರು ಒಬ್ಬರ ಮೇಲೊಬ್ಬರು ಬೀಳುತ್ತ ಏಳುತ್ತ ಹಾಸ್ಟಲದಿಂದ ಹೊರಬಿದ್ದರು. ಬಹುಶಃ ಅವರು ಸಾಯಂಕಾಲದ ಪ್ರಾರ್ಥನೆಗೆಂದು ಚರ್ಚಿಗೆ ಹೋಗುತ್ತಿದ್ದರೇನೊ. ಸ್ಕೂಲ ಗ್ರೌಂಡ್ ಮೇಲೆ ಉದ್ದವಾದ ನಿಲುವಂಗಿಯನ್ನು ತೊಟ್ಟು ಈವರೆಗೂ ಹುಡುಗರಿಗೆ ಫುಟ್‌ಬಾಲ್ ಆಡಿಸುತ್ತಿದ್ದ ಫಾದರ್ ಸೀಟಿ ಊದಿ ಆಟವನ್ನು ನಿಲ್ಲಿಸಿದ. ಆದರೆ ಸೀತೆ ಬರಲಿಲ್ಲ.

ಆರೋರಾ ಸಿನೆಮಾ ಕಡೆಯಿಂದ ಇತ್ತ ಬರುವ ರಸ್ತೆಯ ಮೇಲೆ ಕೆಲವು ಆಕಳು ದಣಿದು ಮಲಗಿ ಮೆಲಕು ಹಾಕುತ್ತಿದ್ದವು. ಬಳಿಕ ಆ ದಿಕ್ಕಿನಿಂದ ಒಂದು ಕಾರು ಒಳಗಡೆಗೆ ತಿರುಗಿ ಬಲಗಡೆಯ ಬಿಲ್ಡಿಂಗ್ ಹಿಂದೆ ನಿಂತಿತು. ಆಮೇಲೆ ಒಬ್ಬ ದಪ್ಪ ಹೆಂಗಸು ಬರುವುದು ಕಾಣಿಸಿತು. ಅವಳ ಹಿಂದೆ ಮದ್ರಾಸ ಉಡುಪಿ ಹೋಟಲ್ ಮಾಲಕ ರಾಮಸ್ವಾಮಿ ಬರುತ್ತಿದ್ದ. ಅವನೂ ದಪ್ಪಗಿದ್ದ. ಆ ದಪ್ಪ ಹೆಂಗಸು ಮತ್ತು ಉಡುಪಿ ಹೋಟಲ್ ಮಾಲಕ ರಾಮಸ್ವಾಮಿ ಒಬ್ಬರಿಗೊಬ್ಬರು ಸಾಕಷ್ಟು ಅಂತರದಲ್ಲಿದ್ದರೂ ಕೂಡ ಇಲ್ಲಿ—ದರಬಾರಿಯಲ್ಲಿಂದ ಅವರು ಒಬ್ಬರು ಮತ್ತೊಬ್ಬರನ್ನು ದೂಕುತ್ತ ದೂಡುತ್ತ ಯಾವುದೋ ವಿಚಿತ್ರವಾದ ಆಟವನ್ನು ಆಡುತ್ತ ಬರುತ್ತಿರುವಂತೆ ಕಾಣಿಸುತ್ತಿತ್ತು.

ಸೀತೆಯ ಬದಲು ಮಿಸ್ರಿ ಬಂದಳು. ಎಂದಿನಂತೆ ಇಂದು ಕೂಡ ಅವಳ ಉಡಿಯಲ್ಲಿ ಗಂಡು ಮಗುವಿತ್ತು—ಬಬ್ಬುಲ್.

ಮಗು ಆರೋಗ್ಯವಾಗಿದ್ದರೆ ಅದು ಜಗತ್ತಿನಲ್ಲಿಯೇ ಅತ್ಯಂತ ಸುಂದರವಾದ ವಸ್ತುವಾಗಿರುತ್ತದೆ. ಬಬ್ಬುಲ್ ಅದೇ ರೀತಿಯ ಮಗುವಾಗಿತ್ತು—ಸದೃಢವಾದ ಮಗು, ಗುಂಡುಗುಂಡಗೆ, ಮೆತ್ತಮೆತ್ತಗೆ—ಸ್ಪಾಂಜ್‌ನಿಂದ ಮಾಡಿದ ಹಾಗೆ. ಅವನಿಗೆ ಎಷ್ಟೋ ಹಲ್ಲು ಬಂದಿದ್ದವು. ಆದರೆ ಕೆಳಗಿನ ಎರಡು ಹಲ್ಲುಗಳು ಮಾತ್ರ ಉಳಿದವಕ್ಕಿಂತ ದೊಡ್ಡವಿದ್ದವು. ತುಂಟ, ನಕ್ಕನೆಂದರೆ, ವಾಲ್ಟ್ ಡಿಸ್ನಿಯ ಮೊಲದ ಹಾಗೆ ಕಾಣುತ್ತಿದ್ದ.

ಬಬ್ಬುಲ್ ನಗುವುದನ್ನು ನೋಡಿ ಎಲ್ಲೆ ಮೀರಿ ನಗದೇ ಇದ್ದವರನ್ನು ಈವರೆಗೂ ಎಲ್ಲಿಯೂ ಕಂಡಿಲ್ಲ.

"ಬಬ್ಬುಲ್" ಎಂದು ಕೂಗಿ ದರಬಾರಿ ತನ್ನ ಕೈಗಳನ್ನು ಮಗುವಿನ ಕಡೆ ಚಾಚಿದ.

ಮಗುವಿನ ಮುಖದ ಮೇಲೆ ಮಂದಹಾಸವು ನಲಿದಾಡಿದ ಹಾಗೆ ಸೂರ್ಯನ ಕಿರಣಗಳು ಕೂಡ ಯಾವುದೇ ಹೂದೋಟದ ಮೇಲೆಯೂ ನಲಿಯಲು ಸಾಧ್ಯವಿಲ್ಲೆಂದು ನನಗೆ ಅನಿಸುತ್ತದೆ. ಮುಗುಳ್ನಗುತ್ತಿದ್ದ ಬಬ್ಬುಲ್ ದರಬಾರಿಯತ್ತ ನೋಡಿದ. ಒಳಗಿನ ಯಾವುದೊ ಅಸಹಾಯಕ ಪ್ರವೃತ್ತಿಯಿಂದ ತಟ್ಟನೆ ಅವನು ದರಬಾರಿಯ ಬಳಿ ಹೋಗಲು ಕೈಕಾಲು ಕುಣಿಸುತ್ತ ಕೊಸರಿಕೊಳ್ಳತೊಡಗಿದ. ಈಗ ಅವನ ತಾಯಿ ಮಿಸ್ರಿಗೆ ಅವನನ್ನು ಹಿಡಿದುಕೊಂಡಿರುವದಾಗಲಿಲ್ಲ.

"ನಿಲ್ಲು" ಎಂದು ಹೇಳಿ ದರಬಾರಿ ಚುರಮುರಿ ತರಲು ಒಳಗೆ ಧಾವಿಸಿದ. ಅವನು ಈಗ ಸೀತೆ ಬರುವಳು, ಹೋಗುವಳು ಎಂಬುದನ್ನು ಕೂಡ ಮರೆತುಬಿಟ್ಟ. ಬಬ್ಬುಲ್‌ನ ಮುಖದ ಮೇಲೆ ಒಂದು ನಿರ್ವ್ಯಾಜ ನಿರಾಶೆಯ ತೆರೆ ತೇಲಿಹೋಯಿತು. ಕ್ಷಣದಲ್ಲಿ, ಅವನಿಗೆ ಈ ಜಗತ್ತೆಲ್ಲ ಬರೀ ಮೋಸ ಎಂದು ಹೇಳುತ್ತಿರುವ ಹಾಗೆ ಅನಿಸಹತ್ತಿತು. ನಂತರ ದರಬಾರಿ ಬರುವದನ್ನು ಕಂಡು, ತಾನು ಹೇಗೆ ನಿರಾಶೆಗೊಳ್ಳುತ್ತಿದ್ದನೋ ಅದೇ ರೀತಿಯಲ್ಲಿ ಅವನು ಸಂತೋಷಪಟ್ಟನು.

ಬಬ್ಬುಲ್‌ನ ತಾಯಿ ಮಿಸ್ರಿ ಓರ್ವ ಭಿಕ್ಷುಕಿ. ಗರಜಿನಿಂದ ಅವಳು ಬಬ್ಬುಲ್‌ನಿಗೆ ಚಿಕ್ಕವಯಸ್ಸಿನಲ್ಲಿಯೇ ಭಿಕ್ಷೆ ಬೇಡುವ ಕಲೆಯನ್ನು ಕಲಿಸಿದ್ದಳು. ಬಾಜಾರದಲ್ಲಿ ಹೋಗುತ್ತ ಹೋಗುತ್ತ ಅವಳು "ಬಾಬೂ" ತರಹದ ಯಾರಾದರೊಬ್ಬರ ಬಳಿ ನಿಲ್ಲುತ್ತಿದ್ದಳು. ಬಬ್ಬುಲ್ ಓರ್ವ ರಿಹರ್ಸಲ್ ಮಾಡಿದ ಎಕ್ಟರನ ಹಾಗೆ ಆ ವ್ಯಕ್ತಿಯ ಅಂಗಿಯನ್ನೋ, ಧೋತ್ರವನ್ನೋ ಎಳೆಯಲಾರಂಭಿಸಿ ತನಗೆ ಅವಶ್ಯಕತೆ ಇದ್ದ ವಸ್ತುವಿನತ್ತ ಸನ್ನೆ ಮಾಡತೊಡಗುವನು. ಆ ವ್ಯಕ್ತಿ ನೋಡುತ್ತಿದ್ದ, ಕಣ್ಣು ತಪ್ಪಿಸುತ್ತಿದ್ದ, ಪುನಃ ನೋಡುತ್ತಿದ್ದ, ಕೊನೆಗೆ ಯಾವ ಉಪಾಯವನ್ನೂ ಕಾಣದೆ ಆ ವಸ್ತುವನ್ನು ಕೊಂಡು ಬಬ್ಬುಲ್‌ನ ಕೈಯಲ್ಲಿ ಇಡುತ್ತಿದ್ದ. 'ಬಾಬೂ' ಹೋದ ಮೇಲೆ, ಮಿಸ್ರಿ ಬಬ್ಬುಲ್‌ನ ಕೈಯಲ್ಲಿಂದ ಆ ವಸ್ತುವನ್ನು ತೆಗೆದುಕೊಂಡು ಅಂಗಡಿಕಾರನಿಗೆ ಅದನ್ನು ಹಿಂದಿರುಗಿಸಿ ಹಣ ಪಡೆಯುತ್ತಿದ್ದಳು. ಬಬ್ಬುಲ್ ಅಳುತ್ತಿದ್ದ, ಚೀರುತ್ತಿದ್ದ.

ಆದರೆ ದರಬಾರಿಯ ಜೊತೆ ಬಬ್ಬುಲ್ ಹಾಗೂ ಮಿಸ್ರಿ—ಇವರ ಸಂಬಂಧವು ಆ ರೀತಿಯದಾಗಿರಲಿಲ್ಲ. ಅವಳು ಚುರಮುರಿಯನ್ನು ತೆಗೆದುಕೊಂಡು ಹೋಗಿ ಮಾರುವ ಪ್ರಶ್ನೆಯೇ ಇರಲಿಲ್ಲ. ಚುರಮುರಿಯ ಜೊತೆಗೆ—ಮಿಸ್ರಿಗೆ ನೇರವಾಗಿ ಎರಡಾಣೆ, ನಾಲ್ಕಾಣೆ ಸಿಗುತ್ತಿತ್ತು. ಅವುಗಳ ಬಗ್ಗೆ ಬಬ್ಬುಲ್‌ನಿಗೆ ಯಾವ ರೀತಿಯ ಆಸಕ್ತಿ ಇರಲಿಲ್ಲ. ಅವನಿಗೆ ಬೇಕಾದದ್ದು ತನ್ನ ಚುರಮುರಿ. ಅದನ್ನಂತು ತಾಯಿ ಕಸಿದುಕೊಂಡು ಅಂಗಡಿಯವನಿಗೆ ಮಾರುತ್ತಿರಲಿಲ್ಲ. ಚುರಮುರಿಯನ್ನು ಅವನು

ನೇರವಾಗಿ ಬಾಯಿಯಲ್ಲಿ ಹಾಕಿಕೊಂಡು ಹಲ್ಲುಗಳಲ್ಲಿ ನುರಿಸುತ್ತ ಕೈಕಾಲು ಕುಣಿಸಿ ಕುಣಿಸಿ ಪುಟಿದು ಪುಟಿದು ತನ್ನ ಸಂತೋಷವನ್ನು ಪ್ರದರ್ಶಿಸುತ್ತಿದ್ದ. ಇಂದು ದರಬಾರಿಯು ಬಬ್ಬುಲ್‌ನನ್ನು ತನ್ನ ಉಡಿಯಲ್ಲಿ ಎತ್ತಿಕೊಂಡಾಗ ಅವನು ಒಂದೇ ಸಲಕ್ಕೆ ಚುರಮುರಿಯನ್ನು ಮುಷ್ಟಿಯಲ್ಲಿ ತುಂಬಿಕೊಂಡು ತಾಯಿ ಬಳಿ ಮರಳಿ ಹೋಗಲು ತವಕಿಸಿದ. ದರಬಾರಿ ಬಬ್ಬುಲ್‌ನನ್ನು ಬಹಳ ತಡೆದು ಪ್ರೀತಿಸಲು ಪ್ರಯತ್ನಿಸಿದ. ಆದರೆ ಅವನು ಉಂ ಉಂ ಮಾಡುತ್ತ ತಾಯಿಯ ಕಡೆ ಓಡಿದ.

ದರಬಾರಿ, "ಕಮೀನೆ (ಕ್ಷುದ್ರ)....ಸಾಲೆ" ಎಂದನು.

ಒಳಗಿನಿಂದ ಸಾಲಹೆ ಅಥವಾ ಸರದಾರಿಯ ಧ್ವನಿ ಹೊರಟಿತು,—"ಹುಜೂರ್, ಏನು ಅಪ್ಪಣೆ?"

"ತಮ್ಮನ್ನು ಕೂಗಲಿಲ್ಲ ಫೈಜ್ ಗಂಜೂರ್ (ಕಲ್ಯಾಣದ ಖಜಾನೆ)"—ದರಬಾರಿ ಒಳಗಡೆ ಮುಖ ತಿರುವುತ್ತ ಉತ್ತರಿಸಿದ. ಬಳಿಕ ಬಬ್ಬುಲ್‌ನ ಅಂದವಾದ ಮುದ್ದಾದ ಗಲ್ಲಗಳಿಗೆ ಮೆಲ್ಲನೆ ಏಟು ಹಾಕಿ ಅವನನ್ನು ಮಿಸ್ರಿಗೆ ಹಿಂದಿರುಗಿಸುತ್ತ, "ಇಷ್ಟು ಸ್ವಾರ್ಥಿ? ಸಲಾಂ ಆದರೂ ಇಲ್ಲ, ಹರಕೆಯಾದರೂ ಇಲ್ಲ; ಶುಕ್ರಿಯಾವಾದರೂ ಇಲ್ಲ, ಧನ್ಯವಾದವೂ ಇಲ್ಲ....ಕೆಲಸ ಮುಗಿಯಿತು. ಇನ್ನು ನೀನಾರೊ? ನಾನಾರೊ?" ಎಂದನು.

ಫುಟ್‌ಪಾತ್ ಜೀವನವು ಲಜ್ಜೆ ನಾಚಿಕೆಗಳನ್ನು ಅವಳಿಗೆ ಒಂದು ಔಪಚಾರಿಕ ಕಾರ್ಯವನ್ನಾಗಿ ಮಾಡಿತ್ತು. ಆದ್ದರಿಂದ ಅವಳು ಯಾವ ಸಂಕೇತವೂ ಇಲ್ಲದೆ, "ಇವೆಲ್ಲ ಹೀಗೆಯೇ ಇರುತ್ತವೆ ಬಾಬೂಜಿ" ಎಂದು ಬಬ್ಬುಲ್‌ನನ್ನು ತನ್ನ ಎದೆಯಲ್ಲಿ ಅಡಗಿಸಿಕೊಳ್ಳುತ್ತ ಅಲ್ಲಿಯೇ ನಿಂತಳು, ತನ್ನ ಎರಡಾಣೆ ಇಲ್ಲವೆ ನಾಲ್ಕಾಣೆಯ ನಿರೀಕ್ಷೆ ಮಾಡುತ್ತ.

ಬಬ್ಬುಲ್ ಯಥಾಪ್ರಕಾರ "ಅ" ಇಲ್ಲದಿದ್ದರೆ "ಆ" ನಗ್ನನಾಗಿದ್ದ. ಯಾಕೆಂದರೆ, ಅವನ ಮೈಮೇಲೆ ಟೊಂಕದಲ್ಲಿ ಮಾತ್ರ ಕಪ್ಪು ಉಡುದಾರವಿತ್ತು. ಅದರಲ್ಲಿ ಒಂದು ತಾಯಿತವಿತ್ತು. ಈ "ಉಡಿಗೆ"ಯಲ್ಲೆ ಖುಶಿಯಾಗಿದ್ದ ಅವನು, ತಾಯಿಯ ಬಳಿ ತಲುಪುತ್ತಲೇ ತನ್ನ ಮುಖವನ್ನು ಮಿಸ್ರಿಯ ದೊಡ್ಡ ದೊಡ್ಡ ಮೊಲೆಗಳಲ್ಲಿ ಮುಚ್ಚಿಕೊಂಡನು. ವಿಶ್ವದ ಎಲ್ಲ ಮಕ್ಕಳಿಗೂ ಇದೊಂದು ಸುಭದ್ರವಾದ ಸ್ಥಾನವಾಗಿದೆ. ಅಲ್ಲಿಗೆ ಒಮ್ಮೆ ತಲುಪಿದರೆ ಸಾಕು ತಾನೊಂದು ಬಹಳ ದೊಡ್ಡ ಕಿಲ್ಲೆಯನ್ನು ಸೇರಿದಂತೆ ಅವನಿಗೆ ಅನಿಸುತ್ತಿತ್ತು. ಅಲ್ಲಿ ಅವನಿಗೆ ಯಾವ ವೈರಿಯಾಗಲಿ ಅಥವಾ ಗೆಳೆಯನಾಗಲಿ ಯಾವುದೇ ರೀತಿಯ ಹಾನಿ ಮಾಡಲು ಸಾಧ್ಯವಿರಲಿಲ್ಲ. ಬಳಿಕ ಅವನು ಕಿಲ್ಲೆಯ ಬುರುಜಗಳಮೇಲೆ ಕುಳಿತು ನಯನ ಬಾಣಗಳನ್ನು ಹೆದೆಗೇರಿಸಿ ಎದುರು ದಾಳಿ ಮಾಡಬಂದ ಸೈನ್ಯದ ಹಾಜರಿ ತೆಗೆದುಕೊಳ್ಳುವನು. ದಾಳಿ ಮಾಡುವ ಮೊದಲೇ ಅದರ ಕೈಕಾಲು ತಣ್ಣಗಾಗುತ್ತಿದ್ದವು....ಅನಂತರ ತಟ್ಟನೆ ಯಾವುದೋ

ರೆಕ್ಕೆಯುಳ್ಳ ಕಲ್ಪನೆಯ ಕುದುರೆಯನ್ನೇರಿ ಅವನು ಯಾವುದೋ ರಾಜವೀರನ ಹಾಗೆ ರಭಸದಿಂದ ಮುನ್ನುಗ್ಗುವನು....ಮುಂದಕ್ಕೆ ಇನ್ನೂ ಮುಂದಕ್ಕೆ ಮೇಲಕ್ಕೆ ಇನ್ನೂ ಮೇಲಕ್ಕೆ....ಮತ್ತು ಗಮ್ಯ ಸ್ಥಾನಗಳು ಕೈವಶವಾಗುತ್ತ ಅವನ ಕಾಲ ಕೆಳಗೆ ಬೀಳುತ್ತಿದ್ದವು.

ಮಿಸ್ರಿ ಗಟ್ಟಿಮುಟ್ಟಾದ ಆದರೆ ಕಪ್ಪು ಬಣ್ಣದ ಹರೆಯದ ಹೆಣ್ಣು. ಆದರೆ ಬಬ್ಬುಲ್ ಕೆಂಪಗೆ ಬೆಳ್ಳಗೆ ಇದ್ದ. ಇದು ಹೇಗಾಯಿತು? ದರಬಾರಿ ಎಂದೂ ಕೇಳಲಿಲ್ಲ. ಈ ಬಡ ಹೆಂಗಸರು ಎಷ್ಟು ಅಸಹಾಯಕರಿರುವರೆಂಬುದು ಅವನಿಗೆ ತಿಳಿದಿತ್ತು. ರಸ್ತೆಯ ಅಂಚಿನಲ್ಲಿ ಬಿದ್ದಿದ್ದ ಮಿಸ್ರಿಗೆ ಯಾವನೋ ಬಾಬೂ ಎಂಟಾಣೆ ಒಂದು ರೂಪಾಯಿಯ ಬದಲು ಬಬ್ಬುಲ್‌ನನ್ನ ಕೊಟ್ಟು ಹೋಗಿರಬಹುದು. ಅವನು ತಮ್ಮ ವೀರ್ಯಕ್ಕೆ ಅಪಮಾನ ಮತ್ತು ಜೀವನದ ಅವಹೇಳನ ಮಾಡುವವರ ಪೈಕಿ ಒಬ್ಬನಿದ್ದಿರಬೇಕು. ಅದು ಹುಡುಗನಾದರೆ ಅವನು—ತಮ್ಮದೇ ರಕ್ತ, ತಮ್ಮದೇ ಮಾಂಸ-ಚರ್ಮ ಹೊತ್ತ ತಮ್ಮ ಅಜ್ಜನ ಮರಿಮಗ, ತಮ್ಮ ಮಗ—ಜೀವನದುದ್ದಕ್ಕೂ ಭಿಕ್ಷೆ ಬೇಡುತ್ತ ಅಲೆಯುವನು, ಹೆಂಗಸರ ದಲಾಲಿ ಮಾಡುವನು; ಹುಡುಗಿಯಾದರೆ ಅವಳು ತಮ್ಮ ಪೂರ್ವಜರ ಮಾನ ಮರ್ಯಾದೆಯನ್ನು ಮಾರುವಳು, ಧಂದೆ ಮಾಡುವಳು—ಎಂಬ ವಿಷಯದ ಪರವೆಯೂ ಅವರಿಗೆ ಇರುವದಿಲ್ಲ....

"ಆದರೂ ತಮ್ಮ ಬಳಿ ಮಾತ್ರ ಬಂದೇ ಬರುವನು ಬಾಬೂಜಿ, ಇಲ್ಲದಿದ್ದರೆ ಈ ಹಲಕಟ್ ಮತ್ತೆ ಯಾವ ಗಂಡಿನ ಹತ್ತಿರವೂ ಹೋಗುವದಿಲ್ಲ"—ಮಿಸ್ರಿ ಹೇಳಿದಳು.

"ಯಾಕೆ? ಯಾಕೆ?"—ದರಬಾರಿ ಆಶ್ಚರ್ಯದಿಂದ ಕೇಳಿದ.

"ಗೊತ್ತಿಲ್ಲ" ಎಂದಳು ಮಿಸ್ರಿ. ಬಳಿಕ ಒಲವಿನಿಂದ ಬಬ್ಬುಲ್‌ನತ್ತ ನೋಡುತ್ತ—

"ಹಾಂ, ಹೆಂಗಸರ ಬಳಿ ಹೋಗುವನು" ಎಂದಳು.

ದರಬಾರಿ ಮನಃಪೂರ್ತಿ ನಕ್ಕು, "ಬದ್ಮಾಷ್....ಈಗಿಂದಲೇ ಹೆಂಗಸರ ಚಟಹತ್ತಿದೆ. ದೊಡ್ಡವನಾಗಿ ಏನು ಮಾಡುತ್ತಾನೋ?" ಎಂದ.

ಮಿಸ್ರಿ ಬಹಳ ನಾಚಿದಳು ಮತ್ತು ಬಹಳಷ್ಟು ಮರುಕ ಮಾಡಿದಳು. ಅವಳಿಗೆ ತಾನು ತನ್ನ ಉಡಿಯಲ್ಲಿ, ಅಗಣಿತ ಗೋಪಿಯರನ್ನುಳ್ಳ ಆ ಕೃಷ್ಣನನ್ನು ಆಡಿಸುತ್ತಿದ್ದ ಹಾಗೆ ಅನಿಸಿತು. ಮಿಸ್ರಿಯ ಕಲ್ಪನೆಯಲ್ಲಿದ್ದ ಗೋಪಿಯರಲ್ಲಿ ಸ್ವತಃ ತಾನೂ ಒಬ್ಬಳಿದ್ದಳು. ಬಬ್ಬುಲ್ ಮಿಸ್ರಿಯ ಪ್ರಿಯಕರನಿದ್ದ ಹಾಗೆ. ಮಿಸ್ರಿಯ ಸ್ವಂತದ ಪ್ರತಿಗಳು ಅವನ ಸುತ್ತಮುತ್ತ ಕುಣಿಯುತ್ತಲಿವೆ. ಇದೀಗ ಬಬ್ಬುಲ್ ಒಬ್ಬ ಗೋಪಿಯ ಜೊತೆಗಿದ್ದ, ನಂತರ ಮತ್ತೊಬ್ಬಳ ಜೊತೆ........

ಮಿಸ್ರಿಬಾಯಿಯ ಜೊತೆ ಒಂದಿಷ್ಟು ಸಲಿಗೆ ಇದ್ದ ದರಬಾರಿ ಅವಳನ್ನೇ ಗಾಬರಿಯಿಂದ ಕೇಳಿಬಿಟ್ಟ,—"ಇವನ ತಂದೆ ಏನು ಕೆಲಸ ಮಾಡುತ್ತಾನೆ, ಮಿಸ್ರಿ?"

"ಇವನ ತಂದೆ?"....ಮಿಸ್ರಿಗೆ ಯೋಚಿಸಲು ಸಮಯ ಹಿಡಿಯಿತೇನೋ "ಇಲ್ಲ"

*

ಎಂದಳು.

ಈ ಉತ್ತರದಲ್ಲಿ ಅನೇಕ ಮಾತುಗಳಿದ್ದವು. ಅವನು ಸತ್ತಿರುವನು ಎಂಬ ಮಾತು ಇತ್ತು; ಸತ್ತಿದ್ದಕ್ಕಿಂತಲೂ ಕೀಳನಾಗಿರುವನು ಎಂಬುದು ಇತ್ತು. ಮಿಸ್ರಿ ಎತ್ತಲೋ ದೂರ ನೋಡತೊಡಗಿದಳು. ಬಳಿಕ ದರಬಾರಿಯ ನೋಟದಲ್ಲಿನ ಹಳಹಳಿಯನ್ನು ದೂರಮಾಡುತ್ತ, ಹೇಳಿದಳು,—"ಒಂದು ಸಲ ಅವನು ಮತ್ತೆ ಬಂದಿದ್ದ.... ಅವನೇ ಎಂದು ನನಗನಿಸಿತು....ಆದರೆ ನನಗೆ ಏನು ಹೇಳಲು ಶಕ್ಯವಿತ್ತು ಬಾಬೂಜಿ? ....ನಾನಂತು ಅವನನ್ನು ಮನಸ್ಸು ತುಂಬುವಷ್ಟು ನೋಡಿಯೇ ಇದ್ದಿಲ್ಲ....ಅಲ್ಲಿಯವರೆಗೆ ನಾನು ಈ ಮಗುವಿಗೆ ಹೆಸರೇ ಇಟ್ಟಿದ್ದಿಲ್ಲ. ಒಮ್ಮೆ ಗೋಪೂ, ಇನ್ನೊಮ್ಮೆ ನಾರಯಾ ಎಂದು ಕರೆಯುತ್ತಿದ್ದೆ. ಆಗಲೇ ಅವನು ಇವನ ಕೈಯಲ್ಲಿ ಐದರ ಒಂದು ನೋಟು ಇಟ್ಟು ಬಹಳ ಪ್ರೀತಿಯಿಂದ 'ಬಬ್ಬುಲ್' ಎಂದು ಕರೆದ. ಅಂದಿನಿಂದ ನಾನು ಇವನಿಗೆ ಬಬ್ಬುಲ್ ಎಂದು ಕರೆಯುತ್ತಿರುವೆ...."

ಮಿಸ್ರಿ ಮತ್ತೆ ಯೋಚಿಸತೊಡಗಿದಳು. ನಂತರ "ಅವನು ಇವನ ತಂದೆಯಾಗಿರದಿದ್ದರೆ ಐದು ರೂಪಾಯಿ ಕೊಡುತ್ತಿದ್ದನೆ?" ಎಂದಳು.

ದರಬಾರಿಯು ಯೋಚಿಸತೊಡಗಿದ. ಬಳಿಕ ಅವಳು, "ಬಹುಶಃ ಅವನು ಬಬ್ಬುಲ್‌ನ ತಂದೆ ಇದ್ದಿರಲಿಕ್ಕಿಲ್ಲ. ಹಾಗಿದ್ದರೆ ಐದರ ನೋಟೇ ಈ ಮಗುವಿನ ತಂದೆಯಾಗಿರಲಿ" ಎಂದಳು.

ಇಂದು, ದರಬಾರಿ ಎಂಟಾಣೆಯನ್ನು ಮಿಸ್ರಿಯ ಕೈಮೇಲೆ ಇಡದೆ ಬಬ್ಬುಲ್‌ನ ಕೈಯಲ್ಲಿಟ್ಟ. ಬಬ್ಬುಲ್ ನಾಣ್ಯವನ್ನು ತೆಗೆದುಕೊಂಡು ಜೋರಾಗಿ ಕೈ ತಿರುವಿ ಅದನ್ನು ಎಸೆದ.

ಎಂಟಾಣೆಯು ಇನ್ನೇನು ರಸ್ತೆಯ ಮ್ಯಾನ್ ಹೋಲಿನಲ್ಲಿ ಬೀಳುವದರಲ್ಲಿತ್ತು. ಒಂದು ಒಣಗಿದ ನಿರರ್ಥಕ ಮಾವಿನ ಸಿಪ್ಪೆ, ಮಿಸ್ರಿಯ ಭಾಗ್ಯವನ್ನು ತಡೆದ ಹಾಗೆ ಅದನ್ನು ತಡೆಯಿತು. ಮಿಸ್ರಿ ಬಾಗಿ ನಾಣ್ಯವನ್ನು ಎತ್ತಿಕೊಂಡು ಬಬ್ಬುಲ್‌ನನ್ನು ತಬ್ಬಿಕೊಂಡು, "ಲುಚ್ಚಾ" ಎಂದಳು. ನಂತರ ಬಬ್ಬುಲ್‌ನನ್ನು ಚುಂಬಿಸುತ್ತ ಅವಳು ದರಬಾರಿಗೆ, "ನಿಜ ಹೇಳಬೇಕೆಂದರೆ, ಬಾಬೂಜಿ, ನನ್ನ ಗಂಡ ಇವನೇ" ಎಂದಳು.

"ನಿನ್ನ ಗಂಡ?"

"ಹಾಂ" ಎಂದು ತನ್ನ ತಲೆಯ ಮೇಲಿಂದ ಸೆರಗನ್ನು ಜಗ್ಗುತ್ತಿದ್ದ ಬಬ್ಬುಲ್‌ನನ್ನು ತಡೆಯುತ್ತ ಮಿಸ್ರಿ, "ಇವನು ಗಳಿಸುತ್ತಾನೆ, ನಾನು ಉಣ್ಣುತ್ತೇನೆ" ಎಂದಳು.

ಮಿಸ್ರಿ ಮಾತಿನಮಲ್ಲಿಯಾಗಿದ್ದಳು. ಇನ್ನೂ ಅವಳು ಬಹಳಷ್ಟು ಮಾತಾಡುತ್ತಿದ್ದಳು. ಬಬ್ಬುಲ್ ಇನ್ನಷ್ಟು ಚುರಮುರಿ ಬೇಡುತ್ತಿದ್ದ. ಆದರೆ ದರಬಾರಿಗೆ ತನ್ನ ದೃಷ್ಟಿಯ ಕ್ಷಿತಿಜದ ಮೇಲೆ ನಾಶೀ ಬಣ್ಣವು ತರಂಗಿತಗೊಂಡಂತೆ ಕಾಣಿಸಿತು. ಅವನು ಬೇಗ

ಬೇಗ ಮಿಸ್ತ್ರಿಯ ಕೃಷ್ಣ ಚಿಲುವು ಮತ್ತು ಬಬ್ಬುಲ್‌ನ ಕೆಂಪು ಕೆಂಪು ಮುಗ್ಧತೆಗಳನ್ನು ಕೊಡಹಿಕೊಂಡು, "ನಾನು ಹೊರಟೆ ಸಲಹೆ ಭಾಯಿ, ಒಳ್ಳೇದು ಅತ್ತಿಗೆ" ಎಂದು ಹೇಳಿ ಧಾವಿಸಿದ, ಇನ್ನೂ ರಸ್ತೆ ಸೇರಿರಲಿಲ್ಲ. ಆಗ ಅವನಿಗೆ ತನ್ನ ಪ್ಯಾಂಟಿನ ಪಾದದ ಬಳಿಯ ಮಡಿಕೆಗಳಲ್ಲಿ ಕಟ್ಟಿಗೆಯ ಚಕ್ಕೆಗಳು ಅಂಟಿಕೊಂಡದ್ದು ಕಂಡಿತು. ಬಾಗಿ ಅವುಗಳನ್ನು ಕಿತ್ತೆಸೆದು ದರಬಾರಿ ಸೀತೆಯ ಬಳಿ ತಲುಪಿದ.

ಶಿವಾಜಿ ಪಾರ್ಕಿನ ಸಮುದ್ರದ ದಂಡೆಯ ಮೇಲೆ ಕ್ಲಬ್ ಮತ್ತು ಭೆಲಪೂರಿವಾಲಾಗಳಿಂದ ಸ್ವಲ್ಪ ದೂರ ಸರಿದು ದರಬಾರಿ ಮತ್ತು ಸೀತಾ ಒಂದು ಗೋಡೆಗೆ ಆತು ಕುಳಿತುಕೊಂಡರು.

ಸೀತೆ ಹದಿನೆಂಟು-ಹತ್ತೊಂಬತ್ತು ವರ್ಷದ ಹುಡುಗಿ. ಅವಳ ತಾಯಿ ಇದ್ದಳು. ಆದರೆ ತಂದೆ ಇರಲಿಲ್ಲ. ಮನೆಯ ಸ್ಥಿತಿಗತಿ ಅಷ್ಟೇನು ಕೆಟ್ಟದಾಗಿರಲಿಲ್ಲ. ಅವರ ಸ್ವಂತ ಮನೆಯಿತ್ತು. ಬಾಡಿಗೆದಾರರಿಂದ ಬಾಡಿಗೆ ಒಮ್ಮೆ ವಸೂಲಾದರೆ ಇನ್ನೊಮ್ಮೆ ಆಗುತ್ತಿರಲಿಲ್ಲ. ಹಾಗೆ ನೋಡಿದರೆ, ಸೀತೆಯ ತಾಯಿ ಲಚಮನ್‌ದಯಿ ತನ್ನ ಮಗಳ ಮದುವೆ ಮಾಡಲು ಬಯಸುತ್ತಿದ್ದಳು. ಆದರೆ ಮದುವೆಗಿಂತ ಹೆಚ್ಚಾಗಿ ಆಸಕ್ತಿ ಇದ್ದ ವಿಷಯವೆಂದರೆ, ತನ್ನ ಮನೆಗೆ ಬರುವವನು ತನ್ನ ವರ್ಚಸ್ಸು ಹಾಕಿ ಪ್ರತಿ ತಿಂಗಳು ಬಾಡಿಗೆ ವಸೂಲಮಾಡಬಲ್ಲವನಾಗಿರಬೇಕೆಂಬುದು. ಯಾಕೆಂದರೆ, ಸೀತೆ ಅನ್ನುವಂತೆ, ಪ್ರತಿ ತಿಂಗಳು ಬಾಗಿಲಲ್ಲಿ ಕಾಣಿಸಿಕೊಳ್ಳುವ ತೋಳಗಳು ಕಾಣಬಾರದು. ಮತ್ತು ಬಾಳು ಸುಖವಾಗಿರಬೇಕು....ಲಚಮನ್‌ದಯಿ ಬಳಿ ಸೀತೆ ದರಬಾರಿಯ ಬಗ್ಗೆ ಹೇಳಿದಾಗ, ಮೊದಲಿಗೆ ಆಶೆ ಶಂಕೆ ಮತ್ತು ಭಯಗಳನ್ನು ವ್ಯಕ್ತ ಮಾಡಿದಳು. ಆದರೆ ದರಬಾರಿಯ ಪೂರ್ತಿ ಹೆಸರು ದರಬಾರಿಲಾಲ ಮೆಹತಾ ಇರುವದೆಂದು ತನಗೆ ಗೊತ್ತಾಗುತ್ತಲೇ ಅವಳು ಅನುಮತಿ ಕೊಟ್ಟುಬಿಟ್ಟಳು. ಯಾಕೆಂದರೆ, ಮುಂಬಯಿಯಲ್ಲಿ ಬಾಡಿಗೆ ವಸೂಲು ಮಾಡುವ ಜನರಿಗೆ ಮೆಹತಾ ಎನ್ನುತ್ತಾರೆ.

ಸೀತೆಯದು ಮಧ್ಯಮ ನಿಲುವು. ಆದರೆ ಅಂಗ ಸೌಷ್ಠವವು ಗಂಡಸರ ಮನದಲ್ಲಿ ಭಾವನೆಗಳನ್ನು ಕೆರಳಿಸುವಂತಹದಾಗಿತ್ತು. ಅವರಿಗರಿವಿಲ್ಲದಲೆ ಅವರ ತುಟಿಯಿಂದ ಸಿಳ್ಳು ಅಥವಾ ಸೀಟಿ ಹೊರಹೊಮ್ಮುತ್ತಿತ್ತು. ತಿದ್ದಿ ಮಾಡಿದ ಮುಖ ಮಾಟವಾಗಿತ್ತು. ಆದರೆ ಅವಳು ಸಮೀಪ ಬಂದಮೇಲೆಯೆ ಅವಳ ರೆಪ್ಪೆಗಳು ತುಸು ತೇವಗೊಂಡಿರುತ್ತಿದ್ದುದು ಕಾಣಿಸುತ್ತಿತ್ತು. ಯಾಕೆಂದರೆ, ಸೀತೆಯ ಕಣ್ಣುಗಳು ಸ್ವಲ್ಪ ಒಳಗೆ ಸಿಕ್ಕಿಕೊಂಡ ಹಾಗೆ ಇದ್ದುದರಿಂದ ಅವುಗಳ ರಕ್ಷಣೆಗಾಗಿ ರೆಪ್ಪೆಗಳು ಬಾಗಬೇಕಾಗುತ್ತಿತ್ತು. ಆದರೆ ಒಳಗೆ ಸಿಕ್ಕಿಕೊಂಡ ಈ ಕಣ್ಣುಗಳ ಕಾರಣದಿಂದಲೇ

ಸೀತೆ ಗಂಡಸರ ಮನದಲ್ಲಿ ಬಹಳ ದೂರದವರೆಗೆ ನೋಡಲು ಸಾಧ್ಯವಾಗಿತ್ತು. ಯಾರಿಗಾದರೂ ಏನಾದರೂ ಅನ್ನಲಿ ಬಿಡಲಿ, ಅದು ಬೇರೆ ವಿಷಯ. ಆದರೆ ಅವಳು ಎಲ್ಲ ತಿಳಿದುಕೊಂಡಿರುತ್ತಿದ್ದಳು.

ಹಾಂ! ಸೀತೆಯ ಕೂದಲು ಬಹಳ ಉದ್ದವಿತ್ತು. ಅದರ ಕಾರಣವನ್ನರಿಯಲು ದರಬಾರಿ, "ನಿಮ್ಮ ಮನೆಯಲ್ಲಿ ಯಾರಾದರೂ ಬಂಗಾಲಿಯನ್ನು ಮದುವೆಯಾಗಿದ್ದಾರೆಯೆ?" ಎಂದು ಕೇಳಿದರೆ ಅವಳು, "ನಾನೇ ಸ್ವಯಂ ಬಂಗಾಲಿ ಇರುವೆನಲ್ಲ. ನನ್ನ ಹೆಸರು ಸೀತಾ ಮುಜುಂದಾರ್" ಎಂದು ನಗುತ್ತಿದ್ದಳು. ಸುಂದರ, ಹೊಳೆಯುವ ಮತ್ತು ಮೃದುವಾದ ಕೂದಲುಳ್ಳ ತನ್ನ ತಲೆಯನ್ನು ದರಬಾರಿಯ ಎದೆಯ ಮೇಲೆ ಒರಗಿಸುವಷ್ಟೇ ತನ್ನ ಎತ್ತರವಿದ್ದುದರಿಂದ ಸೀತೆ ಬಹಳ ಸಂತೋಷಪಡುತ್ತಿದ್ದಳು. ತನ್ನ ಅಸ್ತಿತ್ವದ ಅಂತಃಸತ್ತ್ವದ ತನಕೂ ಯಾರಿಗಾದರೂ ಒಪ್ಪಿಸಿ ತನ್ನ ದುಃಖವನ್ನು ಮರೆತು ಸುಖಿಯಾಗಿ ಇರಬಹುದಾಗಿತ್ತು ಮತ್ತು ತುಸು ಅಂತರದಲ್ಲಿ ಅವಳು ಗಂಡ ಮತ್ತು ತಂದೆಯನ್ನು ಒಂದು ಮಾಡಿಕೊಳ್ಳಬಹುದಾಗಿತ್ತು.

ಗೋಡೆಯ ಮರೆಗೆ ಕುಳಿತಿದ್ದ ದರಬಾರಿ ಸೀತೆಯನ್ನು ಪ್ರೀತಿಸುತ್ತಿದ್ದ. ಅವನ ಪ್ರೀತಿಯು ತನ್ನ ಎಲ್ಲೆಯನ್ನು ಮೀರಬಾರದೆಂದು ಸೀತೆ ಇಚ್ಛಿಸುತ್ತಿದ್ದಳು. ಅವನ ಕೈ ತನ್ನ ಟೊಂಕವನ್ನು ಬಳಸಲು ಅವಳು ಬೆದರತೊಡಗಿದಳು. ಅವಳು ದರಬಾರಿಯನ್ನು ಸಂಭಾಷಣೆಯಲ್ಲಿ ತೊಡಗಿಸಬಯಸಿದಳು. ತನ್ನ ಬ್ಲೌಜ್ ಒಳಗಿನಿಂದ ಅವಳು ಒಂದು ಸಣ್ಣ ಬೆಳ್ಳಿಯ ಡಬ್ಬಿಯನ್ನು ಹೊರದೆಗೆದು ದರಬಾರಿಯ ಮುಖದ ಹತ್ತಿರ ಅದನ್ನು ಚಾಚಿ, "ನೋಡಿ, ನಿಮಗಾಗಿ ಏನು ತಂದಿದ್ದೇನೆ?" ಎಂದಳು.

"ಏನು ತಂದಿರುವೆ?" ದರಬಾರಿ ಕೇಳಿ, ತನಗೆ ಅರಿವು ಇಲ್ಲದಂತೆ ಕೈಯನ್ನು ಸೀತೆಯ ಟೊಂಕದಿಂದ ಸರಿಸಿ ಡಬ್ಬಿಯ ಕಡೆ ಚಾಚಿದನು.

ಸೀತೆ ಡಬ್ಬಿಯನ್ನು ಆಚೆ ಸರಿಸಿ, "ಹೀಗೆ ಅಲ್ಲ....ಸ್ವತಃ ನಾನೇ ತೋರಿಸುವೆ" ಎಂದು ಅದನ್ನು ದರಬಾರಿಯ ಮೂಗಿನ ಹತ್ತಿರ ಹಿಡಿದು, "ಮೂಸಿ ನೋಡಿರಿ" ಎಂದಳು.

ತನ್ನ ಪಾಪಗಳಿಗೆ ಶಿಕ್ಷೆ ಎನ್ನುವಂತೆ ದರಬಾರಿ ಡಬ್ಬಿಯನ್ನು ಮೂಸಿ ನೋಡಿದ. ತಕ್ಷಣ ಅವನಿಗೆ ಸೀನು ಬರತೊಡಗಿದವು.

ಪ್ರೇಮದ ಆಟವೆಲ್ಲ ನಿಂತಿತು. ದರಬಾರಿಗೆ ಸೀನಿನ ಮೇಲೆ ಸೀನು. ಕಿಸೆಯೊಳಗಿಂದ ಕರವಸ್ತ್ರ ಹೊರದೆಗೆದು ಮೇಲಿಂದ ಮೇಲೆ ತನ್ನ ಮೂಗು ಒರಸಿಕೊಳ್ಳುತ್ತಿದ್ದ. ಸೀತೆ ಪಕ್ಕದಲ್ಲಿ ಕುಳಿತು ನಗತೊಡಗಿದಳು.

"ಇದು......." ಎಂದು ಮತ್ತೆ ಸೀನಿ, ದರಬಾರಿ, "ಎಂಥ ಹುಡುಗಾಟ?" ಎಂದನು.

"ನೀವು ಇದಕ್ಕೆ ಹುಡುಗಾಟ ಅನ್ನುವಿರೇನು? ಇಪ್ಪತ್ತು ರೂಪಾಯಿಗೆ ತೊಲೆ

ನಸ್ಯವಿದು "—ಸೀತೆ ಹೇಳಿದಳು.

"ನಸ್ಯ ?"

"ಹಾಂ ! ನೀವು ಸೀನತೊಡಗಿದರೆ ನನ್ನ ಕಣ್ಣಿಗೆ ಬಹಳ ಚೆನ್ನಾಗಿ ಕಾಣಿಸುವಿರಿ."

ದರಬಾರಿ ಸೀತೆಯನ್ನು ಹುಚ್ಚರನ್ನು ನೋಡುವ ಹಾಗೆ ನೋಡತೊಡಗಿದ. ಸೀತೆ ಪ್ರೀತಿಯಿಂದ ಅವನನ್ನು ನೋಡುತ್ತ, "ನೆನಪಿದೆಯೆ ? ನೀವು ಮೊದಲ ಸಲ ಎಲ್ಲಿ ಸಿಕ್ಕಿದ್ದಿರಿ ?" ಎಂದಳು.

"ನೆನಪಿಲ್ಲ" ಎಂದು ದರಬಾರಿ ತಲೆಯಲ್ಲಾಡಿಸಿದ. ಬಳಿಕ, "ಆದರೆ ಮೊದಲ ಸಲ ನಿನ್ನನ್ನು ಎಲ್ಲಿಯೋ ನೋಡಿರುವೆ.ಎಂದು ಮಾತ್ರ ನೆನಪಿದೆ" ಎಂದ.

"ಅಲ್ಲಿ" ಎಂದು ಸೀತಾ ಎದುರಿಗಿನ ಮಹಾತ್ಮಾ ಗಾಂಧಿ ಸ್ವಿಮ್ಮಿಂಗ್ ಪೂಲ್ ಕಡೆ ಸನ್ನೆ ಮಾಡುತ್ತ, "ನೀವು ಆಗ ಸ್ನಾನ ಮಾಡುತ್ತಿದ್ದಿರಿ ಮತ್ತು ಸೀನುತ್ತಿದ್ದಿರಿ. ನನ್ನ ಜೊತೆ ಬೇರೆ ಮೂರು ನಾಲ್ಕು ಹುಡುಗಿಯರಿದ್ದರು. ಅಂದು ಆಫೀಸಿನಲ್ಲಿ ಅರ್ಧದಿನದ ರಜೆ ಇತ್ತು. ನಾವೆಲ್ಲ ಹಾಗೆಯೇ ಸುತ್ತಾಡುತ್ತ ಅಲ್ಲಿಗೆ ಬಂದಿದ್ದೆವು" ಎಂದಳು.

"ಅಲ್ಲಿಗೇಕೆ ?"

"ಸುಮ್ಮನೆ ರಜೆಯಾಗುತ್ತಲೆ ನಾವೆಲ್ಲ ಹುಡುಗಿಯರಿಗೆ ಏನಾಗುತ್ತದೋ ಏನೋ ? ನಾವು ಮನೆಯಲ್ಲಿ ಕೂತಿರಲಾರೆವು. ಹಾಗೆಯೇ ಮನೆಯಿಂದ ಹೊರಬೀಳುತ್ತೇವೆ, ಏನೊ ಆಗುವದಿದೆ ಎನ್ನುವಂತೆ. ಆದರೆ ಆಗುವುದು ಸಿಗುವುದು ಏನೂ ಇಲ್ಲ. ನಾವು ಕೋಕಾಕೋಲಾ ಕುಡಿಯುತ್ತಿರುವೆವು ಎಂದು ಮಾತ್ರ ಆಗಲೇ ತಿಳಿಯುವದು." —ಸೀತೆ ಹೇಳಿದಳು.

ಸೀತೆಯ ಜೊತೆಗೆ ದರಬಾರಿಯು ನಕ್ಕ. ಅವಳು ತನ್ನ ಮಾತು ಮುಂದುವರಿಸುತ್ತ, "ನಾವೆಲ್ಲ ನಿಮ್ಮ ಕಡೆ ನೋಡಿ ನೋಡಿ ನಗುತ್ತಿದ್ದೆವು. ಯಾಕೆಂದರೆ, ನೀವು ಸೀನುತ್ತ ಬೋರ್ಡ್‌ದಿಂದ ಕಾರಂಜಿಯವರೆಗೆ ಮತ್ತು ಕಾರಂಜಿಯಿಂದ ದಂಡೆಯ ವರೆಗೆ ಹೋಗಿ ಬರುತ್ತಿದ್ದಿರಿ. ಆಗ ತಲೆಯಿಂದ ಕಾಲುತನಕ ಎರಡು ಮೂರು ಮಣಿತ ಮಾಡುತ್ತಿದ್ದಿರಿ. ಆಗ ಮಗುವಿನಂತೆ ಓಡಿಹೋಗಿ ನಿಮ್ಮನ್ನು ಹಿಡಿದುಕೊಂಡು ಸೆರಗಿನಿಂದ ನಿಮ್ಮ ಮುಖ, ನಿಮ್ಮ ಮೂಗು ಒರಸಿ, ಹಿಂದೆ ಒಂದು ಸಲ ಚಪ್ಪರಿಸಿ—ಈಗ ಹೋಗು, ಮಜಾ ಮಾಡು ಎಂದು ಅನ್ನಬೇಕೆಂದು ನನ್ನ ಮನ ಬಯಸಿತ್ತು" ಎಂದಳು.

ದರಬಾರಿ, ಒಂದೇ ವಿಷಯ ಯೋಚಿಸುತ್ತಿದ್ದನೊ ಎನ್ನುವಂತೆ, "ಬೇರೆ ಯಾವ ಹುಡುಗಿಯರಿದ್ದರು ?" ಎಂದು ಕೇಳಿದ.

"ಒಬ್ಬಳಂತು ಕುಮುದ, ಇನ್ನೊಬ್ಬಳು ಜ್ಯೂಲಿ ಅಲ್ಲಿ ಖಾಡಿ (ಬ್ಯಾಕ್ ಬೇ)ದ ಆಚೆ ಮೌಂಟ್ ಮೇರಿಯಲ್ಲಿ ಇರುವಳು....ಮೂರನೆಯವಳು..." ಬಳಿಕ ತಟ್ಟನೆ ನಿಂತು, "ನೀವು ಇದನ್ನೇಕೆ ಕೇಳುತ್ತಿರುವಿರಿ ?" ಎಂದಳು.

"ಹಾಗೆಯೇ....ನಿನ್ನ ಗೆಳತಿಯರು ನಿನ್ನ ಚಪ್ಪಲಿಯನ್ನು ಹೋಲುವದಿಲ್ಲ"— ದರಬಾರಿ ಉತ್ತರಿಸಿದ.

"ನೀವು ನೋಡಿರುವಿರೇನು?"

"ನೋಡಿಯಂತೂ ಇಲ್ಲ."

ಸೀತೆಯ ಮುಖ ಅರಳಿದ್ದು ಮ್ಲಾನಗೊಂಡಿತು. ಅಷ್ಟರಲ್ಲೆ ಒಂದು ಸೀನು ದರಬಾರಿಯ ಮುಖದ ಮೇಲೆ ತೇಲಿ ತೇಲಿ ನಿಂತಿತು. ಅವನು ಎದುರಿಗೆ ನೋಡುತ್ತ— ಇಂದು ಹೊತ್ತು ಮುಳುಗುವದೇ ಇಲ್ಲ" ಎಂದ.

ಸಮುದ್ರದಲ್ಲಿ ಅದಾಗಲೇ ಉಬ್ಬರ ಪ್ರಾರಂಭವಾಗಿತ್ತು. ತೆರೆಗಳು ದಂಡೆಯತ್ತ ಮುನ್ನುಗ್ಗುತ್ತ ತಮ್ಮ ಜೊತೆ ಭೇಲಪುರಿಯ ಲೆಕ್ಕವಿದಲ್ಲಷ್ಟು ಜಿಡ್ಡು, ಕಬ್ಬಿನ ತುಂಡು, ಸೀಂಗಾದ ಸಿಪ್ಪೆಗಳು ಮತ್ತು ತೆಂಗಿನ ಕರಟುಗಳನ್ನು ಹೊತ್ತು ತರುತ್ತಿದ್ದವು. ಮಧ್ಯ ಮಧ್ಯ ಎಲ್ಲಿಯಾದರೂ ನಾಣ್ಯಗಳು ಕಾಣಿಸುತ್ತಿದ್ದವು. ಅವುಗಳನ್ನು ಸಮುದ್ರ ದೊಳಗೆ ದೂರ, ಉಗಿದೋಣಿಗಳು ಮತ್ತು ದೊಡ್ಡ ದೊಡ್ಡ ಹಡಗುಗಳು ತಮ್ಮ ದುಃಖ ಕಡಿಮೆ ಮಾಡಿಕೊಳ್ಳಲು ಸಮುದ್ರದಲ್ಲಿ ಚೆಲ್ಲಿದ್ದವು; ಒಣ ಪ್ರದೇಶದಲ್ಲಿ ಎಣ್ಣೆಯ ಕಲೆಗಳನ್ನು ನಿರ್ಮಿಸಿದ್ದವು; ಮತ್ತು ಅವು ಖಾಲಿ ಮಾಡಿದ ಡಿಜೆಲ್ ಮಣಿಗಳವರೆಗೆ ತಲುಪಿ ಅದರ ಒಂದು ದೊಡ್ಡ ಭಾಗವನ್ನು ನುಣ್ಣಗೆ ಕಪ್ಪಗೆ ಮಾಡಿತ್ತು.

ಸೀತಾ ಹೊರಳಿ ನೋಡಿದಾಗ ದರಬಾರಿ ಸ್ವಲ್ಪ ವಿಚಿತ್ರ ರೀತಿಯಲ್ಲಿ ಅವಳನ್ನು ನೋಡುತ್ತಿದ್ದ. ಕಪ್ಪು ತುಣುಕುಗಳು ಅವನ ಜಿಡ್ಡು ಮುಖದ ಮೇಲೆ ಚದರು ತ್ತಿದ್ದವು.

ಸೂರ್ಯ ಮುಳುಗುತ್ತಲಿದ್ದ. ಅವನು ತನ್ನ ಉದ್ದವಾದ ತೋಳುಗಳಿಂದ ಜಗತ್ತಿನ ಎರಡೂ ದಡಗಳನ್ನು ಒಂದುಗೂಡಿಸಿ ಅವುಗಳನ್ನು ತೆಕ್ಕೆಯಲ್ಲಿ ತುಂಬಿಕೊಂಡು ಒಂದು ಗಾಢ ಕೇಸರಿ ಬಣ್ಣದ ಮುದ್ದೆಯಾಗಿ, ದೂರ ಪಶ್ಚಿಮದ ಆಳವಾದ ನೀರಿನಲ್ಲಿ ಇಳಿಯುತ್ತಿದ್ದ. ಸ್ವಲ್ಪೇ ಸಮಯದಲ್ಲಿ ಅವನ ತೇಜವು ಭೂಮಿಯ ಗೋಳಾಕಾರದಲ್ಲಿ ಮಾಯವಾಯಿತು. ಈಗ ದಂಡೆ, ಅದರ ಮೇಲಿನ ಮನೆಗಳು ಮತ್ತು ಮನೆ ಗಳಲ್ಲಿ ಇರುವವರು—ಇವೆಲ್ಲವುಗಳ ಮೇಲೆ, ಆಕಾಶದಲ್ಲಿಯ ಉಂಡಾಡಿ ಮೋಡಗಳು ಮೇಲಿಂದ ಭೂಮಿಯ ಮೇಲೆ ಬೀಳುತ್ತಿರುವ ಬೆಳಕು ಇತ್ತು. ಈ ಬೆಳಕು ಮೆಲ್ಲ ಮೆಲ್ಲಗೆ, ಮಂದಮಂದವಾಗಿ ಬಹಳ ಅಕ್ಕರತೆಯಿಂದ ತನ್ನ ಸ್ಥಳವನ್ನು ಕತ್ತಲೆಗೆ ಕೊಡುತ್ತ, "ತಗೊ, ಈಗ ನಿನ್ನ ರಾಜ್ಯವಿದೆ....ಹೋಗು....ಮಜಾಮಾಡು" ಎಂದು ಹೇಳುತ್ತಿರುವಹಾಗಿತ್ತು.

ದರಬಾರಿಯನ್ನು ಸೀತೆಯಿಂದ ಮೈಲುಗಳಷ್ಟು ದೂರ ಮಾಡಿದ ಆ ಸೀನೇ ಈಗ ಒಂದೇ ಸಲಕ್ಕೆ ಅವನನ್ನು ಬಹಳ ಸಮೀಪಕ್ಕೆ ತಂದಿದೆ....ಸೀತೆ ಕಂಪಿಸುತ್ತಿದ್ದಳು....

ದರಬಾರಿ ತೇಕುತ್ತಿದ್ದ.

ಕತ್ತಲೆಯ ಪ್ರಭುತ್ವ ಬರುತ್ತಲೆ ಪೂಲ್, ಕ್ಲಬ್ ಮತ್ತು ರಸ್ತೆಯ ಮೇಲಿನ ವಿದ್ಯುತ್ ದೀಪಗಳು ಒತ್ತಟ್ಟಿಗಿರಲಿ, ಫೇರಿವಾಲಾಗಳ ಧಾಬಾ ಬುಟ್ಟಿ ಮತ್ತು ಗಾಡಿಗಳ ಮೇಲೆ ಮಿಣುಕುತ್ತಿದ್ದ ದೀಪಗಳು ಕೂಡ ಭಗ್ಗೆಂದವು.

ಅಷ್ಟರಲ್ಲಿ ಗೋಡೆಯೊಳಗಿಂದ ಹೊರಬಿದ್ದ ಹಾಗೆ ಧ್ವನಿಯು ಹೊರಟಿತು;—

"ದರಬಾರಿ, ಇದೇನು ಮಾಡುತ್ತಿರುವಿರಿ ?"

"ಇದರ ಅರ್ಥ ನೀನು ನನ್ನನ್ನು ಪ್ರೀತಿಸುವದಿಲ್ಲವೆಂದಾಯಿತು"—ದರಬಾರಿ ತನ್ನ ಕೈಗಳನ್ನು ಸರಿಸಿಕೊಳ್ಳುತ್ತ ಅಂದ.

"ಪ್ರೇಮದ ಅರ್ಥ ಎಲ್ಲಾದರೂ ಹೀಗಾಗುವುದೇ ?"

"ನನಗೆ ಎಲ್ಲ ತಿಳಿಯುತ್ತದೆ" ಎಂದು ದರಬಾರಿ ಎದ್ದು ನಿಂತು ತನ್ನ ಬಟ್ಟೆಗಳನ್ನು ಸರಿಮಾಡಿಕೊಳ್ಳುತ್ತ ಹೊರಟನು. ಸೀತೆ ಅವನನ್ನು ತಡೆಯುವ ಪ್ರಯತ್ನ ಮಾಡಿದಳು. ಬೇಡಿಕೊಳ್ಳುವ ರೀತಿಯಲ್ಲಿ, "ಏನು ಮಾಡುತ್ತಿರುವಿರಿ, ಚಂದ್ರ?" ಎಂದಳು.... ಉಸುಬಿನ ಮೇಲೆ ಬಿದ್ದುಕೊಂಡಿದ್ದ ಸೀತೆಯು ದರಬಾರಿಯ ಕಾಲುಗಳನ್ನು ತಬ್ಬಿಕೊಂಡಳು. ಅವನು ಕೋಪದಿಂದ ತೇಕುತ್ತಿದ್ದ.

ದರಬಾರಿ ಒಂದೇ ಪಟ್ಟಿಗೆ ತನ್ನ ಕಾಲುಗಳನ್ನು ಬಿಡಿಸಿಕೊಂಡು, "ಬಿಚ್, ಬಹಳ ಪಾವನೆಯಾಗುತ್ತಿರುವೆ........ಏನೋ ತಿಳಿದುಕೊಂಡಿರುವೆ" ಎಂದನು.

"ನಾನು ಏನೂ ತಿಳಿದುಕೊಂಡಿಲ್ಲ" ಎಂದು ಮಂಡೆಗಳ ಮೇಲೆ ಸರಿಯುತ್ತ ಸೀತೆ ಮತ್ತೊಮ್ಮೆ ದರಬಾರಿಯನ್ನು ಹಿಡಿದುಕೊಂಡು, "ನಾನು ನಿಮ್ಮವಳು ಚಂದ್ರ, ನರನರವೂ ಪೂರ್ತಿಯಾಗಿ ನಿಮ್ಮವಳು. ಆದರೆ ನಾನು ಒಬ್ಬ ವಿಧವೆಯ ಮಗಳು. ನನ್ನನ್ನು ಮದುವೆಯಾಗಿರಿ, ಆಮೇಲೆ...." ಎಂದಳು.

"ಮದುವೆ-ಗಿದುವೆ ಏನೂ ಇಲ್ಲ. ನಿನಗೆ ಹೇಳಿದ್ದು ಸಾಲದೆ? ಮಂತ್ರ ಹೇಳುವುದು ಅವಶ್ಯವಿದೆಯೇನು ? ಕಾಯ್ದೆಯ ಬಂಧನ ಮತ್ತು ಅದರ ಆಶ್ರಯಗಳು ಅವಶ್ಯವೆ ?" ಎಂದು ದರಬಾರಿ ತಡೆದನು, ಇನ್ನೂ ತನಗೆ ಆಶೆ ಇದೆ ಎನ್ನುವಂತೆ. "ಹಾಂ ! ಅವಶ್ಯವಿದೆ. ಈ ಜಗತ್ತನ್ನು ನಾನೂ ಮಾಡಿಲ್ಲ, ನೀವೂ ಮಾಡಿಲ್ಲ."—ಸೀತೆ ಅಳುತ್ತ ಹೇಳಿದಳು.

ದರಬಾರಿಯ ಕೊನೆಯ ಆಶೆಯು ಮುರಿಯಿತು. ಅವನು, "ತನ್ನ ಮಧ್ಯೆ ಯಾವುದೇ ಮುಚ್ಚುಮರೆ, ಯಾವುದೇ ಕಟ್ಟುನಿಟ್ಟು ಇಡುವ ಪ್ರೇಮವನ್ನು ನಾನು ಮಾನ್ಯ ಮಾಡುವದಿಲ್ಲ. ಆತ್ಮಗಳು ಬೆರೆಯುವದು ಅವಶ್ಯವಿದ್ದರೆ ದೇಹಗಳೂ ಕೂಡುವದು ಅವಶ್ಯವಿದೆ. ಅದರಲ್ಲಿ ಸಾಕ್ಷಾತ್ ದೇವರಿರುವನೆಂದು ಶಾಸ್ತ್ರಗಳಲ್ಲಿ ಬರೆದಿದೆ" ಎಂದನು.

"ಬರೆದಿರಬಹುದು, ಎಲ್ಲರೂ ನಿಮ್ಮ ಹಾಗೆಯೆ ಈ ಮಾತನ್ನು ಮನ್ನಿಸಿದ್ದರೆ...."

"ನಾನು ಯಾರ ಪರವೆಯನ್ನೂ ಮಾಡುವದಿಲ್ಲ...." ಎಂದು ದರಬಾರಿ ಸಿಟ್ಟಿನಿಂದ ನೆಲಕ್ಕೆ ಕಾಲು ಕುಟ್ಟುತ್ತ ನುಡಿದನು. ಕಾಲು ಉಸುಬಿನಲ್ಲಿ ಸಿಕ್ಕಿಕೊಂಡವು. ಬಳಿಕ ಅವುಗಳನ್ನು ಎಳೆಯುತ್ತ ಉಸುಬಿನಿಂದ ಹೊರಗೆ ತೆಗೆಯುತ್ತ ಹೊರಟ.

ಸೀತೆ ಹಿಂದೆ ಹಿಂದೆ ಧಾವಿಸಿದಳು, "ಕೇಳಿರಿ" ಎಂದೆನ್ನುತ್ತ. ಇನ್ನೂ ದರಬಾರಿ ಗೋಡೆಯ ಸೀಮೆಯನ್ನು ದಾಟಿರಲಿಲ್ಲ. ಈಗಲೂ ಅವರು ಅದರ ಆಸರೆ ಪಡೆದು ಕುಳಿತುಕೊಳ್ಳಬಹುದಾಗಿತ್ತು ಮತ್ತು ಕತ್ತಲೆಯನ್ನು ತಬ್ಬಿಕೊಳ್ಳಬಹುದಾಗಿತ್ತು.

ಒಂದೆರಡು ಹುಡುಗರು, ಬೈಲಿನಲ್ಲಿ ಇದನ್ನೆಲ್ಲ ಕಂಡು ಆಶ್ಚರ್ಯದಿಂದ ನಿಂತು ಕೊಂಡರು. ನಂತರ 'ಚನೆವಾಲಾ' ಬಂದ. ಅವನ ಫೇರಿಯಲ್ಲಿಯ ಬೆಂಕಿಯು ಸಮುದ್ರದ ಕಡೆಯಿಂದ ಬರುತ್ತಿದ್ದ ತೀವ್ರ ಗಾಳಿಯಿಂದ ಕ್ಷಣಕ್ಷಣಕ್ಕೂ ಹೆಚ್ಚುತ್ತಲಿತ್ತು.

ಈ ಸಲ ಸೀತೆ ಕೇವಲ ದರಬಾರಿಯ ಕಾಲುಗಳನ್ನು ಹಿಡಿದುಕೊಳ್ಳಲಿಲ್ಲ. ಅದರ ಬದಲು ಅವುಗಳ ಮೇಲೆ ತನ್ನ ತಲೆಯನ್ನು, ಬಂಗಾಲಿ ಕುರುಳುಗಳನ್ನು, ತೋಯ್ದ ಕಣ್ಣುಗಳನ್ನು ಮತ್ತು ತುಟಿಗಳನ್ನು ಸಹಿತ ಇಟ್ಟುಬಿಟ್ಟಳು. ದರಬಾರಿ ನಖಶಿಖಾಂತ ಉರಿಯುತ್ತಿದ್ದ ಮತ್ತು ಅಂತರಂಗದ ಬೆಂಕಿಯಿಂದ ತಳಮಳಗೊಳ್ಳುತ್ತಿದ್ದ. ಅವನ ಕಾಲು ಗಳ ಮೇಲೆ ಕಣ್ಣೀರು ಸುರಿಸುತ್ತ, ಚುಂಬಿಸುತ್ತ, ಸೀತೆ ಸ್ವಲ್ಪ ಮೇಲಕ್ಕೆದ್ದು ನೋಡಿ ದಳು. ನಂತರ, "ನಾನು ಯಾವುದೋ ಬರ್ಫ್, ಯಾವುದೋ ಕಲ್ಲಿನಿಂದ ಮಾಡಲ್ಪಟ್ಟಿ ರುವೆನೆಂದು ತಿಳಿದಿರುವಿರೇನು? ನನಗೂ ನಿಮ್ಮಲ್ಲಿ ಬೆರೆತು ಹೋಗಲು ಮನಸ್ಸು ಬಯಸುತ್ತಿಲ್ಲವೆಂದು ಭಾವಿಸಿರುವಿರಾ? ನೀವು ನನ್ನನ್ನು ಅಪ್ಪಿದರೆ, ತಟ್ಟಿದರೆ ನನ್ನ ಅಂಗ ಅಂಗವು ಪುಡಿಪುಡಿಯಾಗಿ ನೋಯತೊಡಗುವದಿಲ್ಲವೆ?....ಆದರೆ ಒಬ್ಬ ಹೆಣ್ಣಿನ ದುಃಖ ನಿಮಗೇನು ಗೊತ್ತು?" ಎಂದಳು.

ಬಳಿಕ ಯಾವುದೋ ಅಜ್ಞಾತ ಭಯದಿಂದ ಕಂಪಿಸುತ್ತ, "ಈ ದುಃಖವನ್ನು ನೀವು ಕೊಟ್ಟಿರುವಿರಿ ಎಂದೇನು ನಾನು ಅನ್ನುತ್ತಿಲ್ಲ; ಇದನ್ನು ದೇವರು ಕೊಟ್ಟಿದ್ದಾನೆ. ದೇವರೇ ಹೆಣ್ಣಿಗೆ ಅನ್ಯಾಯವನ್ನು ಮಾಡಿದ್ದಾನೆ" ಎಂದಳು.

"ನನಗೆ ಎಲ್ಲ ಗೊತ್ತಿದೆ...." ಎಂದು ತನ್ನನ್ನು ಬಿಡಿಸಿಕೊಳ್ಳುವ ಪ್ರಯತ್ನ ಮಾಡುತ್ತ ದರಬಾರಿ, "ಗಂಡಸು ಬೇಕಾದ್ದನ್ನು ಸಹಿಸಬಲ್ಲ; ಆದರೆ ಅಪಮಾನವನ್ನು ಮಾತ್ರ ಸಹಿಸಲಾರ" ಎಂದನು.

"ಯಾರ ಅಪಮಾನ?"

ದರಬಾರಿ ಉತ್ತರ ಕೊಡುವ ಬದಲು ಸೀತೆಗೊಂದು ಒದೆಕೊಟ್ಟ, ಅವಳು ಹಿಂದಕ್ಕೆ ಬಿದ್ದಳು. ಅವನು ಮಾತ್ರ ದೀರ್ಘವಾದ ಹೆಜ್ಜೆಗಳನ್ನು ಇಡುತ್ತ ಬೆಳಕಿನತ್ತ ಹೊರಟ.

ಸೀತೆ ತನ್ನ ಈ ಅಲ್ಪ ಜೀವನದಲ್ಲಿ ಎಂದೂ ಕಂಡರಿಯದ ಭಯದಿಂದ ನಡುಗು ತ್ತಿದ್ದಳು. ಅದರ ಅನುಭವವನ್ನು ಅವಳು ತನ್ನ ತಂದೆ ಸತ್ತಾಗಲೂ ಪಡೆದಿದ್ದಿಲ್ಲ.

ತಾಯಿಯ ಎದೆಯಲ್ಲಿ ಮುಖವಿಟ್ಟು ಎಲ್ಲವನ್ನೂ ಮರೆತುಬಿಟ್ಟಿದ್ದಳು. ಉರಿಯು ತ್ತಿರುವ ಬಕ್ಕೆಯ ಸುತ್ತಲೂ ಮೆಲ್ಲಮೆಲ್ಲಗೆ ಬೆರಳನ್ನು ಆಡಿಸಿದರೆ ಒಂದು ಬಗೆಯ ತೃಪ್ತಿ, ಒಂದು ಬಗೆಯ ಸಮಾಧಾನವಾಗುವ ಹಾಗೆ ತಾಯಿ ತನ್ನ ತಲೆಯ ಮೇಲೆ ಕೈಯಾಡಿಸಿದ್ದರಿಂದ ಅವಳು ಎಲ್ಲ ದುಃಖಗಳು ದೂರವಾಗಿದ್ದವು....ಅಲ್ಲಿಯೆ ಉಸುಬಿನ ಮೇಲೆ ಬಿದ್ದುಕೊಂಡಿದ್ದ ಸೀತೆ ತಡೆತಡೆದು ಬಿಕ್ಕುತ್ತಿದ್ದಳು. ನಡುನಡುವೆ ತಲೆಯೆತ್ತಿ "ಯಾರಾದರೂ ನೋಡುತ್ತಿಲ್ಲವಷ್ಟೆ" ಎಂದು ನೋಡುತ್ತಿದ್ದಳು. ತೊಂದರೆಗೀಡಾದ ಹೆಣ್ಣಿನ ಬಳಿ ಯಾವನಾದರೂ ಸೊಗಸುಗಾರ ಬಂದೇ ಬರುವಂತೆ ಯಾರಾದರೂ ಸಹಾಯಕ್ಕೆಂದು ಬರುತ್ತಿಲ್ಲವಷ್ಟೆ? ಎದುರಿಗೆ ದೀಪದ ಮಂದ ಬೆಳಕಿನಲ್ಲಿ ಯಾವುದೋ ವಸ್ತು ಹೊಳೆಯುತ್ತಿತ್ತು. ಸೀತೆ ಅದನ್ನು ಎತ್ತಿಕೊಂಡಳು. ಅದು ಜಾರಿ ಬಿದ್ದಿದ್ದ ಬೆಳ್ಳಿಯ ಡಬ್ಬಿ. ಈಗ ಅದರಲ್ಲಿ ಉಸುಬು ತುಂಬಿಕೊಂಡಿತ್ತು.

ದರಬಾರಿ ಸೀತೆಯನ್ನು ಪ್ರೀತಿಸುತ್ತಿದ್ದನೆಂಬುದು ನಿಜ. ಆದರೆ ಸೀತೆ ಪ್ರೀತಿಸು ವಷ್ಟು ಮಾತ್ರ ಇರಲಿಲ್ಲ. ಸೀತೆಯೇ! ಈ ಜಗತ್ತಿನಲ್ಲಿ ತನ್ನ ಹೆಸರನ್ನು ಸಾರ್ಥಕಗೊಳಿಸಲು ಬಂದಹಾಗಿತ್ತು. ಅವಳು ಈಗ ಅಶೋಕವನದಲ್ಲಿ ಬಿದ್ದು ಕೊಂಡು ಯಾರಾದರೂ ಮೇಲಿನಿಂದ ಸಂದೇಶದ ಉಂಗುರವನ್ನು ಎಸೆದಾರು ಎಂದು ನೋಡುತ್ತಿದ್ದಳು. ಆದರೆ ಶ್ರೀರಾಮನ ಕಾಲದಿಂದ ಇಂದಿನವರೆಗೆ ಮಧ್ಯದಲ್ಲಿ ಏನೆಲ್ಲ ಆಗಿಲ್ಲ. ಈಗಂತೂ ಇಂಗ್ಲೀಷ್ "ಫನ್" ನಡೆಯುತ್ತಲಿದೆ. ದರಬಾರಿ ಅದರ ಪೂರ್ತಿ ರುಚಿ ಪಡೆಯಲು ಬಯಸಿದ್ದ.

ಮನೆಯಲ್ಲಿ ಜಾಳಿಗೆಯನ್ನು ಕೂಡ್ರಿಸಿಯಾಗಿತ್ತು. ಮೂರು ದಿನಗಳವರೆಗೆ ಬಹಳ ಶ್ರಮಪಟ್ಟಮೇಲೆ ಸೀಖ್ ತರಖಾನ ಕೆಲಸ ಬಿಟ್ಟಿದ್ದ. ಸ್ವಚ್ಛವಾದ ವರಂಡಾದಲ್ಲಿ ಕುಳಿತಿದ್ದ ದರಬಾರಿ ಶೂನ್ಯ ದೃಷ್ಟಿಯಿಂದ ರಸ್ತೆಯ ಆ ತಿರುವಿನತ್ತ ನೋಡುತ್ತಲಿದ್ದ. ಅಲ್ಲಿ ಒಮ್ಮೆ ನಾಶೀ, ಮತ್ತೊಮ್ಮೆ ತಿಳಿಹಳದಿ ಮಗದೊಮ್ಮೆ ಭತ್ತದ ಬಣ್ಣ, ಕಾಂವಿಯ ಬಣ್ಣ ತೇಲಾಡಿತ್ತು. ಪಕ್ಕದಲ್ಲಿ ದರಬಾರಿಯ ಅಕ್ಕನ ಮಗ ಮೆಹಮೂದ ಅಥವಾ ಬನವಾರಿ ಗಲಗು ಮತ್ತು ತಗಡುಗಳಿಂದ ಮಾಡಲಾದ ಒಂದು ಅಂದಗೇಡಿ ಆಟದ ಸಾಮಾನು ಜೊತೆ ಆಡುತ್ತಿದ್ದ. ಅದರಿಂದ ಅವನ ಕೈ ಕೊರೆಯುವ ಭಯವಿತ್ತು. ಬಹುಶಃ ಅದಕ್ಕಾಗಿಯೇ ಸತವಂತಿ ಅಥವಾ ಕನೀಜ ಓಡುತ್ತ ಬಂದಳು. ಬಂದವಳೇ ಮಗುವಿನ ಕೈಯಿಂದ ಆ ಸಾಮಾನನ್ನು ಕಸಿದುಕೊಂಡಳು. ಮಗು ಚೀರಿ ಚೀರಿ ಅಳತೊಡಗಿತು, ಜಿಗಿದಾಡಹತ್ತಿತು.

"ಏ, ಏ, ಏನು ಮಾಡುತ್ತಿರುವಿ ಆಪಾ (ಅಕ್ಕ)?"—ದರಬಾರಿ ಆಕ್ಷೇಪಿಸಿದ.

"ನೀನು ಸುಮ್ಮನಿರು. ನಿನಗೆ ಸಾವಿರ ಸಲ ಹೇಳಿರುವೆ ನನಗೆ ಆಪಾ ಎನ್ನಬೇಡ ಎಂದು. ದೀದಿ ಎಂದರೆ ನಿನಗೆ ಹಾವು ಕಚ್ಚುವದೇನು?"—ಅವಳು ರೇಗಿದಳು.

"ಹೀಗೇನು? ನಿಜವಾದ ವಿಷಯದ ಮಾತೇ ಇಲ್ಲ....ನೋಡು ಹೇಗೆ ಅಳು

ತ್ತಿರುವನು....ಹೀಗೆ ಲಾರ್ಡ್ ಕಿಚನರ್ ಪೂರ್ತಿ ಹಡಗ ಮುಳುಗಿದಾಗ ಕೂಡ ಅತ್ತಿರಲಿಕ್ಕಿಲ್ಲ....ಅವನಿಗೆ ಆಟದ ಸಾಮಾನು ಕೊಟ್ಟುಬಿಡು."—ದರಬಾರಿ ಹೇಳಿದ.

"ಹೇಗೆ ಕೊಡಲಿ?....ಎಲ್ಲಾದರೂ ಕಣ್ಣು ಚುಚ್ಚಿಕೊಂಡಾನು."

"ಎಲ್ಲ ಮಕ್ಕಳು ಸೊಟ್ಟಪಟ್ಟ ಆಟಿಕೆಗಳೊಂದಿಗೆ ಆಡುತ್ತಿರುತ್ತವೆ. ಎಷ್ಟು ಮಕ್ಕಳ ಕಣ್ಣು ಒಡೆದಿವೆ?"

"ಇವನಷ್ಟು ರಾಕ್ಷಸ ಯಾರಾದರೂ ಉಂಟೆ?"

"ಎಲ್ಲ ತಾಯಂದರಿಗೂ ತಮ್ಮ ತಮ್ಮ ಮಕ್ಕಳು ಇಷ್ಟೇ ರಾಕ್ಷಸರಾಗಿ ಕಾಣುತ್ತಾರೆ" —ದರಬಾರಿ ಹೇಳಿದ.

ಮೆಹಮೂದ್ ಅಥವಾ ಬನವಾರಿ ಬಹಳ ದುಃಖಿಸಿ ಅಳುತ್ತಿದ್ದು, ಮನೆಯ ತುಂಬ ದೊಂಬಿ ಎಬ್ಬಿಸಿದ. ದರಬಾರಿ ಚಾಚು ಪೀಠದ ಮೇಲಿಂದ ಜಪಾನಿ ಬೆಕ್ಕನ್ನು ತೆಗೆದುಕೊಂಡು ಕೀಲಿ ಕೊಟ್ಟಕೂಡಲೆ ಅದು ಓಡುತ್ತ ಲಾಗ ಹಾಕಲು ಶುರು ಮಾಡುತ್ತಿತ್ತು. ಅದನ್ನು ನೋಡಿ ಮಕ್ಕಳೇಕೆ ದೊಡ್ಡವರ ಕೂಡ ಸಂತೋಷ ಪಡುತ್ತಿದ್ದರು. ಆದರೆ ಮಕ್ಕಳದೇನೊ ಎಂತೋ? ಅವರಿಗೆ ಅದೇ ಆಟಿಕೆ ಬೇಕು, ಯಾರೋ ಕಸಿದುಕೊಂಡಿದ್ದು. ದರಬಾರಿ ಕೆಟ್ಟ ಕೆಟ್ಟ ಮುಖ ಮಾಡಿದ. ಎಂಥೆಂಥ ಖೊ, ಖೊ,-ಬಾಬಾ ಮಾಡಿದ, ಬಾಯಿಯಲ್ಲಿ ಬೆರಳಿಟ್ಟುಕೊಂಡು ಹನುಮಾನ ಆದ, ನಂತರ ಜಾನಿವಾಕರ್, ಆಗಾ ಆದ....ಆದರೆ ಅವನು ಅಳುತ್ತಲೇ ಇದ್ದ. ಅವನಿಗೆ ತನ್ನ ಅದೇ ಆಟಿಕೆ ಬೇಕಾಗಿತ್ತು. ಅವನ ಕೆನ್ನೆಗೆ ಏಟು ಹಾಕಬೇಕೆಂದು ದರಬಾರಿಗೆ ಅನಿಸಿತು. ಮಗು ಇನ್ನಿಷ್ಟು ಅತ್ತೀತೇನೋ ಎಂಬ ಭಯವಿರದಿದ್ದರೆ ಏಟು ಹಾಕೇಬಿಡುತ್ತಿದ್ದ. ದರಬಾರಿ ತಟ್ಟನೆ ಕೆರಳಿ

"ಈಗ ಸಾಕು ಮಾಡಲೇ ಸಾಲೇ" ಎಂದ.

ಒಳಗಿನಿಂದ ಧ್ವನಿ ಬಂದಿತ್ತು. "ಅಳಲಿ ಬಿಡೊ ಮಹರಾಯ."

ಮಗು ಅಳುತ್ತಿತ್ತು ಕೊನೆಗೆ ಅಕ್ಕ ಹಿಂದಿರುಗಿದ ಕಾಲಿನಲ್ಲಿಯೇ ಓಡಿಬಂದಳು.

"ಹೇ ರಾಮ!" ಎನ್ನುತ್ತ.

"ಹಾಯ್ ಅಲ್ಲಾಹ್ ಎಂದು ಏಕೆ ಅನ್ನುವದಿಲ್ಲ?" ದರಬಾರಿ ಕೆಣಕಿದ.

"ದೇವರ ಸಲುವಾಗಿ ನೀನು ಸುಮ್ಮನಿರು."

"ಖುದಾನ ಸಲುವಾಗಿ ಎಂದರೆ ಮಾತ್ರ ಸುಮ್ಮನಾಗಬಲ್ಲೆ."

ನಂತರ ಸತವಂತಿ ಅಥವಾ ಕನೀಜ ಹೇಗೆ ಆಟಿಕೆಯನ್ನು ಕಸಿದು ಒಯ್ದಿದ್ದಳೋ ಹಾಗೆಯೇ ಅದನ್ನು ಹಿಂದಿರುಗಿಸಿದಳು. ಅವಳು ಆಟಿಕೆಯನ್ನು ಮಗುವಿನ ಕೈಯಲ್ಲಿ ತಿವಿದು ಇಡುತ್ತ "ತಗೊ ನನ್ನಪ್ಪ" ಎಂದಳು. ನಂತರ ಅವನ ಅಳುವ ಸ್ಥಿತಿಯನ್ನು ನೋಡಲು ಆಗಲಿಲ್ಲವೆನ್ನುವಂತೆ ಅವನನ್ನು ಎತ್ತಿಕೊಂಡಳು, ಅಪ್ಪಿಕೊಂಡಳು. ಬೆನ್ನು ತಟ್ಟಿದಳು....ಕಮೀಜಿನಿಂದ (ಅಂಗಿಯಿಂದ) ಅವನ ಮುಖ ಒರೆಸಿದಳು, ಮೂಗು

ಸ್ನಿಹ್ಯ ಮಾಡಿದಳು. ನಂತರ ಚುಂಬಿಸಿದ್ದೇ ಚುಂಬಿಸಿದ್ದು. ಅವಳ ಹೇಳಿಕೆಯ ಪ್ರಕಾರ "ಬಹಳ ತಣ್ಣಗಾಯಿತು...."ಬಳಿಕ ತನಗೆ ತಾನೆ ಬಹಳಷ್ಟು ಬೈದುಕೊಂಡಳು. "ಹಾಯ್! ಇಂಥ ತಾಯಿ ಸಾಯಲಿ! ಜಗತ್ತಿನಲ್ಲಿ ಇಂಥವಳು ಇರಕೂಡದು. ಮುದ್ದುಮರಿಯನ್ನು ಎಷ್ಟು ಅಳಿಸಿದ್ದಾಳೆ."

ನಂತರ ತನ್ನ ಪತಿ ಅಥವಾ ಶೋಹರನ ಕಡೆ ನೋಡುತ್ತ, "ನೋಡ್ರಿ ಇವರನ್ನು, ಎಷ್ಟು ಆರಾಮಾಗಿ ಕುಳಿತಿದ್ದಾರೆ" ಎಂದು ಗದ್ದರಿಸಿದಳು.

ಅವರು ಎದ್ದು ನಿಂತರು—ವಿಶೇಷ ಖಿನ್ನರಿದ್ದಹಾಗೆ ಕಾಣಿಸುತ್ತಿದ್ದರು.

"ಈಗ ಬೇಕಾದರೆ ಕೈ ಬಿಟ್ಟು ಕುತ್ತಿಗೆ ಕೊಯ್ದುಕೊ" —ದರಬಾರಿ ಅಂದ.

"ಕೊಯ್ದಿಕೊ? ಅಯ್ಯೊ, ನಾನು ಸತ್ತೆ! ನಿಮಗೆ ಒಂದಿಷ್ಟಾದರೂ ಅದೂ ಇಲ್ಲವೆ?"—ಅಕ್ಕ ನುಡಿದಳು.

ಇರಬಹುದು ಅಥವಾ ಇರಲಿಕ್ಕಿಲ್ಲ. ತಿಳಿ ಮಾಡುವವನೇ ತಿಳಿಗೇಡಿತನವನ್ನು ಕೂಡ ಮಾಡುತ್ತಾನೆ ಎಂದು ಹೇಳುತ್ತಾರೆ. ಆದರೆ ಸಾವಿರ ಸಲ ಶಂಖ ಹೊಡೆದ ಮೇಲೆ. ಮೊದಲೇ ಅವನ ಕೈಯಿಂದ ಕಸಿದುಕೊಳ್ಳುವ ಮೂರ್ಖತನ ಮಾಡಬಾರದಿತ್ತು."—ದರಬಾರಿ ಅಂದ.

"ಹಾಂ! ನಾನು ಮೂರ್ಖಳು" ಎಂದು ಅಕ್ಕ ಮಗುವನ್ನು ಎತ್ತಿಕೊಂಡು, "ತಾಯಿಯಾಗುವುದು ಮತ್ತು ಬುದ್ಧಿ ಕಾಪಾಡಿಕೊಳ್ಳುವುದು ಎರಡೂ ಬೇರೆ ಬೇರೆ ವಿಷಯ" ಎಂದು ಅನ್ನುತ್ತಿದ್ದಂತೆ ಒಳಗೆ ಹೋದಳು.

ಅಕ್ಕನ ಹೆಗಲ ಮೇಲೆ ತನ್ನ ತಲೆಯಿಟ್ಟು ಬದ್ಮಾಷ್ ಮೆಹಮೂದ ಅಥವಾ ಬನವಾರಿ, ತನಗೆ ತನ್ನ ಶಕ್ತಿ ಮತ್ತು ಪ್ರಭುತ್ವಗಳ ಸರಿಯಾದ ಪರಿಚಯವಿದೆ ಎನ್ನುವ ಹಾಗೆ, ನಗುತ್ತಿದ್ದುದು ಕಾಣಿಸಿತು.

ಅಷ್ಟರಲ್ಲಿ, ಎದುರಿಗಿನ ಆರೋರಾ ಸಿನೆಮಾದ ಕಡೆಯಿಂದ ಬರುವ ರಸ್ತೆಯ ತಿರುವಿನಲ್ಲಿ ಕಿತ್ತಳಿ ಬಣ್ಣವು ಎರಡು ಮೂರು ಸಲ ಅಲೆದಾಡಿತು. ದರಬಾರಿ ಬೇಗ ಬೇಗ ತನ್ನ ಬಟ್ಟೆಗಳನ್ನು ಸರಿಮಾಡಿಕೊಂಡು, ತಲೆಯಮೇಲೆ ಟೋಪಿ ಇಟ್ಟು ಹೊರಬಿದ್ದ.

ತಿರುವಿನಲ್ಲಿ ಸೀತಾ ನಿಂತಿದ್ದಳು. ಅವಳು ಒಂದು ಸಲ ದರಬಾರಿಯತ್ತ ನೋಡಿ ನಂತರ ಆಚೆ ನೋಡತೊಡಗಿದಳು. ಅವಳ ಕಣ್ಣುಗಳು ಇನ್ನಿಷ್ಟು ಒಳಸೇರಿದ್ದವು. ರೆಪ್ಪೆಗಳು ಇನ್ನಿಷ್ಟು ತೇವಗೊಂಡಿದ್ದವು.

"ಹೇಳಿರಿ ಹುಜೂರ್, ಹುಕುಂ ಏನಿದೆ?"—ದರಬಾರಿ ಅಂದ.

ಸೀತಾ ಏನೂ ಉತ್ತರಿಸಲಿಲ್ಲ. ಅವಳು ಸ್ವಲ್ಪ ನಡುಗುತ್ತಿದ್ದ ಹಾಗೆ ದರಬಾರಿಗೆ ಅನಿಸಿತು. ದರಬಾರಿ ಬಹಳ ಸಮಯ ಅವಳ ಕಡೆ ನೋಡಿ, "ಹೀಗೆ ಸುಮ್ಮನೇ ಇರುವದೇ ಆಗಿದ್ದರೆ....ಮತ್ತೆ...." ಎಂದು ಅವನು ಹಿಂದಿರುಗತೊಡಗಿದ.

" ಕೇಳಿರಿ" ಎಂದು ತಟ್ಟನೆ ಸೀತೆ ಹೊರಳುತ್ತ, " ನನ್ನನ್ನು ಕ್ಷಮಿಸಿರಿ. ಆ ದಿನ ನನ್ನಿಂದ ದೊಡ್ಡ ತಪ್ಪಾಯ್ತು " ಅಂದಳು.

ದರಬಾರಿ ನಿಂತು ಅವಳ ಕಡೆ ನೋಡಿ, " ಈ ಸಲವಂತು ಆಗುವದಿಲ್ಲವಷ್ಟೆ" ಎಂದನು.

ಸೀತೆ ನಕಾರದಲ್ಲಿ ತಲೆಯಲ್ಲಾಡಿಸಿದಳು.

" ಎಲ್ಲಿ ಹೇಳುವೆನೊ ಅಲ್ಲಿಗೆ ನನ್ನ ಜೊತೆ ಬರುವೆ ಅಲ್ಲವೆ ? "

ಸೀತೆ ಒಪ್ಪಿಗೆಯಲ್ಲಿ ತಲೆಯಲ್ಲಾಡಿಸಿದಳು. ಮತ್ತು ಮುಖವನ್ನು ಆಚೆ ತಿರುವಿ ಸೀರೆಯ ಸೆರಗಿನಿಂದ ತನ್ನ ಕಣ್ಣುಗಳನ್ನು ಒರಸಿಕೊಂಡಳು. ದರಬಾರಿಯ ದೇಹದಲ್ಲಿ ಒಮ್ಮಿಂದೊಮ್ಮೆಲೆ ರಕ್ತದ ವೇಗವು ತೀವ್ರಗೊಂಡಿತು. ಅವನು ತನ್ನ ಒರಟಾದ ಕೈಚಾಚಿ ಸೀತೆಯ ಮೃದುವಾದ ಕೈ ಹಿಡಿದುಕೊಂಡು, " ನೀನು ಹೀಗೇಕೆ ಹೆದರುತ್ತಿರುವಿ, ಸೀತಾ....ನಿನ್ನನ್ನು ನೋಡಿದರೆ ನಾನು ಬಹಳ ನೀಚನಂತೆ ಕಾಣುವೆನೆ ? " ಎಂದು ಕೇಳಿದ.

ಸೀತೆ ಇದನ್ನೇ ಕೇಳಬಯಸಿದ್ದಳೆನ್ನುವ ಹಾಗೆ, "ಇಲ್ಲ ಇಲ್ಲ....ಹೀಗೇಕೆ" ಎಂದಳು.

ದರಬಾರಿ ಮತ್ತು ಸೀತೆ ಅಲ್ಲಿಯೇ ಬಂದರು—ಶಿವಾಜಿ ಪಾರ್ಕಿನಲ್ಲಿ ಗೋಡೆಯ ಕೆಳಗೆ. ಸೂರ್ಯ ಮುಳುಗಿದ್ದ. ಇಂದು, ಭೂಮಿಯ ವೃತ್ತಾಕಾರದಿಂದ ಆಕಾಶದ ಕಡೆ ಪ್ರತಿಫಲಿಸುತ್ತಿದ್ದ ಬೆಳಕನ್ನು ಇತ್ತ ಭೂಮಿಯ ಮೇಲೆ ಚೆಲ್ಲುವ ಮೋಡಗಳು ಆಕಾಶದಲ್ಲಿ ಇರಲಿಲ್ಲ. ಆದ್ದರಿಂದ ಕತ್ತಲೆಯು ಕೂಡಲೆ ಜಗತ್ತನ್ನು ಆವರಿಸಿಬಿಟ್ಟಿತ್ತು. ಎದುರಿಗಿನ ಮಹಾತ್ಮಾ ಗಾಂಧಿ ಸ್ವಿಮ್ಮಿಂಗ್ ಪೂಲ್‌ನ ಸುತ್ತಲೂ ಕಟ್ಟಿದ ಬೇಲಿಯು ಮಸಕುಮಸಕಾಗಿ ಕತ್ತಲೆಯಲ್ಲಿ ಅಡಗಿತು.

ದರಬಾರಿಯ ಹೆಚ್ಚುತ್ತಿದ್ದ ಪ್ರಣಯದೆದುರು ಸೀತೆ ನಾಚುತ್ತ ಕುಳಿತಿದ್ದಳು. ದರಬಾರಿ ಒಮ್ಮೆಲೆ ಕೆರಳಿ, " ಒಂದಿಷ್ಟು ನಗು, ಒಂದಿಷ್ಟು ಮಾತಾಡು " ಎಂದ. ಸೀತೆ ನಗಬೇಕಾಯಿತು.

ದರಬಾರಿ ಸೀತೆಯ ಜೊಳ್ಳು ನಗೆಯನ್ನು ಅಣಕಿಸಿದ. ಸೀತೆ ನಿಜವಾಗಿಯೂ ನಕ್ಕುಬಿಟ್ಟಳು. ದರಬಾರಿ ಧೈರ್ಯ ಪಡೆದು, " ನಿಜವಾಗಿಯೂ ನನ್ನ ಮೇಲೆ ವಿಶ್ವಾಸವಿಲ್ಲವೆ ? " ಎಂದ.

" ಆ ಮಾತೇ ಇಲ್ಲ. ನೀವು ಮದುವೆ ಮಾಡಿಕೊಂಡರೂ ನನ್ನನ್ನು ತಿರಸ್ಕಾರ ದೃಷ್ಟಿಯಿಂದಲೇ ಕಾಣುವಿರಿ. ನಾನು ಹೀಗೆಯೇ ಇದ್ದೆನೆಂದು ಭಾವಿಸುವಿರಿ "—ಸೀತೆ ನುಡಿದಳು.

" ಇಲ್ಲಾ ಸೀತಾ, ನಾನು ಹಾಗೆ ತಿಳಿದುಕೊಳ್ಳುವದಿಲ್ಲ....ಎಂದಿಗೂ ಇಲ್ಲ."

ಅಷ್ಟರಲ್ಲಿ ಕೆಲವು ಜನರು ಕೈಯಲ್ಲಿ ಕಬ್ಬಿಣದ ಸಲಾಕೆಗಳನ್ನು ಹಿಡಿದುಕೊಂಡು ಬಂದರು, ದರಬಾರಿ ಬೆದರಿದ. ಅವರು ಸಲಾಕೆಗಳಿಂದ ಮಿಣಿಗಳ ಮೇಲೆ ಹೊಡೆಯ

ಲಾರಂಭಿಸಿದರು. ಅದನ್ನು ಕಂಡು ಅವನಿಗೆ ನೆಮ್ಮದಿಯಾಯಿತು. ಅವರು ತಾವೇ ಒಂದೆರಡು ದಿನಗಳ ಹಿಂದೆ ಅಡಗಿಸಿಟ್ಟಿದ್ದ ಗುಪ್ತ ಖಜಾನೆಯನ್ನು ಹುಡುಕುತ್ತಿದ್ದರೇನೋ. ಈಗ ಸಮುದ್ರದಲ್ಲಿ ಉಬ್ಬರ ಬರುವ ಮೊದಲೆ ಅದನ್ನು ತೆಗೆದುಕೊಂಡು ಉಪಯೋಗ ಮಾಡಿಕೊಳ್ಳಲು ಬಯಸಿದ್ದರು. ದರಬಾರಿ ಮತ್ತು ಸೀತೆ ಎದ್ದು ಸ್ವಲ್ಪ ಆಚೆ, ಗೋಡೆಯ ಇನ್ನೊಂದು ಕೊನೆಗೆ ಹೋಗಿ ಕುಳಿತರು. ಅಲ್ಲಿಂದ ಮೇಲಕ್ಕೆ ನೋಡಿದರೆ ಮುಂಬಯಿಯ ಪಾತ್ರೆ ತಿಕ್ಕುವ ರಾಮಾ ಜನರು ಕುಳಿತು ತಮ್ಮ ತಮ್ಮಲ್ಲೇ ಜೋರಾಗಿ ನಗುತ್ತಿದ್ದರು. ದರಬಾರಿ ಅದನ್ನು ನೋಡಿದರೂ ನೋಡಲು ಬಯಸಲಿಲ್ಲ. ಸೀತೆ ಗಾಬರಿಗೊಳ್ಳುತ್ತಿದ್ದಳು, ನಾಚುತ್ತಿದ್ದಳು, ನೀರು ನೀರಾಗುತ್ತಿದ್ದಳು. ಅವಳು ಸಂಪೂರ್ಣವಾಗಿ ದರಬಾರಿಯ ಕೈಯಲ್ಲಿದ್ದಳು. ಇಂದು ಅವಳಿಗೆ ತನ್ನದೆನ್ನುವ ಯಾವುದೇ ನಿರ್ಧಾರವೂ ಇರಲಿಲ್ಲ. ಅವಳಂತು ಯಾರೋ ಮುನಿಸುಗೊಂಡವನನ್ನು ಒಲಿಸಲು ಪ್ರಯತ್ನಿಸುತ್ತಿದ್ದಳು. ಅದಕ್ಕಾಗಿ ಯಾವ ಬೆಲೆಯನ್ನಾದರೂ ತೆತ್ತಲು ಸಿದ್ಧವಾಗಿದ್ದಳು.

ಅಷ್ಟರಲ್ಲಿ ಕೆಲವು ಪೋಲಿ ಪೋಕರಿಗಳು, "ಅಮ್, ಮೆರೆ ದಿಲ್ ಕಂಹಿ...." ಹಾಡುತ್ತ ಸಮೀಪದಲ್ಲಿ ಹಾಯ್ದು ಹೋದರು. ನಂತರ ಒಬ್ಬ ಪೋಲಿಸ್‌ಮನ್ ಬಂದ. ದರಬಾರಿ ರೇಗಿ, ಎದ್ದು ನಿಂತ. ಬಳಿಕ ಕೆಂಪುಗಣ್ಣುಗಳಿಂದ ಸುತ್ತಲಿನ ಪರಿಸರವನ್ನು ನೋಡಿ ಇಂಗ್ಲೀಷಿನಲ್ಲಿ ಒಂದು ದೊಡ್ಡ ಬೈಗಳನ್ನು ಅಂದು, "ನಡೆ ಸೀತಾ, ಇಲ್ಲಿ ಬೇಡ, ಜುಹೂಕ್ಕೆ ಹೋಗೋಣವಂತೆ" ಎಂದ.

"ಜುಹೂ ?"

"ಹಾಂ. ಎದ್ದೇಳು, ಕೆಡಲ್ ರೋಡಿನಿಂದ ಟ್ಯಾಕ್ಸಿ ಹಿಡಿಯೋಣವಂತೆ."

ಸೀತೆ ಮೌನವಾಗಿ ಎದ್ದು ದರಬಾರಿಯ ಜೊತೆ ಹೊರಟಳು.

ಸೀತೆ ಮತ್ತು ದರಬಾರಿ ಜುಹೂ ಬೀಚ್ ಮೇಲೆ ಅತ್ತಿತ್ತ ಅಲೆದಾಡಲು ಸಾಧ್ಯವಿರಲಿಲ್ಲ. ಯಾಕೆಂದರೆ, ಅಢಕಲ್ಲಿ ಅಪಾಯವಿತ್ತು. ಅಲ್ಲಿ ದಿನಾಲೂ ಒಂದಿಲ್ಲೊಂದು ಘಟನೆ ನಡೆಯುತ್ತಲೇ ಇತ್ತು. ಈಗ ಸ್ವಲ್ಪ ದಿನಗಳ ಹಿಂದೆ ಒಂದು ಕೊಲೆ ಆಗಿತ್ತು. ಕೆಲವು ಗುಂಡಾಗಳು ಗಂಡ-ಹೆಂಡತಿಯರನ್ನು ಜೀವನ ಸಮುದ್ರದ ಎರಡು ದಂಡೆಗಳ ಮೇಲೆ ಒಯ್ದು ನಿಲ್ಲಿಸಿದ್ದರು.

ಆದರೆ ಆ ದಿನ ಜುಹೂದ ಎಲ್ಲ ಹೋಟೆಲ್‌ಗಳು ಮತ್ತು ಕಾಟೇಜ್‌ಗಳು ಗ್ರಾಹಕರಿಂದ ತುಂಬಿಕೊಂಡಿದ್ದವು. ಸುಮಾರು ಒಂದು ಒಂದೂವರೆ ಗಂಟೆಯ ಬಳಿಕ ದರಬಾರಿ ಮತ್ತು ಸೀತೆ ಫ್ಲೋರ್ಟ್ ಕಡೆ ಹೋಗುತ್ತಿದ್ದರು. ದಾರಿಯಲ್ಲಿ ಸೀತೆ ಏನನ್ನೋ ಕೇಳುತ್ತಿದ್ದಳು. ದರಬಾರಿ ಅದಕ್ಕೆ ಬೇರೆಯೇ ಉತ್ತರ ಕೊಡುತ್ತಿದ್ದ— ಅದೂ ಸಿಡಿಮಿಡಿಯಿಂದ, ಅಸಂಬದ್ಧ ರೀತಿಯಲ್ಲಿ. ಅವನ ನಾಲಿಗೆಯು ಒಂದು ವಿಚಿತ್ರ ರೀತಿಯಲ್ಲಿ ಉಗ್ಗುತ್ತಲಿತ್ತು. ಬಹುಶಃ ಅವನು ಯಾವುದೋ ಅಮಲಿನ

ವಸ್ತುವನ್ನು ತನ್ನ ಬಾಯಿಯಲ್ಲಿ ಇಟ್ಟುಕೊಂಡಿದ್ದರಿಂದ ಅವನ ನಾಲಿಗೆಯು ಊದಿಕೊಂಡ ಹಾಗೆ ಅನಿಸುತ್ತಿತ್ತು.

ಟ್ಯಾಕ್ಸಿ ಹಾಜಿ ಅಲಿಯಿಂದ ತಾರದೇವ್ ಸೇರಿತು. ಅಲ್ಲಿಂದ ಆಪೆರಾ ಹೌಸ್ ಮೇಲಿಂದ ಹಾರ್ನಬಾಯ್ ರೋಡ್—ಈಗ ಅದರ ಹೆಸರು ಮಹಾತ್ಮಾ ಗಾಂಧಿ ರೋಡ್ ಎಂದಿದೆ—ತಲುಪಿತು. ಅಲ್ಲಿ ಒಂದು ಹೋಟಲ್ ಒಳಗೆ ಹೋಗಿ ಅದರ ಮೆನೆಜರನನ್ನು ಕೇಳಿದ—"ರೂಮ್ ಏನಾದರೂ ಇದೆಯೇ ?"

ಮೆನೆಜರ್ ದರಬಾರಿಯನ್ನು ದಿಟ್ಟಿಸಿ ನೋಡಿದ. ಅವನ ಮುಖದಿಂದ ಅವನು ಯಾವದೋ ಕೊಲೆ ಮಾಡಿ ಬಂದಿದ್ದಾನೆ, ಇಲ್ಲವೆ ಮಾಡ ಹೊರಟಿದ್ದಾನೆ ಎನ್ನುವ ಹಾಗೆ ತೋರುತ್ತಿತ್ತು. ಸೀತೆ ಅವನ ಹಿಂದೆ ನಿಂತು ನೆಲದ ಕಡೆ ನಿಟ್ಟಿಸುತ್ತ ಥರಥರ ನಡುಗುತ್ತಿದ್ದಳು. ಇಬ್ಬರೂ ಪಾಪದ ಅಭ್ಯಸ್ತರಾಗಿರಲಿಲ್ಲ. ಅಪಕ್ವವಾದ, ಕ್ರೂರ ಪ್ರಕೃತಿಯ ಬಂಧನಕ್ಕೆ ಸಿಕ್ಕು ಅವರು ಹುಚ್ಚರಂತಾಗಿದ್ದರು. ಆವಾಗ ಮೆನೆಜರ್ ಕೇಳಿದ—"ತಾವು ಎಲ್ಲಿಂದ ಬಂದಿರುವಿರಿ ?"

"ಊಂ !"—ದರಬಾರಿ ತಟ್ಟನೆ ಯೋಚಿಸುತ್ತ "ಔರಂಗಾಬಾದಿನಿಂದ" ಎಂದನು.

"ಹೀಗೋ !" ಎಂದು ಮೆನೆಜರ್ ಹಿಂದಕ್ಕೆ ಸೀತೆಯತ್ತ, ನಂತರ ದರಬಾರಿಯ ಕಪ್ಪಿಟ್ಟ ಮುಖದ ಕಡೆ ನೋಡುತ್ತ ಕೇಳಿದ,—"ತಮ್ಮ ಸಾಮಾನು ಎಲ್ಲಿವೆ ?"

"ಸಾಮಾನ ಅಂತು ಇಲ್ಲ...."

"ಕ್ಷಮಿಸಿರಿ—ನಮ್ಮಲ್ಲಿ ಯಾವ ರೂಮೂ ಇಲ್ಲ" ಮೆನೆಜರ್ ದರಬಾರಿಯು ಯಾವುದೋ ಕೊಳಕಾದ ಅಂಟಂಟಾದ ವಸ್ತುವೆನ್ನುವಹಾಗೆ ಅವನತ್ತ ನೋಡುತ್ತ ಹೇಳಿದ.

"ಏನು ಹಾಗೆಂದರೆ ? ಇದೀಗ ಟೆಲಿಫೋನ್ ಮೇಲೆ...."

ಟ್ರೇದಲ್ಲಿ ವೇಫರ್ಸ್, ಹೆಸರು ಬೇಳೆ ಮತ್ತು ಸೋಡಾ ಬಾಟ್ಲಗಳನ್ನು ಮತ್ತು ಕೀಲಿಯನ್ನು ಒಯ್ಯುತ್ತಿದ್ದ ೨೮ ನಂಬರಿನ ಬೇರಾ ಹೇಳಿದ—"ಈ ಹೋಟಲ್ ಮರ್ಯಾದಸ್ಥರಿಗೆ ಮಾತ್ರವಿದೆ, ಸಾಹೇಬ."

ದರಬಾರಿಗೆ ಏನೂ ಅನ್ನಲು ಶಕ್ಯವಿರಲಿಲ್ಲ. ವಾಸ್ತವದಲ್ಲಿ ಈ ಬೇರಾನ ಟಿಪ್ ಒಂದು ರೂಪಾಯಿಗಿಂತ ಹೆಚ್ಚಿಲ್ಲ, ಮತ್ತು ಮೆನೆಜರ್ ಸಾಹೇಬರ ಮರ್ಯಾದೆಯು ಐದು ರೂಪಾಯಿಯನ್ನು ಮಿಕ್ಕಿಲ್ಲ—ಎಂದು ಅವನಿಗೆ ಖಾತರಿಯಿಂದ ಗೊತ್ತಿತ್ತು.... ಇಂದು ಇವರೆಲ್ಲರೂ ಒಮ್ಮೆಲೆ ಒಳ್ಳೆಯತನ, ಮರ್ಯಾದೆ ಮತ್ತು ಪ್ರಾಮಾಣಿಕತೆಗಳ ಮೂರ್ತಿಗಳಾಗಿ ಕುಳಿತಿದ್ದಾರೆ. ಅವರು ಮರ್ಯಾದೆ ಹಾಗೂ ಪ್ರಾಮಾಣಿಕತೆಗಳ ಮೂರ್ತಿಗಳಾಗಿದ್ದರೊ ಇಲ್ಲವೊ....ಆದರೆ, ಜೀವನದಲ್ಲಿ ಏನನ್ನಾದರೂ ಮಾಡಿಕೊಂಡು ಹೋಗಬೇಕಾದರೆ ನಿಪುಣತೆ ಇರಬೇಕಾದುದು ಅವಶ್ಯವಿದೆ, ಕಣ್ಣುಗಳಲ್ಲಿ

—ಅದರ ನೋಟವನ್ನು ಎದುರಿಸಿ, ಎದುರಾಳಿಯ ನೈತಿಕತೆ, ಪ್ರಾಮಾಣಿಕತೆ ಮತ್ತು ಪರಿಶುದ್ಧತೆಗಳೆಲ್ಲ ಹುಸಿ ಬೀಳುವಂತೆ—ಒಂದು ವೃತ್ತಿ ಸಹಜ ಗಡಸುತನ, ನಿರ್ಭಯತೆ ಮತ್ತು ಲಜ್ಜೆ ಹೀನತೆಗಳನ್ನು ತರಬೇಕಾಗುತ್ತದೆ—ಎಂಬ ಒಂದು ಮಾತು ಮಾತ್ರ ಸಿದ್ಧವಾಗಿತ್ತು....ದರಬಾರಿ ತನ್ನೊಳಗೆ ಎಲ್ಲಿಯೋ ಅಶಕ್ತ, ಎಲ್ಲಿಯೋ ಹೇಡಿಯಾಗಿದ್ದ. ಅವನೊಂದು ಸಾಣೆ ಹಿಡಿಯದಿದ್ದ ವಜ್ರದಂತಿದ್ದ.

ಮರಳಿ ಹೋಗುವಾಗ ಅವನು ಇಂಗ್ಲೀಷಿನಲ್ಲಿ ಬೈಗಳನ್ನು ಬೊಗಳುತ್ತಿದ್ದ. ಅವನು ಅವುಗಳನ್ನು ಹೊಟಲ್‌ದ ವ್ಯವಸ್ಥಾಪಕರಿಗೆ ಅನ್ನಬೇಕೆಂದು ಮಾಡಿದ್ದ, ಜೊತೆಗೆ ಅವರಿಂದ ಮುಚ್ಚಿಯೂ ಇಡಬೇಕೆಂದಿದ್ದ.

"ನಡೆ ಸೀತಾ....ಮತ್ತೆ ಯಾವಾಗಾದರೂ ನೋಡೋಣ" ಎಂದು ದರಬಾರಿ ಹೇಳಿದ.

ಬಳಿಕ ಇಬ್ಬರೂ ಟ್ಯಾಕ್ಸಿಯಲ್ಲಿ ಕುಳಿತು ಮನೆಯತ್ತ ಹೊರಟರು.

ಜೀವನವು ನಿಸ್ಸಾರಗೊಂಡಿತ್ತು. ಇಂತಹ ಸೋಲಿನ ಅನುಭವ ದರಬಾರಿಗೆ ಎಂದೂ ಆಗಿರಲಿಲ್ಲ. ಅವನ ದೃಷ್ಟಿಯಲ್ಲಿ ಎಷ್ಟೋ ಜನರು ಹೀರೊ ಆಗಿಬಿಟ್ಟರು ಮತ್ತು ಎಷ್ಟೋ ಹೀರೊಗಳು ಬಂದು ಕಾಲಮೇಲೆ ಬಿದ್ದರು.

ಈ ದಿನ ಅವನಿಗೆ ಎಲ್ಲಿಗೂ ಹೋಗುವ ಯೋಚನೆ ಇರಲಿಲ್ಲ; ಯಾವ ಪ್ರೋಗ್ರಾಮ್ ಇರಲಿಲ್ಲ. ಆದರೆ ಒಂದು ಅಸ್ಪಷ್ಟ ಭಾವನೆಯಿಂದ ಅವನು ಆಫೀಸಿನಿಂದ ಬೇಗನೇ ಬಂದಿದ್ದ—ದಣಿದು ಹೌಹಾರಿ ಬಳಲಿದವನ ಹಾಗೆ. ಆ ಸಂಜೆಯ ಸೋಲು ಮತ್ತು ಅಪಮಾನಗಳ ಬಳಿಕ ಒಂದು ನೆಮ್ಮದಿಯಂಥ ಭಾವನೆ ಇತ್ತು. ಆದರೆ ಅದು ನೆಮ್ಮದಿಯೂ ಆಗಿರಲಿಲ್ಲ....ಈ ಬೆಂಕಿ....ಅದು ಹುಟ್ಟಿಯೇ ಇರದಿದ್ದರೆ ....ಆದ್ದರಿಂದ ಹಿರಿಯರು ವಿಚಾರಕ್ಕೆ ಬಹಳ ಮಹತ್ವವನ್ನು ಕೊಡುತ್ತಾರೆ. ಈ ಮಹಾಶಯ ಹುಟ್ಟಲೇ ಬಾರದು. ಒಂದು ವೇಳೆ ಹುಟ್ಟಿದರೆ ತಾವು, ಮನುಷ್ಯನ ಮಕ್ಕಳ ಹಾಗೆ, ಅವುಗಳನ್ನು ಕೊಡಹಲು ಶಕ್ಯವಿಲ್ಲ; ಅವುಗಳ ಕತ್ತು ಹಿಚುಕಲು ಸಾಧ್ಯವಿಲ್ಲ. ಯಾಕೆಂದರೆ, ಎರಡೂ ಪಕ್ಷಗಳಲ್ಲಿ ಇಂಥ ಅಪರಾಧದ ಶಿಕ್ಷೆಯು ಮರಣವಿರುತ್ತದೆ. ಅವು ಮೆದುಳಿನ ಯಾವುದೋ ಮೂಲೆಯಲ್ಲಿ ಸುಮ್ಮನೆ, ಮುದುಡಿಕೊಂಡು ಬಿದ್ದಿರುತ್ತವೆ. ತಾವು, ಸ್ನಾನ ಮಾಡಿಸುತ್ತಿರುವ ಶವದ ಹಾಗೆ, ಸಂಪೂರ್ಣ ನಿರಾಯುಧರಾದಾಗ, ಪೂರ್ತಿ ವಿವಶರಾದಾಗ ಅವು ತಲೆಯೆತ್ತುತ್ತವೆ.

ಆಗ ದರಬಾರಿ ವರಂಡಾದಲ್ಲಿ ಕುಳಿತು ಡಾನ್ ಬಾಸ್ಕೊ ಸ್ಕೂಲಿನ ಗೋಡೆಯ ಬಳಿ ಬೆಳೆದ ಗಿಡಗಳನ್ನು ನೋಡುತ್ತಿದ್ದ. ಅವುಗಳ ನೆರಳಿನಲ್ಲಿ ಮೊಹಲ್ಲಾದ ಶ್ರೀಮಂತರ ಮೋಟರ್‌ಗಳು ನಿಂತಿದ್ದವು. ಅವುಗಳಲ್ಲಿ ಕೆಲವು, ಯಾರು ಮನೆಯಿಂದ ಆಫೀಸ್

ಮತ್ತು ಆಫೀಸ್‌ನಿಂದ ಮನೆಗೆ ನೇರವಾಗಿ ಬರುತ್ತಿದ್ದರೊ ಮತ್ತು ಯಾರಿಗೆ ಹೆಂಡತಿಯರ ಜೊತೆ ಜಗಳವಾಡುವದರಿಂದಲೇ ಸಮಾಧಾನವಾಗುತ್ತಿತ್ತೊ, ಅಂಥ ಶ್ರೀಮಂತ ಕೆಲಸಗಾರರ ಒಡೆತನಕ್ಕೆ ಸೇರಿದ್ದವು. ಇನ್ನು ಕೆಲವು ಅವುಗಳನ್ನು ಚಲಿಸುತ್ತಿರುವ ಸೂಳೆಯರ ಮನೆಗಳನ್ನಾಗಿ ಪರಿವರ್ತಿಸಿದಂಥ ಜನರಿಗೆ ಸಂಬಂಧಿಸಿದ್ದವು. ಇಂಥ ಮೋಟರ್‌ಗಳ ಡ್ರ್ಯಾಯವರ್‌ಗಳಿಗೆ ಸಂಜೆಯಾಗುತ್ತಲೆ ಗಾಡಿಯನ್ನು ಹೊಳೆಯುವಂತೆ ಮಾಡಲು ಮತ್ತು ತಮ್ಮ ಬಾಯಿ ಹೊಲಿದುಕೊಂಡಿರಲು ಪಗಾರವನ್ನು ಸುಮ್ಮನೆ ಕೊಡಲಾಗುತ್ತಿತ್ತು. ಇವರೂ 28 ನಂಬರ್ ಬೇರಾ ಆಗಿದ್ದರು.

ದರಬಾರಿ ಎಳೆದೆಳೆದು, ಆ ದಿನ ಹೊಟಲ್‌ದಲ್ಲಿ ಉದ್ಭವಿಸಿದ್ದ ಉದಾಸೀನತೆಯ ಸಂಬಂಧವನ್ನು ಕಾರಿನಲ್ಲಿ ವೃದ್ಧಿಗೊಳ್ಳುವ ಅಭಿಲಾಷೆಯೊಂದಿಗೆ ಕಲ್ಪಿಸಿದ್ದನು. ಆದರೆ ಏನು ಲಾಭ? ಅಭಿಲಾಷೆಯನ್ನು ಥಳಥಳಿಸಿ, ಹೊಳಪಿಸಿದರೆ ಎಲ್ಲಾದರೂ ಕಾರು ಸಿಕ್ಕೀತೆ? ತಂದೆ ಗಿರಿಧಾರಿಲಾಲ ಮೆಹತಾ ಅವರಂತೂ ಹಣಕ್ಕೆ ಗಾಳಿಯನ್ನು ಕೂಡ ತಾಕಿಸಿಗೊಡುತ್ತಿರಲಿಲ್ಲ. ಮುಂದಿನ ಜನ್ಮದಲ್ಲಿಯೂ ಹಾವಾಗಿ ಗುಪ್ತ ನಿಧಿಯ ಮೇಲೆ ಕೂಡಲು ಅವರು ನಿರ್ಧರಿಸಿದಂತಿತ್ತು.

ಸಾಲಹೆಭಾಯಿ ಅಥವಾ ಸರದಾರಿಲಾಲ, ತಮ್ಮ ಹೆಂಡತಿ ಮಕ್ಕಳ ಸಮೇತ ತಮ್ಮ ಮನೆಗೆ ಹೋದರು. ಈಗ ಬಡಕಲು ತೋಳುಗಳ, ಮಕ್ಕಳಿಲ್ಲದ ಅತ್ತಿಗೆ ಮಾತ್ರ ಉಳಿದಿದ್ದರು. ತನಗೆ ಮಕ್ಕಳಾಗದ್ದಕ್ಕೆ ಅಣ್ಣನ ಜೊತೆ ಅವಳ ತಕರಾರು ಇದ್ದೇ ಇರುತ್ತಿತ್ತು. "ನಿಮ್ಮಲ್ಲಿ ದೋಷವಿದೆ" ಎಂದು ಅವಳು ಹೇಳಿದರೆ, ಅಣ್ಣ "ನಿನ್ನಲ್ಲಿದೆ" ಎಂದು ಹೇಳುತ್ತಿದ್ದ. "ನೀವು ಡಾಕ್ಟರಿಗೆ ತೋರಿಸಿರಿ" ಎಂದು ಅವಳು ಹೇಳಿದರೆ "ನೀನು ನಿನ್ನ ತಪಾಸಣೆ ಮಾಡಿಸು" ಎಂದು ಅವನು ಹೇಳುವನು.

ದರಬಾರಿ ಪೂರ್ತಿ ಬೋರ್ ಆಗಿದ್ದ. ತಾನು ಇನ್ನಷ್ಟು ಸಮಯ ಮನೆಯಲ್ಲಿ ಉಳಿದರೆ ತನ್ನ ತಾಯಿ ತನ್ನ ಮದುವೆಯ ಮಾತುಕತೆ ನಡೆಸಲು ಬಂದುಬಿಡುವಳು ಎಂಬುದು ಅವನಿಗೆ ಗೊತ್ತಿತ್ತು. ಅವನಿಗೆ ಮದುವೆಯಾಗುವ ಇಚ್ಛೆ ಇರಲಿಲ್ಲ. ಹಾಂ, ಕೆಲವು ದಿನ ಜೀವನ ನೋಡಿದರಾಯಿತು. ಕೊನೆಗಂತು ಒಂದಿಲ್ಲ ಒಂದು ದಿನ ಪ್ರತಿಯೊಬ್ಬನೂ ಮದುವೆ ಆಗಿಯೇ ಆಗುತ್ತಾನೆ.

ಯಾರ ಜೊತೆ ಮದುವೆ? ಸೀತೆ ತಟ್ಟನೆ ಅವನ ಯೋಚನೆಯಲ್ಲಿ ಬರುವಳು. ಹಾಗೆ ಸೀತೆ ಚೆನ್ನಾಗಿದ್ದಳು. ಆದರೆ ಮದುವೆಯ ವಿಷಯಕ್ಕೆಲ್ಲ ಅವಳು ಬಹಳ ತ್ಯಾಗ ಮಾಡುವ ಹುಡುಗಿ. ಮುಖ-ಲಕ್ಷಣಗಳೇನೊ ಚೆನ್ನಾಗಿವೆ. ಆದರೆ ಹೆಂಡತಿ ಎಂದರೆ ಒಂದು ಬೇರೆಯೇ ವಸ್ತು. ಅವಳು ಒಂದಿಷ್ಟಾದರೂ ಖಿಲಾಡಿಯಾಗಿರಬೇಕು; ಅಲ್ಲಿ ಇಲ್ಲಿ ಇಣಿಕಿ ನೋಡಬೇಕು. ಯಾಕಂದರೆ, ಗಂಡ ಅವಳ ಕಿವಿ ಹಿಡಿದು "ಈ ಕಡೆ" ಎಂದು ಹೇಳಬಲ್ಲ. ಆದರೆ ಆ ವಿಧವೆಯ ಮಗಳು? ಗಂಡಸನ್ನು ಹೇಗೆ ತೆಕ್ಕೆ ಬೀಳುತ್ತಾಳೆ!—ಅವನು ತನ್ನ ಗಂಡನಲ್ಲ, ತಂದೆ ಎನ್ನುವ ಹಾಗೆ.

ನಾನೆಲ್ಲಿ ಭಾಡಿಗೆ ವಸೂಲು ಮಾಡುತ್ತ ತಿರುಗಲಿ?

ಹಾಂ ಅಲ್ಪ ಸಮಯದ ಪ್ರೇಮಕ್ಕೆ ಸೀತೆಗಿಂತ ಚೆನ್ನಾದವಳು ಯಾರೂ ಇಲ್ಲ. ಎಂಥ ದೇಹ ಪಡೆದಿದ್ದಾಳೆ!

ಅಷ್ಟರಲ್ಲಿ ಮಿಸ್ರಿ ಕಾಣಿಸಿದಳು, ಬಬ್ಬುಲ್‌ನೂ ಕಾಣಿಸಿದ.

ಮಿಸ್ರಿ ದೂರದಿಂದಲೇ "ಬಾಬೂಜಿ"ಯ ಕಡೆ ಬೆರಳು ಮಾಡುತ್ತ ಬರುತ್ತಿದ್ದಳು. ಬಬ್ಬುಲ್ ಅಲ್ಲಿಂದಲೇ ಗುಗು ಗಾಗಾ ಮಾಡುತ್ತ ಚೀಕುತ್ತಿದ್ದ. ಭೂಮಿಯಿಂದ ಚೆಂಡು ಪುಟಿದ ಹಾಗೆ ಹಠಾತ್ತನೆ ಬಬ್ಬುಲ್‌ನಲ್ಲಿ ಉತ್ಸಾಹ ಪುಟಿಯಿತು. ಮಿಸ್ರಿಗೆ ಅವನನ್ನು ಹಿಡಿಯುವದು ದುಸ್ತರವಾಯಿತು.

ಈ ದಿನ ಬಬ್ಬುಲ್ ದೇವರ ಬಟ್ಟೆಯಲ್ಲಿಲ್ಲ—ಮನುಷ್ಯನ ಬಟ್ಟೆಯಲ್ಲಿದ್ದ. ಒಂದು ಹೊಲಸಾದ ಬನಿಯನ್ ತೊಟ್ಟಿದ್ದ. ಹಾಂ, ಕೆಳಗೆ, ಅಲ್ಲಾ ಹಿ ಅಲ್ಲಾ ಇದ್ದ.

ಸಮೀಪಕ್ಕೆ ಬರುತ್ತಲೆ ಬಬ್ಬುಲ್ ಎರಡೂ ಕೈಗಳನ್ನು ಮುಂದಕ್ಕೆ ಚಾಚಿದ. "ಕಮೀನಾ, ನಾನು ಮೊದಲೆ ಇವನ ಸಲುವಾಗಿ ಚುರಮುರಿ ಹಿಡಿದುಕೊಂಡು ನಿಂತೇ ಇರುವ ಹಾಗೆ"—ಒಳಗೆ ಹೋಗುವದು ಮತ್ತು ಹೊರಗೆ ಬಂದು ಇವನ ಹುಜೂರ್‌ನಲ್ಲಿ ಕಪ್ಪು ಕಾಣಿಕೆ ಕೊಡುವದು. ಇವನ ಸಹನೆಯ ಕೊನೆಯ ಸೀಮೆ ಇದೆ ಎನ್ನುವ ಹಾಗೆ.

ಚುರಮುರಿಯನ್ನು ತೆಗೆದುಕೊಂಡು ದರಬಾರಿ ಹೊರಗೆ ಬಂದಾಗ ಅವನಿಗೆ ಮೊದಲ ಸಲ ಹೊಳೆಯಿತು. ಮಿಸ್ರಿ ಓರ್ವ ಹೆಣ್ಣು ಮತ್ತು ಬಬ್ಬುಲ್ ಅವಳ ಗಂಡು ಮಗು. ಮತ್ತು ಇದೆಲ್ಲ ಎಷ್ಟು ಪವಿತ್ರವಾಗಿದೆ. ಬಡವರಲ್ಲಿ ತಂದೆ ಇರುವನು ನಿಜ. ಆದರೆ ಅದೊಂದು ಕೇವಲ ತೋರಿಕೆಯ ವಸ್ತು.

ಆವಾಗಲೇ ದರಬಾರಿಯ ಬುದ್ಧಿಯು ತೀವ್ರವಾಗಿ ಓಡತೊಡಗಿತು. ಅವನು ಒಂದು ವರ್ತುಳದಲ್ಲಿ ತಿರುಗುತ್ತಿದ್ದ. ತಿರುತಿರುಗಿ ಅಲ್ಲಿಯೇ ಬಂದು ನಿಲುತ್ತಿದ್ದ. ಬಳಿಕ ಯಾವುದೋ ಸಿದ್ಧಿ ಪಡೆದಂಥ ಸ್ಥಿತಿಯುಂಟಾಯಿತು. ಕಣ್ಣುಗಳು ಅರಳುವದು ಮತ್ತು ಆಕುಂಚನಗೊಳ್ಳುವದು ನಡೆಯಿತು. ದರಬಾರಿಲಾಲ್ ಇಂದು ಬಬ್ಬುಲ್‌ಗೆ ಅಲ್ಲಿಂದಲೇ ಚುರಮುರಿಯನ್ನು ಕೊಟ್ಟ. ಏನು ವಿಷಯವೊ ಏನೊ? ಇಂದು ಅವನು ಬಬ್ಬುಲ್‌ನನ್ನು ಎತ್ತಿಕೊಳ್ಳಲಿಲ್ಲ. ಅವನು ನಾಚುತ್ತಿದ್ದನೇನೊ. ಆದರೆ ಆ ರಬ್ಬರ್ ಚಂಡು—ಬಬ್ಬುಲ್—ಗೋಡೆಗೆ ತಾಕಿ ಪುನಃ ಮರಳುವ ಹಾಗೆ ಇಂದು ಅವನಿಗೆ ಚುರಮುರಿ ಬೇಕಿರಲಿಲ್ಲವೆಂದಲ್ಲ. ಅವನಿಗೆ ಚುರಮುರಿ ಬೇಕಿತ್ತು. ಜೊತೆಗೆ ಆಕಾಶದ ಸಾಮ್ರಾಜ್ಯವೂ ಬೇಕಿತ್ತು. "ಇಂದು ಈ ಬಾಬು ನನ್ನನ್ನೇಕೆ ಎತ್ತಿಕೊಳ್ಳುತ್ತಿಲ್ಲ" ಎಂದು ಬಬ್ಬುಲ್ ಆಶ್ಚರ್ಯಪಡುತ್ತಿದ್ದ.

"ಈ ದಿನ ದುಡ್ಡು ಎಷ್ಟು ಮಾಡಿದೆ ಮಿಸ್ರಿ"—ದರಬಾರಿ ಸ್ವಲ್ಪ ನಸುನಾಚುತ್ತ ಕೇಳಿದ.

" ಅಷ್ಟೆ, ಹದಿನಾಲ್ಕು ಆಣೆ."

" ಯಾಕೆ? ಕೇವಲ ಹದಿನಾಲ್ಕು ಆಣೆ ಯಾಕೆ?"

" ಇಂದು ನನ್ನ ಗಂಡ ನಾಗಪಾಡಾಕ್ಕೆ ಹೋಗಿದ್ದ"—ಮಿಸ್ರಿ ಸಂಕೋಚಪಡದೆ ಹೇಳಿದಳು.

" ನಿನ್ನ ಗಂಡ!"—ದರಬಾರಿ ಆಶ್ಚರ್ಯದಿಂದ ಕೇಳಿದ—" ನೀನು ಯಾವನಾದರೂ ಗಂಡನನ್ನು ಗೊತ್ತು ಮಾಡಿಕೊಂಡೆ ಏನು?"

ಮಿಸ್ರಿ ನಕ್ಕು ತನ್ನ ಎರಡೂ ತೋಳುಗಳಲ್ಲಿ ಬಬ್ಬುಲ್‌ನನ್ನು ಹಿಡಿದುಕೊಂಡು ದರಬಾರಿಲಾಲನ ಸರಿಸಮನಾಗಿ ಎತ್ತರಿಸಿ, " ಇವನು ನನ್ನ ಗಂಡ....ನನ್ನ ಗಳಿಸುವ ಗಂಡ" ಎಂದಳು. ಬಳಿಕ " ಇವೊತ್ತು ಇವನ ಮೌಸಿ ಇವನನ್ನು ಪಾರ್ಲಿಯ ಸುಣ್ಣದ ಭಟ್ಟಿಗೆ ಕರೆದುಕೊಂಡು ಹೋಗಿ ಈ ಬನಿಯನ್ ಕೊಟ್ಟಿದ್ದಾಳೆ. ಈ ಹಲಕಟ್ ಅದನ್ನು ತೊಟ್ಟುಕೊಳ್ಳುವುದೇ ಇಲ್ಲ. ಇಡೀ ಭೂಮಿಯ ಭಾರ ತನ್ನ ಮೇಲೆ ಹೇರಿರುವರೇನೋ ಎನ್ನುವ ಹಾಗೆ ಭುಜವನ್ನು ಕೊಡವುತ್ತಾನೆ" ಹೇಳಿದಳು.

ದರಬಾರಿಗೆ ಅರ್ಥವಾಯಿತು ಮತ್ತು ಅವನು ನಗತೊಡಗಿದ. ಈವರೆಗೂ ಅವನು ಬಬ್ಬುಲ್‌ನನ್ನು ತನ್ನ ಕೈಯಲ್ಲಿ ತೆಗೆದುಕೊಂಡಿರಲಿಲ್ಲ. ಬಬ್ಬುಲ್ ಚುರಮುರಿ ಮುಂತಾದುವನ್ನು ಮರೆತು ಗದ್ದಲ ಮಾಡುತ್ತಿದ್ದ.

" ಬೆತ್ತಲೆ ಇರುವ ರೂಢಿಯೆ ಬಿದ್ದರೆ ನಾಳೆ ದೊಡ್ಡವನಾಗಿ ಏನು ಮಾಡುವನೊ ಏನೊ?"—ಮಿಸ್ರಿ ಅಂದಳು.

" ಇವನು ಹೀಗೆಯೇ ಚೆನ್ನಾಗಿ ಕಾಣಿಸ್ತಾನೆ ಮಿಸ್ರಿ" ಬಬ್ಬುಲ್ ಜೇತಿ ಜೇತಿ ಹೇಳುವಂತಿತ್ತು : " ಸುಳ್ಳು....ಚೆನ್ನಾಗಿ ಕಾಣಿಸುತ್ತಿದ್ದರೆ ಮತ್ತೆ ನನ್ನನ್ನೇಕೆ ಎತ್ತಿಕೊಳ್ಳುತ್ತಿಲ್ಲ?" ಈಗಂತು ಅವನು ಬಹಳ ದೊಂಬಿ ಎಬ್ಬಿಸಿದ್ದ.

" ಹೂ ಹೂ ಹೂ"

" ಬಬ್ಬುಲ್ ಜೊತೆಗಿದ್ದರೆ ಎಷ್ಟು ಗಳಿಸುವಿ?"—ದರಬಾರಿ ಕೇಳಿದ.

" ಇವನೆ?" ಮಿಸ್ರಿ ಬಬ್ಬುಲ್‌ನನ್ನು ಕೆಳಗಿಳಿಸುತ್ತ ಅಂದಳು. ಅವಳ ತೋಳುಗಳು ದಣಿದಿದ್ದವು. ನಂತರ " ಇವನು ಇದ್ದರೆ ಮೂರು, ಒಮ್ಮೊಮ್ಮೆ ನಾಲ್ಕು ಸಿಗುತ್ತವೆ" ಅಂದಳು. ದರಬಾರಿ ತನ್ನ ಜೇಬಿನಿಂದ ಹತ್ತು ರೂಪಾಯಿಯ ನೋಟು ಹೊರತೆಗೆದು ಅದನ್ನು ಮಿಸ್ರಿಯ ಕಡೆ ಚಾಚಿದನು.

" ಇದೇನು ಬಾಬೂಜಿ?" ಮಿಸ್ರಿ ಅಂದಳು. ಅವಳ ಮುಖ ಕೆಂಪಾಗತೊಡಗಿತು.

" ನೀನು ತೆಗೆದುಕೊ" ಎಂದು ದರಬಾರಿ ಅತ್ತಿತ್ತ ನೋಡಿ " ಬೇಗ ತೆಗೆದುಕೊ, ಯಾರಾದರೂ ನೋಡಿಯಾರು" ಎಂದನು.

ಮಿಸ್ರಿ ಅತ್ತಿತ್ತ ನೋಡಿದಳು. ಇಷ್ಟರವರೆಗೆ ಅವಳ ಮುಖವು ಕಡುಗೆಂಪಾಗಿ ಬಿಟ್ಟಿತ್ತು. ಅವಳು ಸರ್ರನೆ ಹತ್ತರ ನೋಟು ತೆಗೆದುಕೊಂಡು ಪುನಃ ಅತ್ತಿತ್ತ ನೋಡಿ

ತನ್ನ ನೆಫಾ (ನಾಡಾ ಹಾಕುವ ಗಿಲಾಫ್)ದಲ್ಲಿ ತುರುಕಿಕೊಂಡಳು. ಈಗ ಅವಳು ತಾನು ಇಡೀ ವರ್ಷದಲ್ಲಿ ಕಷ್ಟದಿಂದ ಮೂರು ನಾಲ್ಕು ಬಾರಿ ಕೇಳುವ ಆ ವಾಕ್ಯದ ನಿರೀಕ್ಷೆ ಮಾಡತೊಡಗಿದಳು.

ಆದರೆ ದರಬಾರಿಯ ಮಾತು ಕೇಳಿ ಮಿಸ್ರಿಯ ಬಣ್ಣ ಕಪ್ಪಿಟ್ಟಿತು. "ನಾನು ಇವನನ್ನು ಎಷ್ಟು ಪ್ರೀತಿಸುವೆನೆಂಬುದು ನಿನಗೆ ಗೊತ್ತೀ ಇದೆ ಮಿಸ್ರಿ—ಬಬ್ಬುಲ್‌ನನ್ನು....ಒಂದು ದಿನದ ಮಟ್ಟಿಗೆ ನನಗೆ ಕೊಡು...."

ಮಿಸ್ರಿಗೆ ಏನೂ ಅರ್ಥವಾಗಲಿಲ್ಲ.

"ನಾನು ಇವನನ್ನು ಹೂವಿನ ಹಾಗೆ ನೋಡಿಕೊಳ್ಳುವೆ. ಮಿಸ್ರಿ....ಒಬ್ಬ ತಾಯಿಯ ಹಾಗೆ, ನಿನ್ನ ಹಾಗೆ. ಇವನು ನನಗೆ ಎಷ್ಟು ಸೇರುತ್ತಾನೆ, ಎಷ್ಟು ಸೇರುತ್ತಾನೆ ಅಂದ್ರೆ ಬಹಳ ಸೇರುತ್ತಾನೆ" ಎಂದು ದರಬಾರಿ ಕೈಚಾಚಿ ಬಬ್ಬುಲ್‌ನನ್ನು ಎತ್ತಿಕೊಂಡನು.

ಬಬ್ಬುಲ್ ತಟ್ಟನೆ ಸಂತೋಷಗೊಂಡ. ದರಬಾರಿಯ ತೋಳು ಸೇರುತ್ತಲೇ ಅವನು ಈಗ ಚುರಮುರಿಯ ಸಲುವಾಗಿ, ನವಿಲು ನಡೆಯುವಾಗ ತನ್ನ ಕತ್ತನ್ನು ಅಲ್ಲಾಡಿಸುವ ಹಾಗೆ, ಅತ್ತಿತ್ತ ತನ್ನ ಕತ್ತನ್ನು ತಿರುಗಿಸತೊಡಗಿದ. ನಂತರ ಅವನ ಗುಂಡುಗುಂಡಗೆ ತುಂಬಿಕೊಂಡಿರುವ ತೋಳುಗಳು ಯಾವುದೋ ಸಾಯ್ಕಲ್ ಹಾಗೆ ಚಲಿಸತೊಡಗಿದವು. ಚುರಮುರಿಯ ಕೆಲವು ಕಾಳುಗಳನ್ನು ದರಬಾರಿ ಅವನ ಬಾಯಲ್ಲಿ ಹಾಕಿದ. ಸಾಮಾನ್ಯವಾಗಿ ಬಬ್ಬುಲ್ ಅವುಗಳನ್ನು ಪಡೆಯುತ್ತಲೇ ತಾಯಿಯತ್ತ ಧಾವಿಸುತ್ತಿದ್ದ. ಆದರೆ ಇವೊತ್ತು ಅವನು ದರಬಾರಿಯ ತೋಳುಗಳಲ್ಲಿಯೇ ಶೈತಾನದಂತಹ ಚೇಷ್ಟೆಗಳನ್ನು ಮಾಡಹತ್ತಿದ. ಒಮ್ಮೆ ಬಿಡು, ಮತ್ತೊಮ್ಮೆ ಕೆಳಗಿಳಿಸು, ಒಮ್ಮೆ ಹಿಡಿದುಕೊ, ಮತ್ತೊಮ್ಮೆ ಅಪ್ಪಿಕೊ ಎಂದೆನ್ನುತ್ತಿದ್ದ. ಈ ಮಧ್ಯೆ ತಾಯಿಯ ಕಡೆ ನೋಡಿ, ನಕ್ಕುಬಿಟ್ಟ. ಆದರೆ ದರಬಾರಿಯತ್ತ ಮುಖ ಮಾಡಿದ. ದರಬಾರಿಯನ್ನು ಚುಡಾಯಿಸಿದ ಹಾಗೆ ತನ್ನ ತಾಯಿಯನ್ನು ಕೂಡ ಚುಡಾಯಿಸ ಹತ್ತಿದ.

ಮಿಸ್ರಿ ಈವರೆಗೂ ದಿಗ್ಭ್ರಮೆಗೊಂಡಿದ್ದಳು. ನಂಬಲಾಗದ ರೀತಿಯಲ್ಲಿ ತಂದೆ-ಮಗುವಿನಂಥ ಎರಡು ಜೀವಿಗಳನ್ನು ನೋಡುತ್ತಿದ್ದಳು. "ಎಲ್ಲಾದರೂ ತಮ್ಮ ಬಟ್ಟೆಗಳನ್ನು ಕೊಳೆ ಮಾಡಿದನೆಂದರೆ?"

"ಮಾಡಿದರೆ ಏನಂತೆ? ಮಕ್ಕಳ ಪ್ರತಿ ವಸ್ತುವೂ ಅಮೃತ ಸಮಾನ"—ದರಬಾರಿ ನುಡಿದ.

ಮಿಸ್ರಿಯ ಕಣ್ಣುಗಳು ತೇವಗೊಂಡವು. ಮೊದಲಿಗೆ, ಅವಳು, ಜೀವನದಲ್ಲಿ ಬಹಳ ಅಪರೂಪವಾದ ವಸ್ತು-ಗಂಡ ಸ್ವಲ್ಪ ಸಮಯಕ್ಕಾದರೂ ತನಗೆ ಸಿಕ್ಕನೆಂದು ಭಾವಿಸಿದ್ದಳು. ಈಗ ಅವಳು ತನ್ನ ಮಗುವಿಗೆ ತಂದೆ ಸಿಕ್ಕನೆಂದು ಯೋಚಿಸಿದಳು.

ಮೊದಲಿನ ವಸ್ತುವಿಗಿಂತ ಎರಡನೆಯದು ಬಹಳ ದೊಡ್ಡದಾಗಿತ್ತು.

"ನಾನು ಇವನಿಗೆ ತಿನಿಸುವೆ, ಕುಡಿಸುವೆ ಮಿಸ್ರಿ. ನೀನು ರಾತ್ರಿ ಹತ್ತು ಗಂಟೆಯ ಸುಮಾರಿಗೆ ಬಂದು ಇವನನ್ನು ಕರೆದುಕೊಂಡು ಹೋಗು"—ದರಬಾರಿ ವಚನ ಕೊಟ್ಟ.

"ಒಳ್ಳೆಯದು"—ಮಿಸ್ರಿ ತಲೆಯಲ್ಲಾಡಿಸಿದಳು.

ಮಿಸ್ರಿ ಹೊರಟಳು. ಬಳಿಕ ನಿಂತಳು. ಹಿಂದಕ್ಕೆ ಹೊರಳಿ ದರಬಾರಿಯ ತೋಳುಗಳಲ್ಲಿ ಆಡುತ್ತಿದ್ದ ಮಗುವನ್ನು ನೋಡಿದಳು. ಅದು ತನ್ನ ಸುತ್ತಲೂ ದರಬಾರಿಯ ಮುಷ್ಟಿಯನ್ನು ತೆರೆಯಲು ಪ್ರಯತ್ನಿಸುತ್ತಿತ್ತು. ಮುಷ್ಟಿ ತೆರೆಯದಾದಾಗ ಸಿಟ್ಟಿಗೇಳುತ್ತಿತ್ತು. ಮಿಸ್ರಿ ಕೂಗಿದಳು. ಬಬ್ಬುಲ್ ನೋಡಿದನಾದರೂ ಇವೊತ್ತು ಅವನಿಗೆ ಯಾವುದೇ ವಿಷಯದ ಪರವೆ ಇರಲಿಲ್ಲ. ತಂದೆಯ ಪರವೆಯೂ ಇರಲಿಲ್ಲ, ತಾಯಿಯದೂ ಇರಲಿಲ್ಲ.

ಮಿಸ್ರಿ ಮತ್ತೆ ಹೊರಟಳು. ಆದರೆ ತನ್ನ ಹೃದಯವೇ ಅಲ್ಲಿ ಉಳಿದಿದೆ ಏನೋ ಅನ್ನುವ ಹಾಗೆ ಪುನಃ ನಿಂತು ಅತ್ತ ನೋಡಿದಳು. ಬಬ್ಬುಲ್ ಇರಬಲ್ಲನೆಂಬ ವಿಷಯವು ಖಾತರಿಯಾದಮೇಲೆ ಅವಳು ಬೇಗಬೇಗನೆ ಹೊರಟುಹೋದಳು. ಸ್ವಲ್ಪ ದೂರ ಹೋದ ಬಳಿಕ ಅವಳು ತನ್ನ ನೆಫಾದಲ್ಲಿನ ಹತ್ತರ ನೋಟು ತೆಗೆದು, ಯಾರಾದರೂ ತನ್ನ ಗಂಡನನ್ನು ನೋಡುವ ರೀತಿಯಲ್ಲಿ ಅದನ್ನು ನೋಡಿದಳು.

ದರಬಾರಿ ಬಬ್ಬುಲ್‌ನನ್ನು ಕರೆದುಕೊಂಡು ಒಳಗೆ ಬಂದ. ಬಬ್ಬುಲ್‌ಗೆ ಕೋಣೆಯಲ್ಲಿಯ ಅನೇಕ ವಸ್ತುಗಳ ಬಗ್ಗೆ ಆಸಕ್ತಿ ಹುಟ್ಟಿತು. ಪ್ರತಿ ವಸ್ತುವೂ ಅವನಿಗೆ ಹೊಸದು. ಪ್ರತಿ ವಸ್ತುವನ್ನು ಅವನು ತನ್ನ ಬಾಯಲ್ಲಿ ಹಾಕಿಕೊಂಡು ಹೊಸ ಪ್ರಯೋಗ ಮಾಡಲು ಇಚ್ಛಿಸುತ್ತಿದ್ದ. ಅಂತ್ಯವಿಲ್ಲದ ಪ್ರಯೋಗ, ಸೀಮೆ ಇಲ್ಲದ ಉದ್ಯೋಗ. ಅಷ್ಟರಲ್ಲಿ ಅವನ ತಾಯಿ ಬಂದರು. ದರಬಾರಿಯ ಕೈಯಲ್ಲಿ ಮಗುವನ್ನು ಕಂಡು ಅವರು ಆಶ್ಚರ್ಯಪಟ್ಟರು. ಮೂಗಿನ ಮೇಲೆ ಬೆರಳಿಡುತ್ತ, "ಹಾಯ್ ರಾಮ ! ಇದೇನು ?" ಅಂದರು.

"ಇವನು ಬಬ್ಬುಲ್ ಅಮ್ಮ, ಮಿಸ್ರಿಯ ಮಗ. ನನಗೆ ಬಹಳ ಸೇರುತ್ತಾನೆ" —ದರಬಾರಿ ಹೇಳಿದ.

"ಇವನ ತಾಯಿ ಎಲ್ಲಿ ?"

"ಹೊರಟು ಹೋದಳು. ಸ್ವಲ್ಪ ಹೊತ್ತು ಆಡಲಿಕ್ಕೆ ಇವನನ್ನು ಎರವಲು ತಂದಿರುವೆ. ಒಮ್ಮೆ ಹಡೆದಳೆಂದರೆ ಆಯ್ತು. ಮುಂದೆ ತಾಯಿಯದೇನು ಕೆಲಸ ?" —ದರಬಾರಿ ತಾಯಿಯ ಕಡೆ ನೋಡುತ್ತ ಹೇಳಿದ.

"ಹೋಗಲೋ ಹೋಗು. ಆರು-ಎಂಟು ತಿಂಗಳು ಅಷ್ಟೆ ತಾಯಿಯ ಅವಶ್ಯಕತೆ ಇದೆ ಏನು ? ನಂತರ ಮಗು ತನ್ನಷ್ಟಕ್ಕೆ ತಾನೆ ನಿನ್ನ ಹಾಗೆ ದಷ್ಟಪುಷ್ಟ

ಆಗಬಲ್ಲದೇನು ? "

"ಸರಿ ಅಮ್ಮ. ನಾನು ಇವನನು ಪೊದಾರ್ ಕಾಲೇಜ್ ಎದುರಿನ ಮೈದಾನಕ್ಕೆ ಕರೆದೊಯ್ಯುವೆ. ಅಲ್ಲೇ ಸಮೀಪದಲ್ಲಿ ನನಗೆ ಜಗಮೋಹನನ ಪುಸ್ತಕಗಳನ್ನು ವಾಪಸ್ ಮಾಡುವದಿದೆ. ನೀನು ಸ್ವಲ್ಪ ಇವನನ್ನು ತೆಗೆದುಕೊ"—ದರಬಾರಿ ಹೇಳಿದ. ತಾಯಿ ಮುಖ ಕಿವುಚುತ್ತ, "ಹಾ ಹೊಲಸು" ಎಂದು ಕೈ ಹಿಂದೆ ಸರಿಸಿಕೊಳ್ಳುತ್ತ "ನಾನಂತು ಇವನಿಗೆ ಕೈ ಕೂಡ ತಾಕಿಸಲಾರೆ" ಎಂದರು.

ಸ್ವಲ್ಪ ಹೊತ್ತು ಮೊದಲೇ ಬಂದು ನಿಂತಿದ್ದ ಅತ್ತಿಗೆ, "ಇಷ್ಟು ಆಶೆ ಇದ್ದರೆ ಮದುವೆ ಮಾಡಿಕೊಂಡು ನಿನ್ನ ಸ್ವಂತ ಮಗನನ್ನೇ ಎತ್ತಿಕೊಳ್ಳಬಹುದು"—ಅಂದಳು.

"ಇಲ್ಲ ನನಗೆ ಮತ್ತೊಬ್ಬರ ಮಕ್ಕಳೇ ಸೇರುತ್ತವೆ"—ದರಬಾರಿ ಅತ್ತಿಗೆಯ ಮೇಲೆ ದಾಳಿ ಮಾಡಿದ.

ಅತ್ತಿಗೆ ನಿಟ್ಟುಸಿರು ಬಿಡುತ್ತ "ದೇವರು ಕೊಡದಿದ್ದಾಗ ಯಾರು ಏನು ಮಾಡುವದಿದೆ" ಅಂದಳು.

ದರಬಾರಿ ಬಬ್ಬುಲ್‌ನನ್ನು ಕೆಳಗೆ ಫರಶಿಯ ಮೇಲೆ ಕೂಡ್ರಿಸಿದ. ಅಲ್ಲಿ ಅವನ ಗಮನವನ್ನು ಒಂದು ಜರ್ಮನ್ ಸಿಲ್ವರ್ ಚಮಚೆ ಸೆಳೆಯಿತು. ದರಬಾರಿ ಒಳಗೆ ಹೋದ. ಬಬ್ಬುಲ್ ಚಮಚೆಯನ್ನು ಬಾಯಲ್ಲಿಟ್ಟುಕೊಂಡು ಅದನ್ನು ಚೀಪ ತೊಡಗಿದ. ಬಹುಶಃ ಅವನಿಗೆ ಇನ್ನಿಷ್ಟು ಹಲ್ಲು ಬರುತ್ತಿದ್ದವೊ ಏನೊ !

ಒಮ್ಮೆಲೆ ಬಬ್ಬುಲ್‌ಗೆ ತಾನು ಒಂಟಿಯಾಗಿ ಇದ್ದುದು ಅರಿವಾಯಿತು. ಅವನು ತನ್ನ ಕೈಯನ್ನು ಮೊದಲು ತಾಯಿಯ ಕಡೆ ನಂತರ ಅತ್ತಿಗೆಯತ್ತ ಚಾಚಿದ. ತಾಯಿಯಂತು "ಛಿಃ ಛಿಃ" ಎನ್ನುತ್ತ ಒಳಗಡೆ ಹೋದಳು. ಅತ್ತಿಗೆ ಒಂದು ಕ್ಷಣ ಸಂಕೋಚಪಟ್ಟು ನಿಂತಳು. ನಂತರ ಅಂತರಂಗದ ಯಾವುದೋ ತುದಿಯು ಅವಳನ್ನು ವಿವಶಳನ್ನಾಗಿ ಮಾಡಿತೆನ್ನುವ ಹಾಗೆ ಧಾವಿಸಿ ಅವಳು ಬಬ್ಬುಲ್‌ನನ್ನು ಎತ್ತಿಕೊಂಡಳು. ಬಳಿಕ ಅಪ್ಪಿಕೊಂಡಳು; ಯಾವುದೊ ಒಂದು ಅಪಾರ ಸುಖ ಮತ್ತು ಶಾಂತಿಯ ಉಯ್ಯಾಲೆಯಲ್ಲಿ ಜೀಕವಾಡುತ್ತಿರುವಳೊ ಎನ್ನುವ ಹಾಗೆ, ಹೊಯ್ದಾಡತೊಡಗಿದಳು. ಬಬ್ಬುಲ್ ಅವಳಿಗೆ ಹೊಲಸು ಅನಿಸುತ್ತಿರಲಿಲ್ಲ. ಮನಸ್ಸಿನಲ್ಲಿಯೆ ಅವಳು ಅವನನ್ನು ತೊಳೆದು ಸ್ವಚ್ಛಮಾಡಿ ಓರ್ವ ಭಿಕ್ಷುಕಿಯ ಮಗನಿಂದ ಯಾವಳೋ ರಾಣಿಯ ಮಗುವನ್ನಾಗಿ ಮಾಡಿದಳು. ಅಂತರಂಗದಲ್ಲಿಯೇ ಅವಳು ನೂರಾರು ರೇಷ್ಮಿ ಮತ್ತು ನೂಲಿನ ಫ್ರಾಕ್ ತಯಾರಿಸಿದಳು. ಇವನು ತುಂಬ ಚೆಲುವಾಗಿದ್ದಾನೆ. ಇವನಿಗೆ ಹುಡುಗಿಯರ ಬಟ್ಟೆಯನ್ನೇ ಹೊಲಿಸುವೆ—ಎಂದು ಯೋಚಿಸಿದಳು.

ಒಳಗೆ ಹೋಗಿ ದರಬಾರಿ ಸೂಟಕೇಸ್ ಹೊರಕ್ಕೆ ತೆಗೆದು ಅದರಲ್ಲಿ ಕೆಲವು ಬಟ್ಟೆಗಳನ್ನಿಟ್ಟು ಅವುಗಳ ಮೇಲೆ ಟಗೋರ್, ಪ್ರೇಮಚಂದ್ ಮತ್ತು ಲಾರೆನ್ಸ್‌ನ

ಕೆಲವು ಪುಸ್ತಕಗಳನ್ನು ಜೋಡಿಸಿಟ್ಟ. ನಂತರ 'ಧಫ್' ಎಂದು ಸೂಟ್‌ಕೇಸ್ ಮುಚ್ಚಿಕೊಂಡು ಬೈಠಕ್ ಕಡೆ ಹೊರಳಿದ.

ಬೈಠಕ್‌ದಲ್ಲಿ ಬಂದು ನೋಡಿದರೆ ಬಬ್ಬುಲ್ ಯಥಾಪ್ರಕಾರ ಎದೆಗಳಲ್ಲಿ ತಲೆ ಇಟ್ಟಿದ್ದನು. ದರಬಾರಿಯನ್ನು ಕಾಣುತ್ತಲೆ ಅವನು ಬಾಯಿ ತೆರೆದ ಮತ್ತು ಒಬ್ಬ ವಿಜಯಿಯ ಹಾಗೆ ದರಬಾರಿಯ ಕಡೆ ನೋಡತೊಡಗಿದ. ಮರುಕ್ಷಣದಲ್ಲಿಯೇ ಯಾವ ಭಾವನೆ, ಯಾವ ಎಣಿಕೆಯಿಂದಲೊ ಏನೊ ಅವನು ಪೂರ್ಣ ತೋಳುಗಳನ್ನು ದರಬಾರಿಯತ್ತ ಚಾಚಿದ. ದರಬಾರಿ ಮುಂದಕ್ಕೆ ಬಂದು ಒಂದು ಕೈಯಲ್ಲಿ ಬಬ್ಬುಲ್‌ನನ್ನು ಎತ್ತಿಕೊಂಡು ಇನ್ನೊಂದರಲ್ಲಿ ಸೂಟಕೇಸ್ ಹಿಡಿದುಕೊಂಡು, "ಒಳ್ಳೇದು ಅತ್ತಿಗೆ" ಎಂದು ಹೇಳಿ ಹೊರಗೆ ನಡೆದ.

ದಾದರ್ ತಲುಪಿ ರೆಡಿಮೇಡ್ ಬಟ್ಟೆಗಳ ಅಂಗಡಿಯಲ್ಲಿ ದರಬಾರಿ ಬಬ್ಬುಲ್‌ಗೆ ಒಂದು ಅಂಗಿ ಮತ್ತು ನಿಕ್ಕರ್ ಕೊಂಡುಕೊಂಡ. ಅಂಗಿಯನ್ನಂತು ಹಾಗೊ ಹೀಗೊ ಮಾಡಿ ಬಬ್ಬುಲ್ ತೊಟ್ಟುಕೊಂಡ. ಆದರೆ ನಿಕ್ಕರ್ ತೊಡಿಸುವಾಗ ಯಥಾಪ್ರಕಾರ ಗದ್ದಲವೆಬ್ಬಿಸಿ ಚೀರತೊಡಗಿದ. ತಾನು ನಿಂತಷ್ಟು ವೇಳೆ ಅವನು ಸರಿಯಾಗಿ ತನ್ನ ಕಾಲುಗಳಿಂದ ಸಾಯಕಲ್ ನಡೆಸಹತ್ತಿದ. ಈಗ ಜಿಗಿದನೆಂದರೆ ಬಳಿಕ ಬೀಳುವನು. ದರಬಾರಿ ಒಂದು ಕೈಯಿಂದ ಹಿಡಿದುಕೊಂಡರೆ ಅವನು ಇನ್ನೊಂದು ಕೈ ಕಡೆ ಬಾಗುತ್ತಿದ್ದ. ಬಳಿಕ ಮುಖವೆತ್ತಿ ದರಬಾರಿಯ ಕಡೆ ಆಶ್ಚರ್ಯದಿಂದ—ವಿಚಿತ್ರ ಮನುಷ್ಯನಿರುವಿಯಲ್ಲ ? ಒಬ್ಬ ಮಗುವನ್ನು ಹಿಡಿದುಕೊಳ್ಳಲು ಬರುವದಿಲ್ಲವೆ—ಎನ್ನುವಂತೆ ನೋಡತೊಡಗಿದ.

ನಂತರ ಹಠಾತ್ತನೆ ಒಂದು ವಿದ್ಯುತ್ ದೀಪಮಾಲಿಕೆ ಅವನ ಲಕ್ಷ್ಯವನ್ನು ತನ್ನೆಡೆಗೆ ಸೆಳೆಯಿತು. ಅವನು ಮೇಲಕ್ಕೆ ಪುಟಿದ. ವಿದ್ಯುತ್ತ್‌ದ ಭಯದಿಂದ ದರಬಾರಿ ಕೈ ಮೇಲಕ್ಕೆ ಮಾಡಿದ್ದ. ಅಷ್ಟರಲ್ಲಿಯೇ ಬಬ್ಬುಲ್ ಸಮೀಪದಲ್ಲಿ ತಿರುಗುತ್ತಿದ್ದ. ಟೇಬಲ್ ಫ್ಯಾನ್‌ಇನ ಜಾಳಿಗೆಯಲ್ಲಿ ಬೆರಳು ಹಾಕಿದ. ಅಂಗಡಿಯವನು ತಕ್ಷಣ ಅವನ ಕೈ ಸರಿಸಿದನು. ಇಲ್ಲದಿದ್ದರೆ ಮಹಾಶಯನ ಬೆರಳು ಹಾರಿಹೋಗುತ್ತಿತ್ತು. ತನ್ನ ಕೈಯನ್ನು ಕೊಡವಿ ಆಚೆಗೆ ಸರಿಸಿದ್ದಕ್ಕೆ ಅವನು ಅಳುವದಕ್ಕೆ ಪ್ರಾರಂಭಿಸಿದ. ದರಬಾರಿ ಅವನನ್ನು ಎತ್ತಿಕೊಂಡ. ಬಳಿಕ ಅವನು ಆಕ್ಷೇಪಿಸುವ ರೀತಿಯಲ್ಲಿ ಮೊದಲು ದರಬಾರಿಯನ್ನು ಬಳಿಕ ಅಂಗಡಿಯವನನ್ನು ನೋಡತೊಡಗಿದ. ಅಂಗಡಿಯವನ ಕಡೆ ಇವನು ನನ್ನನ್ನು ಹೊಡೆದ ಎಂದು ಹೇಳವಂತೆ, ಕೈ ಎತ್ತಿ ತೋರಿಸುತ್ತಿದ್ದ.

ಟ್ಯಾಕ್ಸಿಯಲ್ಲಿ ಕೂಡ್ರುತ್ತಲೇ ಬಬ್ಬುಲ್ ಸ್ವಲ್ಪ ಉದ್ರಿಕ್ತನಾದ. ನಿಜವಾಗಿ ಅವನಿಗೆ ನಿಕ್ಕರ್‌ನಿಂದ ತೊಂದರೆಯಾಗಿತ್ತು. ಅವನು ಜೀವನದಲ್ಲಿ ಈ ರೀತಿ

ಬಿಗಿಯಲ್ಪಟ್ಟಿದ್ದಿಲ್ಲ. ದರಬಾರಿ ಅವನನ್ನು ಸೀಟ್‌ಮೇಲೆ ಕೂಡ್ರಿಸುವ ಪ್ರಯತ್ನ ಮಾಡಿದ. ಆದರೆ ಅವನು ತಕಲಿಯ ಹಾಗೆ ಸೆಟೆದು ನಿಂತ—ನೀನು ಗಾಡಿಯಲ್ಲಿ ಕೂಡ್ರು, ನಾನು ನಿನ್ನ ಮೇಲೆ ಕೂಡ್ರುವೆ. ಇಲ್ಲ, ನನ್ನನ್ನು ಜನರು ತಿರುಗಾಡುತ್ತಿರುವ ಬಾಜಾರದಲ್ಲಿ ಕರೆದುಕೊಂಡು ಹೋಗು ಎಂದು ಹೇಳುವವನ ಹಾಗೆ. ನಂತರ ಅವನು ಜೋರಾಗಿ ಮೇಲೆಕೆಳಗೆ ಸರಿದಾಡಿ ಅಂತೂ ಕೊನೆಗೆ ನಿಕ್ಕರ್ ಬಿಚ್ಚಿಯೇ ಬಿಟ್ಟ. ಅದರಮೇಲೆ ಜಿಗಿದು ಜಿಗಿದು ಯಾವ ಇಸ್ತ್ರಿಯೂ ಅದನ್ನು ತಿದ್ದದಷ್ಟು ಮುದುಡು ಮುದುಡು ಮಾಡಿಬಿಟ್ಟ. ಈಗ ನಿಕ್ಕರ್ ಬಿಚ್ಚಿದ ನಂತರ ಅವನು ಸಂತೋಷದಿಂದಿದ್ದ. ಕಿಡಕಿಯಲ್ಲಿ ನಿಂತು ಜಗತ್ತೆಲ್ಲವನ್ನು ನೋಡಿ, ತೋರಿಸುತ್ತಿದ್ದಾಗ ಅವನಿಗೆ ಒಂದು ವಿಚಿತ್ರ ಬಗೆಯ ಸ್ವಾತಂತ್ರ್ಯವು ಅನುಭವವಾಗುತ್ತಿತ್ತು.

ದರಬಾರಿ ಸೀತೆಯ ಮನೆ ಸೇರಿದಾಗ ಅವಳು ಇರಲಿಲ್ಲ. ದರಬಾರಿ ತಲೆ ಚಚ್ಚಿಕೊಂಡ. ಅವಳು ಕುಮುದಳನ್ನು ಕಾಣಲು ಪ್ರಭಾದೇವಿಗೆ ಹೋಗಿದ್ದಳೆಂದು ಅವಳ ತಾಯಿ ತಿಳಿಸಿದಳು. ಪ್ರಭಾದೇವಿಯ ಕ್ಷೇತ್ರ ಅಷ್ಟೇನೂ ದೂರವಿರಲಿಲ್ಲ. ಆದರೆ ಕುಮುದಳ ಮನೆ ಪತ್ತೆ ಆಗುವದು ಹೇಗೆ? ಅವಳ ತಾಯಿಯನ್ನು ವಿಚಾರಿಸಿದರೆ ಅವಳು—"ಯಾಕೆ? ಏನು ಕೆಲಸವಿತ್ತು?" ಎಂದು ಕೇಳುವಳು. ಆದ್ದರಿಂದ ಸುಮ್ಮನೇ ಇರುವದು ಸರಿ ಇತ್ತು.

ಅದರಮೇಲೆ ಇನ್ನೊಂದು ತಾಪತ್ರಯ ಬೇರೆ—ಅವಳ ತಾಯಿ ಹೇಳಿದಳು. "ಮೊದಲ ಅಂತಸ್ತಿನಲ್ಲಿ ಇರುವ ಸಿಂಧಿ "ನೋಟೀಸ್" ಕೊಟ್ಟಿದ್ದಾನೆ." ನೋಟೀಸ್ ಕೊಟ್ಟರೆ ತಾನೇನು ಮಾಡಬೇಕಂತೆ? ಈಗಂತು ಪರಿಸ್ಥಿತಿಯು ತನಗೆ ನೋಟೀಸ್ ಕೊಟ್ಟಿತ್ತು. ಸ್ವಲ್ಪ ಹೊತ್ತು ಕುಳಿತು ಅವನು ತಾಯಿಯ ಮುದಿ ಮಾತುಗಳನ್ನು ಕೇಳುತ್ತಿದ್ದ. ಬಬ್ಲೂಲ್ ತನ್ನ ಅಕ್ಕನ ಮಗ, ಎಂದು ಹೇಳಿದ. ಎಷ್ಟು ಮುದ್ದು ಮುದ್ದಾದ ಮಗು ಅವನು! ಆದರೆ ತಾಯಿಗೆ ಯಾವ ಆಸಕ್ತಿಯೂ ಇರಲಿಲ್ಲ. ಅವಳು ಕೇವಲ ಒಂದು ಸಲ, "ಏನೋ ಮರಿ" ಎಂದಳು, ಅಷ್ಟೆ. ಬಬ್ಲೂಲ್ ಉತ್ತರ ಕೊಟ್ಟ. ಆದರೆ ತಾಯಿ ಮಾತು ಬೆಳೆಸಲಿಲ್ಲ. ಬಬ್ಲೂಲ್‌ಗೆ ತಾಯಿಯ ಭಾಷೆ ತಿಳಿದಿತ್ತು. ಆದರೆ ತಾಯಿ ಬಬ್ಲೂಲ್‌ನ ಭಾಷೆಯನ್ನು ಮರೆತಿದ್ದಳು. ಅವಳು ಪುನಃ ತನ್ನ ರಗಳೆ ಸುರು ಮಾಡಿದಳು: "ಪ್ರತಿ ವರ್ಷ ಇಷ್ಟು ಹಣವನ್ನು ರಿಪೇರಿಗೆ ಖರ್ಚು ಮಾಡಿರಿ ಎಂದು ಕಮಿಟಿ ಹೇಳುತ್ತದೆ. ನಾವೇನು ಊಟ ಮಾಡಬೇಕೊ ಅಥವಾ ಕೇವಲ ರಿಪೇರಿ ಮಾಡಿಸುತ್ತಲೇ ಇರಬೇಕೊ? ಏನೇನು ಕಾಯ್ದೆ ಪಾಸಾಗಿವೆ ಈಗ. ಕಾಂಗ್ರೆಸ್ ಸರ್ಕಾರವಂತೂ ಮುಳುಗಲಿಕ್ಕೆ ಬಂದಿದೆ. ಅಷ್ಟ-ಗ್ರಹದಲ್ಲಿ ಏನಾಗುವದೊ? ನಾನಂತು ಜಗಾಧರಿ ತವರುಮನೆಗೆ ಹೋಗುವೆ.... ನೀನು ಮದುವೆ ಎಂದು ಮಾಡಿಕೊಳ್ಳುವಿ?"

ಒಂದಿಷ್ಟು ಸಮಯದಲ್ಲೇ ತಾಯಿ ಬೋರ್ ಆದಳು. ಹಾಂ, ತಾಯಿ ಬೋರ್

ಆಧಳು. "ಸೀತೆ ಬರುವಳೋ ಇಲ್ಲೊ ಗೊತ್ತಿಲ್ಲ. ನೀನು ಹೇಗೂ ಟ್ಯಾಕ್ಸಿಯಲ್ಲಿ ಬಂದಿರುವೆ. ನನ್ನನ್ನು ಮಾಹಿಮ್‌ವರೆಗೆ ಬಿಟ್ಟುಬಿಡು"—ಎಂದಳು.

"ನಾನು ಮಾಹಿಮ್ ಕಡೆ ಹೋಗುವದಿಲ್ಲ, ಅಮ್ಮಾಜಿ."

"ಯಾವ ಕಡೆ ಹೊರಟಿರುವಿ?"

"ಸಿಟಿ (city)ಯ ಕಡೆ."

"ಸರಿಯಾಯ್ತು. ಅಲ್ಲಿಯೂ ಪರೇಲದಲ್ಲಿ ಕೆಲಸವಿದೆ. ತರಕಾರಿ ಬುಟ್ಟಿಗಳು ಬರುತ್ತಿವೆಯಲ್ಲ....ನನಗೆ ಮೂಲಂಗಿ ಕೊಳ್ಳಬೇಕಾಗಿದೆ. ಮೂಲಂಗಿ ನಿನಗೆ ಗೊತ್ತೆ?"—ತಾಯಿ ಹೇಳಿದಳು.

ದರಬಾರಿಗೆ ದಿಕ್ಕು ತೋರದಂತಾಯಿತು. ಬಬ್ಬುಲ್ ಹಠಮಾಡಹತ್ತಿದ್ದ. ಇದರ ಮೇಲೆ ಹೊರಗಡೆ ಮೀಟರ್ ಬೇರೆ ಏರುತ್ತಿತ್ತು. ಅವನಿಗೆ ಏನೂ ತೋಚಲಿಲ್ಲ. ಮನಸ್ಸಿನಲ್ಲಿಯೆ ಹಣೆ ಗಟ್ಟಿಸಿಕೊಂಡು, "ನಡೆಯಿರಿ ಅಮ್ಮಾಜಿ, ನಿಮ್ಮನ್ನು ಪರೇಲ ದಲ್ಲಿ ಬಿಡುವೆ. ದಾರಿಯಲ್ಲಿ ಕುಮುದಳ ಮನೆ ಇದೆಯಲ್ಲವೆ?" ಎಂದ.

"ಇದೆಯಲ್ಲ. ಆದರೆ ಈ ಮುಂಬಯಿ ಬಾಜಾರಕ್ಕೆ ಬೆಂಕಿ ಬೀಳಲಿ. ಇಪ್ಪತ್ತು ಸಲ ಹೋಗಿರುವೆ; ಆದರೆ ಇಪ್ಪತ್ತೂ ಸಲ ಮನೆ ಮರೆತಿರುವೆ"—ತಾಯಿ ಏಳುತ್ತ ಅಂದಳು.

"ಇಪ್ಪತ್ತೊಂದನೆಯ ಸಲವೂ ಮರೆಯುವಿರಂತೆ ನಡೆಯಿರಿ."

"ಆದರೆ ನೀನು ಸೀತೆಯನ್ನು ಎಲ್ಲಿಗೆ ಕರೆದೊಯ್ಯುತ್ತಿರುವೆ?"

"ಹೇಳಿದೆನಲ್ಲ—ಅಕ್ಕನ ಬಳಿಗೆ."

"ಆಕೆ ಮುಸಲ್ಮಾನ ಆಗಿದ್ದಾಳೆಂದು ಕೇಳಿರುವೆನಲ್ಲ?"

"ಏನು ಮಾತನಾಡುವಿರಿ ಅಮ್ಮಾಜಿ"—ದರಬಾರಿ ಬೀಳುತ್ತಿರುವ ಪರ್ವತವನ್ನು ತಡೆ ಹಿಡಿದಂತೆ, ಹೇಳಿದ "ಸತವಂತಿ ನಾರ್ ಎಲ್ಲಾದರೂ ಮುಸಲ್ಮಾನ್ ಹೆಂಗಸಿನ ಹೆಸರು ಇರಲು ಸಾಧ್ಯವೆ?"

ತಾಯಿ ಪೂರ್ತಿಯಾಗಿ ದರಬಾರಿಯ ತಲೆ ಚಿಟ್ಟು ಹಿಡಿಸುವ ಮೊದಲೆ ಸೀತೆ ಅಲ್ಲಿಗೆ ಬಂದಳು—ಸೆರಗಿನಲ್ಲಿ ಎಲೆ ಹೂಗಳನ್ನು ಹೊತ್ತ ವಸಂತದ ಮೆಲುಗಾಳಿಯ ಹಾಗೆ. ಅವಳು ಐರನ್-ಗ್ರೆ ಬಣ್ಣದ ಚೋಲಿಯನ್ನು ಬಿಗಿಯಾಗಿ ಧರಿಸಿ, ಬೇಗಮಿ ಅಕ್ಕಿಯಂತಹ ಬಣ್ಣದ ಹೆಂಡ್‌ಲೂಮ್ ಸೀರೆಯನ್ನು ಉಟ್ಟಿದ್ದಳು. ಸೀರೆಯು ಅವಳ ದೇಹದ ಎಲ್ಲ ಉಬ್ಬು-ತಗ್ಗುಗಳನ್ನು ಒಂದು ಸ್ವಚ್ಛಂದ, ಬಿರುಗಾಳಿಯಂಥ ಹೊನಲಿನಲ್ಲಿ ತಂದಿರಿಸಿತ್ತು. ಸ್ವಯಂ ಅವಳು ವಸಂತದ ಮೆಲುಗಾಳಿ ಆಗಿದ್ದಳು; ಆದರೆ ದರಬಾರಿಗೆ ಶಿಶಿರದ ಸಂದೇಶವಾಗಿದ್ದಳು. ಅವನೊಳಗಿನ ಹೂವು ಎಲೆಗಳೆಲ್ಲ ಒಂದೊಂದಾಗಿ ಒಣಗತೊಡಗಿದವು, ಉದುರತೊಡಗಿದವು ಮತ್ತು ಕೆಲವು ಬಿರುಗಾಳಿ ಯೊಂದಿಗೆ ಹಾರತೊಡಗಿದವು. ಟೊಂಗೆಗಳ ಮೇಲೆ ಉಳಿದಿದ್ದ ಕೆಲವು ಒಣಗಿ

ಪರಸ್ಪರ ತಿಕ್ಕಾಡಿ, ಹೃದಯವನ್ನು ಮಿಡಿಯಲುದ್ಯುಕ್ತವಾದವು.

ಸೀತೆ ಬರುತ್ತಲೆ ಮೊದಲು ಬಬ್ಬುಲ್‌ನನ್ನು ನೋಡಿ ಕಣ್ಣರಳಿಸಿ, "ಯಾರ ಮಗು ?" ಎಂದು ಧಾವಿಸಿ ಮಗುವಿನ ಬಳಿ ಸಾರಿ, "ಎಷ್ಟು ಮುದ್ದಾಗಿದೆ, ಬಬಲೂನ ಹಾಗೆ" ಎಂದಳು.

"ಹಾಂ. ಬಬ್ಬುಲ್ ಅಂದೇ ಅವನ ಹೆಸರು. ನಿನಗೆ ಹೇಗೆ ಗೊತ್ತಾಯಿತು ?" —ದರಬಾರಿ ಕೇಳಿದ.

"ನನಗೇನು ಗೊತ್ತು ?"—ಸೀತೆ ಚಪ್ಪಾಳೆ ತಟ್ಟುತ್ತ ಬಬ್ಬುಲ್‌ನನ್ನು ತನ್ನ ತೋಳು ಚಾಚಿ ಕರೆಯುತ್ತ ಹೇಳಿದಳು—"ಪ್ರತಿ ಮಗುವಿನ ಮುಖದಿಂದ ಅವನ ಹೆಸರು ಪತ್ತೆಯಾಗುವುದು ನಿಮಗೆ ಗೊತ್ತಾಗುವುದಿಲ್ಲವೆ ?"

ಬಬ್ಬುಲ್ ಮೊದಲಿಗೆ ಸೀತೆಯನ್ನು ಅನುಮಾನಿಸುತ್ತ ನೋಡಿದ. ಬಳಿಕ, ಅವಳು ತನಗೆ ಮೊದಲಿನಿಂದಲೂ ಗೊತ್ತಿದೆ ಎನ್ನುವ ಹಾಗೆ ಮುಗುಳುನಗೆ ಬೀರಿದ. ನಂತರ ತಕ್ಕಡಿಯ ಹಾಗೆ ತನ್ನ ತೋಳುಗಳನ್ನು ಎತ್ತಿದ. ಸೀತೆ ಅವನನ್ನು ಎತ್ತಿಕೊಂಡು, ಅಪ್ಪಿಕೊಂಡಳು. ಎಲ್ಲ ಹೆಂಗಸರ ಹಾಗೆ ಅವಳೂ ಸ್ವಲ್ಪ ಅಲ್ಲಾಡತೊಡಗಿದಳು. ಸರಿ, ಸಂಬಂಧವು ಗಟ್ಟಿಗೊಳ್ಳುತ್ತಲೆ ಬಬ್ಬುಲ್ ಸಣ್ಣ ಅಲ್ಮಾರಿಯ ಮೇಲೆ ಇದ್ದ ಯಾವುದೊ ಬುಟ್ಟಿಯ ಕಡೆ ಸನ್ನೆ ಮಾಡಿ, ಅದರಲ್ಲಿ ತನಗೇನಾದರೂ ಇದೆಯೆ ಎಂದು ಕೇಳುವಂತೆ "ಓ.... ಓ...." ಎಂದು ಮಾಡತೊಡಗಿದ.

ದರಬಾರಿ ನಿಂತಲ್ಲೆ ಕನಸು ಕಂಡ. ಸೀತೆ ಅವನತ್ತ ನೋಡಿದಾಗ ಅವುಗಳಲ್ಲಿ ಸೆಜ್ಜೆ ಮತ್ತು ಮಕ್ಕಳು ಕಂಡವು. ಬಹುಶಃ ಸೀತೆಯ ಕಣ್ಣುಗಳಲ್ಲಿ ಬಬ್ಬುಲ್ ಪ್ರತಿಬಿಂಬಿತನಾಗುತ್ತಿದ್ದನೇನೊ. ದರಬಾರಿ ಸ್ವಲ್ಪ ಬೇಸರಗೊಂಡು, "ಗಂಟೆಗಳಿಂದ ನಿನ್ನ ದಾರಿ ಕಾಯುತ್ತಿರುವೆ. ಅಕ್ಕ ನಿನ್ನನ್ನು ಕರೆಸಿದ್ದಾಳೆ" ಎಂದ.

"ಅವ್ವ ?" ಎಂದು ಸೀತೆ ತಾಯಿಯ ಕಡೆ ನೋಡಿದಳು.

"ಹಾಂ, ಮಗಳೆ"—ತಾಯಿ ಅಪ್ಪಣೆ ಕೊಡುತ್ತ ಹೇಳಿದಳು.

"ತಡೆಯಿರಿ. ಇವನ ಸಲುವಾಗಿ ಒಂದಿಷ್ಟು ಬಿಸ್ಕಿಟ್...."

ದರಬಾರಿ ಇನ್ನಿಷ್ಟು ಅಸಹನೆಯಿಂದ, "ಅವೆಲ್ಲ ಆಗೇ ಆಗುವವು. ನೀನು ನಡೆ. ನನಗೆ ಎಳ್ಳಷ್ಟೂ ಪುರಸತ್ತು ಇಲ್ಲ" ಎಂದ.

ಸೀತೆ ಬಬ್ಬುಲ್‌ನ ಕೆನ್ನೆ ಸವರುತ್ತ, "ಏ ತೊ ಛೋತಾ ಸಾ, ಮೋತಾ ಸಾ, ಗೋತಾ ಸಾ ಬಬ್ಬುಲ್ ಹೈ" ಎಂದೆನ್ನುತ್ತ ಹೊರಟಳು.

ಸೀತೆ ಮನದಲ್ಲಿ ಒಂದಿನಿತೂ ಸಂಶಯವನ್ನು ಪಡದೆ ಹೊರಟಳು. ಹೊರಗಡೆ ಟ್ಯಾಕ್ಸಿಯನ್ನು ಕಾಣುತ್ತಲೆ, "ಇದರಲ್ಲಿ ಹೋಗುವದೇ ?" ಎಂದು ಕೇಳಿದಳು.

ದರಬಾರಿ ತಲೆಯಲ್ಲಾಡಿಸಿದ. ಬೇಜಾರುಗೊಳ್ಳುತ್ತಲಿದ್ದ ಡ್ರಾಯವರ್ ಖುಶಿಯಾದ. ಹಿಂದಕ್ಕೆ ಧಾವಿಸಿ ಅವನು ಟ್ಯಾಕ್ಸಿಯ ಬಾಗಿಲು ತೆರೆದ. ಬಬ್ಬುಲ್

ಸೀತಾ ಮತ್ತು ಕೊನೆಗೆ ದರಬಾರಿ ಅದರಲ್ಲಿ ಕುಳಿತರು. ಆಗ ಸೀತೆಯ ದೃಷ್ಟಿ ಸೂಟಕೇಸ್ ಮೇಲೆ ಬಿದ್ದಿತು. ಆಗಲೆ ಸಂಶಯದ ನೆರಳು ಅವಳ ಮುಖದಮೇಲೆ ತೇಲಿಹೋಯಿತು.

"ಈ ಸೂಟಕೇಸ್ ?"--ಸೀತೆ ಕೇಳಿದಳು.

"ಹಾಂ"—ದರಬಾರಿ ಹೇಳಿದ.

"ಅಕ್ಕನ ಬಳಿ ಹೋಗುತ್ತಿರುವೆವು. ಅಲ್ವೆ ?"

"ಎಲ್ಲಿಗೋ ಹೋಗುತ್ತಿರುವೆವು. ಅದರಿಂದ ನಿನಗೇನಂತೆ ?" ಎಂದು ದರಬಾರಿ ಒಂದು ಕ್ರೋಧಭರಿತ ದೃಷ್ಟಿಯನ್ನು ಸೀತೆಯಮೇಲೆ ಬೀರುತ್ತ "ನಾನು ಎಲ್ಲಿಯೋ ಕರೆದುಕೊಂಡು ಹೋದರು ಬರುವೆ ಎಂದು ಹೇಳಿದ್ದೆಯಲ್ಲ" ಎಂದ.

ಸೀತೆಗೆ ಕೆಲವು ವಿಷಯ ಅರ್ಥವಾಗತೊಡಗಿದವು. ದರಬಾರಿಯ ಮುಖದ ಬಣ್ಣ....ಸೂಟಕೇಸ್....ಮಗು....ಅವಳು ಭಯಗ್ರಸ್ತಳಾಗಿ ಬಬ್ಬುಲ್‌ನನ್ನು ಸೀಟ್ ಮೇಲೆ ಕೂಡ್ರಿಸಿದಳು. ಬಳಿಕ ಹೊಳ್ಳೆಗಳನ್ನು ಹಿಗ್ಗಿಸುತ್ತ "ಹಾಂ. ಹೇಳಿದ್ದೆ" ಅಂದಳು.

ನಂತರ ಸೀತೆ ಒಂದು ತೀಕ್ಷ್ಣ ದೃಷ್ಟಿಯಿಂದ ದರಬಾರಿಯನ್ನು ನೋಡಿ ನಸು ನಾಚಿದಳು. ಅವಳಿಗೆ ತನ್ನಷ್ಟಕ್ಕೆ ತನಗೆ ಸ್ವಲ್ಪ ಹೊಲಸು ಅನಿಸಿತು. ಸೀರೆಯ ಸೆರಗಿನಿಂದ ತನ್ನ ಕೆಂಪಾಗುತ್ತಿದ್ದ ಮುಖವನ್ನು ಒರಸಿಕೊಂಡಳು. ದರಬಾರಿ ಮಾದಕ ದೃಷ್ಟಿಯಿಂದ ಸೀತೆಯನ್ನು ನೋಡುತ್ತ, "ಸೀತಾ, ನೀನು ಪುನಃ ಆ ದಿನದ ಹಾಗೆ ಮಾಡಹತ್ತಿರುವೆ" ಎಂದ.

ಸೀತೆ ಹೆದರಿದಳು. "ಇಲ್ಲವಲ್ಲ" ಎಂದು ಹೇಳಿದಳು.

ಟ್ಯಾಕ್ಸಿ ಹಾಜಿ ಅಲಿಯ ಸಮೀಪ ಹೋಗುತ್ತಿತ್ತು. ಇವೊತ್ತು ಆಕಾಶದಲ್ಲಿ ಮನ್ಸೂನ್ ಮೊದಲು ಇರುವಂಥ ಬಣ್ಣವೇ ಇತ್ತು—ಹೊಲಸು ಹೊಲಸು, ಕೊಳಕು-ಕೊಳಕು ಹಸಿ ಹಸಿ....ಬಹುಶಃ ಎಲ್ಲಿಯೋ ದೂರ ಮಳೆ ಬೀಳಲಾರಂಭವಾಗಿತ್ತು. ಅಂಕೆ ಇಲ್ಲದಷ್ಟು ಹೊಲಸು ನಾಲೆ-ನದಿಗಳು ಸಮುದ್ರದಲ್ಲಿ ಬೀಳುತ್ತಿದ್ದವು.

ಪುನಃ ಅದೇ ಪ್ರಯಾಣ—ತಾರದೇವ್, ಆಪೆರಾ ಹೌಸ್, ಮಹಾತ್ಮಾ ಗಾಂಧಿ ರೋಡ್, ಫ್ಲೋರಾ ಫೌಂಟನ್--ಮತ್ತು ಒಂದು ಹೋಟಲ್. ಇದು ಅಂದು ಹೋದ ಹೋಟಲ್ ಆಗಿರಲಿಲ್ಲ.

ಎದುರಿಗೆ ಓರ್ವ ಬೇರಾ ನಿಂತಿದ್ದ. ದರಬಾರಿ, ಸೀತೆ ಹಾಗೂ ಬಬ್ಬುಲ್‌ರನ್ನು ಕಂಡು ಅವರತ್ತ ಧಾವಿಸಿದ. ಬಹಳ ಮರ್ಯಾದೆ ಮತ್ತು ಗೌರವಗಳಿಂದ ಅವನು ಟ್ಯಾಕ್ಸಿಯ ಬಾಗಿಲು ತೆರೆದ. ದರಬಾರಿ ಇಳಿದು ಟ್ಯಾಕ್ಸಿಯವನಿಗೆ ದುಡ್ಡು ಕೊಟ್ಟು, ಬೇರಾನಿಗೆ ಸೂಟಕೇಸ್ ಕೆಳಗಿಳಿಸಲು ಸನ್ನೆ ಮಾಡಿದ. ಸೀತೆ ಕೆಳಗಿಳಿದಳು. ಅವಳು ಕಣ್ಣು ತಗ್ಗಿಸಿದ್ದಳು. ಬಬ್ಬುಲ್‌ನನ್ನು ತನ್ನ ತೋಳಲ್ಲಿ ತೆಗೆದುಕೊಳ್ಳಲು ಅವಳಿಗೆ

ಸ್ವಲ್ಪ ಸಂಕೋಚವಾಗುತ್ತಲಿತ್ತು.

"ಎತ್ತಿಕೊ, ಮಗುವನ್ನು ಯಾವಾಗಲೂ ಹೆಂಗಸು ಎತ್ತಿಕೊಳ್ಳುವಳು"— ದರಬಾರಿ ಬಬ್ಬುಲ್‌ನ ಕಡೆ ತೋರಿಸುತ್ತ ಹೇಳಿದ.

ಸೀತೆ ಕೊಂಚ ನಿಸ್ಸಹಾಯಕ ಸ್ಥಿತಿಯಲ್ಲಿ, ಈಗ ತಾನು ಅವನನ್ನು ಎತ್ತಿಕೊಳ್ಳಲು ಇಚ್ಛಿಸುತ್ತಿಲ್ಲ ಎನ್ನುವ ಹಾಗೆ, ಬಬ್ಬುಲ್‌ನ ಕಡೆ ನೋಡಿದಳು. ಆದರೆ ದರಬಾರಿ ಮತ್ತು ಅವನ ಸಿಟ್ಟುಗಳಿಗೆ ಹೆದರುತ್ತಿದ್ದಳು; ಗಂಡಸು ಮತ್ತು ಅವನ ಕ್ರೌರ್ಯಗಳಿಗೆ ಅಂಜುತ್ತಿದ್ದಳು. ಅವಳು ಬಬ್ಬುಲ್‌ನನ್ನೇನೊ ಎತ್ತಿಕೊಂಡಳು. ಆದರೆ ಅವನನ್ನು ಪ್ರೀತಿಸಲು ಮಾತ್ರ ಅವಳಿಗೆ ಸಾಧ್ಯವಾಗಲಿಲ್ಲ....ಅವಳಿಗೆ ಹಸಿ ಹಸಿ, ಹುಳಿ ಹುಳಿ, ಹೊಲಸು ಹೊಲಸು ಉಬ್ಬಳಿಕೆ ಬರತೊಡಗಿದವು.

ಹೋಟಲ್ ಮೇಲೆ ಇತ್ತು. ದರಬಾರಿ "ರೂಮ್ ಇದೆಯೆ?" ಎಂದು ಕೂಡ ಕೇಳಲಿಲ್ಲ. ಈಗ ಯಾವ ಅವಶ್ಯಕತೆಯೂ ಇರಲಿಲ್ಲ. ಅವನು ತನ್ನ ನೋಟದಲ್ಲಿ ಆದೇ ವೃತ್ತಿಯ ನಿರ್ಭೀತಿಯನ್ನು ಬೆಳೆಸಿಕೊಂಡಿದ್ದ. ಈಗ ಅದರ ಅವಶ್ಯಕತೆಯೂ ಇರಲಿಲ್ಲ.

ಮೆಟ್ಟಲುಗಳ ಮೇಲೆ ಯಾರೊ ಎಣ್ಣೆ ಮತ್ತು ತುಪ್ಪಗಳನ್ನು ಡ್ರಮ್‌ಗಟ್ಟಲೇ ಸುರುವಿದ್ದಾರೇನೊ ಎಂದು ಸೀತೆಗೆ ಅನಿಸಿತು. ಮೆಟ್ಟಲೇರಲು ಇದ್ದ ಹಗ್ಗವು ಅಸಂಖ್ಯಾತ ಜನರ ಬಳಸುವಿಕೆಯಿಂದ ಕೊಳಕಾಗಿತ್ತು. ಇಡೀ ವಾತಾವರಣದಿಂದ ಯಾವುದೋ ಬಾಡಿದ ಹೂದಂಡೆಯ ವಾಸನೆ ಬರುತ್ತಿತ್ತು.

ಹಗ್ಗಕ್ಕೆ ಕೈ ತಾಕಿಸದೆ ಸೀತೆ ದರಬಾರಿಯ ಹಿಂದೆ ಹಿಂದೆ ಮೇಲೆ ಹತ್ತಿದಳು.

ಮೆನೆಜರ್ ಸಾಹೇಬ್ ಮೂವರು ಬರುವದನ್ನು ನೋಡಿದಾಗ ಅವರ ಮುಖದ ಮೇಲೆ ಒಂದು ವಿಚಿತ್ರವಾದ ಪರಿಶುದ್ಧ ಕಾಂತಿಯು ಹೊರಹೊಮ್ಮಿತು. ಅವರು ತಟ್ಟನೆ ಕೌಂಟರ್‌ಇನ ಹಿಂಬದಿಯಿಂದ ಹೊರ ಬಂದು ಎರಡೂ ಕೈಗಳನ್ನು ಕೋಣೆಯ ಕಡೆ ಚಾಚುತ್ತಾ, "ವೆಲ್‌ಕಮ್ ಸರ್" ಎಂದರು. ಇವೊತ್ತು ಎಲ್ಲ ಕೋಣೆಗಳ ಬಾಗಿಲುಗಳು ಸೀತೆ ಹಾಗೂ ದರಬಾರಿಯರಿಗಾಗಿ ತೆರೆದಿದ್ದವು.

ದರಬಾರಿ ಮೆನೆಜರ್‌ಗೆ ಹೇಳಿದ: "ನಾವು ಬಿಲ್ಕೋರಾದಿಂದ ಬಂದಿದ್ದೇವೆ. ಈಗ ಟ್ರಾಂಜಿಟ್‌ದಲ್ಲಿದ್ದೇವೆ. ರಾತ್ರಿ ಹನ್ನೊಂದು ಗಂಟೆಯ ಪಂಜಾಬ್ ಮೇಲಿನಿಂದ ಆಗ್ರಾಕ್ಕೆ ಹೋಗುವೆವು. ಅಲ್ಲಿ ಷಹಜಹಾನ್ ತನ್ನ ಪ್ರೀತಿಯ ಮುಮುತಾಜಳಿಗಾಗಿ ಕಟ್ಟಿಸಿದ ತಾಜಮಹಲ್ ನೋಡುವೆವು. ವಾಸ್ತವದಲ್ಲಿ ಅವನಿಗೆ ಮುಮುತಾಜಳಲ್ಲಿ ಅಪರಾಧದ ಅನುಭವವು ಎಷ್ಟು ಇತ್ತೊ ಆ ಮಟ್ಟದ ಪ್ರೇಮವಿರಲಿಲ್ಲ. ಯಾಕೆಂದರೆ, ಅವನು ಅವಳಿಂದ ಹದಿನಾರು, ಹದಿನೆಂಟು ಮಕ್ಕಳನ್ನು ಪಡೆದಿದ್ದ. ಆದ್ದರಿಂದ ಅವನು ತನ್ನ ಆ ಅಪರಾಧಕ್ಕಾಗಿ ಅವಳಿಗೆ ಕಾಣಿಕೆ ಕೊಡಬಯಸಿದ್ದ......." ಆದರೆ ಈ ಮಾತುಗಳ ಅವಶ್ಯಕತೆಯೇ ಇರಲಿಲ್ಲ. ಮೆನೆಜರ್ "ಸರ್, ಸರ್" ಎಂದೆನ್ನುತ್ತ

ಲಿದ್ದ. ಅವಶ್ಯವೆನಿಸಿದಾಗ ನಗುತ್ತಲೂ ಇದ್ದ. ಆದರೆ ಆವಶ್ಯಕತೆಗಿಂತ ಹೆಚ್ಚಾಗಿ.... ತಲೆಯನ್ನೂ ಅಲ್ಲಾಡಿಸುತ್ತಿದ್ದ, ಬಗ್ಗಿ ಬಗ್ಗಿ ಗೌರವವನ್ನು ಸಂದಿಸುತ್ತಿದ್ದ.

ರಿಜಿಸ್ಟರ್‌ದಲ್ಲಿ ಸಹಿ ಹಾಕಿ, ದರಬಾರಿ ಕೋಣೆ ಸೇರಿದಾಗ ಬಬ್ಬುಲ್‌ನ ಕೈಯಲ್ಲಿ ಬಿಸ್ಕಟ್ ಇತ್ತು.

"ಇದನ್ನಾರು ಕೊಟ್ಟರು?"

"ಬೇರಾ ಕೊಟ್ಟ"—ಸೀತೆ ಹೇಳಿದಳು.

"ಮತ್ತೆ, ಈ ಆಯಿಸ್‌ಕ್ರೀಮ್?"

"ಪಕ್ಕದಲ್ಲಿಯ ಒಬ್ಬ ಅತಿಥಿ ಕೊಟ್ಟು ಹೋದ."

ಬೇರಾ ಮಗುವಿಗೆ ಬಟ್ಟಲಲ್ಲಿ ಹಾಲು ತರುತ್ತಿದ್ದ. ಅವನಿಗೆ, ಶತಮಾನಗಳಿಂದ ನಿರುದ್ಯೋಗಿಯಾಗಿದ್ದ ಮೇಲೆ, ಇಂದು ಒಮ್ಮೆಲೆ ಒಂದು ಎಂದೂ ಮುಗಿಯದ, ಎಂದೂ ಭಿನ್ನಗೊಳ್ಳದ ಮತ್ತು ಯಾವುದರೆದುರು ಟಿಪ್ಸ್‌ಗಳ ಗಳಿಕೆ ಮತ್ತು ಸಂಬಳಗಳಿಗೆ ಯಾವ ಅರ್ಥವೂ ಇರಲಿಲ್ಲವೋ ಅಂಥ ಎಂಥದೊ ಕೆಲಸ, ಯಾವುದೋ ನೌಕರಿ ದೊರೆತಿದೆ ಎನ್ನುವ ಹಾಗಿತ್ತು. ಅವನು ಖುಶಿಯಾಗಿದ್ದ. ಕೈಯಲ್ಲಿ ಹಾಲಿನ ಬಟ್ಟಲು ಹಿಡಿದುಕೊಂಡು ಅವನು, ತಾನು ಯಾರಿಗೂ ಅಲ್ಲ, ತನಗೇನೆ ಯಾರೋ ಉಪಕಾರ ಮಾಡುತ್ತಿದ್ದಾರೊ ಎನ್ನುವ ಹಾಗೆ ನಿಂತಿದ್ದ. ಅಲ್ಲಿಂದ ಕದಲುವದಕ್ಕೂ ಅವನು ಇಷ್ಟಪಡುತ್ತಿರಲಿಲ್ಲ.

"ಒಳ್ಳೇದು ಬೇರಾ, ನಾವು ದಣಿದಿದ್ದೇವೆ. ಯಾವಾಗಿನಿಂದ ಪ್ರಯಾಣದಲ್ಲಿದ್ದೇವೆ, ನೋಡು. ಈಗ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವೆವು"—ಎಂದು ದರಬಾರಿ ಬೇರಾನನ್ನು ಕೊಡವಿದಂತೆ ನಿಷ್ಕರುಣೆಯಿಂದ ಹೇಳಿದ.

"ಆಗಲಿ, ಸಾಹೇಬ್ ನನ್ನ ಅವಶ್ಯಕತೆ ಬಿದ್ದರೆ...."—ಬೇರಾ ಹೇಳಿದ.

ದರಬಾರಿ ಖಟ್ ಎಂದು ಬಾಗಿಲು ಮುಚ್ಚಿ ಒಳಗಿನಿಂದ ಕೊಂಡಿ ಹಾಕಿದ. ಅವನು ನಿಜವಾಗಿಯೂ ದಣಿದಿದ್ದ. ಬಳಿಕ ಒಂದು ದೀರ್ಘ ಶ್ವಾಸ ಬಿಟ್ಟು ಹಾಸಿಗೆಯ ಮೇಲೆ ಕುಳಿತ. ಸೀತೆ ಬಬ್ಬುಲ್‌ಗೆ ಹಾಲು ಕುಡಿಸುತ್ತಿದ್ದಿದ್ದುದು ಅವನಿಗೆ ಸರಿ ಕಾಣುತ್ತಿರಲಿಲ್ಲ. ಆದರೆ ಏನೂ ಅನ್ನಲೂ ಸಾಧ್ಯವಿರಲಿಲ್ಲ. ಹಾಗೆ ಏನಾದರೂ ಅಂದಿದ್ದರೆ ಬಹಳ ಕೆಡುಕೆನಿಸುತ್ತಿತ್ತು.

ಅಷ್ಟರಲ್ಲಿ, ತನ್ನ ಆಟದಲ್ಲಿ ಮಗ್ನನಾದ ಬಬ್ಬುಲ್ ಬಟ್ಟಲಿಗೆ ಕೈ ತಾಕಿಸಿದ. ಹಾಲು ಕೆಳಗೆ ಚೆಲ್ಲಿತು. "ಥತ್, ಹೊಲಸು ಮುಂಡೇದು" ಎಂದು ಸೀತೆ ಕರವಸ್ತ್ರದಿಂದ ಅವನ ಬಾಯಿ ಒರಿಸಿ, ಕಸಬರಿಗೆಯಿಂದ ಫರಶಿಯನ್ನು ಸ್ವಚ್ಛ ಮಾಡತೊಡಗಿದಳು. ಬಬ್ಬುಲ್‌ನಿಗೆ ಕೈ ಸೋಂಕಿಸಿದ್ದಷ್ಟೇ ತಡ, ಅವನು ಸೀತೆಯ ತೋಳು ಹಿಡಿದುಕೊಂಡು ಎದ್ದು ನಿಂತ.

ಸೀತೆ ಒಳಗಿಂದೊಳಗೆ ಕಂಪಿಸುತ್ತಿದ್ದಳು. ದರಬಾರಿ ಕೊಂಚ ಲಜ್ಜಿತನಂತೆ

ಕಾಣಿಸುತ್ತಿದ್ದ. "ಈ ಹೋಟಲ್ ಅಷ್ಟೊಂದು ಚೆನ್ನಾಗಿಲ್ಲ"—ಅವನು ಏನಾದರೂ ಮಾತಾಡಬೇಕೆಂದು ಹೇಳಿದ. "ಸರಿಯಾಗಿದೆ"—ಸೀತೆ ನಿರ್ಲಕ್ಷ್ಯವಾಗಿ ಅಂದಳು.

ನಂತರ ದರಬಾರಿ ಮೂಗು ಹಿಗ್ಗಿಸಿ ಅತ್ತಿತ್ತ ಮೂಸಿ ನೋಡಿ, "ಯಾವುದೋ ವಾಸನೆ ಬರುತ್ತಿದೆ" ಎಂದು ಅವನು ತನ್ನ ಹಣೆಯಿಂದ ಬೆವರನ್ನು ಒರೆಸಿಕೊಂಡ. ಕೊನೆಗೆ ಅಸಹನೆಯಿಂದ, "ಈಗ ನೀನು ಅವನನ್ನು ಬಿಡು" ಎಂದ.

ಸೀತೆ ಬಬ್ಬುಲ್‌ನನ್ನು ಕೂಡ್ರಿಸಲು ಯತ್ನಿಸಿದಳು. ಆದರೆ ಅವನು ಸೆಟೆದು ನಿಂತ.

ದರಬಾರಿ ಒಂದು ಆ್ಯಶ್-ಟ್ರೇಯನ್ನು ಬಬ್ಬುಲನ ಹತ್ತಿರ ತಂದಿಟ್ಟ. ಬಬ್ಬುಲ್ ಅದನ್ನು ಆಟಿಗೆಯೆಂದು ಭಾವಿಸಿ ಅದರ ಜೊತೆ ಆಡುತ್ತ ಕುಳಿತ.......ಅವನು ಇನ್ನೇನು ಮಾಡಬಲ್ಲನು?

ಈಗ ದರಬಾರಿ ಮುಂದಕ್ಕೆ ಬಂದು ಒಂದು ಹೆಡ್ಡ, ಒರಟಾದ, ಅಸಹ್ಯ ರೀತಿಯಲ್ಲಿ ಸೀತೆಯ ಕೈ ಹಿಡಿದುಕೊಂಡ.

"ದೇವರ ಸಲುವಾಗಿ........" ಎಂದು ಸೀತೆ ಬಬ್ಬುಲ್ ಕಡೆ ಸನ್ನೆ ಮಾಡಿದಳು. ಆದರೆ ದರಬಾರಿಯ ಕಣ್ಣುಗಳಲ್ಲಿ ಕೊಬ್ಬು ಆವರಿಸಿತ್ತೇನೋ ಅನ್ನುವ ಹಾಗೆ ಅವನಿಗೆ ಏನೂ ಕಾಣಿಸುತ್ತಿರಲಿಲ್ಲ. ತಾನು ಇದ್ದೇನೆ ಮತ್ತು ಓರ್ವ ಪ್ರಫುಲ್ಲ, ರಸವಂತಿ ಹುಡುಗಿ ಇದ್ದಾಳೆ—ಎಂಬ ಒಂದೇ ಮನೋಭಾವ ಅವನದಾಗಿತ್ತು. ಅವನು ಎದುಸಿರು ಬಿಡುತ್ತಿದ್ದ. ಅವನ ತೋಳುಗಳು ಸೀತೆಯನ್ನು ಬಳಸಿದಾಗ ಅವು ಮಾಂಸ-ಚರ್ಮದವಾಗಿರದೆ ಕಟ್ಟಿಗೆಯವಾಗಿದ್ದವೇನೋ ಎಂದನಿಸುತ್ತಿತ್ತು ಮತ್ತು ಅವು ಸೀತೆಯ ಮೃದುಲ, ಮಾಂಸಲ ದೇಹದಲ್ಲಿ ಒಳಸೇರುತ್ತಿದ್ದವು. ಸೀತೆ ಯಾವುದೇ ಆತಂಕ ಮಾಡಲಿಲ್ಲ. ದರಬಾರಿಯ ತೋಳುಗಳಲ್ಲಿ ಅವಳು ಕಂಪಿಸುತ್ತ ಕ್ಷಣಕ್ಷಣಕ್ಕೂ ಉಸಿರಿಲ್ಲದವಳಾಗುತ್ತಿದ್ದಳು. ಇವೊತ್ತು ಅವಳು ಸ್ವಯಂ ಆಶ್ರಯಹೀನಳಾಗಲು ಬಯಸಿದ್ದಳು.

ಬಬ್ಬುಲ್ ಭಯಭೀತ ದೃಷ್ಟಿಯಿಂದ ಇಬ್ಬರನ್ನೂ ನೋಡತೊಡಗಿದ.

ಸೀತೆ ಅಳುವದನ್ನು ಕಂಡು ದರಬಾರಿ, "ಅದೆ, ನೀನು ನನ್ನನ್ನು ಪ್ರೀತಿಸುವದಿಲ್ಲವೆಂದು ತಿಳಿಯಿತಲ್ಲ" ಎಂದ.

"ನಾನು ನಿಮ್ಮನ್ನು ಪ್ರೀತಿಸುವದಿಲ್ಲಾ?....ನಾನು ನಿಮ್ಮನ್ನು...."

ಬಬ್ಬುಲ್ ಆ್ಯಶ್-ಟ್ರೇದಲ್ಲಿಯ ಬೂದಿಯನ್ನು ಮುಖದ ಮೇಲೆ ತಿಕ್ಕಿಕೊಂಡು ಅಳಹತ್ತಿದ.

"ಬಾಯಿ ಮುಚ್ಚಲೇ"—ದರಬಾರಿ ತಿರಸ್ಕಾರ ಮತ್ತು ಕ್ರೋಧದಿಂದ ನುಡಿದ. ಸೀತೆ ಬೆಚ್ಚಿದಳು. ಅವಳು ಹೊರಗೆ ಓಡಿಹೋಗಬಯಸಿದಳು. ಆದರೆ ಅವಳ ಕೈಗಳು, ತೋಳುಗಳು ಸೋತಿದ್ದವು.

ದರಬಾರಿಯ ಗದ್ದರಿಕೆಗೆ, ಬಬ್ಬುಲ್ ಹೆದರಿ ಚೀರಹತ್ತಿದ.

ದರಬಾರಿ ತಕ್ಷಣ ಕೋಪೋದ್ರಿಕ್ತನಾಗಿ ಬಬ್ಬುಲ್‌ನತ್ತ ಧಾವಿಸಿದ—ಅವನ ಕುತ್ತಿಗೆ ಹಿಚುಕುವನೇನೊ, ಗಂಡು-ಹೆಣ್ಣಿನ ಮಧ್ಯದಲ್ಲಿಯ ಈ ಅಸಂಗತ ಧ್ವನಿಯನ್ನು ಶಾಶ್ವತವಾಗಿ ಕೊನೆಗಾಣಿಸುವನೇನೊ ಎನ್ನುವ ಹಾಗೆ. ಬಬ್ಬುಲ್‌ನ ಬಳಿ ತಲುಪುತ್ತಲೇ ಅವನು ಜೋರಾಗಿ ಬಬ್ಬುಲ್‌ನ ಕೆನ್ನೆಗೆ ಹೊಡೆದ. ಬಬ್ಬುಲ್ ಚಿಮ್ಮಿ ಹೋಗಿ ದೂರ ಬಿದ್ದ.

"ನಾಚಿಕೆ ಬರುವದಿಲ್ಲವೆ?"—ಎಲ್ಲಿಂದಲೋ ಮಿಸ್ರಿಯ ಧ್ವನಿ ಕೇಳಿಬಂತು.

ದರಬಾರಿ ಹೊರಳಿ ನೋಡಿದ—ಅಲ್ಲಿದ್ದವಳು ಮಿಸ್ರಿಯಲ್ಲ, ಸೀತೆ. ಅವಳಲ್ಲಿಯ ಯಾವುದೋ ಅಜ್ಞಾತ ಶಕ್ತಿಯು ಅವಳನ್ನು ಅರೆನಗ್ನ ಸ್ಥಿತಿಯಲ್ಲಿಯೂ ಕೂಡ ಬಬ್ಬುಲ್‌ನ ಬಳಿ ಸೆಳೆದು ತಂದಿತ್ತು. ಅವಳು ಅವನನ್ನು ಎತ್ತಿಕೊಂಡು ತನ್ನೆದೆಗೆ ತಬ್ಬಿಕೊಂಡಿದ್ದಳು. ಬಬ್ಬುಲ್ ಸೀತೆಯ ಸ್ತನಗಳ ಮೇಲೆ ತಲೆಯಿಟ್ಟು ಅಳುತ್ತಿದ್ದ; ಬಿಕ್ಕಳಿಸುತ್ತಿದ್ದ. ಬಳಿಕ ಅವನು ತನ್ನ ತಲೆಯೆತ್ತಿ, ಬಹಳವಾಗಿ ಬಿಕ್ಕಳಿಸುತ್ತಿದ್ದರೂ ಕೂಡ, ದರಬಾರಿ ತನ್ನನ್ನು ಹೊಡೆದನೆಂದು ಹೇಳುತ್ತಿದ್ದಂತೆ ಅವನ ಕಡೆ ಸನ್ನೆ ಮಾಡಲಾರಂಭಿಸಿದ.

ಇಷ್ಟು ಸ್ವಚ್ಛವಾದ, ಶುಭ್ರವಾದ ಬಟ್ಟೆಗಳಲ್ಲಿಯೂ ತಾನು ಕೊಳಕು ಆಗಿರುವೆನೆಂದು ದರಬಾರಿಗೆ ಅನಿಸಹತ್ತಿತು. ಅವನು ಬಬ್ಬುಲ್‌ನಿಂದ ಲಜ್ಜಿತನಾದಷ್ಟು ಸೀತೆಯಿಂದ ಆಗಿರಲಿಲ್ಲ....ಆದರೆ ತನ್ನಷ್ಟಕ್ಕೆ ತನ್ನನ್ನು ಯೋಗ್ಯನೆಂದು ತಿಳಿದುಕೊಳ್ಳಲು ಅವನ ಬಳಿ ಇನ್ನೂ ಅನೇಕ ಸಾಕ್ಷಿ ಇದ್ದವು.

ಈಗ ದರಬಾರಿ ತನ್ನ ತಲೆಯನ್ನು, ಯಾವುದೋ ರಾಡಿನೊಳಗಿಂದ ಹೊರಗೆತ್ತಿದ್ದಂತೆ ಎತ್ತಿ ಬಬ್ಬುಲ್‌ನ ಕಡೆ ನೋಡಹತ್ತಿದ. ಸೀತೆಯ ಕಡೆ ನೋಡಲು ಅವನಿಗೆ ಸಾಧ್ಯವಿರಲಿಲ್ಲ. ಯಾಕೆಂದರೆ, ಅವಳು ನಗ್ನಳಾಗಿದ್ದು, ಬಬ್ಬುಲ್‌ನ ಸಹಾಯದಿಂದ ತನ್ನ ನಗ್ನತೆಯನ್ನು ಮುಚ್ಚಿಕೊಳ್ಳುತ್ತಿದ್ದಳು. ಅವಳು, ದರಬಾರಿಯನ್ನು, ಇಷ್ಟು ಕೀಳುಮಟ್ಟಕ್ಕೆ ಇಳಿದ ಇವನು ಜಗತ್ತಿನ ಅತ್ಯಂತ ನೀಚ ವ್ಯಕ್ತಿ ಎನ್ನುವಂತೆ, ನೋಡುತ್ತಿದ್ದಳು....ಆದರೆ ಅವಳ ದೃಷ್ಟಿ ಶೂನ್ಯವಾಗಿತ್ತು. ಅವಳು ಏನನ್ನೂ ಗ್ರಹಿಸುತ್ತಿರಲಿಲ್ಲ.

ನಾಚಿಕೆ, ಲಜ್ಜೆ ಮತ್ತು ಅಪಮಾನಗಳಿಂದ ದರಬಾರಿ ತನ್ನ ಕೈಯನ್ನು ಬಬ್ಬುಲ್‌ನ ಕಡೆ ಚಾಚಿದ. ಸೀತೆಯ ಅಧಿಕಾರ ನಡೆದಿದ್ದರೆ ಅವಳು ಬಬ್ಬುಲ್‌ನನ್ನು ಎಂದಿಗೂ ದರಬಾರಿಯ ಕೊಳಕು ಮತ್ತು ಅಪವಿತ್ರ ಕೈಗಳಲ್ಲಿ ಕೊಡುತ್ತಿರಲಿಲ್ಲ. ಆದರೆ ಅವಳು ಏನು ಮಾಡಲು ಶಕ್ಯವಿತ್ತು? ಬಬ್ಬುಲ್ ಸ್ವತಃ ಕಸವಿಸಿಗೊಂಡು ದರಬಾರಿಯ ತೋಳಗಳಲ್ಲಿ ಧಾವಿಸಿದ ಮತ್ತು ಅಳುತ್ತ ವಿರುದ್ಧವಾಗಿ, ಸೀತೆ ತನ್ನನ್ನು ಹೊಡೆದಳೆಂದು ಹೇಳುವ ಹಾಗೆ ಅವಳ ಕಡೆ ಸಂಜ್ಞೆ ಮಾಡಹತ್ತಿದ. ಈಗ ದರಬಾರಿಯ ಹತ್ತಿರ ಯಾವ ಸಾಕ್ಷಿಯೂ ಇರಲಿಲ್ಲ ಮತ್ತು ಸೀತೆಯು ಬಳಿಯೂ ಇರಲಿಲ್ಲ.

" ಸೀತಾ "—ದರಬಾರಿ ಅಂದನು.

ಸೀತೆ ಏನೂ ಮಾತಾಡಲಿಲ್ಲ. ಅವಳು ಅಳಲು ಕೂಡ ಸಾಧ್ಯವಿರಲಿಲ್ಲ. ಬೇಗನೆ ಸೀರೆಯ ಸೆರಗನ್ನು ಎಳೆದುಕೊಂಡು ತನ್ನ ದೇಹವನ್ನು ಮುಚ್ಚಿಕೊಂಡಳು.

" ಸೀತಾ "—ದರಬಾರಿ ಪುನಃ ಕೇಳಿದ,—" ನೀನು....ಎಂದಾದರೂ ಕ್ಷಮಿಸ ಬಲ್ಲೆಯಾ ? "

ನಂತರ, ಶಂಕೆ ಮತ್ತು ಸಂಶಯದ ರೀತಿಯಲ್ಲಿ ಅವಳ ಕಡೆ ನೋಡುತ್ತ, ಹೇಳಿದ:-

" ನಾವು ಮೊದಲು ಮದುವೆ ಮಾಡಿಕೊಳ್ಳೋಣ."

ಬಳಿಕ ಅವನು ಧೈರ್ಯಮಾಡಿ ತನ್ನ ಇನ್ನೊಂದು ತೋಳಿನಿಂದ ಸೀತೆಯನ್ನು ಬಳಸಿದ. ಸೀತೆ ದರಬಾರಿಯ ಕಣ್ಣುಗಳಲ್ಲಿ ನೋಡಿದಳು. ನಂತರ ಒಂದೇ ನೆಗೆತದಲ್ಲಿ ದರಬಾರಿಯನ್ನು ತಬ್ಬಿಕೊಂಡು ಅವನ ಹೆಗಲ ಮೇಲೆ ತನ್ನ ತಲೆಯನ್ನಿಟ್ಟು ಮಕ್ಕಳ ಹಾಗೆ ಅಳಹತ್ತಿದಳು. ಅವಳ ಕಣ್ಣೀರಿನಲ್ಲಿ ದರಿಬಾರಿಯ ಕಣ್ಣೀರು ಬೆರೆಯಿತು. ಇಬ್ಬರ ದುಃಖ ಒಂದಾದವು ; ಸುಖ ಕೂಡ ಒಂದುಗೂಡಿದವು.

ಅವರಿಬ್ಬರು ಅಳುತ್ತಿದ್ದುದನ್ನು ಕಂಡು ಬಬ್ಬುಲ್ ತನ್ನ ಅಳುವನ್ನು ನಿಲ್ಲಿಸಿದ ಮತ್ತು ಆಶ್ಚರ್ಯದಿಂದ ಒಮ್ಮೆ ಸೀತೆಯತ್ತ ಮತ್ತೊಮ್ಮೆ ದರಬಾರಿಯತ್ತ ನೋಡ ಹತ್ತಿದ....ಬಳಿಕ ಒಮ್ಮಿಂದೊಮ್ಮೆಲೆ, ಅವನು ನಗಹತ್ತಿದ—ಏನೂ ಆಗಿಲ್ಲವೆನ್ನುವ ಹಾಗೆ. ತನ್ನ ಚುರಮುರಿಯ ಸಲುವಾಗಿ ದರಬಾರಿಯ ಮುಷ್ಟಿಯನ್ನು ಬಿಚ್ಚ ತೊಡಗಿದ .......

# ಟರ್ಮಿನಸ್‌ದ ಆಚೆ

ಪಂಜಾಬ್ ಮೇಲ್ ನಿಧಾನವಾಗಿ ಹೊರಟು ಪ್ಲ್ಯಾಟ್‌ಫಾರ್ಮ್‌ನಿಂದ ಆಚೆ ಸಾಗಿತು. ಕೆಲ ಸಮಯದವರೆಗೆ ಮೋಹನ್ ಜಾಮನಿಗೆ ಅವನ ನಾಜೂಕಾದ ಹೆಂಡತಿ ಸುಮಿತ್ರಾಳ, ಒಂದು ಸಾದಾ ಹ್ಯಾಂಡ್‌ಲೂಮ್ ಸೀರೆಯನ್ನುಟ್ಟ ದೇಹವು ಕಾಣಿಸುತ್ತಲಿತ್ತು. ಸುಮಿತ್ರಾ ಕಂಪಾರ್ಟ್‌ಮೆಂಟಿನ ಬಾಗಿಲಲ್ಲಿ ನಿಂತಿದ್ದಳು. ಮೋಹನ್ ಒಂದು ಸ್ಟಾಲ್ ಹತ್ತಿರ ನಿಂತು ಕೊನೆಯ ಗಳಿಗೆಯುವರೆಗೂ ತನ್ನ ಕರವಸ್ತ್ರವನ್ನು ಆಡಿಸುತ್ತಿದ್ದ.

ಗಾಡಿ ಹೊರಡುವ ಮೊದಲು ಸುಮಿತ್ರಾಳ ಕಣ್ಣು ತೇವಗೊಂಡಿದ್ದವು. ಶಬ್ದಗಳು ಎಂದಿನಂತೆ ನಿರರ್ಥಕವಾಗಿದ್ದವು. "ಮನೆಯ ಕಡೆ ಲಕ್ಷ್ಯವಿಡಿ", "ಹೋಟಲ್ ಊಟ ಮಾಡಬೇಡಿ", "ವಾರದಲ್ಲಿ ಒಂದಲ್ಲ ಎರಡು ಪತ್ರ ಖಂಡಿತ ಬರೆಯಿರಿ"—ಇವೆಲ್ಲ ಮಾತುಗಳು ಕಣ್ಣುಗಳ ಭಾಷೆಯ ಎದುರು ಮೂಕವಾಗಿದ್ದವು ಮತ್ತು ಮೋಹನ್ ಜಾಮನಂಥ ಮನುಷ್ಯನ ಹೃದಯವನ್ನೂ ಕರಗಿಸಿದ್ದವು. ಪ್ರತಿ ಹೆಂಡತಿಯು ದೂರವಾಗುವ ಮೊದಲು ಕಣ್ಣುಗಳಲ್ಲಿಯೇ ಯಾವುದೋ ಆಶ್ವಾಸನೆಯನ್ನು ಬೇಡುತ್ತಾಳೆ. ಆ ಸಮಯದಲ್ಲಂತು ಸುಳ್ಳನ್ನಾದರೂ ಹೇಳಬೇಕು. ಆದರೆ ಕೆಲವು ಜನ....ಮೋಹನ ಏನೂ ಹೇಳಲಿಲ್ಲ. ಅವನು ಮೊದಲಿಗೆ ಬೇಗ ಬೇಗ, ಬಳಿಕ ಮೆಲ್ಲ ಮೆಲ್ಲನೆ ಕರವಸ್ತ್ರವನ್ನು ಆಡಿಸುತ್ತಲಿದ್ದ. ಈ ವರ್ತನೆಯು ಒಂದು ಪದ್ಧತಿಯಾಗಿಬಿಟ್ಟಿದೆ. ಆದರೆ ಚೆನ್ನಾಗಿ ಅನಿಸುತ್ತದೆ. ಹೃದಯ ಎಲ್ಲಿ, ಯಾಕೆ, ಮತ್ತು ಯಾರಿಗಾಗಿ ತುಡಿಯುತ್ತಿದೆ ಎಂಬುದಂತೂ ಕಾಣಿಸುವದಿಲ್ಲ. ಆದರೆ ಕರವಸ್ತ್ರವು ಮಾತ್ರ ಕಣ್ಣು ನೋಟವು ಮಸಕಾಗುತ್ತಿದ್ದಂತೆ, ಮಬ್ಬಿನಲ್ಲಿ ಲೀನವಾಗುವವರೆಗೂ ತಪ್ಪದೆ ಆ ವ್ಯಕ್ತಿಗೆ—ಹೊರಟಿರುವ ವ್ಯಕ್ತಿಗೆ ಕಾಣಿಸುತ್ತಲಿರುತ್ತದೆ.

ಈ ಪ್ರವಾಸವೇ ಜೊಳ್ಳು ವಿಷಯ. ನನಗೆ ಎಲ್ಲಿಗಾದರೂ ಹೋಗುವದಿದ್ದರೆ ನನ್ನ ಚೈತನ್ಯವು ಕುಗ್ಗಿದಂತಾಗುತ್ತದೆ. ಸ್ಟೇಶನ್‌ನಲ್ಲಿ ಗದ್ದಲ. ಕೇವಲ ಗದ್ದಲದ ಕಾರಣದಿಂದ ಮನುಷ್ಯ ಏಕಾಕಿಯಾಗಿ ಉಳಿದುಬಿಡುತ್ತಾನೆ. ಬಳಿಕ ಮುಂದೆ ಹೋಗಲಿಕ್ಕೆ ಗಾಡಿ ಸ್ವಲ್ಪ ಹಿಂದಕ್ಕೆ ಸರಿಯುತ್ತದೆ. ನಂತರ ಯಾವುದೋ ಸೀಟಿ, ಯಾವುದೋ ಧ್ವನಿ...."ಅರೆ, ಅರೆ", "ಗಾಡಿ ಬಿಟ್ಟಿತು", "ನನ್ನ ಸಾಮಾನು ಉಳಿದವು".... ಕೊನೆಗೆ ಯಾರಿಗೆ ಯಾರೂ ಇಲ್ಲ....ಈ ಜಗತ್ತು....ಒಮ್ಮೊಮ್ಮೆಯಂತೂ, ಟಿಕೆಟ್ ಗಿಕೆಟ್ ವಾಪಸ್ಸು ಮಾಡಿ ಮನೆಗೆ ಹೋಗಿ ಮಜಾದಿಂದ ಕುಳಿತರಾಯಿತು, ಹೆಂಡತಿಯ

ಜೊತೆ ಜಗಳವಾಡಿದರೂ ಚಿಂತೆಯಿಲ್ಲ—ಎಂದು ಅನಿಸುತ್ತದೆ.

ಜೀವನದ ಗೆಲವೇ ಇದು : ದುಃಖದ ನೆರಳಿನಲ್ಲಿಯೂ ಎಲ್ಲಿಯೋ ಸುಖದ ಭಾವನೆಗಳು ಹೊಟ್ಟಿ ಹೊಸೆಯುತ್ತಲಿರುತ್ತವೆ; ಗಾಡಿ ಬಿಟ್ಟ ಕೂಡಲೆ ಧಾವಿಸಿ ಎದುರು ಬಂದುಬಿಡುತ್ತವೆ ಮತ್ತು ಅವುಗಳ ಬೆಳಕಿನಲ್ಲಿ ಉದಾಸೀನತೆಯು ಅಡಗಿಹೋಗುತ್ತದೆ. ಆಗಾಗ ಯಾರ ಜೊತೆ ಪ್ರೋಗ್ರಾಮ್ ಆಗುತ್ತಿದ್ದವೋ ಈಗ ಅವರಿಲ್ಲದಲೇ ಆಗಹತ್ತಿದವು....ಮೋಹನ ಒಂದು ದೀರ್ಘ ಉಸಿರೆಳೆದ—ಅಬ್ಬ! ಇನ್ನೆರಡು ತಿಂಗಳು ರಜಾ ಸಿಕ್ಕಿತು....ಕೆಲವು ವಸ್ತುಗಳ ಇಲ್ಲದಿರುವಿಕೆಯೇ ಒಂದು ಬಗೆಯ ಇರುವಿಕೆಯಿದ್ದಂತೆ. ನಾನು ಇಲ್ಲದ ಜೀವನದ ಅರ್ಥವೇನು? ಎಂಬುದು ಸುಮಿತ್ರೆಗೂ ಅವಳು ಮರಳಿದ ನಂತರ ಗೊತ್ತಾಗುತ್ತದೆ....ಮತ್ತೊಮ್ಮೆ ಹಾಳು ಮಾಡಿಕೊಳ್ಳಲು ಅವಳ ಆರೋಗ್ಯ ಕೂಡ ಚೆನ್ನಾಗಿ ಆಗಬಹುದು. ಆಮೇಲೆ ಅವಳು ಹೇಗೆ ತೊಡಕು ಬೀಳುತ್ತಾಳೆ....ಅದರ ಬದಲು, ನನ್ನನ್ನೆ, "ನೀನು ಎಲ್ಲಿ ಹೋಗಿಬಿಟ್ಟಿದ್ದೆ ಮೋಹಿನಿ?" ಎಂದು ಕೇಳುತ್ತಾಳೆ.

ಮೋಹನ ವಿಕ್ಟೋರಿಯಾ ಟರ್ಮಿನಸ್‌ನ ಪ್ಲಾಟ್‌ಫಾರ್ಮದಿಂದ ಹೊರಬರಲು ಹೊರಳಿದಾಗ ಅದೇ ಕಡೆಯಿಂದ ಯಾವುದೋ ಇನ್ನೊಂದು ಗಾಡಿ ಪ್ಲಾಟ್‌ಫಾರ್ಮ ಮೇಲೆ ಬರುತ್ತಿತ್ತು. ಮೋಹನ ಬೆಚ್ಚಿಬಿದ್ದ. ಸುಮಿತ್ರಾ ಆ ಗಾಡಿಯಿಂದ ಹೋಗಿ ಈ ಗಾಡಿಯಿಂದ ಹಿಂದಿರುಗಿ ಬಂದ ಹಾಗೆ ಅನಿಸಿತು. ಅಷ್ಟರಲ್ಲೆ, ಒಬ್ಬ ದಪ್ಪ ಹೆಂಗಸು ಕಂಪಾರ್ಟಮೆಂಟಿನ ಬಾಗಿಲಲ್ಲಿ ಸಿಕ್ಕಿಕೊಂಡಿದ್ದನ್ನು ನೋಡಿದ, ಮುಗುಳ್ನಕ್ಕ, ಮತ್ತು ನಡೆದ. ಅವನಿಗೆ ಇಸ್ಪೀಟಿನ ಕೆಲವು ಗಾರುಡಿಗರೊಂದಿಗೆ ಫ್ಲಾಷ್ ಆಡಲಿಕ್ಕೆ ರೇಡಿಯೊ ಕ್ಲಬ್ಬಿಗೆ ಹೋಗುವದಿತ್ತು. ಅಲ್ಲಿ ಮಧ್ಯೆ ಮಧ್ಯೆ ಆಗಾಗ ಎಲೆಯ ಬೇಗಂ ಜೀವಂತಳಾಗುತ್ತಿದ್ದಳು ಮತ್ತು ಸಮುದ್ರದಿಂದ ಬರುವ ಸುಂಟರಗಾಳಿಗೆ ಅವಳ ಕಡುಗೆಂಪು ಬಣ್ಣದ ಸೀರೆಯ ಸೆರಗು ಒಬ್ಬರಲ್ಲ ಒಬ್ಬರನ್ನು ತನ್ನ ಸುತ್ತುವಿಕೆಯಲ್ಲಿ ತೆಗೆದುಕೊಳ್ಳುತ್ತಿತ್ತು. ಸೆರಗನ್ನು ಸರಿಸುವವರೆಗೆ ಸೀರೆಯಲ್ಲಿ ಸುತ್ತಲ್ಪಟ್ಟ ಒಂದು ಜೀವಿಯ ಬದಲು ಎರಡು ಇದ್ದ ಹಾಗೆ ಅನಿಸುತ್ತಿತ್ತು.

ಮೋಹನ ಹೋಗುತ್ತಲಿದ್ದ. ಅವನಿಗೆ ಅರಿವಿಲ್ಲದೆ ಮನೆಯ ಮತ್ತು ಕಾರಿನ ಕೀಲಿಗಳು ಅವನ ಎಡಗೈಯ ಬೆರಳುಗಳ ಮೇಲೆ ತಿರುಗುತ್ತಿದ್ದವು. ಬಲಗೈಯು ಪ್ಯಾಂಟಿನ ಜೇಬಿನಲ್ಲಿ ಪ್ಲಾಟ್‌ಫಾರ್ಮ ಟಿಕೆಟನ್ನು ಹುಡುಕುತ್ತಿತ್ತು. ಅಷ್ಟರಲ್ಲೆ ಅವನ ದೃಷ್ಟಿ ಎದುರಿಗೆ ನಾಟಿತು.

"ಅಚ್ಚಿ!" ಅವನು ತಡೆದು ನಿಂತು ಹೇಳಿದ.

ಮೋಹನನಿಗೆ ಅಚಲಾಳ ಪರಿಚಯವಿತ್ತು. ಆದರೆ ಅಷ್ಟೇನೂ ವಿಶೇಷವಿರಲಿಲ್ಲ. ಅಚಲಾಳ ಗಂಡ ರಾಮು ಗದಕರಿಯನ್ನಂತೂ ಅವನು ಜೀವನದಲ್ಲಿ ಬಹುಶಃ ಒಂದೆರಡು ಬಾರಿ ಮಾತ್ರ ಭೆಟ್ಟಿಯಾಗಿರಬಹುದು. ಆದರೆ ಅಚಲಾಳ ಭೆಟ್ಟಿ 'ಮಿಷ್ಟಾನ್'ದಲ್ಲಿ

ಅನೇಕ ಸಲ ಆಗುತ್ತಿತ್ತು. ಅಲ್ಲಿಗೆ ಅವಳು ತನ್ನ ಒಬ್ಬ ಸ್ವೇಚ್ಛಾ ಪ್ರವೃತ್ತಿಯ ಗೆಳತಿ ದೀಬಿಯ ಜೊತೆ ವೆಜಿಟೇರಿಯನ್ ಊಟ ಮಾಡಲು ಬರುತ್ತಿದ್ದಳು. ನಮಸ್ತೆ ನಮಸ್ತೆಗಳನ್ನು ಬಿಟ್ಟು ಮೋಹನ್ ಜಾಮ್ ಮತ್ತು ಅಚಲಾ ಗದಕರಿಯರ ನಡುವೆ ಎಂಟು, ಹತ್ತು, ಇಲ್ಲ ಬಹಳವೆಂದರೆ ಹನ್ನೆರಡು ವಾಕ್ಯಗಳ ಮಾತುಕತೆ ಆಗಿರಬಹುದು. ಅಷ್ಟರಿಂದಲೇ ತಿಳಿದಿದ್ದು ಕೇವಲ ಇಷ್ಟು: ಅವಳು ಕೂಡ ಕೊಲಾಬಾದಲ್ಲಿ ಇರುತ್ತಿದ್ದಳು. ಅಂತರವಿಷ್ಟೇ, ಕಫ್ ಪೆರೇಡದ ಒಂದು ಒಳ್ಳೆಯ ಫ್ಲ್ಯಾಟನಲ್ಲಿ ಅವನಿರುತ್ತಿದ್ದ; ಅಚಲಾ ಕಾರವೋಯಿಯ ಮೇಲಿನ ಒಂದು ಹಳೆಯ ಬಿಲ್ಡಿಂಗಿನಲ್ಲಿ ಇರುತ್ತಿದ್ದಳು.

ಮೋಹನ ಅವಳನ್ನು 'ಅಚ್ಚಿ' ಎಂಬ ಹೆಸರಿನಿಂದ ಕೂಗುತ್ತಿದ್ದಿಲ್ಲವೇನೊ. ಆದರೆ ದೀಬಿ ಮೋಹನನಿಗೆ ಅವಳ ಪರಿಚಯವನ್ನು ಇದೇ ಹೆಸರಿನಿಂದ ಮಾಡಿಸಿದ್ದಳು. ದೀಬಿ ಮೋಹನನಿಗೆ ಚೆನ್ನಾಗಿ ಗೊತ್ತಿದ್ದಳು. ನೀರು ಕಲ್ಲುಸಕ್ಕರೆಗೆ ಎಷ್ಟು ಆಪತ್ತಾರಿ ಇರುವದೆಂದು ದೀಬಿಗೆ ಗೊತ್ತೇ ಇತ್ತು. ಇದರ ಮೇಲೂ ಅವಳು ತಕ್ಷಣ ಯಾವನಾದರೂ ಒಬ್ಬ ಪರಪುರುಷನ ಜೊತೆ ಕರಗಿ ಹೋಗುತ್ತಿದ್ದಳು. ಅವಳ ಸ್ವತಂತ್ರ ಜೀವನವು ಒಂದು ಶರಬತ್ ಇದ್ದಂತೆ ಇತ್ತು—ಅದು ಜೀವನದ ಗಡಿಗೆಗಳಲ್ಲಿ ಬಿದ್ದಿರುತ್ತಿತ್ತು. ಬೆಳಗಿನವರೆಗೆ ಯಾವುದೋ ಒಂದು ಬಾಷ್ಪೀಭವನ ಕ್ರಿಯೆಯಿಂದ ನೀರು ಆರಿಹೋಗಿ ತಳದಲ್ಲಿ ಪುನಃ ಮೊದಲಿಗಿಂತಲೂ ಸ್ವಚ್ಛ, ಶುಭ್ರ, ಹೊಳಪುಳ್ಳ ಮತ್ತು ಮೊನಚುಳ್ಳ ಕಲ್ಲುಸಕ್ಕರೆಯ ಹಳಕುಗಳು ಕಾಣಿಸಹತ್ತುತ್ತಿದ್ದವು.

ಮೋಹನ ಕೂಗಿದ ಮೇಲೆ ಅಚಲಾ ಹೊರಳಿ ನೋಡಿ ಕೇವಲ ಇಷ್ಟೇ ಅಂದಳು: "ಮೋ" ಸ್ವಲ್ಪ ಸಮಯದ ಬಳಿಕ "....ಹನ."

ನಂತರ ಅವಳು ತನ್ನ ಸೀರೆಯ ಸೆರಗಿನಿಂದ ಕಣ್ಣುಗಳ ತೇವವನ್ನು ಒರೆಸಿಕೊಂಡಳು. ಈಗ ಅವಳು ಮುಗುಳ್ನಗುತ್ತಿದ್ದಳು. ಏಕಾಏಕಿ ಯಾರೊ ಯಾವುದೊ ಬಂಗಾರದ ಕಿರೀಟವನ್ನು ಅವಳ ತಲೆಯ ಮೇಲೆ ಇಟ್ಟಂತೆ ಅನಿಸುತ್ತಿತ್ತು. ಮೋಹನನ ಬಳಿಗೆ ಬರುತ್ತ ಅವಳು, "ತಾವು! ಇಲ್ಲಿ ಹೇಗೆ?" ಅಂದಳು.

"ಹೆಂಡತಿಯನ್ನು ಕಳಿಸಲು ಬಂದಿದ್ದೆ. ಮಕ್ಕಳಿಗೆ ರಜೆ ಆದ್ದರಿಂದ ಕಾಶ್ಮೀರಕ್ಕೆ ಹೋಗುತ್ತಿದ್ದಾಳೆ.....ತಾವು?" ಎಂದು ಮೋಹನ ಉತ್ತರಿಸಿದ.

"ನಾನು?"—ಅಚಲಾ ಒಮ್ಮೆಲೆ ಕಿಲಕಿಲ ನಗಹತ್ತಿದಳು. ಹಾಗೆಯೇ ನಗು ನಿಲ್ಲಿಸಿ, ನಾಚುತ್ತ, "ನಾನು ಅವರನ್ನು ಕಳಿಸಲಿಕ್ಕೆ ಬಂದಿದ್ದ" ಅಂದಳು.

"ಓ"—ಮೋಹನ ನಕ್ಕುಬಿಟ್ಟ. ಒಂದು ದೃಷ್ಟಿ ಅಚಲಾಳ ಮೇಲೆ ಬೀರಿದ ಮೇಲೆ ಅವನು ಇನ್ನೊಂದು ಗಾಡಿಯ ಎಂಜಿನ್ ಕಡೆ ನೋಡಹತ್ತಿದ. ಅದರಲ್ಲಿ ಈವರೆಗೂ ಹೊಗೆ ಏಳುತ್ತಿತ್ತು. ಬಳಿಕ ಅಚಲಾಳ ಕಡೆ ನೋಡುತ್ತ,

"ಎಲ್ಲಿಗೆ ಹೋದರು ಗದಕರಿ ಸಾಹೇಬರು?" ಎಂದ.

"ದಿಲ್ಲಿ"

" ಎಂದು ಬರುವರು ? "

" ಇದೇ ಎಂಟು ಹತ್ತು ದಿನಗಳಲ್ಲಿ, ಯಾವುದೊ ಕಾನ್ಫರೆನ್ಸ್ ಇದೆಯಂತೆ "— ಅಚಲಾ ಹೇಳಿದಳು.

" ಬಹುಶಃ ಹೆಚ್ಚು ದಿನಗಳೂ ಹಿಡಿಯಬಹುದು."

" ಹಾಂ....ಬಹುಶಃ "

ಅಚಲಾ ತನ್ನ ಮೊದಲೇ ಒಪ್ಪವಾಗಿದ್ದ ಕೂದಲನ್ನು ತಿದ್ದಿಕೊಳ್ಳಹತ್ತಿದಳು. ಅವುಗಳಲ್ಲಿ ಕೇವಲ ಒಂದು ಪಿನ್ ಸಡಿಲವಾಗಿ ಸ್ವಲ್ಪ ಮೇಲೆದ್ದಿತ್ತು. ಅಚಲಾ ಅದನ್ನು ತನ್ನ ಮೇಣದಂಥ ಕೈಗಳಿಂದ ಒತ್ತಿದಳು. ಆಗಲೇ ಅವಳಿಗೆ ತನ್ನ ಕೈಗಳು ಬಹಳ ಹೊತ್ತಿನವರೆಗೆ ಮೇಲೆ ಎತ್ತಿದ್ದಂತೆ ಅನಿಸಿತು. ಮೋಹನನ ದೃಷ್ಟಿ ಅವಳ ಇಡೀ ದೇಹದ ಪ್ರದಕ್ಷಿಣೆ ಮಾಡುತ್ತ, ಒಂದು ಕ್ಷಣ ಸೀರೆ ಮತ್ತು ಕುಪ್ಪಸಗಳ ಮಧ್ಯದ ಸ್ಥಳದ ಮೇಲೆ ಬಹಳ ಹೊತ್ತು ನಿಂತಿತು. ತಟ್ಟನೆ ಕೈಗಳನ್ನು ಕೆಳಗೆ ಮಾಡುತ್ತ ಅವಳು ಸೀರೆಯಿಂದ ತನ್ನ ಶರೀರದ ನಗ್ನ ಭಾಗವನ್ನು ಮುಚ್ಚಿಕೊಂಡಳು.

ಮೋಹನ ಯೋಚಿಸಹತ್ತಿದ—ಶರೀರದ ಈ ಭಾಗಕ್ಕೆ ಇಂಗ್ಲೀಷಿನಲ್ಲಿ 'ಮಿಡ್ರಿಫ್' ಎನ್ನುತ್ತಾರೆ. ಸ್ಟೇಶನ್‌ದಿಂದ ಹೊರಗೆ ಬರುವವರೆಗೆ ಈ ಶಬ್ದವು ಅವನ ಮೆದುಳಿನಲ್ಲಿ ಜೇನುಹುಳುವಿನಂತೆ ಗುಂಯ್‌ಗುಡುತ್ತಿತ್ತು.... ಮಿಡ್ರಿಫ್.... ಮಿಡ್ರಿಫ್.... ಮಿಡ್ರಿಫ್.

ಮೋಹನ್ ಅದನ್ನು ಮೆದುಳಿನಿಂದ ಹೊರಹಾಕುವ ಪ್ರಯತ್ನವನ್ನು ಮಾಡಲಿಲ್ಲ. ಎಲ್ಲವೂ ನಿರರ್ಥಕವಿತ್ತು....ಮೋಹನನಿಗೆ ಗೊತ್ತಿತ್ತು: ನೊಣವು ಎಷ್ಟು ಹಟಮಾರಿಯಿರುತ್ತದೆ, ಪದೇ ಪದೇ ಹಾರಿಹೋಗಿ ಪುನಃ ತಾನು ಹಾರಿಹೋದ ಜಾಗಕ್ಕೇನೆ ಮರಳುತ್ತದೆ. ಕೆರಳಿ ಅದನ್ನು ದೂರ ಸರಿಸುವ ಪ್ರಯತ್ನ ಮಾಡಿದರೆ ಮೂಗು ಮುರಿಯುತ್ತದೆ ವಿನಹ ನೊಣವು ಮಾತ್ರ ಜಾರಿ ಹೋಗುತ್ತದೆ.

ಹೊರಗಡೆ ಬಿಸಿಲು ಅಂಟು ಅಂಟಾಗಿ ಅಥವಾ ಒದ್ದೆ ಒದ್ದೆಯಾಗಿ ಇತ್ತು. ಬ್ಲೌಜ್ ಎದೆಗಳಿಗೆ ಅಂಟಿಕೊಳ್ಳುತ್ತಿದ್ದವು ಮತ್ತು ಅವು ತಮ್ಮ ಭಾರದಿಂದ ಕಿವಿಗಳನ್ನು ಹರಿದು ಹಾಕುವ ಬಂಗಾರದ ಹಾಗೆ 'ಸುಂದರ'ವಾಗಿ ಕಾಣಿಸುತ್ತಿದ್ದವು. ಬೆವರಿನ ಹನಿಗಳು ಸೀರೆಗಳ ಮತ್ತು ಪ್ಯಾಂಟುಗಳ ಒಳಗಿಂದೊಳಗೆಯೇ ಮೀನಗಂಡಗಳ ಮೇಲೆ ಬೀಳುತ್ತಿದ್ದವು ಮತ್ತು ಜಿಗಳಿಗಳಂತೆ ಹೊಟ್ಟೆ ಹೊಸೆಯುತ್ತಿದ್ದ ಹಾಗೆ ಅನಿಸುತ್ತಿದ್ದವು..... ಸ್ಟೇಶನದ ಅಲೆದಾಡುತ್ತಿದ್ದ ಅರವಟ್ಟಿಗೆ ಹಿಂದುಳಿದಿತ್ತು. ಅದೇ ಕಾರಣದಿಂದ ನೀರಡಿಕೆ ಮತ್ತಿಷ್ಟು ತೀಕ್ಷ್ಣವಾಗುತ್ತಿತ್ತು. ಹೊರಗೆ ಹಾಲಿನ ಮೂಲೆಯಲ್ಲಿ ಸ್ವಲ್ಪ ಸ್ಥಳವಿತ್ತು. ಅಲ್ಲಿ ಮೇಲೆ ಮಾಳಿಗೆಯಲ್ಲಿ ಎರಡು ಅಲಗಿನ ಪಂಖಾ ದಣಿದ ವೇಗದಲ್ಲಿ ತಿರುಗುತ್ತಿತ್ತು. ಅದರ ಕೆಳಗೆ ಒಬ್ಬ ಮುದುಕ ಬಾಯಿ ತೆರೆದುಕೊಂಡು ಮಲಗಿದ್ದ. ಪಟ್ಟಣದ ಹೆಣದ ಮನೆಯಲ್ಲಿ ಗುರ್ತು ಹಚ್ಚಲು ಇಟ್ಟ (ಕೊಟ್ಟಿಗೆಯಲ್ಲಿ) ಹೆಣದ ಹಾಗೆ ಅನಿಸುತ್ತಿತ್ತು.

ಮೋಹನ ಮತ್ತು ಅಚಲಾ ಮೂರು-ನಾಲ್ಕು ಮಾತುಗಳನ್ನಾಡಿದರು. ಆ ಬಳಿಕ ಅವರ ಮಾತುಗಳು ಮುಗಿದವು. ಇಬ್ಬರೂ ತಮ್ಮ ತಮ್ಮ ಚಿತ್ತದಲ್ಲಿ ಯಾವುದೋ ವಿಷಯವನ್ನು ಹುಡುಕುತ್ತಿದ್ದರು. ಬಹಳ ಯೋಚಿಸುತ್ತಿದ್ದರಿಂದ ಅದು ಅವರ ಕೈಗೆ ಸಿಕ್ಕುತ್ತಿರಲಿಲ್ಲ. ಅಚಲಾ ಎರಡು ಹೆಜ್ಜೆ ಮುಂದೆ ಹೋಗುತ್ತಿದ್ದಳು ಮತ್ತು ಮೋಹನ ಹಿಂದೆ ಹಿಂದೆ. ಅಷ್ಟರಲ್ಲಿ ಅಚಲಾಳಲ್ಲಿ ತನ್ನ ದೇಹದ ಏರು ಇಳಿವುಗಳ ಜ್ಞಾನವು ಮೂಡಿ ಬಂದಿತು. ಅವುಗಳನ್ನು ಹೆಂಗಸರು ಅವಲಕ್ಷಣವೆಂದು ತಿಳಿಯುವರು ಮತ್ತು ಗಂಡಸರು ಸುಂದರವೆಂದು ಭಾವಿಸುವರು. ಪ್ರತಿ ಹೆಣ್ಣು ಅವುಗಳನ್ನು ಉಚಿತವಾಗಿ ತೋರಿಸಲು ಇಷ್ಟಪಡುವದಿಲ್ಲ. ಅವಳು ಹಣವನ್ನು ಬೇಡುವಳು ಇಲ್ಲವೆ ಪ್ರೇಮವನ್ನು....ಪ್ರೇಮ....ಯಾವುದು ಯಾವಾಗಲೂ ಬತ್ತಲೆಯಾಗಿರುತ್ತದೆಯೊ ಮತ್ತು ಯಾವುದಕ್ಕೆ ಬಟ್ಟೆಯನ್ನು ತೊಡಿಸಲಾಗುತ್ತದೆಯೊ ಅದು ಪ್ರೇಮವಲ್ಲ. ಅಚಲಾ ತನ್ನ ದೇಹದ ಹಿಂಭಾಗದ ಮೇಲೆ ಸೀರೆಯನ್ನು ಎಳೆದುಕೊಂಡಳು. 'ದೃಷ್ಟಿಗಳ ಭರ್ಚಿಗಳು ಹಿಂದಿನಿಂದ ತನ್ನ ದೇಹದ ಪ್ರತಿ ವಕ್ರತೆಯ ಮೇಲೆ ಬೀಳುತ್ತಿವೆ ಎಂದು ಅವಳಿಗೆ ಅನಿಸಿತು.

"ಒಳ್ಳೇದು ಮೋಹನಜಿ ನಾನೀಗ ಮನೆಗೆ ಹೋಗುವೆ"—ಅವಳು ಹೊರಳುತ್ತ ಹೇಳಿದಳು.

"ಹೇಗೆ ಹೋಗುವಿರಿ?"—ಮೋಹನ ಕೇಳಿದ.

"ಹೀಗೆ" ಎಂದು ಅಚಲಾ ಸ್ವಲ್ಪ ನಡೆದು ತೋರಿಸಿದಳು. ಇಬ್ಬರೂ ಬಿದ್ದು ಬಿದ್ದು ನಕ್ಕರು. ಇಷ್ಟೇ ಮಾತಿನಿಂದ ಇಬ್ಬರ ನಡುವೆ ತಮ್ಮತನ ಉದಯಿಸಿತು. ಕೊನೆಗೆ ಮೋಹನ, "ನನ್ನ ಅಭಿಪ್ರಾಯವೇನೆಂದರೆ....ತಾವು ಗಾಡಿ ತಂದಿಲ್ಲವೆ" ಅಂದನು.

"ನನಗೆ ಡ್ರೈವಿಂಗ್ ಬರುವದಿಲ್ಲ"—ಅಚ್ಚಿ ತಲೆಯಲ್ಲಾಡಿಸುತ್ತ ಹೇಳಿದಳು.

"ನಾನು ಇರುವೆನಲ್ಲ. ಈ ದಿನ ಸ್ವಲ್ಪ ವೇಳೆ ನನ್ನನ್ನೆ ತಮ್ಮ ಡ್ರೈವರೆಂದು ತಿಳಿದು ಕೊಳ್ಳಿ."

"ಜೀ !....ಇಲ್ಲ ಇಲ್ಲ....ಇದು ಹೇಗೆ ಸಾಧ್ಯ. ನಾನು ಬಸ್ಸಿನಿಂದ ಹೋಗಿಬಿಡುವೆ. ತಾವೇಕೆ ತೊಂದರೆ ತೆಗೆದುಕೊಳ್ಳುವಿರಿ" ಅಚಲಾ ಅಂದಳು.

"ತಾವೇಕೆ ತೊಂದರೆ ತೆಗೆದುಕೊಳ್ಳುವಿರಿ" ಎಂಬ ವಾಕ್ಯವೇ ಇಂತಹದು: ಇದರಿಂದ ಯಾವನೊ ಯಾರಿಗೊ ತೊಂದರೆ ಕೊಡಲು ಇಚ್ಛಿಸುತ್ತಿದ್ದಾನೆ ಮತ್ತು ಅದರಿಂದ ಪಾರಾಗುವ ಆಸ್ಪದವನ್ನೂ ಇಟ್ಟಿರುತ್ತಾನೆ. ಅಥವಾ ತಾವು ನನ್ನ ಜೊತೆ ಎಷ್ಟರಮಟ್ಟಿಗೆ ಮುಂದುವರಿಯಬಲ್ಲಿರಿ ಎಂದು ಹುಡುಕುತ್ತಿರುವನೇನೊ! ಈ ವಾಕ್ಯವನ್ನು ಗಂಡು ಹೇಳಿದರೆ ಒಂದು ಸಾಮಾನ್ಯ ಮಾತಾಗುತ್ತದೆ. ಆದರೆ ಹೆಣ್ಣು ಹೇಳಿದರೆ ಒಂದು ವಿಶೇಷ ಮಾತು...ಹೆಂಗಸರ ಈ ವಾಕ್ಯಗಳು—"ಥೂ ಹೋಗೀಂದ್ರೆ",

" ಅಯ್ಯೋ ! ನಾನು ಸತ್ತೆ "....ಮುಂತಾದವು.

" ಇದರಲ್ಲಿ ತೊಂದರೆಯ ಮಾತೇನಿದೆ? ನಾನು ಹೇಗೂ ಮನೆಗೆ ಹೊರಟಿದ್ದೇನೆ. ದಾರಿಯಲ್ಲಿ ನಿಮ್ಮನ್ನು ಬಿಡುವೆನು "—ಮೋಹನ ಹೇಳಿದ.

ಮೋಹನನ ತಲೆಯೊಳಗಿಂದ ರೇಡಿಯೊ ಕ್ಲಬ್ ತನ್ನ ತಾನೇ ಬ್ರಾಡ್‌ಕಾಸ್ಟ್ ಆಗಿ ಹೋಗಿತ್ತೇನೊ! ಸ್ವಲ್ಪ ತಕರಾರು ಆದಮೇಲೆ ಅಚಲಾ ಗದಕರಿ ಮೋಹನ ಜಾರ್ಮ್‌ನ ಗಾಡಿಯಲ್ಲಿ ಕುಳಿತುಕೊಂಡಳು. ಗಾಡಿಯು ಫ್ರೆಟಿಯರ್ ರೋಡಿನ ಕಡೆ ಹೊರಟಿತು. ಕ್ರಾಸಿಂಗ್‌ನಲ್ಲಿ ಪೋಲಿಸ್‌ನವನ ಸಂಕೇತಕ್ಕೆ ಅನುಗುಣವಾಗಿ ಮೋಹನನಿಗೆ ಗಾಡಿ ನಿಲ್ಲಿಸಬೇಕಾಯಿತು. ಮೋಹನ್ ಯಾವಾಗಲೂ ಪೋಲಿಸಿನವನು ಗಾಡಿ ನಿಲ್ಲಿಸಿದಾಗ ಸಿಡಿಮಿಡಿಗೊಳ್ಳುತ್ತಿದ್ದ ಮತ್ತು ಬೈಗಳನ್ನು ಒಟಗುಡುತ್ತಿದ್ದ. ಆದರೆ ಇಂದು ಅವನಿಗೆ ಅದೇ ಕೈಯು ಏಸೂನ ಕೈಯಂತೆ ಅನಿಸುತ್ತಿತ್ತು.

" ದೀಬಿ ಹೇಗಿದ್ದಾಳೆ? "—ಮೋಹನ ಮಾತುಕತೆಗೆ ವಿಷಯವನ್ನು ಹುಡುಕಿಯೇ ಬಿಟ್ಟ.

" ಹಾಗೆಯೇ ಇದ್ದಾಳೆ " ಅಚಲಾ ಉತ್ತರಿಸಿದಳು.

" ಅಂದರೆ ಏನು? ನನ್ನ ವಿಚಾರದಲ್ಲಿ ಅವಳು ಒಳ್ಳೆಯ ಹುಡುಗಿ ಅನಿಸುತ್ತದೆ "—ಮೋಹನ ಬೆಚ್ಚಿಬಿದ್ದು ಹೇಳಿದ.

" ನಾನು ಯಾವಾಗ ಹೇಳಿದೆ ಅವಳು ಕೆಟ್ಟವಳಿದ್ದಾಳೆಂದು "—ಅಚ್ಚಿ ಹೇಳಿ ನಗ ಹತ್ತಿದಳು.

ಮೋಹನ ಅಚ್ಚಿಯ ಜಾಲದಲ್ಲಿ ಬಂದು ಬಿಟ್ಟಿದ್ದ. ಅವಳ ಜಾಲದಿಂದ ಪಾರಾಗಲು ಅವನು ತನ್ನಲ್ಲಿಯೇ ಚಡಪಡಿಸುತ್ತಿದ್ದ. ಬೆವರಿನ ಸಣ್ಣ ಹನಿಗಳು ಅವನ ಹಣೆಯ ಮೇಲೆ ಮೂಡಿದವು. ಅಚಲಾ ಅವನಿಂದ ದೂರ ಸರಿದು, ಬಟ್ಟೆ ಕೂಡಾ ತಾಗಿದರೆ ಯಾವುದೊ ಸಂಬಂಧ ಕುದುರುವದೇನೋ ಎನ್ನುವಂತೆ ಬಾಗಿಲಿಗೆ ಹತ್ತಿ ಕುಳಿತಿದ್ದಳು. ತನಗಾದ ಲಜ್ಜೆಯನ್ನು ಹೋಗಲಾಡಿಸಲು ಮೋಹನ ಕೇಳಿದ " ತಾವು ನನ್ನಿಂದ ಅಷ್ಟು ದೂರವೇಕೆ ಕುಳಿತಿರುವಿರಿ? " " ಹಾಗೆಯೇ " ಎಂದು ಅಚಲಾ ಕಷ್ಟದಿಂದ ಇಂಚಿನಷ್ಟು ಮೋಹನನ ಕಡೆ ಸರಿದುಕೊಳ್ಳುತ್ತಾ—" ನಿಮಗೆ ಗೇರ್ ಬದಲಿಸಲು ತೊಂದರೆಯಾಗಬಹುದೆಂದು ಭಾವಿಸಿದ್ದೆ " ಅಂದಳು.

" ಪುನಃ ಅದೇ ತೊಂದರೆ."

ಅವರೆಗೆ ಪೋಲಿಸ್‌ಮನ್ ಕೈ ತೋರಿಸಿದ್ದ. ಆದರೆ ಮೋಹನನ ಗಾಡಿಯು ವಾಡಿಕೆಯಂತೆ ನಿಂತಿತ್ತು. ಪೋಲಿಸ್‌ಮನ್‌ನ ಸೀಟಿಗಳು ಮತ್ತು ಹಿಂದಿನ ಕಾರುಗಳ ಹಾರ್ನು ಒಟ್ಟಿಗೆ ಕೇಳಿಸಹತ್ತಿದವು. ಮೋಹನ ಅವಸರದಿಂದ ಗಾಡಿಗೆ ಗೇರುಹಾಕಿ ಗಾಬರಿಯಲ್ಲಿ ಕ್ಲಚ್ ಮೇಲಿಂದ ಕಾಲನ್ನು ಒಮ್ಮೆಲೆ ಎತ್ತಿದ. ಗಾಡಿಯು ಥಕ್ಕನೆ ಮುಂದಕ್ಕೆ ಸಾಗಿತು. ಇಂಜಿನ್ ಆಫ್ ಆಗುತ್ತ ಆಗುತ್ತ ಉಳಿಯಿತು. ಪೋಲಿಸ್‌ಮನ್‌ನಿಂದ ಸ್ವಲ್ಪ

ಮುಂದೆ ಬಂದ ಮೇಲೆ ಅಚಲಾ ಕೇಳಿದಳು—"ತಾವು ಗಾಡಿ ಹೀಗೆಯೆ ನಡೆಸುವಿರೇನು?"

"ಇಲ್ಲ. ನಾನಂತು ಎಷ್ಟು ಅಕ್ಕರೆಯಿಂದ ನಡೆಸುತ್ತೇನೆಂದರೆ ಗೊತ್ತು ಕೂಡಾ ಆಗುವದಿಲ್ಲ. ಆದರೆ ಈ ದಿನ...." ಮೋಹನ ಹೇಳಿದ.

"ಈ ದಿನ ಏನಾಯಿತು ?"

"ತಾವೇ ಆಗಿದ್ದೀರಿ...ಮತ್ತೇನಾಗುತ್ತದೆ ?"

ಮೋಹನ ಮತ್ತು ಅಚಲಾ ಇಬ್ಬರೂ ಟೌನ್‌ಹಾಲ್‌ದ ಎದುರು ಹೋಗುತ್ತಿದ್ದರು. ಅದೇಕೊ ಏನೊ, ಈ ದಿನ ಯಾವುದಾದರೂ ಎಕ್ಸಿಡೆಂಟ್ ಆಗಿಬಿಡಲಿ ಎಂದು ಮೋಹನನ ಮನಸ್ಸು ಬಯಸುತ್ತಿತ್ತು. ಒಂದು ಬಸ್ಸು ವೇಗದಿಂದ ಹಾಯ್ದು ಹೋಯಿತು ಮತ್ತು ಮೋಹನನಿಗೆ ಈ ವಿಚಿತ್ರ ಬಯಕೆಯನ್ನು ತನ್ನೊಳಗೆಯೇ ಅದುಮಿಡಬೇಕಾಯಿತು. ಎದುರಿಗೆ ಟೌನ್‌ಹಾಲ್ ಕಡೆ ಹೋಗುತ್ತಿದ್ದ ಮೆಟ್ಟಿಲುಗಳ ಮೇಲಿಂದ ಹಾಲ್‌ಇನ ಕಡೆ ನೋಡುತ್ತ ಮೋಹನ ಹೇಳಿದ—

"ಎಷ್ಟು ಚೆನ್ನಾಗಿದೆ !"

"ಬಹಳ ಚೆನ್ನಾಗಿದೆ."

ಇಲ್ಫಿಸ್ಟನ್ ಸರ್ಕಲ್ ಕಡೆಯಿಂದ ತಾರುಣ್ಯ ಲೋಕದಲ್ಲಿ ಉನ್ಮತ್ತಳಾದ ಓರ್ವ ಅಪ್ರತಿಮ ಚೆಲುವೆ ಒಬ್ಬ ಹುಡುಗನ ಕೈಯಲ್ಲಿ ಕೈಹಾಕಿಕೊಂಡು ರಿಜಿಸ್ಟ್ರಾರ್ ಆಫೀಸಿನ ಕಡೆ ಹೊರಟಿದ್ದಳು. ಬಹುಶಃ ಅವಳ ಮದುವೆಯಾಗುವದಿತ್ತೇನೊ ! ಅದಕ್ಕಾಗಿಯೇ ಅವಳ ಮುಖವು ಯಾವುದೋ ಆಂತರಿಕ ಕಾವಿನಿಂದ ಕೆಂಪು ಕೆಂಪಾಗಿತ್ತು. ಅಚಲಾ ಮೋಹನನಿಗೆ ಕೇಳಿದಳು :

"ತಮಗೆ ಹೇಗೆ ಅನಿಸುತ್ತಾಳೆ ?"

"ಅಚ್ಛಿ (ಚೆನ್ನಾಗಿ)"

ಮೋಹನ ಅಚ್ಛಿ ಮತ್ತು ಅಚ್ಚಿಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲದ ಹಾಗೆ ಹೇಳಿದ. ಅಚ್ಚಿ ಸಂತೋಷಗೊಂಡಳು—ಯಾರು ಏನು ಮಾಡಲು ಶಕ್ಯವಿತ್ತು ?—ಅವಳು ಸಂತೋಷಗೊಂಡಳು. ಆದರೂ ತೋರಿಕೆಗಾಗಿ "ನಾನಷ್ಟು ಚೆಲುವೆಯಲ್ಲ" ಎಂದಳು.

ಮೋಹನ ಅಚಲಾಳ ಕಡೆ ಒಂದು ದೃಷ್ಟಿ ಬೀರಿದ ಮತ್ತು ತಾನು ಹಾಗೆಯೆ ಹೇಳಲು ಸಾಧ್ಯವಿಲ್ಲದೆ ಎಲ್ಲವನ್ನೂ ಹೇಳಿಬಿಟ್ಟ.

ಕಾಮಾ ಹಾಲ್, ಲಾಯ್ನ್ ಗೇಟ್ ಹಿಂದೆ ಬಿದ್ದವು. ಈಗ ಮೋಹನನ ಗಾಡಿ ರೀಗಲ್ ಸಿನಿಮಾದ ಹತ್ತಿರ ಹೊರಟಿತ್ತು. ಎದುರಿಗಿದ್ದ ಮೂರ್ತಿಯು ಮನಮೋಹಕವಾಗಿತ್ತು. ಹಣ್ಣಿನ ಅಂಗಡಿ ಚೆನ್ನಾಗಿತ್ತು....ಗಾಡಿ ಕಾಜ್‌ವೆ ಮೇಲಿನ ಸತ್ಯಸದನದ ಎದುರು ನಿಂತಿತು. ಅಚ್ಚಿ ಅಲ್ಲಿಯೇ ಇರುತ್ತಿದ್ದಳು.

ಅಚ್ಚಿ ಭಯ ಚಕಿತ ನೇತ್ರಗಳಿಂದ ಅತ್ತಿತ್ತ ನೋಡಿದಳು. ಅವಳ ಅಳತೆಗಳನ್ನೆಲ್ಲ ಅರಿತಿದ್ದ ಎದುರುಗಿನ ಟೇಲರ್ ಮಾಸ್ತರನ ಹೊರತು ಬೇರೆ ಯಾರೆ ಆಗಲಿ ಅಚಲಾ

ಇನ್ನೊಬ್ಬರ ಕಾರಿನಿಂದ ಇಳಿಯುವದನ್ನು ನೋಡಿರಲಿಲ್ಲ. ನೋಡಿದ್ದರೂ ಕೂಡ ಅವಳಿಗೆ ಯಾವ ಪರಿವೆಯಿತ್ತು? ಮೋಹನನಿಗೆ ಯಾವ ನಾಚಿಕೆಯಿತ್ತು? ಇದರ ಮೇಲೂ, ತಟ್ಟನೆ ಬಾಗಿಲು ತೆರೆದು ಅಚಲಾ ಗಾಡಿಯಿಂದ ಇಳಿದಳು. ಹೊರಟವಳು ತಟ್ಟನೆ ನಿಂತು "ಒಳ್ಳೆಯದು ಮೋಹನ್‌ಜಿ, ಬಹಳ ಬಹಳ ಕೃತಜ್ಞತೆಗಳು ಎಂದು ಹೊರಟುಬಿಟ್ಟಳು."

ಮೋಹನ ಯಥಾ ಪ್ರಕಾರ ಡ್ರೈವರ್ ಸೀಟಿನ ಮೇಲೆ ಕುಳಿತಿದ್ದ. ಒಂದು ಕಾಲು ಒಳಗಿತ್ತು, ಇನ್ನೊಂದು ತೆರೆದ ಬಾಗಿಲಿನ ಹೊರಗೆ. ಅವನು ಇಳಿದು ಅಚಲಾಳ ಸಲುವಾಗಿ ಬಾಗಿಲು ತೆಗೆಯಬೇಕೆಂದಿದ್ದ. ಆದರೆ ಅವಳು ಅವಕಾಶವನ್ನೇ ಕೊಡಲಿಲ್ಲ. ಸ್ವಲ್ಪ ದೂರ ಹೋದ ಬಳಿಕ ಅಚಲಾಗೆ ಏನೋ ನೆನಪಾದಂತಾಯಿತು. ಅವಳು ಸ್ವಲ್ಪ ತಡೆದು ನಿಂತಳು ಮತ್ತು ಅವಳು ಹೇಳಿದ್ದೆಲ್ಲವೂ ಕೇವಲ ಇದಕ್ಕಾಗಿ: ಅವಳು ಅದನ್ನು ಹೇಳಬಯಸುತ್ತಿದ್ದಿಲ್ಲ ಮತ್ತು ತನ್ನ ಅಂತರಂಗದಲ್ಲಿ ಯಾವ ವಾಕ್ಯಗಳನ್ನು ತಡೆದಿಟ್ಟದ್ದಳು....ಆದರೆ....ಕೆಲವು ಸಲ ದೇಹವು ಆತ್ಮಕ್ಕಿಂತಲೂ ಮುಂದ ಸಾಗಿ ಬಿಡುತ್ತದೆ.

"ಯಾವಾಗಲಾದರೂ ಬನ್ನಿ ಮೋಹನ್‌ಜಿ."

ಮೋಹನನ ಉತ್ತರದ ನಿರೀಕ್ಷೆ ಮಾಡದೆ ಅಚಲಾ ಮನೆಯ ಕಡೆ ಧಾವಿಸಿದಳು. ಹಿಂದೆ ಮೋಹನ ಗಾಳಿಯ ಜೊತೆ ಮಾತನಾಡುತ್ತಿದ್ದ ಹಾಗೆ "ಬರುವೆನು! ಬರುವದಿಲ್ಲ ವೇಕೆ?" ಅನ್ನುತ್ತಿದ್ದ.

ಅವರು ಮನೆಯಲ್ಲಿಲ್ಲದಾಗ—ಎಷ್ಟು ಕೆಡಕೆನಿಸುತ್ತದೆ!—ಈ ಆಹ್ವಾನವು ಕೇವಲ ಶಿಷ್ಟಾಚಾರದ ಮಾತು ಎಂಬುದನ್ನು ಅರ್ಥಮಾಡಿಕೊಳ್ಳುವಷ್ಟು ಮೋಹನ ತಿಳುವಳಿಕೆ ಯಿದ್ದವನಿರಬಹುದೆಂದು ಅಚಲಾಳ ವಿಚಾರವಿತ್ತು.

ಮೋಹನ ನಿಜವಾಗಿಯೂ ತಿಳುವಳಿಕಸ್ಥನಾಗಿದ್ದ. ಇಲ್ಲದಿದ್ದರೆ ಮರುದಿನವೇ ಅಚಲಾಳಲ್ಲಿಗೆ ಯಾಕೆ ತಲಪುತ್ತಿದ್ದ? ಅದೂ ಅಚಲಾಳ ತಲೆಯಲ್ಲಿ ಅವಳ ಪತಿ ರಾಮ್ ಗದಕರಿಯ ಕಲ್ಪನೆಯೂ ಕೂಡ ಇಲ್ಲದಿದ್ದಾಗ.

ಮೋಹನ್ ಜಾಮ್ ಗಂಟೆಯನ್ನು ಎಷ್ಟು ಜೋರಿನಿಂದ ಬಾರಿಸಿದನೆಂದರೆ ಅಚಲಾ ಗಾಬರಿಗೊಂಡು ಓಡುತ್ತಲೇ ಬಂದಳು—ರಾಮ್ ಮರುದಿನವೇ ಯಾವುದೋ ಪುಷ್ಪಿತ ವಿಮಾನದಲ್ಲಿ ಕುಳಿತು ಬಂದಿರುವನೊ ಎನ್ನುವಂತೆ. ಇನ್ನೂ....ಅಚಲಾಗೆ ಬಟ್ಟೆ ಗಳನ್ನು ಸರಿಮಾಡಿಕೊಳ್ಳಲು ಅವಕಾಶವೇ ಸಿಕ್ಕಿರಲಿಲ್ಲ. ಬಾಗಿಲನ್ನು ತೆರೆಯುತ್ತ ಅವಳು ಮುಖವನ್ನು ಸ್ವಲ್ಪ ಹೊರಚಾಚಿದಳು. ಬಳಿಕ ಒಮ್ಮೆಲೆ ಹಿಂದಕ್ಕೆ ಸರಿದಳು. ತಂತಾನೆ ಮುದುಡಿಕೊಂಡಳು. "ಸ್ವಲ್ಪ ನಿಲ್ಲಿರಿ" ಎಂದು ಒಳಗೆ ಓಡಿಹೋದಳು.

ಮೋಹನನಲ್ಲಿ ಆ ಸಹನೆ ಎಲ್ಲಿತ್ತು ? ಅವನು ಕೆಳಗಿನಿಂದಲೇ ಫಸ್ಟ್ ಗೇರಿನಲ್ಲಿ ಇದ್ದ ಹಾಗೆ ಬಂದಿದ್ದ. ಅವನು ಬಾಗಿಲನ್ನು ಹಾಗೆಯೇ ಮೆಲ್ಲಗೆ ನೂಕಿದ. ಅದು ತೆರೆಯಿತು. ಮರುಕ್ಷಣದಲ್ಲಿಯೆ ಅವನು ಡ್ರಾಯಿಂಗ್ ರೂಮಿನಲ್ಲಿದ್ದ ಮತ್ತು ತಲೆಯನ್ನು ಸುತ್ತಲೂ ತಿರುಗಿಸಿ ಒಳಗಿನ ಎಲ್ಲ ವಸ್ತುಗಳ ನಿರೀಕ್ಷಣೆ ಮಾಡುತ್ತಿದ್ದ. ಅವನಿಗಂತು ತಲೆಯ ಮೇಲೆಯೂ ಕಣ್ಣು ಇತ್ತೇನೊ! ಅವನು ನಿಂತಲ್ಲಿಂದ ಅಚಲಾಳ ಬೆಡ್ ರೂಮ್ ಸ್ಪಷ್ಟವಾಗಿ ಕಾಣಿಸುತ್ತಲಿತ್ತು.

ಹೆಣ್ಣು ಮತ್ತು ಮನೆಗಳಲ್ಲಿ ಅಂತರವಾದರೂ ಏನಿದೆ? ಕೊನೆಯ ಪಕ್ಷಕ್ಕೆ ಕೇಳಿ ಯಾದರೂ ಬಿಡಬೇಕು. ಕೊನೆಗೆ ಅಷ್ಟಾದರೂ ಏನಂತೆ? ಆದರೆ ಮೋಹನ ಕಾಲಿ ನಿಂದ ನೆತ್ತಿಯವರೆಗೆ ಉನ್ಮತ್ತನಾಗಿದ್ದ, ಅಚಲಾ ಬೆಡ್ ರೂಮಿನ ತೆರೆದ ಬಾಗಿಲಲ್ಲಿ ಮುದುಡಿದಂತೆ ಕಾಣಿಸುತ್ತಿದ್ದ ಹಾಗೆ. ಭಾವನೆಗಳು, ವಿಚಾರಗಳು, ಕಣ್ಣುಗಳು ಮತ್ತು ದೇಹಗಳ ದೃಷ್ಟಿಯಿಂದ ದೇವರು ಅವರನ್ನು ನಿರ್ಮಿಸಿರುವನೇನೊ ಎಂಬಂತೆ ಅವರಿಬ್ಬರೂ ಹಾಗೆಯೇ ಇದ್ದರು. ಅಚಲಾ ಪಲ್ಲಂಗದ ತಲೆದಸಿಯ ಮೇಲಿಂದ ಸೀರೆಯನ್ನೆತ್ತಿಕೊಂಡು ಬೇಗ ಬೇಗ ಅದನ್ನು ಕೆಳಗಿನ ಬಟ್ಟೆಗಳಲ್ಲಿ ಸುತ್ತಿಟ್ಟಳು.

"ಕ್ಷಮಿಸಿರಿ...."—ಮೋಹನ ಅಲ್ಲಿಂದಲೇ ಅಂದ. ಅಲ್ಲಿಂದ ಅದೇ ರೀತಿ ಅಚಲಾಳು ಉತ್ತರಿಸಿದಳು...." ಪರವಾಗಿಲ್ಲ."

ಡ್ರಾಯಿಂಗ್ ರೂಮ್ ಮತ್ತು ಬೆಡ್ ರೂಮ್‌ಗಳ ಮಧ್ಯೆ ಸಣ್ಣ ಜಾಗ ಇತ್ತು. ಅಲ್ಲಿ ಕಾಜಿನ ಕ್ಯಾಬಿನೆಟ್‌ದಲ್ಲಿ ಶಿವಜಿ ಭೋಲೆನಾಥನ ಚಿತ್ರವನ್ನು ತೂಗ ಹಾಕ ಲಾಗಿತ್ತು. ಅದರ ಮೇಲೆ ಒಣಗಿದ ಹಾರ ತೂಗಾಡುತ್ತಿತ್ತು. ಇಷ್ಟೇ ಅಲ್ಲ, ಅದರ ಜೊತೆ ಕುಮಾರಿ ಮೆರಿಯಮ್ ಅವಳ ಚಿತ್ರವೂ ಇತ್ತು ಮತ್ತು ಗುರುನಾನಕನದೂ ಇತ್ತು. ಅದರ ಜೊತೆಯೇ ಹೊರಗೆ ಒಂದು ಕ್ಯಾಲೆಂಡರ್ ತೂಗುತ್ತಿತ್ತು. ಅದರಲ್ಲಿ ಲೀಡೊ ನಗ್ನಳಾಗಿ ನಿಂತಿದ್ದಳು. ಒಂದು ರಾಜಹಂಸವು ಅವಳನ್ನು ತನ್ನ ರೆಕ್ಕೆಯಲ್ಲಿ ಒತ್ತಿಟ್ಟು, ಚುಂಚು ಎತ್ತಿ ಉದುಕದ ಗೊಂಚಲು ತಿನ್ನುವ ಪ್ರಯತ್ನ ಮಾಡುತ್ತಿತ್ತು.

ಆ ಒಂದು ಕ್ಷಣದಲ್ಲಿ ಮೋಹನ್ ಜಾಮ್ ಜಗತ್ತಿನ ಎಲ್ಲ ಹೆಣ್ಣುಗಳನ್ನು ನೋಡಿ ಬಿಟ್ಟಿದ್ದ. ಸುಮಿತ್ರಾಳನ್ನು ನೋಡಿದ್ದ. ದೀಬಿಯನ್ನು ನೋಡಿದ್ದ. ಜಾಜಾ ಗೇಬೂರ ಳನ್ನು ನೋಡಿದ್ದ. ಮತ್ತೆ ಯಾರು ಯಾರನ್ನೋ ನೋಡಿದ್ದ. ತನ್ನ ಸ್ವಂತ ತಂಗಿ ರಾಧಾಳನ್ನೂ ನೋಡಿದ್ದ. ಅವಳು ಪಾರೇಲ್‌ದಲ್ಲಿ ತನ್ನ ವೀವಿಂಗ್ ಮಾಸ್ಟರ್ ಪತಿಯ ಜೊತೆ ಇರುತ್ತಿದ್ದಳು.

ಮೋಹನ ಯಾವಾಗಲೂ ಹೆಣ್ಣನ್ನು ಮಾಯಾ ರೂಪದಲ್ಲಿ ನೋಡಿದ್ದ! ಅವಳ ಅಂತರಂಗದಲ್ಲಿ ಒಂದು ಮತ್ತು ಬಹಿರಂಗದಲ್ಲಿ ಮತ್ತೊಂದು ಅನಿಸುತ್ತಿದ್ದಳು. ಒಳ್ಳೆಯದು ಮತ್ತು ಕೆಟ್ಟದ್ದು, ಪಾಪ ಮತ್ತು ಪುಣ್ಯ, ಒಮ್ಮೆ ಸುಂದರ ಮತ್ತೊಮ್ಮೆ ಅಸಹ್ಯ ರೀತಿಯಲ್ಲಿ ಪರಸ್ಪರ ಬೆರತುಕೊಂಡಿರುತ್ತಿದ್ದವು. ಅಲ್ಲದೆ ಹೆಣ್ಣು, ಬಟ್ಟೆಗಳಲ್ಲಿ

ದಪ್ಪ ಕಂಡವಳು, ತೆಳ್ಳಗಿರುತ್ತಾಳೆ ಮತ್ತು ತೆಳ್ಳಗೆ ಕಾಣಿಸುವವಳು ದಪ್ಪವಾಗಿರುತ್ತಾಳೆ....ಇದಕ್ಕೇನೆ ಮಾಯೆ ಎನ್ನುತ್ತಾರೆ ಇಲ್ಲವೆ ಲೀಲೆ. ಉದಾಹರಣೆಗೆ ಯಾವ ಸದೃಢ ಹೆಣ್ಣನ್ನು ನೋಡುತ್ತಲೆ ಮೂತ್ರಪಿಂಡದಲ್ಲಿ ನೋವು ಉಂಟಾಗುತ್ತದೆಯೊ ಅವಳಿಗೆ ಹೆದರುವದು ನಿರರ್ಥಕ ವಿಷಯ ಮತ್ತು ಎಲವುಗಳ ಹಂದರದ ಮೇಲೆ ಹೊರಳಾಡಿದರೆ ಯಾವನೋ ಕೂಲಿ ಅವನಿಗೆ ಇಪ್ಪತ್ತು ಸೇರು ಕಟ್ಟಿಗೆ ಒಡೆದದ್ದಕ್ಕೆ ಸಿಗುವಷ್ಟು ಲಾಭ ಕೂಡ ದೊರೆಯುವದಿಲ್ಲ.

ಮಾಯೆ—ಇದು ವಶವಾಯಿತೆಂದು ಯೋಚಿಸಿದರೆ ಅಲ್ಲಿಯೇ ಬುದ್ಧಿಯು ಪರಾಜಯಗೊಳ್ಳುತ್ತದೆ ಮತ್ತು ಇದು ಕೈಗೆ ಸಿಕ್ಕುವದಿಲ್ಲವೆಂದು ಹೇಳಿದರೆ ಇದೇ ಕುತ್ತಿಗೆ ಹಿಚುಕುವುದು....ಮತ್ತು ಮಾಯೆ ಎಂದರೆ ಏನು?....ಅವಶ್ಯವಾಗಿ ಮತ್ತೊಂದು ಮಾಯೆ ಇರುತ್ತದೆ—ಇದನ್ನು ಪಡೆದುಕೊಂಡಮೇಲೆಯೂ ದೊರಕುವದಿಲ್ಲ. ಈ ಜಗತ್ತಿನಿಂದ ಹೊರಟುಹೋಗುವ ಸಮಯದಲ್ಲಿ ತಾನು ಯಾರನ್ನೂ ಪಡೆಯಲಿಲ್ಲ, ಆದರೆ ತನ್ನನ್ನು ಎಲ್ಲರೂ ಪಡೆದರು, ಎಂದು ಹಾಗೆಯೇ ಅನಿಸುತ್ತದೆ.

ಅಷ್ಟರಲ್ಲಿ ಸೀರೆ ಮತ್ತು ಕೂದಲನ್ನು ಸರಿಮಾಡಿಕೊಳ್ಳುತ್ತ ಅಚ್ಚಿ ಡ್ರಾಯಿಂಗ್ ರೂಮಿನಲ್ಲಿ ಪ್ರವೇಶಿಸಿದಳು. ಅವಳೆಷ್ಟು ಸುಂದರ ಕಾಣಿಸುತ್ತಿದ್ದಳು. ಅದು ಕೇವಲ ಅವಳು ಪರಸ್ತ್ರೀ ಎಂದ ಮಾತ್ರಕ್ಕೇನೊ? ಇಲ್ಲ, ಇಲ್ಲ; ಅವಳು ಸ್ವಂತ ಸ್ತ್ರೀಯಾಗಿದ್ದರೂ ಕೂಡ ಇಷ್ಟೇ ಸುಂದರಳಾಗಿ ಕಾಣಿಸುತ್ತಿದ್ದಳು. ಇವಳಲ್ಲಿ ಯಾವುದೊ ಒಂದು ವಿಷಯವಿದೆ—ಬೇರೆಯವರಲ್ಲಿ ಇಲ್ಲದ್ದು. ಆದರೆ....ಹೀಗೆ ಪ್ರತಿಯೊಬ್ಬರ ಬಗ್ಗೆಯೂ ಹೇಳಲು ಸಾಧ್ಯವಿದೆ. ಆದರೆ ಅವಳ ಹುಬ್ಬುಗಳ ಮೇಲೆ ಬಾಲ್ಯದ ಯಾವುದೊ ಗಾಯದ ಕಾರಣ ಒಂದು ತೆಳುವಾದ ಕಚ್ಚು ಇದೆ. ಅದು ಕೂದಲ ಗೆರೆಯನ್ನು ಎರಡು ಭಾಗಗಳಲ್ಲಿ ವಿಂಗಡಿಸಿತ್ತು. ಆ ಕಚ್ಚನ್ನೆ ಸದಾ ಚುಂಬಿಸುತ್ತಿರಬೇಕೆಂದು ಮನಸ್ಸು ಬಯಸುತ್ತಿತ್ತು.

ಮೋಹನನ ಸಮೀಪಕ್ಕೆ ಬರುತ್ತಿದ್ದಂತೆ ಪುನಃ ಕೈಗಳನ್ನು ಮೇಲಕ್ಕೆತ್ತಿ ಅಚ್ಚಿ ಮುಂದಿನಿಂದ ತನ್ನ ಕೂದಲನ್ನು ಸ್ವಲ್ಪ ಮೇಲಕ್ಕೆ ಎತ್ತಿದಳು. ಕೂದಲಿನ ಒಂದು (Tiara) ದಂತಹದು ಸಿದ್ಧವಾಯಿತು. ಬಂಗಾರ ಮತ್ತು ವಜ್ರಗಳ ಕಿರೀಟ ಅದಕ್ಕೆ ಸಾಟಿಯಾಗುತ್ತಿದ್ದಿಲ್ಲ. ಅವಳು ತನ್ನದೇ ಸೀರೆಯ ಸೆರಗಿನಿಂದ ತನ್ನಷ್ಟಕ್ಕೆ ತಾನೇ ಗಾಳಿ ಹಾಕಿಕೊಳ್ಳುತ್ತ ಬಂದಳು. "ಉಫ್, ಇಂದು ಎಷ್ಟು ಸೆಕೆ ಇದೆ."

ನಂತರ ಕೈಯನ್ನು ಬಲಗಡೆ ಚಾಚಿ ಗೋಡೆಯ ಮೇಲಿನ ಫ್ಯಾನಿನ ಸ್ವಿಚ್‌ಅನ್ನು ಒತ್ತಿದಳು. ಅಷ್ಟರಲ್ಲಿ ಮೋಹನ "ನಾನೂ ಯೋಚಿಸುತ್ತಿದ್ದೆ" ಅಂದ.

"ತಾವೇನು ಯೋಚಿಸುತ್ತಿದ್ದಿರಿ?" ಎಂದು ಅಚಲಾ ನಿರೀಕ್ಷೆ ಮಾಡುವ ದೃಷ್ಟಿಯಿಂದ ಮೋಹನನ ಕಡೆ ನೋಡಿದಳು.

"ಇದೇ....ಈ ದಿನ ಎಷ್ಟು ಸೆಕೆ ಇದೆ....ಉಫ್"—ಮೋಹನ ಹೇಳಿದ!

ಫ್ಯಾನಿನ ಗಾಳಿಯ ಮೊದಲ ಸೆಳೆತ ಬಂದ ಕೂಡಲೆ ಮೋಹನ ಮತ್ತು ಅಚಲಾ ಸಮಾಧಾನದ ಉಸಿರು ಎಳೆದುಕೊಳ್ಳುತ್ತ ಎದುರು-ಬದುರಾಗಿ ಸೋಫಾದ ಮೇಲೆ ಕುಳಿತರು. ಎಷ್ಟು ಅನ್ಯಾಯವಿದು. ಅವರು ಒಬ್ಬರು ಇನ್ನೊಬ್ಬರ ಸಮೀಪದಲ್ಲಿ ಸಹ ಕೂಡ್ರಲು ಸಾಧ್ಯವಿರಲಿಲ್ಲ. ಎಲ್ಲವೂ ಎಷ್ಟು ಅಸ್ವಾಭಾವಿಕವಾಗಿ ಅನಿಸುತ್ತಿತ್ತು. ಅದು ಸರಿಯೇ ಇತ್ತು. ಒಂದು ವೇಳೆ ಜಗತ್ತಿನ ಎಲ್ಲ ಗಂಡು ಹೆಣ್ಣು 'ಸ್ವಾಭಾವಿಕ' ಜೀವನ ನಡೆಸಲಾರಂಭಿಸಿದರೆ ಏನಾದೀತು? ಆದರೆ—ಗಂಡು ಮತ್ತು ಹೆಣ್ಣು ಇಬ್ಬರೂ ಅಪೂರ್ಣರಿರುತ್ತಾರೆ. ಅವರ ಪೂರ್ಣತೆಯು—ದೇಹಗಳಿಗೆ ಗುಂಡು ಹಾಕಿರಿ, ಆತ್ಮಗಳನ್ನು ಪಡೆಯುವದಕ್ಕೂ ಕೂಡ ಎಲಾಸ್ಕಾ ಮುಟ್ಟಿಯೇ ಬರಬೇಕೇನು?

ಇಂಥದೇ ಶಿಷ್ಟಾಚಾರದಲ್ಲಿ ಜನರು ಒಬ್ಬರಿಂದೊಬ್ಬರು ಮೈಲುಗಳಷ್ಟು ದೂರ ಹೋಗಿಬಿಡುತ್ತಾರೆ. ನಂತರ ವಿಚಿತ್ರ ರೀತಿಯ ಸಂಘರ್ಷವು ಪ್ರಾರಂಭವಾಗುತ್ತದೆ. ಗೊತ್ತಿಲ್ಲ ಗುರಿಯಿಲ್ಲ, ಬರುತ್ತಲೇ ಕೈಹಿಡಿದುಕೊಂಡ. ಅದು—ಮೊದಲೇಕೆ ಕರೆಯಲಿಲ್ಲ? ಏನೆಂದುಕೊಂಡಿರುವಿರಿ? ಪ್ರೇಮದ ಆಟದಲ್ಲಿಯಂತೂ ಮೊದಲ ನೋಟ, ಮೊದಲ ವಾಕ್ಯ ಮತ್ತು ಮೊದಲ ವರ್ತನೆಗಳ ಮೇಲೆ ನಿತ್ಯತೆಯು ಆವರಿಸಿಬಿಡುತ್ತದೆ....ಒಂದು ದಿನ ದೀಬಿ ತಾನು ಪ್ರೀತಿಸುತ್ತಿದ್ದ, ಈಗಲೂ ಪ್ರೀತಿಸುತ್ತಿರುವ ಪೇಂಟರನ ಬಗ್ಗೆ ಹೇಳಿದ್ದಳು—"ನಾನಂತೂ ನನ್ನ ಸರ್ವಸ್ವವನ್ನು ಅವನ ಮೇಲೆ ಸೂರೆ ಮಾಡುತ್ತಿದ್ದೆ. ಆದರೆ ಒಮ್ಮೆಲೆ ಅವನು ಹೇಗೆ ಪಶುವಿನಂತೆ ಅಸಭ್ಯ ರೀತಿಯಿಂದ ನನ್ನ ಕೈಹಿಡಿದುಕೊಂಡ ಮತ್ತು ನನ್ನ ಎಲ್ಲ—ಸಣ್ಣ, ದೊಡ್ಡ—ರಹಸ್ಯಗಳನ್ನು ತಿಳಿದುಕೊಳ್ಳಲಿಕ್ಕೆ ಪ್ರಯತ್ನಿಸಹತ್ತಿದ. ಹೀಗೆ ಎಲ್ಲಾದರೂ ಆಗುತ್ತದೆಯೆ? ನಾನು ಕೂಡ ಅದೇ ಕಾಡು ರೀತಿಯಲ್ಲಿಯೇ ಅವನನ್ನು ತಡೆದೆ. ಈಗ ನಾನು ಅವನ ಹಿಂದೆ ಓಡುತ್ತಿರುವೆ. ಅವನು ಯಾವುದೊ ಹಟಕ್ಕೆ ಬಿದ್ದಿದ್ದಾನೆ. ಅವನು ಅಗ್ರಿಪಾಡೆಯಲ್ಲಿ ಯಾವಳೋ ಸೂಳೆಯ ಹತ್ತಿರ ಹೋಗುತ್ತಿರುವನೆಂದು ನಾನು ಕೇಳಿದಾಗ ಅದು ಯಾವ ಅನಿಷ್ಟ ಗಳಿಗೆ ಇತ್ತೋ ಏನೋ."

ಅಚಲಾಗೆ ಯಾವ ಮಗುವೂ ಇರಲಿಲ್ಲ. ಐದಾರು ವರ್ಷಗಳ ದಾಂಪತ್ಯ ಜೀವನದ ಬಳಿಕವೂ ಅವಳ ಮಮತೆ ಹಾಗೆಯೆ ಅದುಮಲ್ಪಟ್ಟಿತ್ತು. ಆದರೆ ಹದಿನೈದು ಹದಿನಾರು ವರ್ಷದ ಒಬ್ಬ ಕೆಲಸದಾಕೆ ಮಾತ್ರ ಇದ್ದಳು. ಅವಳು ಅಚ್ಚಿಯ ಸನ್ನೆಯ ಮೇರೆಗೆ ಚಹ ತಯಾರಿಸಿ ತಂದಳು. ನಂತರ ಒಂದು ಪ್ಲೇಟಿನಲ್ಲಿ ಖತಾಯಿಗಳನ್ನು ತಂದಿಟ್ಟಳು. ಅವುಗಳನ್ನು ಅಚಲಾ ಮನೆಯಲ್ಲಿಯೇ ಮಾಡಿದ್ದಳು. ಅವುಗಳ ಮೇಲೆ ಪಿಸ್ತಾಗಳನ್ನು ಧಾರಾಳವಾಗಿ ಹರವಲಾಗಿತ್ತು. ಕೆಲಸದಾಕೆ ಮೋಹನನನ್ನು ಎಲ್ಲಿಯಾದರೂ ನೋಡಿರುವೆನೇನೊ ಎನ್ನುವ ಹಾಗೆ ನೋಡಿ, ಅಡಿಗೆ ಮನೆಯಲ್ಲಿ ಕೆಲಸ ಮಾಡಲು ಹೋದಳು.

"ಹುಡುಗಿ ಒಳ್ಳೆಯವಳಂತೆ ಕಾಣಿಸುತ್ತಾಳೆ"—ಮೋಹನ ಖತಾಯಿಯನ್ನು ಬಾಯಿ

ಯಲ್ಲಿ ಹಾಕಿಕೊಳ್ಳುತ್ತ ಹೇಳಿದ.

"ಹಾಂ"—ಎಂದು ಅಚಲಾ ಒಳಗೆ ನೋಡುತ್ತ—"ಆದರೆ ಹರಯದ ಹುಡುಗಿಯನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದು" ಅಂದಳು.

"ಯಾಕೆ....ಇಟ್ಟುಕೊಳ್ಳಬಾರದೇಕೆ ?"

"ಏನು ಹೇಳಲಿ ?"—ಅಚಲಾ ನಕ್ಕಳು—"ದಿನಾಲು ಯಾರಾದರೂ ಹೊಸ ವಿಲಾಸೀ ಹುಡುಗ ಬಾಗಿಲಲ್ಲಿ ಹಾಜರಿರುತ್ತಾನೆ." ನಂತರ ಇಬ್ಬರೂ ಕೂಡಿ ನಕ್ಕರು.... ಮೋಹನ ಮಾತನ್ನು ಆರಂಭಿಸಿದ—"ನಾನು ಕೂಡ ಇರುವೆನಲ್ಲ" ಅಚ್ಚಿಯ ಮುಖದ ಮೇಲೆ ಕೆಂಪು ಸುಳಿದಾಡಿತು. ಕಳ್ಳ ನೋಟದಿಂದ ಚಹದಲ್ಲಿ ಚಮಚೆಯನ್ನು ತಿರುಗಿಸುತ್ತ ಅಂದಳು—"ತಮ್ಮ ವಿಷಯ ಬೇರೆ ಇದೆ." ನಂತರ ಏಕಾಏಕಿ "ಈ ಸಲ ರಾಮ್ ಬಂದ ಮೇಲೆ ಅವರನ್ನು ತಮಗೆ ಭೇಟಿ ಮಾಡಿಸುತ್ತೇನೆ. ಅವರು ತುಂಬಾ ಮೋಜಿನ ಸ್ವಭಾವದವರು."

ಮೋಹನ ಚುಡಾಯಿಸಿದ—"ಇದರರ್ಥವೆಂದರೆ ಅದಕ್ಕೂ ಮೊದಲು ನಾನು ಬರಕೂಡದು. "ಇಲ್ಲ, ಇಲ್ಲ"—ಅಚಲಾ ಗಾಬರಿಗೊಳ್ಳುತ್ತ ಅಂದಳು—"ತಾವು ಇಷ್ಟಪಟ್ಟಾಗಲೆಲ್ಲ ಬನ್ನಿ....ಈ ಮನೆ ತಮ್ಮದೇ."

ಬಳಿಕ ತಾನೇನು ಅಂದೆನೆಂದು ಅಚಲಾ ಯೋಚಿಸಹತ್ತಿದಳು. ಹೆಣ್ಣಾಗುವದು ಕೂಡ ಒಂದು ತೊಂದರೆಯೇ ಆಗಿದೆ. ಅವಳೇಕೆ ಯಾವಾಗಲೂ ಹೆದರಿಯೇ ಇರುತ್ತಾಳೆ ? ಅವಳು ಅನ್ನುವದು ಒಂದು, ಅದರರ್ಥ ಆಗುವದು ಇನ್ನೊಂದು—ಯಾಕೆ ?

ಬಳಿಕ ಅಚಲಾ ರಾಮ್ ಗದಕರಿಯ ಬಗ್ಗೆ ಏನೇನೊ ಹೇಳಲು ಶುರು ಮಾಡಿದಳು—ಅವರಿಗಿಂತ ಒಳ್ಳೆಯ ಗಂಡ ಈ ಜಗತ್ತಿನಲ್ಲಿ ಯಾರೂ ಇಲ್ಲವೆನ್ನುವ ಹಾಗೆ. ಒಬ್ಬ ರಾಮ ಅಯೋಧ್ಯೆಯಲ್ಲಿ ಆಗಿಹೋದರು. ಮತ್ತೊಬ್ಬ ಈಗ ಇಪ್ಪತ್ತನೆಯ ಶತಮಾನದಲ್ಲಿ ಹುಟ್ಟಿದ್ದಾರೆ ಮತ್ತು ಕೊಲಾಬಾದಲ್ಲಿ ಇರುತ್ತಾರೆ.

ಮೋಹನ ಜಾಮನಿಗೆ ಸುಮಿತ್ರಾಳ ಬಗ್ಗೆ ಮಾತನಾಡುವದನ್ನು ಬಿಟ್ಟು ಬೇರೆ ಮಾರ್ಗವೇ ಇರಲಿಲ್ಲ. ಇಬ್ಬರ ನಡುವೆ ಅಂತರವು ಇನ್ನಿಷ್ಟು ಬೆಳೆದಿತ್ತು ಮತ್ತು ಅದು ಒಂದೇ ಸಮನೇ ಬೆಳೆಯುತ್ತಲೇ ನಡೆದಿತ್ತು—ತಮಗೆ ಅರಿವಿಲ್ಲದೇ ಅವರು ಒಬ್ಬರಿಗೊಬ್ಬರು ದೂರವಾಗಿ ಸಮೀಪ ಬರುವ ಪ್ರಯತ್ನ ಮಾಡುತ್ತಲಿದ್ದರು. ಸುಮಿತ್ರಾ ತುಂಬ ಒಳ್ಳೆಯ ಹೆಣ್ಣು. ಆದರೆ ಅವಳ ಅನಾರೋಗ್ಯವು ಇಡೀ ಜೀವನದ ಮೇಲೆ ಒಂದು ದುಃಖದ ಮುದ್ರೆಯನ್ನು ಒತ್ತಿಬಿಟ್ಟದೆ—ಮೋಹನ ಹೇಳಿದ.

ಅಷ್ಟರಲ್ಲಿ ಕೆಲಸದಾಕೆ ಕೈ ಒರೆಸಿಕೊಳ್ಳುತ್ತ ಬಂದಳು—"ಬಾಯೀ, ನಾನು ಹೋಗಲೆ." "ಇಲ್ಲ, ಇಲ್ಲ"—ಅಚಲಾ ಮೋಹನನ ಕಡೆ ನೋಡುತ್ತ ಅಂದಳು—"ಹೋಗಿ ಬಟ್ಟೆ ಒಗೆ. ಬಚ್ಚಲ ಬಳಿ ಎಷ್ಟೊಂದು ರಾಶಿ ಬಿದ್ದಿದೆ ನೋಡಿಲ್ಲವೇನು ? ನಡೆ, ನಡೆ."

ಕೆಲಸದಾಕೆ ಮುಖ ಸಿಂಡರಿಸಿ ಹೋದಳು. ಅದರ ವಿನಃ ಬೇರೆ ಉಪಾಯವಾದರೂ ಏನಿತ್ತು? ಮೋಹನ ಯಥಾಪ್ರಕಾರ ಸುಮಿತ್ರಾಳ ಬಗ್ಗೆ ಹೇಳುತ್ತಿದ್ದ—"ಹತ್ತು ವರ್ಷಗಳಿಂದ ಯಾವ ಹೆಣ್ಣು ನನ್ನ ಸಂಗಾತಿಯಾಗಿ ಇರುವಳೋ ಅವಳನ್ನು ನಾನು, ಕೇವಲ ಅವಳು ರೋಗಿಯಾಗಿದ್ದಾಳೆ ಎಂಬುದಕ್ಕೆ ಬಿಟ್ಟುಬಿಡಬೇಕೆ? ಯಾರು ತನ್ನ ತಾರುಣ್ಯದ ಉತ್ಕೃಷ್ಟ ವರ್ಷಗಳನ್ನು ನನ್ನ ಸೇವೆಯಲ್ಲಿ ಸವೆಸಿರುವಳೊ ಮತ್ತು ಯಾರ ಅನಾರೋಗ್ಯದ ಹೊಣೆಗಾರ ನಾನೇ ಇರುವೆನೊ—ನಾನಂತೂ ಯೋಚಿಸಲೂ ಕೂಡ ಶಕ್ಯವಿಲ್ಲ...."

ಮೋಹನನ ಕಣ್ಣು ತುಂಬಿ ಬಂದವು. ಅಚಲಾಗೆ ಏನಾಯಿತೊ ಏನೊ! ಅವಳಲ್ಲಿ ವರ್ಷಗಳಿಂದ ಅದುಮಿ ಇಡಲ್ಪಟ್ಟ ಯಾವುದೋ ವಸ್ತು ಉಕ್ಕಿತು.

"ಇಲ್ಲ, ಇಲ್ಲ ಮೋಹನ್‌ಜಿ, ಅವರು ನೆಟ್ಟಗೆ ಆಗುವರು"—ಅಂದಳು. ನಂತರ ಮೋಹನನಿಗೆ ಅತಿ ಸಮೀಪಕ್ಕೆ ಬಂದು ಅವಳು ತನ್ನ ಸೀರೆಯ ಸೆರಗಿನಿಂದ ಅವನ ಕಣ್ಣು ಒರೆಸಿದಳು. ಮೋಹನ ಒಂದು ನಿರ್ದಿಷ್ಟ ಗುರಿಯಿಂದ ಎದ್ದು, "ಒಳ್ಳೆಯದು, ನಾನು ಹೊರಡುವೆ" ಅಂದನು.

"ಕುಳಿತುಕೊಳ್ಳಿರಲ್ಲ, ಇನ್ನಿಷ್ಟು ಹೊತ್ತು"—ಅಚಲಾ ಅಂಥಹದೇ ವಾಕ್ಯವನ್ನು ಅಂದಳು. ಆದರೆ ಮೋಹನ ನಿರಾಕರಿಸಿದ. ಅವನು ಅವಸರದಿಂದ ತನ್ನ ಗಡಿಯಾರದ ಕಡೆ ನೋಡಿ ಅಂದ—"ನನಗೆ ಹನ್ನೊಂದೂವರೆ ಗಂಟೆಗೆ ಅಜವಾನಿ ಪೇಪರ್ ಮಿಲ್ಸ್‌ಗೆ ಹೋಗುವದಿದೆ."

ಮೋಹನ ಯಾಚನೆ ತುಂಬಿದ ದೃಷ್ಟಿಯಿಂದ ಅಚಲಾಳ ಕಡೆ ನೋಡುತ್ತ ಹೊರಟುಹೋದ.

ಅಚಲಾ ಎದ್ದು ನಿಂತಳು. ಅವಳು ಮುಗುಳ್ನಗುತ್ತಿದ್ದಳು. ಬೆಡ್‌ರೂಮಿಗೆ ಹೋಗಿ ತಾನು ಹೇಗೆ ಕಾಣಿಸುತ್ತಿರುವೆನೆಂದು ತನ್ನಷ್ಟಕ್ಕೆ ತಾನೆ ಪರೀಕ್ಷಿಸಿಕೊಂಡಳು. ಅವಳಿಗೆ ತನ್ನ ಚೆಲುವಿನ ಬಗ್ಗೆ ಅಭಿಮಾನವೆನಿಸಿತು. ಬಳಿಕ ಅವಳು ಕೆಲಸದಾಕೆಯ ಬಳಿ ಹೋಗಿ, "ನಿನ್ನ ಜಾನಿ ಬರಲಿಲ್ಲವೆ?"—ಎಂದು ಕೇಳಿದಳು.

ಈ ಮಾತಿಗೆ ಉತ್ತರ ಕೊಡುವ ಬದಲು ರೋಜಿ—"ಬಂದಿದ್ದ ಆ ಸಾಹೇಬರು ಹೋದರೆ?"

"ಹಾಂ"—ಅಚಲಾಗೆ ಎಷ್ಟು ನೆಮ್ಮದಿಯಿತ್ತು!

"ನೀನು ಜಾನಿಯ ಜೊತೆ ಪಿಕ್ಚರಿಗೆ ಹೋಗಿಬಿಡು. ನಿನ್ನ ಎಲ್ಲ ಹುಡುಗರ ಪೈಕಿ ಅವನೊಬ್ಬನೆ ನನಗೆ ಸರಿಕಾಣಿಸುತ್ತಾನೆ" ಅಚ್ಚಿ ಅಂದಳು.

ರೋಜಿ ಏಕಾಏಕಿ ಸಂತೋಷಗೊಂಡಳು.

ಅಚ್ಚಿಯ ಜೊತೆ ಮೋಹನನ ಈ ಭೆಟ್ಟಿ ಬಹುಶಃ ಐದನೇಯದೊ, ಆರನೇಯದೊ ಆಗಿತ್ತು. ಈಗ ಅವಳು ಟೇಲರ್ ಮಾಸ್ಟರ್ ಮತ್ತು ಬೇರೆ ಜನರ ಕಣ್ಣು ತಪ್ಪಿಸುತ್ತ ಮೋಹನನ ಗಾಡಿಯಲ್ಲಿ ಬಂದು ಕೂಡ್ರುತ್ತಿದ್ದಳು. ಅವರಿಬ್ಬರೂ ಸಾಯಂಕಾಲ ವಾಯುಸೇವನೆಗೆ ಹೋಗುತ್ತಿದ್ದರು.

ಈ ನಡುವೆ ಮೋಹನ ಸುಮಿತ್ರಾಳಿಗೆ ಒಂದು ಪತ್ರ ಬರೆಯುವ ಬದಲು ಮೂರು, ಮೂರು ಬರೆಯಹತ್ತಿದ. ಒಂದು ಪತ್ರದಲ್ಲಂತೂ ತಮಾಷೆ ಕೂಡ ಮಾಡಿದ್ದ: ನೀನು ಒಂದು ವೇಳೆ ಬರದಿದ್ದರೆ ನಾನು ಬೇರೆ ಯಾರ ಜೊತೆಗಾದರೂ ಮನಸ್ಸು ಹರಿಬಿಡುವೆ. ಹೀಗೆ ಅವನು ಸುಮಿತ್ರಾಳನ್ನು ನಿಶ್ಚಿಂತಳನ್ನಾಗಿ ಮಾಡಿದ.

ಒಂದು ಸಂಜೆ ಪರೇಜದ ಸಮೀಪದಿಂದ ಹಾಯ್ದು ಗಾಡಿಯು ಬ್ಯಾಕ್‌ಬೇದ ಹತ್ತಿರ ಕತ್ತಲಲ್ಲಿ ನಿಂತಿತ್ತು. ಅಚಲಾ ಆಕ್ಷೇಪಣೆ ಮಾಡಿರಲಿಲ್ಲ. ಇಂದು ಅವಳು ಎಡಗಡೆಯ ಬಾಗಿಲಿಗೆ ಆತುಕೊಂಡು ಕೂಡ್ರುವ ಬದಲು ಸರಿಯಾಗಿ ಸೀಟಿನ ಮಧ್ಯದಲ್ಲಿ ಕುಳಿತಿದ್ದಳು. ಮೋಹನ ಜಾಮನ ಕೈ ಸೀಟಿನಮೇಲೆ ಅಚ್ಚಿಯ ಸುತ್ತಲೂ ಇದ್ದವು. ಅಚ್ಚಿ ಒಂದು ಕೈಯಿಂದ ನ್ಯೂಟ್ರಲ್‌ನಲ್ಲಿದ್ದ ಗೇರ್‌ಅನ್ನು ಫಸ್ಟ್, ಸೆಕೆಂಡ್‌ಗಳಲ್ಲಿ ಹಾಕುತ್ತಿದ್ದಳು, ಅವಳು ಗಾಡಿಯನ್ನು ನಡೆಸುವ ಪ್ರಯತ್ನ ಮಾಡುತ್ತಿದ್ದಾಳೆ ಎನ್ನುವ ಹಾಗೆ.

ಮೋಹನ ಅಚಲಾಳ ಕೈ ಹಿಡಿದುಕೊಂಡ. ಅದನ್ನು ತಡೆಯುವದು ಒತ್ತಟ್ಟಿಗಿರಲಿ. ಅವಳು ಮೋಹನನ ಕೈಯನ್ನು ಅದುಮಿದಳು ಮತ್ತು ಇಬ್ಬರೂ ಕೆಲವು ಕ್ಷಣ ಸುಮ್ಮನಾದರು. ಎಷ್ಟೆಂದರೆ ಮೋಹನನೇ ಮಾತನಾಡಬೇಕಾಯಿತು.

"ಗದಕರಿ ಎಂದು ಬರುವವರಿದ್ದಾರೆ?"

"ಇದೇ, ಒಂದೆರಡು ದಿನಗಳಲ್ಲಿ."

"ಕಾನ್‌ಫರೆನ್ಸ್ ಮುಂದುವರಿಯಿತೆ?"

"ದೇವರಿಗೆ ಗೊತ್ತು. ಈ ಗಂಡಸರದೇನು ನಂಬಿಕೆ? ಸವತಿಯ ಜೊತೆ ಚಕ್ಕಂದ ವಾಡುತ್ತಿರಬಹುದು."

"ಏನು ಮಾತಾಡುತ್ತಿರುವಿರಿ?"—ಮೋಹನ ಅಚ್ಚಿಯ ಕೈಗಳನ್ನು ಸೆಳೆದು ಕೊಳ್ಳುತ್ತ ಅಂದ—

"ಅವರಂತೂ ನಿಮ್ಮ ಪಾಲಿಗೆ ರಾಮದೇವರಲ್ಲವೆ?"

"ರಾಮದೇವರಾಗಿದ್ದರೆ ಸೀತಾಳನ್ನು ಕರೆದೊಯ್ಯುತ್ತಿದ್ದಿಲ್ಲವೆ?"

ಮೋಹನ್ ನಗುತ್ತ ಹೇಳಿದ—"ಸೀತಾ ಕಾನ್‌ಫರೆನ್ಸಿಗೆ ಹೋಗಲು ಎಲ್ಲಿ ಸಾಧ್ಯ?" ಮತ್ತು ಮೋಹನ ಅಚ್ಚಿಯ ಬಗಲಲ್ಲಿ ಕೈಹಾಕಿ ಅವಳನ್ನು ಇನ್ನಷ್ಟು ತನ್ನ ಕಡೆ ಎಳೆದುಕೊಂಡ. ಅಚ್ಚಿ ಒಂದಿಷ್ಟು ಅಡ್ಡಿ ಮಾಡಿದಳು. ಆದರೆ ನಂತರ ತನ್ನನ್ನೇ ಸಡಿಲು ಬಿಟ್ಟಳು. ಅವಳಿಗೆ ಹಾಗೆಯೂ ಯಾವುದೋ ಸುಖದ ಅವಶ್ಯಕತೆ ಇತ್ತು. ಯಾಕೆಂದರೆ,

ಗಾಡಿ ಬ್ಯಾಕ್‌ಬೇದಲ್ಲಿ ಬಂದು ಕತ್ತಲಲ್ಲಿ ನಿಂತಾಗಿನಿಂದ ಅವಳು ಒಳಗಿಂದೊಳಗೆ ಕಂಪಿಸಹತ್ತಿದ್ದಳು. ಅವಳ ನರಗಳಿಗೆ ಯಾವದೋ ಆರಾಮಿನ ಆವಶ್ಯಕತೆ ಇತ್ತು. ಅವಳು ಕಣ್ಣು ಮುಚ್ಚಿಕೊಳ್ಳುತ್ತ ತನ್ನ ತಲೆಯನ್ನು ಮೋಹನನ ಎದೆಯ ಮೇಲೆ ಇಟ್ಟಳು....

ಮೋಹನ ಅಚಲಾಳ ಜೊತೆ ಪ್ರೇಮ ಮಾಡುವವನೇ ಇದ್ದ. ಅಷ್ಟರಲ್ಲಿ ಒಬ್ಬ ಮನುಷ್ಯ ಗಾಡಿಯ ಸಮೀಪಕ್ಕೆ ಬಂದು "ಎಳೆನೀರು" ಎಂದು ಕೂಗಿದ. "ಬೇಕಿಲ್ಲ"— ಮೋಹನ ಅಚಲಾಳಿಂದ ಬೇರೆಯಾಗುತ್ತ ಹೇಳಿದ. ಆದರೆ ಎಳೆನೀರಿನವನು ಯಥಾ ಪ್ರಕಾರ ಅಲ್ಲಿಯೇ ನಿಂತುಕೊಂಡದ್ದು ನೋಡಿ ಅವನು ಒಡನೆ ಕೆರಳಿದ—" ಲೋ, ಹೇಳಲಿಲ್ಲವೇನೊ ಬೇಕಿಲ್ಲ ಅಂತ." ನಂತರ—" ಹೋಗುವಿಯೊ ಇಲ್ಲೊ ?...." ಎಂದು ಮೋಹನ ಅವನನ್ನು ಹೊಡೆಯುವನೇನೊ ಎನ್ನುವಂತೆ ಧಾವಿಸಿದ.

ಅಚಲಾ, ಗಾಬರಿಯಿಂದ ಅವನನ್ನು ಹಿಡಿದುಕೊಂಡು, "ಏನು ಮಾಡುತ್ತಿರುವಿರಿ?" ಎನ್ನುತ್ತ, ತನ್ನ ಬಟ್ಟೆಯನ್ನು ಸರಿಮಾಡಿಕೊಂಡಳು.

" ಅವನ ಕೈಯಲ್ಲಿ ಚೂರಿ ಇದೆ, ನೋಡುವದಿಲ್ಲವೆ ? " ಅಂದಳು.

" ಇದ್ದೀತು "—ಮೋಹನ ನಿರ್ಲಕ್ಷ್ಯದಿಂದ ಉತ್ತರ ಕೊಟ್ಟ.

ಎಳೆನೀರಿನವನು ತನ್ನ ಮಲಬಾರಿ ಭಾಷೆಯಲ್ಲಿ ಏನೊ ಅಂದು ಹೊರಟುಹೋದ. ಸ್ವಲ್ಪ ದೂರದಲ್ಲಿ ಕಲ್ಲು ಗೋಡೆಯ ಮೇಲೆ ಕುಳಿತ. ಇನ್ನೊಬ್ಬ ಕೂಗಿದ, " ಮಜಾ ಕರಾ, ಬಾಬೂ ಮಜಾ ಕರಾ (ಮಜಾ ಮಾಡು, ಬಾಬೂ ಮಜಾ ಮಾಡು) "

ಮೋಹನ ಸ್ವಲ್ಪ ಹಿಂದೆ ಸರಿದು ಕುಳಿತು, ಅಚಲಾಗ " ಮನೆಗೆ ಹೋಗೋಣ " ಎಂದು ಹೇಳಿದ.

" ಯಾರ ಮನೆಗೆ ? "

" ನನ್ನ....ನಿಮ್ಮ, ರೋಜಿ ಅಲ್ಲಿಯೇ ಇರಬಹುದೇನು ? "

"ಇಲ್ಲ, ಇಲ್ಲ. ಅವಳು ಪಿಕ್ಚರ್ ನೋಡಲು ಹೋಗಿದ್ದಾಳೆ, ತನ್ನ ಜಾನಿಯ ಜೊತೆಗೆ."

" ಹಾಗಾದರೆ ಚೆನ್ನಾಯಿತು."

"ಇಲ್ಲ, ಇಲ್ಲ" ಅವಳು ಅಂದಳು—" ಮನೆಯಲ್ಲಿ ನಮಗೆ ಏನು ಮಾಡುವದಿದೆ ? "

ಅಸಲಿನಲ್ಲಿ ಅಚಲಾಗೆ ಮನೆಯಲ್ಲಿಯ ಆ ಕ್ಯಾಬಿನೆಟ್ ಮತ್ತು ಅದರಲ್ಲಿರಿಸಿದ ಚಿತ್ರಗಳು ನೆನಪಾಗಿದ್ದವು. ಅವಳಂತು ತನ್ನ ಪತಿಯ ಜೊತೆಗೂ ಪ್ರೇಮ ಮಾಡುವ ಮೊದಲು ನಡುವಿನ ಬಾಗಿಲನ್ನು ಮುಚ್ಚಿಕೊಳ್ಳುತ್ತಿದ್ದಳು. ನಂತರ ಕಲ್ಲಿನ ಮೇಲೆ ಕುಳಿತ ಆ ನಿಶ್ಚಿಂತ ವ್ಯಕ್ತಿಯನ್ನು ನಿರ್ಲಕ್ಷಿಸಿ ಮೋಹನ್, ಅಚಲಾಳನ್ನು ಚುಂಬಿಸಿದಾಗ ಅವಳಲ್ಲಿ ಮೊದಲಿನ ಆತ್ಮಸಮರ್ಪಣೆಯ ಭಾವ ಇರಲಿಲ್ಲ. " ಇಲ್ಲ, ಇಲ್ಲ "— ಅವಳು ಅಪಮಾನಗೊಂಡಂತೆ ಅಂದಳು. ಅದರಲ್ಲಿ ಪ್ರೇಮ ನಿರಾಕರಣೆಯು ಇತ್ತು ಮತ್ತು ಇರಲೂ ಇಲ್ಲ. ಆದರೆ ಮೋಹನ ಕೈ ಚಾಚಿ ಅಚ್ಚಿಯ ಸಣ್ಣ ದೊಡ್ಡ ರಹಸ್ಯ

ಗಳನ್ನು ಅರಿಯುವ ಪ್ರಯತ್ನ ಮಾಡಿದಾಗ ಅವಳು ಸಿಡಿದು ಬೇರೆಯಾದಳು. ಮೋಹನನಿಗೆ ಕೆಡುಕು ಅನಿಸಿತು. ಅವನು ಸ್ವಲ್ಪ ಹೊತ್ತು ತಡೆದು, ನಂತರ ಪುನಃ ಪರಿಪೂರ್ಣ ರೀತಿಯಲ್ಲಿ ದಾಳಿ ಮಾಡಿದ. ಆದರೆ ಅಚಲಾ ಯಾವುದೋ ಸುಭದ್ರ ಕೋಟೆಯಲ್ಲಿ ಬಂಧಿತಳಾಗಿ ಕುಳಿತಿದ್ದಳು. ಅವಳು ಆಕ್ಷೇಪಿಸುವ ರೀತಿಯಲ್ಲಿ ಅಂದಳು— "ಇಲ್ಲ, ಇಲ್ಲ. ಇಷ್ಟೇ ಬಹಳವಾಯಿತು."

"ಮೂರ್ಖಳಾಗಬೇಡ ಅಚ್ಚಿ"—ಮೋಹನ ಕೋಪೋದ್ರೇಕದಿಂದ ಹೇಳಿದ— "ನೀನು ಕೂಡ ದೀಬಿಯ ಹಾಗೆ ಪಶ್ಚಾತ್ತಾಪಪಡುವೆ."

"ಇಲ್ಲ ಮೋಹನ"—ಅಚಲಾ ಬಹಳ ಪ್ರೀತಿಯಿಂದ ಮುನಿದುಕೊಳ್ಳುತ್ತ ಅಂದಳು—

"ಪ್ರೇಮದ ಅರ್ಥ ಇದೇನೆ."

"ಏನು ಆಗುತ್ತದೆಯೊ ಅದನ್ನು ತಿಳಿಸಿಬಿಡು."

"ಯಾಕೆ....ಅಣ್ಣ-ತಂಗಿಯರ ಪ್ರೇಮವಿರುವದಿಲ್ಲವೆ?"

"ಇರುವದಿಲ್ಲವೇಕೆ?"—ಮೋಹನ ತನ್ನ ಪೌರುಷಕ್ಕಾದ ತೇಜೋಭಂಗವನ್ನು ಅಡಗಿಸಿಕೊಳ್ಳುತ್ತ ಅಂದನು. ಅವನಿಗೆ ಪರೇಲ್‌ದಲ್ಲಿರುತ್ತಿದ್ದ ತನ್ನ ತಂಗಿ ರಾಧಾ ನೆನಪಾದಳು.

"ಈ ಸಂಬಂಧವನ್ನಂತೂ ನಾವು ಯಾವಾಗಲೂ ಇರಿಸಿಕೊಳ್ಳಲಾರೆವು. ಒಂದೆರಡು ದಿನಗಳಲ್ಲಿ ಇವರು ಬಂದುಬಿಡುತ್ತಾರೆ....ತಿಂಗಳೆರಡು ತಿಂಗಳಲ್ಲಿ ಸುಮಿತ್ರಕ್ಕ ಕೂಡ ಹಿಂದಿರುಗಿ ಬರುತ್ತಾರೆ"—ಅಚ್ಚಿ ಹೇಳಿದಳು.

"ಹೂಂ."

"ಅಣ್ಣ-ತಂಗಿಯರ ಪ್ರೇಮವಿದ್ದಲ್ಲಿ ಯಾವ ಭಯವೂ ಇಲ್ಲ, ಯಾವ ಚಿಂತೆಯೂ ಇಲ್ಲ."

ಮೋಹನ ತನ್ನ ಹಣೆಯ ಮೇಲಿನ ಬೆವರು ಒರೆಸಿಕೊಳ್ಳುತ್ತ "ಒಳ್ಳೆಯದು, ಇಂದಿನಿಂದ ನಾನು ನಿನ್ನನ್ನು ತಂಗಿ ಎಂದು ಕರೆಯುತ್ತೇನೆ"—ಎಂದು ಹೇಳಿ ರಭಸದಿಂದ ಗಾಡಿಯನ್ನು ಬಿಟ್ಟ.

ಅಚ್ಚಿ ಬಹಳ ಹೆದರಿದ್ದಳು. ಅವಳು ಎರಡೂ ಕೈಗಳಿಂದ ಮೋಹನನ ಎಡ ಭುಜ ಹಿಡಿದುಕೊಂಡಳು ಮತ್ತು ಎದೆಯ ಮೇಲೆ ತನ್ನ ಕೂದಲಿನ ಸುಂದರ ಕಿರೀಟವನ್ನು ಇಡುತ್ತ—"ನೀವಂತು ಮುನಿದುಕೊಂಡಿರುವಿರಿ" ಅಂದಳು.

"ಮುನಿದುಕೊಳ್ಳುವೆನೇಕೆ?....ಅಣ್ಣನೆಂದಾದರೂ ತಂಗಿಯ ಜೊತೆ ಮುನಿದುಕೊಳ್ಳುವನೆ?" ಮೋಹನ ಹೇಳಿದ. ಅಚಲಾ ಸರ್ರನೆ ತನ್ನ ತಲೆಯನ್ನು ಮೋಹನನ ಹೆಗಲ ಮೇಲಿಂದ ಸರಿಸಿಕೊಂಡಳು.

ಸ್ವಲ್ಪ ಸಮಯದ ಬಳಿಕ ಗಾಡಿ 'ಸತ್ಯಸದನ'ದ ಎದುರು ನಿಂತಿತು. ಇಂದು

ಬಾಗಿಲು ತೆರೆಯಲು ಮೋಹನ ಎಳ್ಳಷ್ಟೂ ಪ್ರಯತ್ನಿಸಲಿಲ್ಲ. ಅಚಲಾ ಅನ್ಯಮನಸ್ಕಳಾಗಿ ಇಳಿದಳು. ಎದುರಿಗಿನ ಟೇಲರ್ ಮಾಸ್ಟರ್ ದಿಟ್ಟಿಸಿ ಅವರ ಕಡೆ ನೋಡುತ್ತಲಿದ್ದ ಮತ್ತು ಸುತ್ತಮುತ್ತಲಿನ ಕೆಲವು ಜನರೂ ಕೂಡ ಅವರನ್ನು ನೋಡುತ್ತಿದ್ದರು. ಆದರೆ ಅಚಲಾಳಿಗೆ ಯಾವ ಭಯವೂ ಉಳಿದಿರಲಿಲ್ಲ. ಇಂದು ಅವಳು ಮೋಹನನಿಗೆ ಕೃತಜ್ಞತೆಗಳನ್ನು ಹೇಳಲಿಲ್ಲ. ಅವಳು ಅತೀವ ಚಿಂತಿತಳಾಗಿದ್ದಳು. ಅವಳ ಮನಸ್ಸಿನಲ್ಲಿ ತನಗೇ ಅರ್ಥವಾಗದಂಥ ಶಂಕೆ ಮತ್ತು ಭಯಗಳು ಉದಯಿಸಿದ್ದವು. ಅವಳಿಗೆ ಒಂದೇ ಭಯವೆಲ್ಲಿ ಬಂತು? ಸಾವಿರಾರು ಇದ್ದವು. ಅವುಗಳಲ್ಲಿ ಒಂದನ್ನು ಇನ್ನೊಂದರಿಂದ ಬೇರ್ಪಡಿಸಿ ನೋಡುವದು ಮತ್ತು ಗುರ್ತಿಸುವದು ಸಾಧ್ಯವಿರಲಿಲ್ಲ.

" ಈಗ ಬರುವಿರೇನು ? "—ಅವಳು ಕೇಳಿದಳು.

" ಬರುವೆನು. ಬರುವದಿಲ್ಲವೇಕೆ ? "—ಎಂದು ಮೋಹನ ಬಿದ್ದು ಬಿದ್ದು ನಕ್ಕ, ಯಾರಾದರೂ ಮಗುವನ್ನು ಹೆದರಿಸಬಹುದು, ಆದರೆ ಒಂದು ಮಿತಿಯವರೆಗೆ ಅನ್ನುವಂತೆ. ಆ ಬಳಿಕ ಮೋಹನ " ಟಾಟಾ " ಎಂದು ಹೊರಟುಹೋದ. ಅಚಲಾ ಮನೆಗೆ ಹಿಂತಿರುಗಿದಾಗ ಯಾವುದೋ ಪ್ರತಿಜ್ಞೆಯ ಭಾರವು ಅವಳ ತಲೆಯ ಮೇಲಿಂದ ಇಳಿದಂತೆ ಅನಿಸಿತು.

ಮರುದಿವಸವೇ ಗದಕರಿ ಬಂದರು.

ಅಚ್ಚಿ ಅವರನ್ನು ಕರೆತರಲು ಸ್ಟೇಶನ್ನಿಗೆ ಹೋದಾಗ ಅವರನ್ನು ನೋಡಿ ಅವಳಿಗೆ ಆಶ್ಚರ್ಯವಾಯಿತು. ಅವಳ ಪತಿ ಮೀಸೆ ಬಿಟ್ಟಿದ್ದ.

" ಇದೇನು ? " ಅಚಲಾ ಕೇಳಿದಳು.

" ಹೀಗೆಯೆ ಮನಸ್ಸಿಗೆ ಮೋಜೆನಿಸಿತು " ಎಂದು ಅವಳ ಪತಿ ನಗುತ್ತ, ಪ್ರೀತಿಯಿಂದ ಅವಳನ್ನು ನೋಡಿದರು. ಬಳಿಕ ಕೂಲಿಯ ತಲೆಯಮೇಲೆ ಸೂಟಕೇಸ್ ಇಡಿಸುತ್ತ ಅಚ್ಚಿಯ ಸಮೀಪಕ್ಕೆ ಬಂದು, " ಅಸಹ್ಯವೆನಿಸುತ್ತದೆಯೆ ? " ಎಂದ.

" ಇಲ್ಲ ಅಸಹ್ಯವೇನೂ ಅನಿಸುವದಿಲ್ಲ. ಆದರೆ ನಾನು ಬೇರೆ ಯಾರೊ ಗಂಡಸಿನ ಜೊತೆ ಹೋದಂತೆ ಅನಿಸುತ್ತಿದೆ " ಎಂದು ಅಚಲಾ ಮುಗುಳುನಕ್ಕಳು.

" ಒಳ್ಳೆದಾಯಿತಲ್ಲ, ಒಂದೇ ಜನ್ಮದಲ್ಲಿ ಇಬ್ಬರು ಗಂಡಸರನ್ನು ನೋಡಿಬಿಟ್ಟೆ" ರಾಮ್ ಅವಳನ್ನು ಚುಡಾಯಿಸಿದ.

ಅಚಲಾ ನಗುವಳು ಮತ್ತು ಈ ಚುಟುಕಿನ ಪೂರ್ತಿ ಸ್ವಾದ ಅನುಭವಿಸುವಳು ಅಥವಾ ಥಪ್ಪೆಂದು ಬೆನ್ನಮೇಲೆ ಚಪ್ಪರಿಸಿ " ನಾಚಿಕೆ ಬರುವದಿಲ್ಲವೇ ? " ಎನ್ನುವಳು ಎಂದು ಅವನು ಯೋಚಿಸಿದ್ದ. ಆದರೆ ಅಚಲಾ ಏನೂ ಅನ್ನಲಿಲ್ಲ. ಅದರ ಬದಲು ಯಾವುದೋ ಚಿಂತೆಯ ನೆರಳು ಅವಳ ಮುಖದಮೇಲಿಂದ ಸರಿದುಹೋದಂತೆ ಏನನ್ನೊ

ಹುಡುಕುತ್ತಿರುವ ದೃಷ್ಟಿಯಿಂದ ರಾಮ್‌ನ ಮುಖದ ಕಡೆ ನೋಡಿದಳು. ಅದು ಮೀಸೆಯಿಂದಾಗಿ ಮೊದಲಿಗಿಂತಲೂ ಮೂರ್ಖವಾಗಿ ಕಾಣಿಸುತ್ತಲಿತ್ತು. ಯಾವುದೊ ಅಂಥಿಂಥ ವಿಷಯವಿಲ್ಲವೆಂದು ಅವಳಿಗೆ ವಿಶ್ವಾಸವಾಯಿತು. ಈಗ ಅವಳು ಪ್ರೇಮದ ಮಾತುಗಳನ್ನಾಡುತ್ತಿದ್ದಳು. ಆದರೆ—ಆದರೆ—ರಾಮ್ ಗದಕರಿ ಕಾನ್ಫರೆನ್ಸಿನ ಕಥೆಯನ್ನು ಎತ್ತಿಕೊಂಡು ಕುಳಿತಿದ್ದ.

ಮನೆ ಮುಟ್ಟಿದ ಮೇಲೆ ಅಚ್ಚಿ ತನ್ನ ಪತಿಗೆ ಸಾಮಾನನ್ನು ಕೂಡ ಸರಿಯಾಗಿ ಇಡಲು ಬಿಡಲಿಲ್ಲ. ಅವಳು ಒಂದು ಮಗುವಿನಂತೆ ಹಟ ಮಾಡಿದಳು ಮತ್ತು ಅವನ ಕೈ ಹಿಡಿದು ಜಗ್ಗುತ್ತ ತನ್ನ ಬೆಡ್ ರೂಮಿನೊಳಗೆ ಕರೆದೊಯ್ದಳು. ಅವನನ್ನು ತಬ್ಬಿಕೊಂಡು ಅಬ್ಬರಿಸಿ ಅಬ್ಬರಿಸಿ ಅಳಹತ್ತಿದಳು. ರಾಮ್ ಗದಕರಿ ಆಶ್ಚರ್ಯಪಟ್ಟನಷ್ಟೆ—"ಅರೇ, ಹನ್ನೊಂದೇ ದಿನಗಳಾದವಲ್ಲ!"

ಆದರೆ ಅಚ್ಚಿ ಅಳುತ್ತಿದ್ದಳು ಮತ್ತು ಹಟ ಮಾಡುತ್ತಿದ್ದಳು. ಅವಳನ್ನು ಅಪ್ಪಿಕೊಳ್ಳುತ್ತ ಮತ್ತು ಸಂತೈಸುತ್ತ ಕೊನೆಗೆ ರಾಮ್ ಗದಕರಿ, "ನೀನು ಇಷ್ಟು ಅಂಜುವಿಯೆಂದು ನನಗೇನು ಗೊತ್ತಿತ್ತು?" ಅಂದ.

"ನಾನು ಇದನ್ನೆಲ್ಲ ಹೆದರಿ ಮಾಡುತ್ತಿರುವೆನೇನು"—ಅಚಲಾ ಚಟ್ಟನೆ ಆಚೆ ಸರಿಯುತ್ತ ಅಂದಳು.

"ಇಲ್ಲ....ಪ್ರೇಮದಿಂದ" ರಾಮ್ ಗದಕರಿ ನಕ್ಕುಬಿಟ್ಟ. ಮುಂದಕ್ಕೆ ಬಂದು ಪುನಃ ಅಚ್ಚಿಯನ್ನು ಆಲಿಂಗಿಸಿಕೊಳ್ಳುತ್ತ ಹೇಳಿದ–"ನನಗೆ ಗೊತ್ತಿದೆ ಅಚ್ಚಿ....ನಾನು ಕೂಡ ನಿನ್ನನ್ನು ಅಷ್ಟೇ ಪ್ರೀತಿಸುತ್ತೇನೆ."

"ಸಾಕೆ?"

"ಅದಕ್ಕಿಂತಲೂ ಹೆಚ್ಚು."

"ಶುದ್ಧ ಸುಳ್ಳು....ನನ್ನನ್ನು ಪ್ರೀತಿಸುತ್ತಿದ್ದರೆ ಮೀಸೆ ಬಿಡುತ್ತಿದ್ದಿರಾ?"

ರಾಮ್ ಮೀಸೆಯನ್ನು ಯಾವುದೊ ಹುಡುಗಿಯ ಒತ್ತಾಯದ ಮೇರೆಗೆ ಬಿಟ್ಟಿದ್ದಾನೆ ಎಂದು ಅಚಲಾ ಭಾವಿಸಿರುವುದು ಅವನಿಗೆ ಅರ್ಥವಾಯಿತು. ಅವನಿಗೆ ಅಚಲಾಳ ಭಾವನೆಗಳಿಗಿಂತ ಹೆಚ್ಚು ತಾನು ಅರ್ಥ ಮಾಡಿಕೊಂಡದ್ದರ ಬಗ್ಗೆ ಸಂತೋಷವಿತ್ತು. ಪ್ರೀತಿಯಿಂದ ಅವನು ಮುಖವನ್ನು ಮುಂದಕ್ಕೆ ಚಾಚಲು ಅಚಲಾ ಮುಖವನ್ನು ಹಿಂದಕ್ಕೆ ತಿರುಗಿಸಿಕೊಂಡಳು. ಅದಕ್ಕೆ ರಾಮ್ ಮರುದಿನವೇ ಮೀಸೆಗೀಸೆ ಎಲ್ಲ ಬೋಳಿಸಿ ಹಾಕುತ್ತೇನೆ. ತನ್ನದಷ್ಟೆ ಅಲ್ಲ, ಯಾರೇ ಕಾಣಲಿ ಅವರದೂ ಸಹಿತ ಎಂದು ವಚನ ಕೊಟ್ಟ.

ಒಂದೆರಡು ದಿನಗಳ ಮೇಲೆ ಮಾತು ಕೊಟ್ಟಹಾಗೆ ಮೋಹನ ಜಾಮ್ ಬಂದನು. ಮೊದಲಿಗಂತೂ ಅಚ್ಚಿ ಬೆಚ್ಚಿಬಿದ್ದಳು. ನಂತರ ತನ್ನನ್ನು ತಾನು ಸಂಭಾಳಿಸಿಕೊಳ್ಳುತ್ತ ಅವಳು ತನ್ನ ಪತಿ ರಾಮ್ ಗದಕರಿಯ ಕಡೆ ಧಾವಿಸಿ ಅಂದಳು—"ರೀ, ನಾನು

ತಮಗೆ ಹೇಳಲೇ ಇಲ್ಲ. ನನಗೆ ಒಬ್ಬ ಅಣ್ಣನನ್ನು ಮಾಡಿಕೊಂಡಿರುವೆನು."

"ಅಣ್ಣನನ್ನು ?....ಮಾಡಿಕೊಂಡಿರುವೆ ?"

"ಹಾಂ....ಅಣ್ಣ ಇರುವದಿಲ್ಲವೇನು ?" ಅಚಲಾ ಅಂದಳು.

ಮತ್ತು ಅದೇ ರೀತಿ ರಾಮ್ ಗದಕರಿಯನ್ನು ಹಿಡಿದುಕೊಂಡು ಅಚಲಾ ಮೋಹನ ಜಾಮ್‌ನಿಗೆ ಭೆಟ್ಟಿ ಮಾಡಿಸಲು ಅವನನ್ನು ಡ್ರಾಯಿಂಗ್ ರೂಮಿಗೆ ಕರೆತಂದಳು. ಇಬ್ಬರೂ ಗಂಡಸರು ಒಬ್ಬರು ಇನ್ನೊಬ್ಬರನ್ನು ಅಸಮಂಜಸ ರೀತಿಯಲ್ಲಿ ಭೆಟ್ಟಿಯಾದರು. ಅಂದರೆ ರಾಮ್ ಗದಕರಿ ಮೋಹನ ಜಾಮ್‌ನನ್ನು ಸರಿಯಾದ ರೀತಿಯಲ್ಲಿ ಎಬ್ಬಿಸಲಿಲ್ಲ–ಕೂಡ್ರಿಸಲಿಲ್ಲ, ಇಲ್ಲವೆ ಅವನಿಗೆ ಯೋಗ್ಯ ರೀತಿಯ ಉಪಚಾರ–ಸತ್ಕಾರ ಮಾಡಲಿಲ್ಲವೆಂದಲ್ಲ. ಅವನು ಎಲ್ಲವನ್ನೂ ಮಾಡಿದ; ಆದರೆ ಅದು ಹೇಗಿತ್ತೆಂದರೆ, ಮನುಷ್ಯನು ತನಗೆ ಏನೂ ಅರ್ಥವಾಗದಿದ್ದರೂ ಮಾಡುತ್ತ ಹೋಗುತ್ತಿರುವ ಹಾಗೆ ಮುಗುಳ್ನಗೆಗಳು ಕೃತಕವಾಗಿದ್ದವು....ನಡತೆ ಕೃತಕವಾಗಿತ್ತು.

ಅಚಲಾಳಂತು ಸಂತೋಷದ ಸೂರೆ ಮಾಡುತ್ತಿದ್ದಳು, ಒಂದು ಸಲ ಅಣ್ಣನೆಂದ ಮೇಲೆ ವಿಶ್ರಾಂತಿ ದೊರೆತಿದೆಯೇನೊ ಅನ್ನುವಹಾಗೆ. ಅವಳು ಕೇವಲ ಚಹ ಮತ್ತು ಖಿತಾಯಿಗಳನ್ನು ಎದುರಿಗೆ ಇಡಲಿಲ್ಲ. ಕೆಲವು ಖಾರದ ವಸ್ತುಗಳನ್ನು ತರಿಸಲು ರೋಜಿಯನ್ನು ಕೂಡ ಪೇಟೆಗೆ ಕಳಿಸಿದಳು. ರಾಮ್ ಗದಕರಿ ಇದನ್ನೆಲ್ಲ ಸಹಿಸುತ್ತಲಿದ್ದ. ಆದರೆ ಮೋಹನ ಜಾಮ್ ಬಂದಮೇಲೆ ಅಚಲಾ, ಅವಳ ಪತಿ ಮತ್ತು ಅವಳ ಅಣ್ಣನ ಭಾವಮೈದುನನಾದ ತನ್ನನ್ನು ಕೂಡ ಮರೆತಳೆಂಬ ಒಂದು ವಿಷಯ ಅವನಿಗೆ ಅರ್ಥವಾಗುತ್ತಿದ್ದಿಲ್ಲ. ಹೀಗೆ ಮಾಡುವಾಗ ಅಚಲಾ ಹೇಗೆ ವಿವಶಳಿದ್ದಾಳೆ ಎಂಬುದನ್ನು ರಾಮ್ ಗದಕರಿ ನೋಡುತ್ತಲಿದ್ದ.

ಯಾವುದಾದರೂ ಸಾಮಾನು ತರಲೆಂದು ಅಚಲಾ ಒಳಗೆ ಹೋದಾಗ ಈ ಗಂಡಸರು ಒಬ್ಬರಿಗೊಬ್ಬರು ತೋರಿಕೆಗೆ, ಕೇವಲ ಶಿಷ್ಟಾಚಾರಕ್ಕೆಂದು ಒಂದೆರಡು ವಾಕ್ಯಗಳನ್ನು ಮಾತನಾಡುತ್ತಿದ್ದರು. ರಾಮ್ ಗದಕರಿ ಸ್ವಲ್ಪ ಕಾನ್‌ಫರೆನ್ಸಿನ ವರ್ಚಸ್ಸು ಬೀರುವ ಚಿಂತೆಯಲ್ಲಿದ್ದರು ಮತ್ತು ಮೋಹನ ಅದೇ ತಾನೆ ಜಪಾನಿನಿಂದ ತರಿಸಿದ ಶಿಪ್‌ಮೆಂಟನ ಬಗ್ಗೆ ಹೇಳುತ್ತಲಿದ್ದರು. ಇಬ್ಬರ ವಾಕ್ಯಗಳು ಮಧ್ಯೆ ಮಧ್ಯೆ ತುಂಡು ತುಂಡಾಗುತ್ತಿದ್ದವು.

ಅಚ್ಚಿ ಒಳಗಿನಿಂದ ಬಂದಾಗ ಅವಳು ಸೀರೆಯನ್ನು ಬದಲಿಸಿದ್ದಳು ಮತ್ತು ಮುಂದಿನ ಕೂದಲಲ್ಲಿ ಪುನಃ ಕ್ರೌನ್ ಮಾಡಿಕೊಂಡಿದ್ದಳು. ಸುಗಂಧವಂತು ಅವಳ ಜೊತೆಯೆ ಹೊರಗೆ ಧಾವಿಸಿ ಬಂದಿತ್ತು.

"ಅತ್ತಿಗೆ ಬಂದಿಲ್ಲವೇ ಭಾಯಿ ಸಾಬ್"—ಎಂದು ಅಚಲಾ ಕೇಳಿದಳು. ಬಳಿಕ ರಾಮ್ ಗದಕರಿಯ ಕಡೆ ಮುಖ ಮಾಡುತ್ತ ಅಂದಳು—"ಅವರು ಕಾಶ್ಮೀರಿಗೆ ಹೋಗಿದ್ದಾರೆ....ನಾನು ಭೆಟ್ಟಿಯಂತೂ ಆಗಿಲ್ಲ. ಆದರೆ ಒಳ್ಳೆಯ ಹೆಂಗಸು ಎಂದು ಕೇಳಿದ್ದೇನೆ."

"ಒಳ್ಳೆಯವರು ಇದ್ದಿರಬಹುದು"—ರಾಮ್ ಒಪ್ಪಿಕೊಂಡ.

ನಂತರ ರಾಮ್ ಆಶ್ಚರ್ಯದ ದೃಷ್ಟಿಯಿಂದ ಮೋಹನ ಜಾಮನ ಕಡೆ ನೋಡ ತೊಡಗಿದ.

ಎಲ್ಲವನ್ನೂ ತಿಂದಾದಮೇಲೆ ಮತ್ತು ಹಸ್ತಲಾಘವದ ನಂತರ ಮೋಹನ ಜಾಮ್ ಎದ್ದು ಹೊರಟುಬಿಟ್ಟ. "ನಾನು ಈಗ ಬಂದೆ" ಎಂದು ಅಚಲಾ ಬಾಗಿಲಿನವರೆಗೆ ಅವನನ್ನು ಕಳಿಸಲು ಹೋದಳು. ನಂತರ ಯಾವುದೋ ವಿಚಾರ ಬರಲು ಅವಳು ಬಾಗಿಲು ದಾಟಿ ಲ್ಯಾಂಡಿಂಗ್‌ವರೆಗೆ ಮತ್ತು ಲ್ಯಾಂಡಿಂಗ್‌ನಿಂದಲೂ ಕೂಡ ಕೆಳಗೆ ಹೋದಳು. ವಾಸ್ತವದಲ್ಲಿ ಅವಳ ಪತಿ ಅತಿಥಿಯನ್ನು ಬೀಳ್ಕೊಡಲು ಸ್ವಲ್ಪ ಸಮಯದ ವರೆಗೆ ಕೇವಲ ಶಿಷ್ಟಾಚಾರಕ್ಕಾಗಿ ಎದ್ದು ನಿಂತಿದ್ದ. ಹಾಗೆ ನೋಡಿದರೆ ಅಳಿಯ ಮತ್ತು ಭಾವ ಇವರಲ್ಲಿ ಅಳಿಯನ ಸಂಬಂಧವು ಕಡಿಮೆಯಾಗಿರುತ್ತದೆ.

ಕೆಳಗೆ ಬಾಜಾರದಲ್ಲಿ ಬರುವ ಮೊದಲು ಮೋಹನ ಜಾಮ್‌ನಿಗೆ ಅಚಲಾಳನ್ನು ಪ್ರೀತಿಸುವ ಬಯಕೆ ಉಂಟಾಯಿತು. ಅಚ್ಚಿ ಎಷ್ಟು ಚೆನ್ನಾಗಿ ಕಾಣಿಸುತ್ತಿದ್ದಳು. ಅವನಿಗೆ ಕೇವಲ ಅವಳ ಕೈ ಹಿಡಿದುಕೊಳ್ಳಲು ಸಾಧ್ಯವಾಯಿತು. ಅವನು ಅದನ್ನು ಸ್ವಲ್ಪ ಪ್ರೀತಿಯಿಂದ ಅದುಮಿ, "ಅಚ್ಚಿ ! ಎಂದಾದರೊಮ್ಮೆ ನೀನು ಕೂಡ ನಮ್ಮಲ್ಲಿಗೆ ಬಾ" ಎಂದು ಆಹ್ವಾನಿಸಿದ. "ಬರುತ್ತೇನೆ" ಅಚ್ಚಿ ಹೇಳಿದಳು. ನಂತರ "ಅವರನ್ನೂ ಸಹ ಕರೆತರುತ್ತೇನೆ"—ಅಂದಳು. ಅನಂತರ ಅಚಲಾ ಗಾಡಿಯುವರೆಗೆ ಬಂದಳು. ಮೋಹನ ಜಾಮ್‌ನು ಹೊರಟಾಗ ಅಚಲಾ ಮತ್ತು ಮೋಹನ ಇಬ್ಬರ ಕಣ್ಣೂ ತೇವ ಗೊಂಡಿದ್ದವು.

ಅಚಲಾ ಅಷ್ಟೇ ತೀವ್ರತೆಯಿಂದ ಮೇಲೆ ಬಂದಳು.

ಅಚಲಾ ರಾಮ್ ಗದಕರಿಗೆ ಯೋಚಿಸಲು ಅವಕಾಶವನ್ನೇ ಕೊಡಲಿಲ್ಲ. ಅವಳು ಮಾತಾಡುತ್ತಲೇ ಇದ್ದಳು—"ನೋಡಿದಿರಾ ನನ್ನ ಭಾಯಿ ಸಾಹೇಬನನ್ನು ? ಒಳ್ಳೆಯ ಮನುಷ್ಯರು....ಲಕ್ಷದಲ್ಲಿ ಒಬ್ಬರು...."

ರಾಮ್ ಗದಕರಿ ಕೇಳುತ್ತಲೇ ಇದ್ದ. ವಾಸ್ತವದಲ್ಲಿ ಅವನ ಮುಖದಮೇಲೆ ಕೋಪ ದೃಷ್ಟಿ ಇತ್ತು. ನಿರರ್ಥಕವಾದ ಅಣ್ಣನೊಬ್ಬ ಮಧ್ಯದಲ್ಲಿ ಬಂದಿದ್ದಾನೆ. ಅವನ ಅವಶ್ಯಕತೆ ಏನಿತ್ತು ?—ಏನೂ ಅವನಿಗೆ ಅರ್ಥವಾಗುತ್ತಿರಲಿಲ್ಲ. ಅಷ್ಟರಲ್ಲೆ ಅವನು ಕೇಳಿದ—"ನಿಮ್ಮದು ನಿಜವಾಗಿಯೂ ಅಣ್ಣ-ತಂಗಿಯ ಸಂಬಂಧವಿದ್ದರೆ ನೀನು ಭಾಯಿ ಸಾಹೇಬ್ ಎಂದೇಕೆ ಅನ್ನುವೆ ? ಭಯ್ಯಾಜಿ ಎಂದೇಕೆ ಅನ್ನುವದಿಲ್ಲ ?"

"ತಗೊಳ್ಳಿ ! ಇದೂ ಒಂದು ವಿಷಯವೇನು ?"

ಅಚಲಾ ಯಥಾಪ್ರಕಾರ ಮೋಹನನ ಗುಣಗಾನ ಮಾಡಹತ್ತಿದಳು. ದೀಬಿಯ ಜೊತೆ ತಾನು ಅಲೆದಾಡುತ್ತಿರುವಾಗ ಹೇಗೆ ಕೆಲವು ಮವಾಲಿಗಳು ಬೆನ್ನು ಹತ್ತಿದರು ಹಾಗೂ ಒಂದು ವೇಳೆ ಮೋಹನ ಜಾಮ್ ಅಲ್ಲಿ ಬಂದಿರದಿದ್ದರೆ ಏನಾಗುತ್ತಿತ್ತೊ ಏನೋ ಎಂದು ಹೇಳಿದಳು. ಅಚಲಾಗೆ ಈ ಸಂಬಂಧದ ಸ್ವಾಸ್ಥ್ಯ ಮತ್ತು ನಿರ್ಮಲತೆ

ಗಳನ್ನು ಹೊಂದಿಸಲು ಇನ್ನೂ ಅನೇಕ ಸುಳ್ಳು ಹೇಳಬೇಕಾಯಿತು. ಅವುಗಳ ಅವಶ್ಯ ಕತೆ ಇರಲಿಲ್ಲ. ಯಾಕೆಂದರೆ, ಈ ಸಂಬಂಧವನ್ನು ಮಾಡಿದವನು ಮನುಷ್ಯ— ದೇವರಲ್ಲ.

ಆ ನಂತರ ಒಂದೆರಡು ಸಲ ಮೋಹನ ಜಾಮ್ ಬಂದ. ಅಚಲಾ ಅದೇ ರೀತಿ ವಿವಶಗೊಂಡು, ಮೈಮರೆತು, ಧಾವಿಸಿದಳು ಮತ್ತು ಎವೆಯಿಕ್ಕಿದಳು. ಮೋಹನ ಜಾಮ್‌ನು ಹೊರಟುಹೋದನಂತರ ರಾಮ್ ಗದಕರಿ ಬಹಳ ಹೊತ್ತಿನವರೆಗೆ ಮೌನ ವಾಗಿ ಕುಳಿತಿದ್ದ. ಕೊನೆಗೆ ತನ್ನ ಮೌನವೇ ಸ್ವತಃ ತನಗೆ ಅಪ್ರಿಯವಾಗಹತ್ತಿತು. ಎದುರಿಗೆ ಮಾಡದಲ್ಲಿ ಟ್ರಾನ್ಸಿಸ್ಟರ್ ಇತ್ತು. ಅದರ ಮುಳ್ಳನ್ನು ತಿರುಗಿಸುತ್ತ ರಾಮ್ ಅಚ್ಚಿಗೆ ಕೇಳಿದ :

"ಯಾವುದಕ್ಕೆ ಟ್ರಾನ್ಸಿಸ್ಟರ್ ಅನ್ನುತ್ತಾರೆ ನಿನಗೆ ಗೊತ್ತೇ ?"

"ಅದೇ, ಎದುರಿಗೆ ಇದೆಯಲ್ಲ."

"ಇಲ್ಲ"—ರಾಮ್ ಕ್ರೋಧ ಮತ್ತು ಸ್ವಲ್ಪ ಮುಗುಳ್ನಗೆಗಳು ಬೆರೆತಂಥ ಭಾವನೆ ಯಿಂದ ಅಂದ—"ಸಿಸ್ಟರ್ ಎಂದು ತಂಗಿಗೆ ಅನ್ನುತ್ತಾರೆ. ಟ್ರಾನ್ಸಿಸ್ಟರ್ ಅಂದರೆ ಒಡಹುಟ್ಟಿದ ಸೋದರಿಯಲ್ಲ, ಹಾಗೆಯೇ ಬಾಡಿಗೆಗೆ ತೆಗೆದುಕೊಂಡು ಮಾಡಿಕೊಂಡ ತಂಗಿ....ಆದ್ದರಿಂದಲೇ ನೀನು ಗದ್ದಲವನ್ನು ಕೂಡ ಮಾಡುತ್ತಿರುವೆ."

ಅಚಲಾಗೆ ಬಹಳ ಕೋಪಬಂದಿತು—"ಹಾಗೆ ಅಂದರೇನು ? ತಾವು ಅಣ್ಣಾ ಮತ್ತು ತಂಗಿಯರ ಸಂಬಂಧದ ಬಗ್ಗೆ ಸಂಶಯಪಡುವಿರಾ ? ಅದರ ಗೇಲಿ ಮಾಡುವಿರಾ ?"

"ನನ್ನ ಅಭಿಪ್ರಾಯವೇನೆಂದರೆ...."

"ನನಗೆ ಎಲ್ಲಾ ಗೊತ್ತಾಗುತ್ತದೆ" ಅಚ್ಚಿ ತೇಕುತ್ತ ಅಂದಳು—"ನೀವು ಗಂಡಸರೆಲ್ಲ ನೀಚರು. ನಿಮ್ಮ ಕಣ್ಣುಗಳಲ್ಲಿ ಹೊಲಸು ಒತ್ತಿ ಒತ್ತಿ ತುಂಬಿದೆ. ಜಗತ್ತಿನಲ್ಲಿ ಗಂಡು ಹೆಣ್ಣು ಪತಿ ಪತ್ನಿಯರಾಗಿಯೇ ಕೂಡಲು ಸಾಧ್ಯವೇನು ? ಏನು ಸಂಸಾರದಲ್ಲಿ...." ಅಚಲಾಳ ಕಂಠ ತುಂಬಿ ಬಂತು. ಅವಳು ಅಳುತ್ತ ಕ್ಯಾಬಿನೆಟ್ಟಿನ ಎದುರು ದೇವರ ಚಿತ್ರಗಳ ಹತ್ತಿರ ಹೋಗಿ ಮಂಡಿಯನ್ನೂರಿ ಕುಳಿತು ಆಗ್ರಹ ಮಾಡಹತ್ತಿದಳು— "ನಾನು ಯಾವುದೇ ಪಾಪವನ್ನು ಮಾಡಿದ್ದರೆ ನನ್ನ ದೇಹದಲ್ಲಿ ಹುಳುಗಳು ಬೀಳಲಿ, ತೊನ್ನು ಹತ್ತಲಿ...."

ಈಗ ರಾಮ್ ಪಶ್ಚಾತ್ತಾಪಪಡಹತ್ತಿದ. ಅಲ್ಲದೆ ದೇವರ ಸಾಕ್ಷಿ ಬೇರೆ ಇತ್ತು. ಅವನು ಹಿಂದಿನಿಂದ ಬಂದು ಅಚಲಾಳನ್ನು ಎರಡೂ ಭುಜಗಳಿಂದ ಹಿಡಿದುಕೊಂಡು ಅವಳನ್ನು ಎಬ್ಬಿಸಿದ. ಆದರೆ ಅಚಲಾ ಜೋರಿನಿಂದ ಕೊಡವಿದಳು. ರಾಮ್ ಗೋಡೆಗೆ ಡಿಕ್ಕಿ ಹೊಡೆದ. ತಲೆಯ ಮೇಲೆ ಸಾಧಾರಣವಾದ ಪೆಟ್ಟು ಕೂಡ ಬಿತ್ತು. ಅಚಲಾ ಎಷ್ಟು ಆರೋಗ್ಯವಂತಳಾಗಿ ಇದ್ದಳೆಂದರೆ ರಾಮ್‌ನಂಥ ಬಡಕಲು ದೇಹದ ಮನುಷ್ಯ ನಿಗೆ ಅವಳನ್ನು ಸಂಭಾಳಿಸುವದು ಕಷ್ಟವಿತ್ತು. ನಂತರ ಅವಳು ಒಳಗೆ ಹೋಗಿ

ತನ್ನಷ್ಟಕ್ಕೆ ತಾನು ಹಾಸಿಗೆಯ ಮೇಲೆ ಬಿದ್ದುಕೊಂಡು ಜೋರು ಜೋರಾಗಿ ಅಳಹತ್ತಿದಳು.

ರಾಮ್ ಈಗ ಬಹಳ ಪರಿತಪಿಸಹತ್ತಿದ. ಪರಿತಪಿಸುವ ಗಂಡಿನ ಲಕ್ಷಣಗಳೇನು ತಮಗೆ ಗೊತ್ತೆ ? ರಾಮ್‌ನ ಸಾಯಂಕಾಲವೆಲ್ಲ ಅಚ್ಚಿಯನ್ನು ಮನವೊಲಿಸುವದರಲ್ಲಿ ಹೋಯಿತು. ವಾಸ್ತವದಲ್ಲಿ ಅವನು ಬಿರ್ಲಾ ಮತೂಶ್ರಿ ಸಭಾಗೃಹದಲ್ಲಿ ವಿಲಾಯತ್ ಹುಸೇನ್‌ನ ಸಿತಾರ್ ಕೇಳಲು ಹೋಗುವವನಿದ್ದ ಮತ್ತು ಅಚಲಾಳ ಸಲುವಾಗಿ ಟಿಕೆಟ್‌ಅನ್ನೂ ಕೊಂಡು ತಂದಿದ್ದ. ಅದನ್ನು ಈಗ ಅವನು ಸುಂದರ ಆದರೆ ಸಿಟ್ಟಿನ ಹೆಂಡತಿಯ ಎದುರು ಹರಿದು ಚೆಲ್ಲಿದ. ಬಳಿಕ ಅವನು ಅಲ್ಲಿಯೇ ಹಾಸಿಗೆಯಮೇಲೆ ಬಿದ್ದುಕೊಂಡಿದ್ದ ಮನೆಯಲ್ಲಿ ಆ 'ಸಿತಾರ'ದ ಟೊಂಕದಲ್ಲಿ ತೋಳುಗಳನ್ನು ಬಳಸಿ ಅದರ ತಂತಿಗಳನ್ನು ಸರಿಮಾಡಹತ್ತಿದ. ಆದರೆ ಸಿತಾರ್ ನುಡಿಸಲು ಬಾರದ ಅವನಿಗೆ ತಂತಿ ಮಿಂಟಿ ಸೂರನ್ನು ಹೊರಡಿಸಲೂ ಸಹ ಬರಲಿಲ್ಲ. ಕೊನೆಗೆ ಅವನು ನುಡಿದಿದ್ದಾದರೂ ಇಷ್ಟೇ : "ಅಚ್ಚಿ, ನಾನು ನಿನ್ನಮೇಲೆ ಎಳ್ಳಷ್ಟಾದರೂ ಸಂಶಯಪಟ್ಟಿದ್ದರೆ, ನಾನು ಆಕಳ ಮಾಂಸ ತಿಂದಷ್ಟು ಪಾಪ ನನ್ನ ಪಾಲಿಗಾಗಲಿ. ನಿನಗೆ ನಿನ್ನ ಸ್ವಂತ ಅಣ್ಣಂದಿರು ಇದ್ದಾರೆ ಎಂದಿಷ್ಟೇ ನಾನು ಹೇಳಬಲ್ಲೆ."

"ಎಲ್ಲಿದ್ದಾರೆ? ಒಬ್ಬನು ಕಲ್ಕತ್ತದಲ್ಲಿರುವನು, ಇನ್ನೊಬ್ಬನು ಬೆಜವಾಡದಲ್ಲಿ ಕುಳಿತಿದ್ದಾನೆ" ಅಚ್ಚಿ ಅಂದಳು.

"ಪಿಛವಾಡ (ಹಿತ್ತಲು) ದಲ್ಲಿ ಅಣ್ಣನಿರುವದು ಅವಶ್ಯವಿದೆಯೇನು ?"

"ಹಾಂ. ಅವಶ್ಯವಿದೆ"—ಅಚ್ಚಿ ತನ್ನ ತಲೆಯನ್ನು ನಿರ್ಣಯಾತ್ಮಕ ರೀತಿಯಲ್ಲಿ ಕೊಡಹುತ್ತ ಅಂದಳು.

"ಯಾರಾದರೂ ಇರಬೇಕಲ್ಲ ನಿಮ್ಮನ್ನು ಕೇಳುವವರು." ಆದರೂ ರಾಮ್ ಗದಕರಿಗೆ ಏನೂ ತಿಳಿಯಲಿಲ್ಲ. ಬಹಳ ನಿಸ್ತೇಜ ಸ್ವರದಲ್ಲಿ ಅವನು ಹೇಳಿದನು— "ನಿನ್ನ ಇಷ್ಟ. ಆದರೆ ಅದರ ಅವಶ್ಯಕತೆ ಏನೂ ಇರಲಿಲ್ಲವೆಂದು ನನಗನಿಸುತ್ತದೆ."

"ನಿಮಗೆ ಮೀಸೆಯಿಡುವ ಅವಶ್ಯಕತೆಯೇನಿತ್ತು ?"

ಒಂದು, ಒಂದೂವರೆ ತಿಂಗಳಮೇಲೆ ಸುಮಿತ್ರಾ ಬಂದಳು.

ನಿಜವಾಗಿಯೂ ಸುಮಿತ್ರಾ ಮೊದಲಿಗಿಂತ ಚೆನ್ನಾಗಿ ಕಾಣಿಸುತ್ತಿದ್ದಳು. ಮಗುವಿನ ಆರೋಗ್ಯವು ಕೂಡ ಮೊದಲಿಗಿಂತ ಚೆನ್ನಾಗಿತ್ತು. ಅವನು ಕಾಶ್ಮೀರಿ ಭಾಷೆಯ ಕೆಲವು ಶಬ್ದಗಳನ್ನು ಕಲಿತುಕೊಂಡು ಬಂದಿದ್ದ. ಅವುಗಳನ್ನು ಉಚಿತ, ಅನುಚಿತ ರೀತಿಯಲ್ಲಿ ಉಪಯೋಗಿಸುತ್ತಿದ್ದ. ಸುಮಿತ್ರಾ ಪದೇ ಪದೇ ಅವನನ್ನು ಹಿಡಿದುಕೊಂಡು, "ಡ್ಯಾಡಿಗೆ ಅದನ್ನು ಹೇಳು, ಇದನ್ನು ಹೇಳು" ಅನ್ನುತ್ತಿದ್ದಳು. ಆ ಬದ್ಮಾಷ್ ಅದೇ ಬಾಯಿಪಾಠ

ಮಾಡಿದ ವಾಕ್ಯಗಳನ್ನು ಪುನರುಚ್ಚರಿಸುತ್ತಿದ್ದ. ಆಮೇಲೆ, ಅವು ಕಾಶ್ಮೀರಿ ಭಾಷೆಯ ಹೊಲಸು ಬೈಗಳು ಇದ್ದುವೆಂದು ಗೊತ್ತಾಯಿತು.

ಮೋಹನ ಜಾಮ್ ಅಚಲಾಳಂಥ ಮೂರ್ಖತನವನ್ನು ಮಾಡಲಿಲ್ಲ. ಅಚಲಾಳನ್ನು ಭೆಟ್ಟಿ ಮಾಡಿಸುವ ಬಹಳ ಮೊದಲೇ ಸುಮಿತ್ರಾಳಿಗೆ ತಾನು ಒಬ್ಬ ತಂಗಿಯನ್ನು ಮಾಡಿಕೊಂಡಿದ್ದೇನೆಂದು ಹೇಳಿದ್ದ.

ಸುಮಿತ್ರಾ ಕೇಳುತ್ತಲಿದ್ದಳು. ಅವಳಿಗೆ ತನ್ನ ಮೋಹನನ ಮೇಲೆ ಪೂರ್ತಿ ಭರವಸೆ ಇತ್ತೆ ? ಇಲ್ಲ....ಸುಮಿತ್ರಾ ಗಂಡಿನ ನಿರ್ಲಕ್ಷ್ಯತೆಯನ್ನು ಪ್ರೀತಿ ಎಂದು ತಿಳಿಯುವ, ಇಲ್ಲವೆ ಆರೋಗ್ಯವನ್ನು ಎಲ್ಲೆ ಮೀರಿ ಕೆಡಿಸಿಕೊಂಡು ಗಂಡನ ಬಯಕೆಗಳನ್ನು ಈಡೇರಿಸದೆ ಪ್ರತಿ ಅವಸ್ಥೆಯಲ್ಲಿಯೂ ಸಾವಿಗಿಂತ ಜೀವನಕ್ಕೆ ಪ್ರಾಮುಖ್ಯತೆಯನ್ನು ಕೊಡುವ ಗರತಿಯಾಗಿದ್ದಳು. ಗಂಡ ಕೆಟ್ಟರೆ ಕೆಡಲಿ. ಅವನು ಉತ್ತರ ಕೊಡಬೇಕಾದದ್ದು ದೇವರಿಗೆ ನನಗಲ್ಲ ಎಂದುಕೊಂಡು ಕೊನೆಗೆ ರಾತ್ರಿಯಲ್ಲಿ ಮೌನವಾಗಿ ದುಃಖಿಸುತ್ತಿದ್ದಳು.

ಸುಮಿತ್ರಾ ಅಂದದ್ದಾದರೂ ಕೇವಲ ಇಷ್ಟೇ: "ಅವಶ್ಯಕತೆ ಏನಿತ್ತು? ನಿಮ್ಮ ಸ್ವಂತ ತಂಗಿಯೇ ಇದ್ದಳಲ್ಲ? ನಿಮ್ಮ ಪ್ರೀತಿಯನ್ನು ಅವಳಮೇಲೆಯೇ ಸುರಿಸಬೇಕಿತ್ತು ....ಅಥವಾ ಹೀಗೆಯೆ ಯಾವುದೊ ಪ್ರೇಮದ ಮಹಾಪೂರ ಬಂದಿದೆಯೊ ?"

"ಹಾಂ." ಮೋಹನ ಕಠೋರ ರೀತಿಯಲ್ಲಿ ಅಂದನು.

ಸುಮಿತ್ರಾ ಮೆತ್ತಗಾದಳು. ಆರೋಗ್ಯವು ಕೆಡುವದಂತೂ ಇದ್ದೇ ಇದೆ. ಈಗಿನಿಂದಲೇ ಯಾಕೆ ಶುರು ಮಾಡಬೇಕು? ಅವಳು ಎತ್ತರದ ರೂಪದಲ್ಲಿ ಪ್ರಶ್ನೆಯನ್ನು ಮಾಡಿದಳು, "ರಾಧಾ ಹೇಗಿದ್ದಾಳೆ?"

"ನಾನಂತು ಅವಳನ್ನು ಕಂಡೇ ಇಲ್ಲ."

"ಹಾಯ್ ರಾಮ್! ನಾನು ಹೋದಾಗಿನಿಂದ ನಿಮ್ಮ ತಂಗಿಯನ್ನು ಭೆಟ್ಟಿ ಯಾಗಿಲ್ಲವೆ?"

"ವೇಳೆ ಸಿಕ್ಕಲಿಲ್ಲ."

"ಅವಳೂ ಬರಲಿಲ್ಲವೆ? ರಾಧಾ ಮತ್ತು ಕೈಲಾಸಪತಿ."

"ಬಂದಿದ್ದರು ಮೂರು-ನಾಲ್ಕು ಬಾರಿ. ಆದರೆ ನಾನೇ ಮನೆಯಲ್ಲಿರಲಿಲ್ಲ."

ಭೆಟ್ಟಿಯಾಗುವದಾದರೂ ಹೇಗೆ? ಅವಳಂತು ಒಡಹುಟ್ಟಿದ ತಂಗಿ, ಮಾಡಿಕೊಂಡ ತಂಗಿಯೇನೂ ಅಲ್ಲವಲ್ಲ—ಎಂದು ಸುಮಿತ್ರಾ ಅನ್ನಲು ಬಯಸಿದಳು. ಆದರೆ ಅವಳು ಏನೂ ಅನ್ನಲಿಲ್ಲ. ಅವಳ ಆರೋಗ್ಯ ಇನ್ನೂ ಅಷ್ಟು ಸುಧಾರಿಸಿರಲಿಲ್ಲ.

ಬಳಿಕ ಮೋಹನ ಜಾಮ್‌ನೇ ಅಂದನು—"24ಕ್ಕೆ ರಕ್ಷಾಬಂಧನದ ಹಬ್ಬವಿದೆ. ಹೋಗಿ ಭೆಟ್ಟಿಯಾಗಿ ಬರುವೆನು.

ರಕ್ಷಾಬಂಧನದ ದಿನ ಮೋಹನ ಜಾಮ್ ಪರೇಲ್‌ದಲ್ಲಿಯ ತನ್ನ ತಂಗಿ ರಾಧಾಳಲ್ಲಿಗೆ

ಹೋದಾಗ ಜೊತೆಗೆ ಸುಮಿತ್ರಾ ಕೂಡ ಇದ್ದಳು. ಎಷ್ಟೋ ವರ್ಷಗಳ ನಂತರ ಭೆಟ್ಟಿಯಾದ ಹಾಗೆ ರಾಧಾ ತೋಳು ತೆರೆದು ಧಾವಿಸಿ ಬಂದಳು. ತಾನು ಹೆಣ್ಣು ಎಂಬ ಅರಿವು ಅವಳಿಗಿರಲಿಲ್ಲ ಮತ್ತು ಮೋಹನನಿಗೆ ತಾನು ಗಂಡೆಂಬ ಪರಿವೆಯೂ ಇರಲಿಲ್ಲ. ಅವನು ರಾಧಾಳ ಕೆನ್ನೆಯನ್ನು ಚುಂಬಿಸಿ ಪ್ರೀತಿಯಿಂದ ಅವಳ ತಲೆಯನ್ನು ನೇವರಿಸಿದ ಮತ್ತು ತಂಗಿಯ ಕಣ್ಣುಗಳಿಂದ ಆಕ್ಷೇಪಣೆಯ ಕಣ್ಣೀರನ್ನು ಒರೆಸಿದ.

ಸ್ವಲ್ಪ ಸಮಯದ ನಂತರ ರಾಧಾ ಬಹಳ ಸಂತೋಷದಿಂದ ಎದ್ದು ಕಟ್ಟಿಗೆಯ ಜಾಳಿಗೆಯಿಂದ ಮಿಠಾಯಿಯ ತಟ್ಟೆಯನ್ನು ಎತ್ತಿ ತಂದಳು. ನಂತರ ಎದುರಿಗೆ ಮಣೆಯನ್ನು ಹಾಕಿ ಅಣ್ಣನನ್ನು ಕೂಡ್ರಿಸಿದಳು. ಅವನ ಮುಖವನ್ನು ಪೂರ್ವ ದಿಕ್ಕಿಗೆ ಮಾಡಿದಳು. ಜಾಜು—ಮೋಹನನ ಮಗ ಇನ್ನೊಂದು ಮಣೆಯಮೇಲೆ ಜೊತೆಯಲ್ಲಿ ಕುಳಿತನು, ಅಷ್ಟಮಿಯ ಲೇಂಕಡಾದ ಹಾಗೆ.

"ಅರೆ, ಮೊದಲು ನೀನು ರಾಖಿ ಕಟ್ಟಿಕೊಳ್ಳುವೆಯೇನು?" ರಾಧಾ ಜಾಜೂನ ಕಡೆ ನೋಡುತ್ತ ಅಂದಳು.

"ಹಾಂ" ಎಂದು ಜಾಜೂ ತನ್ನ ಕೊಡದಂತಹ ತಲೆಯುಲ್ಲಾಡಿಸಿದ.

"ಮೊದಲು ನಾನು ನನ್ನ ಅಣ್ಣನಿಗೆ ಕಟ್ಟುವೆ."

"ಇಲ್ಲ, ಮೊದಲು ನನಗೆ ಕಟ್ಟು."

"ಹೀಗೇನೇ ಹುಕುಂ ನಡೆಸುವವನಿದ್ದರೆ ದೇವರಿಗೆ ಕೇಳು. ಬೇಗ ಒಬ್ಬ ಪುಟ್ಟ ತಂಗಿಯನ್ನು ತಂದುಕೊಡು ಎಂದು. ಅವಳೇ ಪ್ರತಿ ವರ್ಷ ರಾಖಿ ಕಟ್ಟುವಳಂತೆ"— ಎಂದು ರಾಧಾ ಪ್ರೀತಿಯಿಂದ ಅಂದಳು. ಹೀಗೆ ಅನ್ನುವಾಗ ಜಾಜೂ, ಮೋಹನ ಮತ್ತು ಕೈಲಾಸಪತಿ ಮೂವರೂ ಸುಮಿತ್ರಾಳತ್ತ ನೋಡಿದಾಗ ಅವಳು ನಾಚಿ ಮುಖವನ್ನು ಸೀರೆಯಲ್ಲಿ ಮುಚ್ಚಿಕೊಂಡಳು.

ರಾಧಾ ಮೋಹನ ಭಯ್ಯಾನ ಮುಂಗೈಮೇಲೆ ಸಾದಾ ನೂಲಿನ ರಾಖಿಯನ್ನು ಕಟ್ಟಿದಳು ಮತ್ತು ಬಾಯಿಯಲ್ಲಿ ಮಿಠಾಯಿಯ ಒಂದು ತುಂಡನ್ನು ಹಾಕಿದಳು. ಮೋಹನ ಜೇಬಿನಿಂದ ಹತ್ತು ರೂಪಾಯಿಯ ಒಂದು ನೋಟನ್ನು ತೆಗೆದು ರಾಧಾಳ ಅಂಗೈಯಲ್ಲಿಟ್ಟ. ರಾಧಾ ಅವನ ನೋಟನ್ನು ಕಣ್ಣಿಗೊತ್ತಿಕೊಂಡು, "ಈ ಶುಭ ದಿನ ಪ್ರತಿ ತಂಗಿಗೂ ಬರಲಿ, ದೇವರೆ" ಎಂದು ಪ್ರಾರ್ಥಿಸಿದಳು....ಅವಳ ಕಣ್ಣುಗಳಲ್ಲಿ ಪ್ರೇಮ ಮತ್ತು ಶ್ರದ್ಧೆಯ ತೇವವಿತ್ತು.

ಸುಮಿತ್ರಾ ಮತ್ತು ಮಗುವನ್ನು ಮನೆಗೆ ಮುಟ್ಟಿಸಿ ಮೋಹನ ಜಾಮ್ ಅಚಲಾಳಲ್ಲಿಗೆ ಹೊರಟ. ಅವನು ಸುಮಿತ್ರಾಳನ್ನು ಆಮೇಲೆ ಎಂದಾದರೂ ಕರೆದೊಯ್ಯಲು ಬಯಸಿದ್ದ. ಆ ದಿನವಲ್ಲ. ಅದಕ್ಕೆ ಒಂದು ವಿಶೇಷ ಕಾರಣವಿತ್ತು. ಹೆಂಗಸರು ಎಷ್ಟೊ ವಿಷಯ

ಗಳಲ್ಲಿ ಗಂಡಸರನ್ನು ತಡೆಯುತ್ತಾರೆ—ಇದನ್ನು ಮಾಡು, ಅದನ್ನು ಮಾಡಬೇಡ.... ಹೇಗೆ ಹೆಂಗಸರ ಬಹಳಷ್ಟು ವಿಷಯಗಳು ಗಂಡಸರಿಗೆ ತಿಳಿಯುವದಿಲ್ಲವೊ ಅದೇ ರೀತಿ ಗಂಡಸರ ಕೆಲವು ವಿಷಯಗಳು ಹೆಂಗಸರ ಬುದ್ಧಿಗೆ ಎಟಕುವದಿಲ್ಲ.

ಮೋಹನ ಬಾಜಾರದಲ್ಲಿ ಒಂದು ಬಟ್ಟೆಯ ಅಂಗಡಿಗೆ ಹೋದ. ಬಹಳ ತಿರುವು ಮುರುವು ಮಾಡಿದಮೇಲೆ ಒಂದು ಬನಾರಸಿ ಸೀರೆಯು ಅವನಿಗೆ ಇಷ್ಟವಾಯಿತು. ಅದರಲ್ಲಿ ಬಹಳ ತೆಳುವಾದ ಜರಿಯ ಕೆಲಸವನ್ನು ಮಾಡಲಾಗಿತ್ತು. ಹಾಗಿದ್ದರೂ ಕೂಡ ಅದರ ಬೆಲೆ ಮುನ್ನೂರ ಇಪ್ಪತ್ತೈದು ರೂಪಾಯಿಗೆ ಗೊತ್ತಾಯಿತು. ಮೋಹನ ಹಣ ಕೊಟ್ಟು ಸೀರೆಯನ್ನು ಒಂದು ಸುಂದರವಾದ ಗಿಫ್ಟ್ ಪೇಪರಿನಲ್ಲಿ ಕಟ್ಟಿಸಿಕೊಂಡ ಮತ್ತು ಕಾಜವೇ ಮೇಲಿನ ಸತ್ಯಸದನದ ಕಡೆಗೆ ಹೊರಟನು.

ಅಚಲಾ ತನ್ನ ಮನೆಯಲ್ಲಿ ಕುಳಿತುಕೊಂಡು ಕೈಯಲ್ಲಿ ಕತ್ತರಿ ಹಿಡಿದು ಏನೋ ಕತ್ತರಿಸುತ್ತಿದ್ದಳು. ಅದು ಮುಂಜಾನೆಯಿಂದಲೂ ಮುಗಿದಿರಲಿಲ್ಲ. ರಾಮ್ ಗದಕರಿ ಕಿಡಕಿಯಲ್ಲಿ ನಿಂತುಕೊಂಡು ಹಾಗೆಯೇ ಬಾಜಾರದಲ್ಲಿಯ ಜನರನ್ನು ನೋಡುತ್ತಲಿದ್ದ, ಮತ್ತು ಕೆಳಗೆ, ಟೇಲರ್ ಮಾಸ್ತರ್‌ನ ಅಂಗಡಿಗೆ ಬರುವ-ಹೋಗುವ ಜನರ ತಲೆಯ ಮೇಲೆ, ತನ್ನ ಸಿಗರೇಟಿನ ಬೂದಿಯನ್ನು ಜಾಡಿಸುವ ಪ್ರಯತ್ನ ಮಾಡುತ್ತಿದ್ದ. ಅಷ್ಟರಲ್ಲಿ ಎದುರಿಗೆ ಮೋಹನ ಜಾಮ್‌ನ ಕಾರು ಬಂದು ನಿಂತಿತು. ಹಿಂದಕ್ಕೆ ಸರಿದುಕೊಳ್ಳುತ್ತ ರಾಮ್ ಗದಕರಿ "ಅಚ್ಚೀ" ಎಂದು ಕೂಗಿದ.

"ಜೀ" ಅಚ್ಚಿ ಬಹಳ ಮಧುರವಾಗಿ ಉತ್ತರಿಸಿದಳು.

"ಅವನು ಬಂದಿದ್ದಾನೆ."

"ಅವನು ಯಾರು? ಭಯ್ಯಾಜಿ?"

"ಭಯ್ಯಾಜಿ ಅಲ್ಲ....ಮಚಲಾ."

"ಮಚಲಾ?"

"ಹಾಂ. ನೀನು ಅಚಲಾ ಅಲ್ಲವೆ, ಅವನು ಮಚಲಾ."

ಅವರೆಗೆ ಮೋಹನ ಬಾಗಿಲಿಗೆ ಬಂದುಬಿಟ್ಟಿದ್ದ. ಬಾಗಿಲ ಗಂಟೆಯನ್ನೂ ಬಾರಿಸಿದ್ದ. ರೋಜಿ ಬಾಗಿಲನ್ನು ತೆರೆದೂಬಿಟ್ಟಿದ್ದಳು.

ಮೋಹನ ಆ ದಿನ ಬರಲಿಕ್ಕಿಲ್ಲವೆಂದು ರಾಮ್ ಗದಕರಿ ಭಾವಿಸಿದ್ದ. ಅವನು ರಾಖಿ ಕಟ್ಟಿಸಿಕೊಳ್ಳಲು ಬಂದುಬಿಟ್ಟರೆ ಮತ್ತೆ ಅವನು ಯಾವದೇ ಗಡಿಬಿಡಿಯನ್ನು ಮಾಡಲು ಸಾಧ್ಯವಿರಲಿಲ್ಲ. ಹಾಗಿದ್ದರೆ ಎಲ್ಲಾ ಸರಿಯಾಯಿತು. ಮೋಹನ ಬಂದುಬಿಟ್ಟಿದ್ದ. ಅವನ ಸಲುವಾಗಿ ಅಚಲಾ ಮುಂಜಾನೆಯಿಂದಲೇ ಜರಿ, ಝುಲ್‌ಮಲ್ ಮತ್ತು ಏನೇನೊ ವಸ್ತುಗಳಿಂದ ಒಂದು ಸುಂದರವಾದ ರಾಖಿಯನ್ನು ತಯಾರಿಸಿದ್ದಳು. ರಾಧಾಳ ಬಡತನದ ನೂಲಿನ ರಾಖಿಯನ್ನು ಮೋಹನ ಬಿಚ್ಚಿ ಎಲ್ಲೊ ಎಸೆದಿದ್ದ. ಈಗ ಅವನ ಮುಂಗೈಯಮೇಲೆ ಏನೂ ಇರಲಿಲ್ಲ. ಮೋಹನ ಬರುತ್ತಲೇ ಅಚಲಾ ಎಂದಿ

ನಂತೆ ಗಾಬರಿಗೊಂಡು ಎದ್ದು ಓಡುತ್ತ ಡ್ರಾಯಿಂಗ್ ರೂಮಿಗೆ ಹೋದಳು ಮತ್ತು ಅವನಿಗೆ ಯಾವುದೊ ರಾಜನಿಗೆ ನೀಡುವಂತಹ ಸ್ವಾಗತವನ್ನು ನೀಡಿದಳು.

ರಾಮ್ ಗದಕರಿಗೆ ಎಲ್ಲವೂ ಅರ್ಥವಾಗಿಯೂ, ಏನೂ ಅರ್ಥವಾಗಿರಲಿಲ್ಲ.

ಸ್ವಲ್ಪ ಹೊತ್ತಿನಲ್ಲಿ ಮೋಹನ ಜಾಮ್ ಪೂರ್ವಕ್ಕೆ ಮುಖ ಮಾಡಿ ಚಿಕ್ಕ ಮಣೆಯ ಮೇಲೆ ಕುಳಿತಿದ್ದ. ಸ್ವಲ್ಪ ಆಚೆ ಗದಕರಿ ಅಲಕ್ಷ್ಯದಿಂದ ಆ ದೃಶ್ಯವನ್ನು ನೋಡುತ್ತಿದ್ದ. ಅಷ್ಟರಲ್ಲಿ ಅಚಲಾ ಬಂದಳು. ಅವಳು ಬಹಳ ಬಿಗಿಯಾದ ಕಮೀಜ್ ಮತ್ತು ಸಲ್ವಾರ್ ತೊಟ್ಟಿದ್ದಳು. ಕೊರಳಲ್ಲಿ ಈರುಳ್ಳಿಯ ಸಿಪ್ಪೆಯಂಥ ಒಂದು ದುಪ್ಪಟ ಇತ್ತು. ಅದು ಅಚ್ಚಿಯ ಕತ್ತು ಮತ್ತು ಎದೆಗೆ ಸ್ವಾಸ್ಥ್ಯದ ಬಣ್ಣವನ್ನು ಕೊಟ್ಟುಬಿಟ್ಟಿತ್ತು. ಕಮೀಜು ಎದೆ ನಡು ಮತ್ತು ಕೆಳಗಿನ ಭಾಗ ಇವುಗಳ ಬಹಳ ಸುಂದರವಾದ ಸೀಮೆಗಳನ್ನು ನಿರ್ಮಿಸಿತ್ತು. ಅವಳ ಕೈಯಲ್ಲಿ ತಟ್ಟೆಯಿತ್ತು. ಅದರಲ್ಲಿಟ್ಟ ಮಿಠಾಯಿಯಮೇಲಿನ ಬಂಗಾರದ ರೇಕುಗಳು ಕಂಪಿಸುತ್ತಿದ್ದವು ಮತ್ತು ಅದರ ಪಕ್ಕದಲ್ಲಿದ್ದ ರಾಖಿಯ ಮಧ್ಯೆ ಕೆಲವು ನಿಜವಾದ ಮುತ್ತುಗಳನ್ನು ಹೊಲಿಯಲಾಗಿತ್ತು.

ಮೋಹನ ಬಹಳ ಧೈರ್ಯದಿಂದ ಕೈ ಚಾಚಿದ. ಅದರ ಮೇಲೆ ಅಚಲಾ ರಾಖಿ ಕಟ್ಟುತ್ತಿರುವಾಗ, ರಾಮ್ ಗದಕರಿಗೆ ಅವಳ ಕೈಗಳು ಸಂತೋಷದಿಂದ ಕಂಪಿಸುತ್ತಿದ್ದುದು ಕಂಡಿತು. ನಂತರ ಮೋಹನ ಮಿಠಾಯಿಯ ತುಣುಕಿಗಾಗಿ ಬಾಯಿ ತೆರೆದ. ಅಚಲಾ ಅದರಲ್ಲಿ 'ಕಲಾಕಂದ' ಇಟ್ಟಳು. ಆಗ ಮೋಹನ ಗಿಫ್ಟ್ ಪೇಪರ್ ತೆಗೆದು ಅದರಲ್ಲಿಂದ ಸೀರೆ ತೆಗೆದು ಅದರ ಮೇಲೆ ನೂರು ರೂಪಾಯಿಯ ನೋಟು ಇಟ್ಟು ಅವೆರಡನ್ನೂ ಅಚಲಾಳ ಕಡೆ ಚಾಚಿದ.

ರಾಮ್ ಗದಕರಿಯ ಕಣ್ಣುಗಳು ತುಸು ಹೊತ್ತು ಅರಳಿದವು, ಮತ್ತೆ ನಾರ್ಮಲ್ ಆದವು.

ರಕ್ಷಾಬಂಧನದ ಈ ವಿಧಿಯನ್ನು ಪೂರೈಸುವವರೆಗೂ ಅಚಲಾ ಮೌನವಾಗಿದ್ದಳು. ಅಂತೆಯೇ ಮೋಹನ ಕೂಡ.

ಎಲ್ಲಿಯೋ ಕೈ ತಾಕಿದ್ದರಿಂದ ಇಬ್ಬರ ದೇಹಗಳಲ್ಲೂ ಒಮ್ಮಿಂದೊಮ್ಮೆಲೆ ಒಂದು ಮಿಂಚಿನಂತಹದು ಹರಿದಾಡಿತು. ಬಳಿಕ ಅಚಲಾ ಮೆತ್ತನೆಯ ಸ್ವರದಲ್ಲಿ "ಈ ದಿನ ಮತ್ತೆ ಮತ್ತೆ ಬರಲಿ ದೇವರೆ" ಅಂದಳು. ಮೋಹನ ಅಚಲಾಳ ಕಣ್ಣುಗಳಲ್ಲಿ ನೋಡಿದಾಗ ಅವುಗಳಲ್ಲಿ ಲಜ್ಜೆಯ ಕೆಂಪು ಇತ್ತು.

ಕೆಲ ಹೊತ್ತಿನ ಮೇಲೆ ಹಾಗೆಯೇ ಮಾತುಕತೆಯ ಬಳಿಕ ಮೋಹನ, ರಾಮ್ ಗದಕರಿಯ ಕೈಕುಲಕಿದ. ಅಚಲಾಗೆ ನಮಸ್ಕರಿಸಿ ಹೊರಟುಹೋದ. ಬಾಗಿಲ ಕಡೆ ಮುಂದುವರಿಯುತ್ತ ಅವನು ಒಂದು ನಿಟ್ಟುಸಿರು ಬಿಟ್ಟು ಹೊರಟುಹೋದ. ಅಚಲಾ ಎಂದಿನಂತೆ ಅವನನ್ನು ಕಳಗೆ ಬೀಳ್ಕೊಡಲು ಹೋಗಬಯಸಿದಳು. ಆದರೆ ಇಂದು ಅವಳ ಕಾಲು ಸೋತಿದ್ದವು.

"ನೀನು ಸಂತೋಷವಾಗಿರಬೇಕು ಅಚ್ಚಿ, ಅಣ್ಣನಿಗೆ ರಾಖಿ ಕಟ್ಟಿರುವೆ" ರಾಮ್ ಅಂದ.

"ಹಾಂ. ಆದರೆ ಇಂದು ಮುಂಜಾನೆಯಿಂದಲೇ ನನ್ನ ಪ್ರಕೃತಿ ಒಂದಷ್ಟು...." ಅಚ್ಚಿ ಅಂದಳು.

"ಮುಂಜಾನೆಯಿಂದಲೇ ಇವನ್ನೆಲ್ಲ ಮಾಡುತ್ತಿರುವಿ, ಕೂಡಿಸುತ್ತಿರುವಿ...."

ಅಚಲಾ ತಲೆ ಅಲ್ಲಾಡಿಸಿದಳು. ರಾಮ್ ಮುಂದೆ ಬಂದು "ನೀನು ನಿನ್ನ ಅಣ್ಣ ಕೊಟ್ಟ ಸೀರೆಯನ್ನು ಉಟ್ಟು ನನಗೆ ತೋರಿಸುವೆಯೆಂದು ನಾನು ತಿಳಿದಿದ್ದೆ" ಎಂದ. ಅಚ್ಚಿ ಏನೂ ಉತ್ತರಿಸಲಿಲ್ಲ. ಅವಳ ಕಣ್ಣು ಮುಚ್ಚುತ್ತಿರುವದನ್ನು ಕಂಡು ರಾಮ್ ಗದಕರಿ ಮುಂದೆ ಬಂದು ಅವಳನ್ನು ಹಿಡಿದುಕೊಂಡ. ಬಳಿಕ ಪ್ರೀತಿಯಿಂದ "ಏನಾಗಿದೆ ನನ್ನ ಪ್ರಿಯ ಅಚ್ಚಿಗೆ?" ಎಂದ.

"ಏನೂ ಇಲ್ಲ"––ಅಚ್ಚಿ ಒಂದು ಮಂದವಾದ ಧ್ವನಿಯಲ್ಲಿ ಹೇಳಿದಳು. ಬಳಿಕ ತನ್ನ ತೋಳನ್ನು ರಾಮ್‌ನ ಸುತ್ತಲೂ ಹಾಕುತ್ತ––"ನನ್ನನ್ನು ಪ್ರೀತಿಸಿರಿ" ಎಂದಳು.

ರಾಮ್ ಅಚ್ಚಿಯನ್ನು ಎದೆಗೆ ಒರಗಿಸಿಕೊಂಡು ಹಿಚುಕಹತ್ತಿದ.

"ಇನ್ನೂ" ಅಚ್ಚಿ ಅಂದಳು.

ಆ ಬಳಿಕ ಅಚ್ಚಿಯ ಕಣ್ಣುಗಳು ಮುಚ್ಚಿದವು ಮತ್ತು ಬಾಯಿ ತೆರೆಯಿತು. ಆವರೆಗೆ, ಮೋಹನ ಜಾಮ್, ಅಚಲಾ ಮತ್ತು ರಾಮ್ ಗದಕರಿಯವರ ಯೋಚನೆಯಿಂದಲೂ ಆಚೆ ಹೊರಟುಹೋಗಿದ್ದ.

## ಒಂದು ಸಣ್ಣ ಮಾತು

" ಯಾಕೆ? ಸರಿಯಾಗಿ ತಿಳಿದುಕೊಂಡೆ ತಾನೆ? ಒಂದು ಸಣ್ಣ ಮಾತಿದೆ "—ವಕೀಲ ಸಾಹೇಬರು ಮುಂದಕ್ಕೆ ಬಾಗಿ ಸಣಕಲಾದ ಆ ಹುಡುಗನನ್ನು ಕೇಳಿದರು.

ಗೋಪಾಲ ಸಿಂಗನ ಕೋಲುಮುಖದ ಮೇಲೆ ಹಳದಿ ವರ್ಣವು ಹೊಳೆಯುತ್ತಿತ್ತು. ಹೊಚ್ಚ ಹೊಸ ಕಂದು ಬಣ್ಣದ ಗಡ್ಡವು ಸಾಸಿವೆಗಳಂತೆ ಚಿಗುರೊಡೆದಿದ್ದವು. ಮೆಲಕು ಗಳಿಂದ ಬೆವರಿನ ಉದ್ದ ಉದ್ದವಾದ ಎಳೆಗಳು ಹರಿಯುತ್ತಿದ್ದವು. ಅವುಗಳನ್ನು ಅವನು ಪದೇ ಪದೇ ಅಂಗೈಗಳಿಂದ ಒರೆಸಿಕೊಳ್ಳುತ್ತಿದ್ದ. ಅವನು ತನ್ನ ದಣಿದ ಕಣ್ಣುಗಳನ್ನು ಮಣಗಳಷ್ಟು ಭಾರವನ್ನು ಎತ್ತಿದ ಹಾಗೆ ಮೇಲಕ್ಕೆ ಎತ್ತಿದ.

ಅವನ ಕಣ್ಣುಗಳನ್ನು ನೋಡಿ ವಕೀಲ ಸಾಹೇಬರು ಕಂಪಿಸಿದರು. ಹೊಂಬಣ್ಣದ ಅಲಿಗಳು ಕೋಪದಿಂದ ಅದುರುತ್ತಿದ್ದವು—ಹಾಲು ತುಂಬಿದ ಬಟ್ಟಲುಗಳಲ್ಲಿ ಮುಖ ಯಿಷ್ (ಕಲಾಬತ್ತು)ದ ಹೂಗಳು ಈಜುತ್ತಿವೆ ಏನೋ ಅನ್ನುವಂತೆ. ಅಲ್ಲಾಹ ಪಾಕ (ಪವಿತ್ರ ದೇವರು) ಈ ಕಣ್ಣುಗಳನ್ನು ಎಷ್ಟು ರಾತ್ರಿ ಜಾಗರಣೆ ಮಾಡಿ ಮಾಡಿ ರಚಿಸಿರ ಬಹುದು!

" ಇಲ್ಲ, ವಕೀಲ ಸಾಹೇಬ! "—ಗೋಪಾಲ ಸತ್ತಂತೆ ಬಿಕ್ಕಿದ. ಅವನ ತಲೆಯು ಇನ್ನಿಷ್ಟು ಬಾಗಿತು. ಊದಿಕೊಂಡ ರೆಪ್ಪೆಗಳು ತುಳುಕುತ್ತಿದ್ದ ಬಟ್ಟಲುಗಳಮೇಲೆ ಪ್ರಬಲವಾದ ಪರದೆಗಳನ್ನು ಕೆಡವಿದವು.

"ಅಲ್ಲ ಮಗು, ಇಷ್ಟೂ ತಿಳಿಯಲಿಲ್ಲವೆ? ರಕ್ಷಿಯ ಜೊತೆ ನಿನ್ನ ಅನುಚಿತ ಸಂಬಂಧ ವಿತ್ತು. ನೀವಿಬ್ಬರೂ ರಾತ್ರಿಯಲ್ಲಿ...." " ಇಲ್ಲ "—ಗೋಪಾಲ ಸಿಂಗ ವಿವಶತೆಯಲ್ಲಿ ತಲೆಯನ್ನು ಅತ್ತಿತ್ತ ಅಲ್ಲಾಡಿಸಹತ್ತಿದ. ಯಾವುದೋ ಅಜ್ಞಾತ ಗಲ್ಲಿಸಿಂದ ತನ್ನ ಕೊರಳನ್ನು ಬಿಡಿಸಿಕೊಳ್ಳಲು ಇಚ್ಛಿಸುತ್ತಿದ್ದಹಾಗೆ—" ಹೀಗೆ ಹೇಳಬೇಡಿ, ವಕೀಲ ಸಾಹೇಬ್! ಹೇಳಬೇಡಿ."

ವಕೀಲ ಸಾಹೇಬ್ ಜೋರಾಗಿ ಮೇಜಿನಮೇಲೆ ಮುಷ್ಟಿಯಿಂದ ಗುದ್ದಿ—"ಸರದಾರಜಿ, ಯಾಕೆ ನನ್ನ ವೇಳೆ ಹಾಳು ಮಾಡುತ್ತಿದ್ದೀರಿ? ನಿಮ್ಮ ಮಗ ಸಾಯಬೇಕೆಂದಿದ್ದಾನೆ. ಆದ್ದರಿಂದ ಯಾವ ವಕೀಲನು ಅವನ ಪ್ರಾಣವನ್ನು ಉಳಿಸಲಾರ."

" ವಕೀಲ ಸಾಹೇಬ್ "—ಗೋಪಾಲ ಸಿಂಗನ ಮುದುಕ ತಂದೆ ನರಳಿ ಮಗ್ಗಲು ಬದಲಿಸಿದ—" ನನ್ನ ಇವನೊಬ್ಬನೇ ಮಗ, ಅವನ ಜೀವ ಉಳಿಸಿಕೊಡಿ."

" ನಿಮಗೆ ಒಬ್ಬನೇ ಮಗನಿದ್ದಾನೆ ಮತ್ತು ಅವನು ಫಾಸಿಯಮೇಲೆ ನೇತಾಡಲು

ನಿರ್ಧರಿಸಿಬಿಟ್ಟಿದ್ದಾನೆ—ಇದರಲ್ಲಿ ನನ್ನದು ಯಾವ ದೋಷವಿದೆ ಸರದಾರಜಿ?"

"ಒಂದು ವೇಳೆ ಇವನಿಗೆ ಫಾಸಿ ಆಯಿತೆಂದರೆ........"—ಮುದುಕ ಸರದಾರ ಉದ್ರೇಕಗೊಂಡ.

"ನಾನು ಹೇಗೆ ಹೇಳುತ್ತೇನೆಯೋ ಅದೇ ರೀತಿ ಅವನು ನ್ಯಾಯಾಲಯದಲ್ಲಿ ಬಯಾನ್ (ಹೇಳಿಕೆ) ಕೊಟ್ಟನೆಂದರೆ ಫಾಸಿ ಆಗುವದಿಲ್ಲ....ಇಷ್ಟೇ ಮಾತು ಅವನಿಗೆ ಅರ್ಥವಾಗುತ್ತಿಲ್ಲ. ಅವನ ತಲೆಯಲ್ಲಿ ಗೊಬ್ಬರ ತುಂಬಿದೆ. ರಕ್ಷಿಯ ಜೊತೆ ಅವನ ಸಂಬಂಧವಿತ್ತು. ಜೋಗಿಂದರ್ ಅವರನ್ನು ಪರಸ್ಪರರ ಒಡಲಿನಲ್ಲಿದ್ದಾಗಲೇ ಹಿಡಿದ. ಅವನ ತಲೆಗೆ ರಕ್ತವೇರಿತು. ಅವನು ಕುಡುಗೋಲು ಎತ್ತಿಕೊಂಡು ಇಬ್ಬರ ಮೇಲೂ ಏರಿಹೋದ. ಜಗ್ಗಾಟದಲ್ಲಿ ಕುಡುಗೋಲು ಜೋಗಿಂದರನಿಗೆ ತಾಕಿತು. ಅವನು ಅಲ್ಲಿಯೇ ಹೆಣವಾದ...."

"ಇದು ಸುಳ್ಳು. ಕುಡುಗೋಲು ನನ್ನ ಕೈಯಲ್ಲಿತ್ತು. ನಾನು ಜೋಗಿಂದರ್‌ನನ್ನು ಕೊಲ್ಲಲಿಕ್ಕೆ........"

"ಪುನಃ ಅದೇ—ಕೋಣದ ಮುಂದೆ ಕಿನ್ನರಿ! ಸರದಾರಜಿ, ನಿಮ್ಮ ಮಗ ಒಂದನೇ ನಂಬರ್....ಅದು ಇದ್ದಾನೆ."

"ಗೋಪಿಯೂ....ನನ್ನ ಕಡೆ ನೋಡು ಮಗು"—ಮುದುಕ ಸರದಾರ ಅಂದ—ಹುಡುಗ ಹೆದರಿ ಇನ್ನಷ್ಟು ಬಾಗಿದ. ತಂದೆಯ ಮುದಿ ಕಣ್ಣುಗಳು ಮಂದವಾದ ಹುದಿಲಿನ ಹಾಗೆ ತನ್ನ ಮನಸ್ಸನ್ನು ಹಿಡಿದುಬಿಡುವವು ಮತ್ತು ಬಳಿಕ ಎಂದಿಗೂ ಬಿಡುವದಿಲ್ಲ ಎನ್ನುವದು ಅವನಿಗೆ ಗೊತ್ತಿತ್ತು.

ವಕೀಲ ಸಾಹೇಬರು ಎರಡೂ ಕೈಗಳಿಂದ ತಲೆ ಹಿಡಿದುಕೊಂಡರು. ಈವರೆಗೂ ಅವರಿಗೆ ಇಂಥ ವಿವಶತೆಯೊಂದಿಗೆ ಸಂಪರ್ಕ ಬಂದಿರಲಿಲ್ಲ. ಬಹಳ ದೃಢವಾದ, ನಿರ್ದಾಕ್ಷಿಣ್ಯ ಮತ್ತು ವ್ಯಾವಹಾರಿಕ ರೀತಿಯ ವ್ಯಕ್ತಿ ಅವರು. ಎಷ್ಟು ದರೋಡೆ ಖೋರರನ್ನು, ಕೊಲೆಗಾರರನ್ನು ಮತ್ತು ಮಾನಸಿಕ ರೋಗಿಗಳನ್ನು ಫಾಸಿಯ ಹಲಗೆಯ ಮೇಲಿಂದ ಇಳಿಸಿಕೊಂಡು ಬಂದಿದ್ದರೋ ಏನೋ! ಯಾವ ದಾವೆಯಲ್ಲಿಯೂ ಅವರು ಭಾವನೆಗಳನ್ನು ಬೆರೆಯಗೊಟ್ಟಿರಲಿಲ್ಲ. ಆದರೆ ಈ ಮುದುಕ ಸರದಾರ ಮತ್ತು ಸಣಕಲಾದ ಹುಡುಗನನ್ನು ನೋಡಿ, ಮನದಲ್ಲಿ ಎಲ್ಲಿ ಎಂಥ ತಪ್ಪು ಸ್ಥಳದಲ್ಲಿ ಗುದ್ದು ಬಿದ್ದಿತೋ ಏನೋ! ಪಾಪ ವಿವಶರಾಗಿಬಿಟ್ಟರು. ಮಅಜ ಅಲ್ಲಾಹ! (ದೇವರ ರಕ್ಷಣೆ ಇರಲಿ!) ಎಂಥ ರೂಪ ಪಡೆದಿದ್ದಾನೆ ಈ ದುರ್ಭಾಗ್ಯ! ಗಂಧದ ಸಸಿಯು, ಸುವಾಸನೆ ಬೀರುತ್ತಿರುವ ಮಣ್ಣಿನಲ್ಲಿಂದ ತಲೆಮುಳಿಸಿ ಹೊರಬಿದ್ದು ನಿಂತಿದೆ ಏನೋ ಅನ್ನುವ ಹಾಗೆ!

"ಗೋಪಾಲ ಸಿಂಗ್, ಎಂದಾದರೂ ಫಾಸಿಯನ್ನು ನೋಡಿರುವಿಯಾ?"

"ಇಲ್ಲ ರೀ."

"ಫಾಸಿ ಎಷ್ಟು ಭಯಾನಕವಿರುತ್ತದೆ ಗೊತ್ತೇ ಮಗು! ಕಣ್ಣುಗಳು ಉಕ್ಕಿ ಕೆನ್ನೆಗಳಮೇಲೆ ನೇತಾಡುತ್ತವೆ, ನಾಲಿಗೆ ಹೊರಗೆ ಬರುತ್ತದೆ, ಕುತ್ತಿಗೆ ಎಳೆಯಲ್ಪಟ್ಟು ಕೈಯಷ್ಟು ಉದ್ದವಾಗುತ್ತದೆ"—ವಕೀಲ ಸಾಹೇಬರು ಬಹಳ ದಿಗಿಲುಗೊಳಿಸುವ ಮತ್ತು ರಹಸ್ಯಪೂರ್ಣ ಧ್ವನಿಯಲ್ಲಿ ಗೋಪಾಲ ಸಿಂಗನನ್ನು ಯಾವ ರೀತಿ ಹೆದರಿಸ ತೊಡಗಿದರೆಂದರೆ ಸ್ವತಃ ಅವರ ಬೆನ್ನಮೇಲೆ ಝುರಿ ಹುಳು ಹರಿದಾಡಿದಂತಾಯಿತು. ಗೋಪಾಲ ಸಿಂಗ್‌ನ ನೀರಲ ವರ್ಣದ ತುಟಿಗಳು ಕಂಪಿಸಿದವು ಮತ್ತು ಅವನು ಹಲ್ಲುಗಳಲ್ಲಿ ಅಂಗೈಯನ್ನು ತುರುಕಿಕೊಂಡು ಅಳಹತ್ತಿದ. ಹಾಲಿನ ಬಟ್ಟಲುಗಳಲ್ಲಿ ಈಜುತ್ತಿದ್ದ ಮುಖಯಿಷ್ ತುಣುಕುಗಳು ಬುಡಮೇಲಾದವು.

"ನೀನು ರಕ್ಖಿಯನ್ನು ಬಾಲ್ಯದಿಂದಲೂ ಬಲ್ಲೆಯಾ?"—ವಕೀಲ ಸಾಹೇಬರು ಮಾತು ತಿರುಗಿಸಿದರು.

"ಹಾಂ....ಜೀ."

"ಇಬ್ಬರು ಜೊತೆಯಲ್ಲಿ ಆಟವಾಡುತ್ತಿದ್ದರು ಸಾಹೇಬ"—ಮುದುಕ ಸರದಾರ ನೆಲದಿಂದ ಮೇಲಕ್ಕೆ ಒಂದು ಅಡಿಯಷ್ಟು ಅಳೆದ.

ಗೋಪಾಲನ ಮುಖದಮೇಲೆ ಮೃದುಲವಾದ ಬಾಲ್ಯವು ಹೊಳೆಯಹತ್ತಿತು. ವಕೀಲ ಸಾಹೇಬರಿಗೆ ಪುನಃ ದೇವರ ಸೃಷ್ಟಿಯ ನೆನಪಾಯಿತು. ದೇವದೂತರು ಎಷ್ಟು ಮುಖಗಳ ಮುಗ್ಧತೆಯನ್ನು ಕದ್ದು ಈ ಹುಡುಗನಮೇಲೆ ಸೂರೆ ಮಾಡಿರುವರೋ ಏನೋ!

"ಅಂದರೆ ನೀವು ಬಾಲ್ಯದಿಂದಲೂ ಒಬ್ಬರನ್ನೊಬ್ಬರು ಬಯಸುತ್ತಿದ್ದಿರಿ ಎಂದು ಅರ್ಥವಾಯಿತು."

"ಮಕ್ಕಳಂತೂ ಮಂಗಗಳಿಗೆ ಸಮಾನ. ಬಯಸುವದು ಗಿಯಸುವದು ಎಂಥದು? ಕ್ಷಣದಲ್ಲಿ ಕೂಡಿದರೆ ಕ್ಷಣದಲ್ಲಿ ಜಗಳ. ಇದೀಗ ಕೊರಳಲ್ಲಿ ತೋಳು ಹಾಕಿ ಹಸಿರು ಹಸಿರಾದ ಹುಲ್ಲಿನಲ್ಲಿ ಬೋರೆ ಹಣ್ಣುಗಳನ್ನು ಹುಡುಕುತ್ತಿದ್ದರೆ, ಸ್ವಲ್ಪದರಲ್ಲೆ, ಒಬ್ಬರು ಮತ್ತೊಬ್ಬರ ಕೂದಲನ್ನು ಕೀಳುತ್ತಿರುತ್ತಾರೆ. ರಕ್ಖಿಯಂತು ಪೂರ್ಣ ಮೆಣಸಿನಕಾಯಿಯಂತೆ ಖಾರವಾಗಿದ್ದಳು. ಯಾರಿಗೂ ಅವಳ ಜೊತೆ ಎರಡು ಕ್ಷಣಗಳ ಹೊಂದಿಕೆಯಾಗುತ್ತಿರಲಿಲ್ಲ. ಸರಿ, ಗೋಪಾಲ ಒಬ್ಬನಿದ್ದ ಅವಳ ನಾದಿರಷಾಹಿತನವನ್ನು ಸಹಿಸಿಕೊಳ್ಳಲು. ವೃದ್ಧಾಪ್ಯದ ಮಗನಿದ್ದನಲ್ಲವೆ? ಅವನ ಮನವು ಕೂಡ ಬಹಳ ಮುದಿ ಇತ್ತು. ರಕ್ಖಿ ತಿರಸ್ಕರಿಸಿದರೆ, ಜೋಲುಮುಖ ಮಾಡಿಕೊಂಡು ತಾಯಿಯ ಕುಂಡಿಗಳಿಗೆ ಅತು ಕುಳಿತುಕೊಳ್ಳುತ್ತಿದ್ದ. ಬಳಿಕ ಅವಳು ಇಷ್ಟಪಟ್ಟು ಅವನನ್ನು ಕೂಗಿದರೆ, ಓಡುತ್ತ ಓಡುತ್ತ ಅವಳ ಸನ್ನಿಧಾನದಲ್ಲಿ ತಲುಪುತ್ತಿದ್ದ.

ಅವಳು ದೊಡ್ಡವಳಾದಮೇಲೆ, ಇತರ ಹುಡುಗಿಯರ ಗುಂಪಿನಲ್ಲಿ ತಲೆ ಜೋಡಿಸಿ ಏನು ಮಾತು ಹೇಳುತ್ತಿದ್ದಳೊ ಏನೊ ಒಮ್ಮಿಂದೊಮ್ಮೆಲೆ ಗೋಪಾಲನಿಗೆ ಎದುರು ಬಿದ್ದಳು.

"ಹುಡುಗರು ಬಹಳ ಕೆಟ್ಟವರಿರುತ್ತಾರೆ. ಅವರ ಮನದಲ್ಲಿ ಕೆಡಕು ಇರುತ್ತದೆ." ರಕ್ಷಿ ಗೋಪಾಲನಿಗೆ ತಿಳಿಸಿಕೊಟ್ಟಳು ಮತ್ತು ಅವನು ತಿಳಿದುಕೊಂಡ. ನಂತರ ಅವನ ಮನದಲ್ಲೂ ಕೆಡಕು ಮನೆಮಾಡಿತು. ಆ ನಂತರ ರಕ್ಷಿಗೂ ಕೂಡ ಆ ಕೆಡಕಿನಲ್ಲಿ ಆಸಕ್ತಿ ಹುಟ್ಟಿತು. ಒಮ್ಮೊಮ್ಮೆ ಮುನಿದುಕೊಳ್ಳುತ್ತಿದ್ದಳು. ಒಮ್ಮೊಮ್ಮೆ ತನ್ನಷ್ಟಕ್ಕೆ ತಾನೆ ಒಲಿದು ಬರುತ್ತಿದ್ದಳು.

"ನೋಡು ಗೋಪಿ, ಒಂದು ವೇಳೆ ನೀನು ಎಂದಾದರು ಪ್ರೇಮ-ಗೀಮ ಮಾಡಿದೆ ಯೆಂದರೆ ಒಳ್ಳೆಯದು ಆಗುವದಿಲ್ಲ. ಚಾಚಿಗೆ ಹೇಳಿ ನಿನ್ನ ಪಗಡಿ ಸಡಿಲವಾಗುವವರೆಗೆ ಎಕ್ಕಡದಿಂದ ಹೊಡೆಯಿಸುವೆ."

"ನಡೆಯೆ ದೆವ್ವ! ನಿನ್ನನ್ನು ಪ್ರೀತಿಸಲಿಕ್ಕೆ ನನಗೆ ಹುಚ್ಚು ನಾಯಿ ಕಚ್ಚಿದೆ ಏನು?— ಗೋಪಾಲ ಸಿಟ್ಟಿಗೆಬ್ಬಿಸುತ್ತಿದ್ದ.

"ಯಾಕಲೋ ದುಷ್ಟ, ನನ್ನಲ್ಲಿ ಯಾವ ಐಬು ಇದೆ? ನಾನೇನು ಕುಂಟಿಯೇ, ನನ್ನ ಬಣ್ಣ ಕಾಗೆಯ ಹಾಗೆ ಕಪ್ಪಗಿದೆಯೆ, ನನಗೆ ಒಕ್ಕಣ್ಣಿದೆಯೇ—ನೀನು ನನ್ನ ಜೊತೆ ಪ್ರೇಮ ಮಾಡುವದಿಲ್ಲ ಎನ್ನುವದಕ್ಕೆ? ಹೇಳು—" ಎಂದು ಅವಳು ಜಗಳ ಪ್ರಾರಂಭಿಸುತ್ತಿದ್ದಳು.

"ಸಾಕು. ನನ್ನ ಇಚ್ಛೆ ಇದ್ದರೆ ಮಾಡುವೆ, ಇಲ್ಲದಿದ್ದರೆ ಮಾಡುವದಿಲ್ಲ."

"ಆಹಹಾ! ಮಹಾ ಬಂದ ಇಚ್ಛೆಯ ಒಡಹುಟ್ಟಿದವ! ನಡೆ ಹೋಗು ಆಚೆಗೆ"— ಎಂದು ಅಸಭ್ಯವಾಗಿ ಅರಚುತ್ತಿದ್ದಳು. ಎಷ್ಟೋ ದಿವಸ ಮೂಗು ಮೇಲೆತ್ತಿಕೊಂಡು ಇರುತ್ತಿದ್ದಳು. ಆಗ ಗೋಪಾಲನ ಜಗತ್ತು ಅಸ್ತವ್ಯಸ್ತಗೊಳ್ಳುತ್ತಿತ್ತು. ಅವನು ಬಿಳಿಚಿದ ಮುಖದಿಂದ ಅತ್ತಿತ್ತ ಅಲೆಯುತ್ತಿದ್ದ. ನಂತರ ರಕ್ಷಿಯ ಯಾವ ನರವು ಸ್ಫುರಣಗೊಳ್ಳುತ್ತಿತ್ತೊ ಏನೊ, ಅವಳು ತಟ್ಟನೆ ಮೆತ್ತಗಾಗುತ್ತಿದ್ದಳು.

"ಹಾಯ್‌ರೆ ಗೋಪಿ, ನಿನ್ನ ಹೊರತು ಹೇಗೆ ಬದುಕಬಲ್ಲೆ! ನಾನಂತು ಶಂಖ ಪಾಷಾಣ ತಿಂದು ಮಲಗಿಬಿಡುವೆ."

ಗೋಪಾಲನ ಮುಖದಮೇಲೆ ಕಾಂತಿ ಹೊರಹೊಮ್ಮುತ್ತಿತ್ತು. ಕಣ್ಣುಗಳು ಪ್ರದೀಪ್ತವಾಗುತ್ತಿದ್ದವು. ಬಳಿಕ ತಟ್ಟನೆ ಅವಳು ತಿರುಗಿ ಬುಸ್ ಎನ್ನುತ್ತಿದ್ದಳು.

"ಯಾಕಲೋ, ನೀನೇನು ತಿಳಿದುಕೊಂಡಿರುವೆ? ಖಬರದಾರ್. ಹೀಗೆ ಅಕ್ಕರತೆ ತುಂಬಿದ ಕಣ್ಣಿಂದ ನೋಡಿದೆ ಅಂದರೆ, ದೇವರಾಣೆಗೂ ನಿನ್ನ ಕಣ್ಣುಗಳನ್ನು ಒಡೆಯುವೆ"—ಅವಳು ಯಾವ ಮಾತೂ ಇಲ್ಲದೆ ಉರಿದೇಳುತ್ತಿದ್ದಳು.

ದೇವರೂ ಸಹ ಹೆಣ್ಣು ಗಂಡಿನ ನಡುವೆ ಎಂಥ ವಿಚಿತ್ರ ಬಿರುಗಾಳಿಯನ್ನು ಜೋಡಿಸಿದ್ದಾನೆ. ಒಂದು ಗುಟುಕು ಅಮೃತದ್ದು ಇದ್ದರೆ ಒಂದು ಗುಟುಕು ವಿಷದ್ದು. ಒಮ್ಮೊಮ್ಮೆ ಕೋಪದಲ್ಲಿ ಪ್ರೇಮವಿದ್ದರೆ ಒಮ್ಮೊಮ್ಮೆ ಪ್ರೇಮದಲ್ಲಿ ಕೋಪ. ಎರಡರಲ್ಲಿಯು ಸ್ವಾದ, ಎರಡರಲ್ಲಿಯು ದುಃಖ!

“ಲೋ, ಗೋಪಿ, ಇಲ್ಲಿ ನಾನು ಸ್ನಾನ ಮಾಡುತ್ತಿದ್ದೇನೆ. ನೀನು ಬೇರೆ ಕಡೆಗೆ ಮುಖ ಮಾಡಿ ಕುಳಿತುಕೊಳ್ಳಬೇಕು. ಈ ಕಡೆ ನೋಡಿದೆ ಅಂದರೆ, ವಾಹ್ ಗುರು, ನಿನ್ನ ಕಣ್ಣುಗಳನ್ನೇ ಇಂಗಿಸಲಿ.”

ಆದರೆ ಗೋಪಾಲ ಪ್ರಾಮಾಣಿಕತೆಯಿಂದ ಮುಖವನ್ನು ಹೊರಳಿಸುವುದಿರಲಿ, ಅಲ್ಲಿಂದ ಎದ್ದು ಕಲ್ಲುಗಳ ಮರೆಯಲ್ಲಿ ಹೋದಾಗ ರಕ್ಷಿಗೆ ಸಿಟ್ಟು ಬಂದಿತು.

ರಕ್ಷಿಯ ಚೀತ್ಕಾರಗಳನ್ನು ಕೇಳಿ ಅವನು ಅವಳನ್ನು ರಕ್ಷಿಸಲು ನೀರಿನಲ್ಲಿ ಜಿಗಿದಾಗ ಅವಳು ಮುಳ್ಳಿನ ಕೊಂಪೆಯಾದಳು. ಅವನ ಮುಖವನ್ನೆಲ್ಲ ಪರಚಿದಳು, ಮನಸಾರೆ ಬೈದಳು, ಅವನ ಕೂದಲಿಗೆ ಜೋತುಬಿದ್ದಳು. ಬಡಪ್ರಾಣಿ ಸ್ವತಃ ಮುಳುಗುತ್ತ ಮುಳುಗುತ್ತ ಬದುಕಿದ.

“ನಿನ್ನ ಪರವೆ ಏನಂತೆ ನನಗೆ? ನನ್ನನ್ನು ಮುಳುಗಲು ಬಿಡಬೇಕಿತ್ತು? ಹಂದಿ, ನನಗೂ ನಿನಗೂ ಯಾವ ಸಂಬಂಧವಿದೆ?”—ಗೋಪಾಲನ ನೆಪಕ್ಕೆ ಪ್ರತಿಯಾಗಿ ಅವನನ್ನು ತೆಗಳಹತ್ತಿದಳು. ಆದರೆ ಅವನು ಲಜ್ಜಿತನಾಗಿ ವಾಪಸ್ ಹೊರಟಾಗ ಮೆತ್ತಗಾದಳು.

“ನಡೆ ಅರಿಷ್ಟ, ಈಗಂತು ನೀನು ನನ್ನನ್ನು ನೋಡಿಯೇಬಿಟ್ಟಿರುವಿ. ನಿನ್ನ ಬಟ್ಟೆಗಳು ಕೂಡ ತೊಯ್ದುಹೋಗಿವೆ. ಅಲ್ಲಿ ಕಲ್ಲುಮೇಲೆ ಒಣಗಲು ಹಾಕು ಮತ್ತು ನೀನು ಕೂಡ ಸ್ನಾನ ಮಾಡಿಬಿಡು. ಬಹಳ ದುರ್ಗಂಧ ಬರುತ್ತಿದೆ ನಿನ್ನಿಂದ. ಆದರೆ ಖಬರದಾರ್, ಈ ಕಡೆ ಬರಬಾರದು. ಸಣ್ಣ ಸೇತುವೆಯ ಕಡೆಯೇ ಇರಬೇಕು....ಹಾಂ.”

ಆದರೆ ಯಾರು ಇರುತ್ತಾರೆ ಚಿಕ್ಕ ಸೇತುವೆಯ ಕಡೆ? ಅಲ್ಲದೆ ಹಲವು ಅಂತರಗಳು ಅಪಾಯಕರವಿರುತ್ತವೆ. ಹೆಚ್ಚಿನ ಸಾಮೀಪ್ಯದಲ್ಲಿ ನಿರ್ಲಜ್ಜತೆಯ ಅಪಾಯವು ಕೂಡ ಕಡಿಮೆ ಇರುತ್ತದೆ. ಷಬರಾತಿ ನೀರಿನಿಂದ ಹೊರಗೆ ಮತ್ತೂ ಸಾಕಷ್ಟು ದೂರದಲ್ಲಿದ್ದ. ಅವನು ಇವರನ್ನು ನೋಡಿದ ಮತ್ತು ಸಾಕಷ್ಟು ಗುಲ್ಲು ಎಬ್ಬಿಸಿದ. ರಕ್ಷಿಯ ತಂದೆಯ ಬಳಿ ಹೋಗಿ ಚಾಡಿ ಹೇಳಿದ.

ಬಹಳ ಕೊಡಕೊಳ್ಳುವಿಕೆ ಆಯಿತು. ವಾಸ್ತವದಲ್ಲಿ ಗೋಪಾಲ ಕೇವಲ ತನ್ನ ತುರುಬಿನಲ್ಲಿ ಸಿಕ್ಕಿಕೊಂಡಿದ್ದ ರಕ್ಷಿಯ ಚಿಕ್ಕ ನತ್ತನ್ನು ಬಿಡಿಸುವುದರಲ್ಲಿ ವ್ಯಸ್ತನಾಗಿದ್ದ. ಷಬರಾತಿ ಹಾಹಾಕಾರ ಎಬ್ಬಿಸಿದ್ದಕ್ಕೆ ಇಡೀ ಊರಿನಲ್ಲಿ ದೊಂಬಿ ಎದ್ದಿತು. ರಕ್ಷಿಯ ಕುಡುಕ ತಂದೆ ಅವಳನ್ನು ಸಾಕಷ್ಟು ಹೊಡೆದನು. ಕೂದಲು ಹಿಡಿದು ಅಂಗಳದ ತುಂಬೆಲ್ಲ ಜಗ್ಗಿದ. ಬಳಿಕ ನೀರು ಮತ್ತು ಊಟ ಕೊಡದೆ ಕೋಣೆಯಲ್ಲಿ ಹಾಕಿದ.

ಗೋಪಾಲ ಸಿಂಗ್ ಎಷ್ಟು ಗಾಬರಿಗೊಂಡನೆಂದರೆ ಅವನಿಗೆ ಬಹಳ ಜ್ವರ ಏರಿತು. ಒಂದು ವೇಳೆ ಅವನಿಗೆ ಆಗ ಟಾಯ್‌ಫಾಯಡ್ ಬರದಿದ್ದಲ್ಲಿ, ಭಾನ ಸಿಂಗ ಕುಡು ಗೋಲಿನಿಂದ ಅವನ ರುಂಡವನ್ನೇ ಹಾರಿಸುತ್ತಿದ್ದ.

ಎರಡು ತಿಂಗಳವರೆಗೆ ಅವನು ಮೃತ್ಯುವಿನೊಂದಿಗೆ ಹೋರಾಡಿದ. ಯಾವ ದಿನ

ರಕ್ಷಿಯ ಮದುವೆ ಜೋಗಿಂದರ್‌ನ ಜೊತೆ ಆಯಿತೊ ಅದೇ ದಿನ ವೈದ್ಯಜಿ ಗೋಪಾಲನು ಬದುಕುವ ಬಗ್ಗೆ ನಿರಾಶೆ ವ್ಯಕ್ತಪಡಿಸಿದ್ದ. ಆದರೆ ಅವನು ಗುಣ ಹೊಂದಿ ಮೆಲ್ಲ ಮೆಲ್ಲಗೆ ನಡೆದು ಬಿಸಿಲಿನಲ್ಲಿ ಕೂಡ್ರುವಷ್ಟು ಯೋಗ್ಯನಾಗುವ ವೇಳೆಗೆ ಜನರು ಕೆರೆಯಲ್ಲಿ ನಡೆದ ಆ ಅಪಘಾತವನ್ನು ಮರೆತುಬಿಟ್ಟಿದ್ದರು. ಹಾಗೆ ಊರಿನ ಇತಿಹಾಸ ದಲ್ಲಿ ಅದೇನು ಅಂಥ ಮಹತ್ತರವಾದ ಮತ್ತು ಭಯಾನಕವಾದ ವಿಷಯವಾಗಿರಲಿಲ್ಲ.

"ಆರೋಗ್ಯವಂತನಾದಮೇಲೆ ನೀನು ರಕ್ಷಿಯ ಮದುವೆಯ ಬಗ್ಗೆ ವ್ಯಸನಪಟ್ಟಿರ ಬಹುದು?"—ವಕೀಲ ಸಾಹೇಬರು ಕೇಳಿದರು. ಗೋಪಾಲ ಯೋಚನೆಯಲ್ಲಿ ಬಿದ್ದ. ಕಾಯಿಲೆಯಿಂದ ಎದ್ದಮೇಲೆ ಬಹಳ ದಿನಗಳಂತು ಅವನು ಊಟ ಮಾಡಲು ಹಂಬಲಿಸು ತ್ತಲೇ ಇದ್ದ. ವೈದ್ಯಜಿ ಕೇವಲ ತಿಳಿ ಬೇಳೆ ಕೊಡಲು ಹೇಳಿದ್ದರು. ಗೋಪಾಲನ ಮನಸ್ಸು ಇಡೀ ಜಗತ್ತನ್ನೇ ನುಂಗಲು ಬಯಸುತ್ತಿತ್ತು. ನಂತರ ಅವನು ಸ್ವಲ್ಪ ಶಕ್ತಿವಂತನಾದಮೇಲೆ ಕೆಲಸಕ್ಕೆ ಹೋಗಹತ್ತಿದ. ರಕ್ಷಿ ಸಿಂಗರಿಸಿಕೊಂಡು ಜಂಬ ಬೀರುತ್ತ, ಗೆಳತಿಯರ ಜೊತೆ ಚೇಷ್ಟೆ ಮಾಡುತ್ತ, ಕೈ ತಿರುವಿ ಆಭರಣಗಳನ್ನು ತೋರಿ ಸುತ್ತಾ ತಿರುಗುತ್ತಿದ್ದಳು. ಅವನು ಕೆರಳಿದ—"ಹೆಂಗಸರ ಜಾತಿ, ನೀಚ ಜಾತಿ." ಇದನ್ನು ಯೋಚಿಸಿ ಅವನ ಹೃದಯಕ್ಕೆ ತಂಪು ತಲುಪಿತು—"ಆಭರಣ, ಬಟ್ಟೆ ಕೊಟ್ಟು ಹೆಣ್ಣನ್ನು ದಾಸಿಯನ್ನಾಗಿ ಮಾಡಿಕೊ."

ಮೇರೇ ತೊ ಗಿರಿಧರ ಗೋಪಾಲ
ದೂಸರಾ ನ ಕೋಯೀ।

(ನನಗಂತು ಗಿರಿಧರ ಗೋಪಾಲ ಒಬ್ಬನೆ, ಇನ್ನೊಬ್ಬರು ಯಾರು ಇಲ್ಲ.)

ಎಷ್ಟು ಬಳುಕಿ ತೂರಾಡಿ ಹಾಡುತ್ತಿದ್ದಳು! ಮೊದಲಿಗೆ, "ಹಾಯ್ ಗೋಪಿ, ನೀನು ಇಲ್ಲದೆ ನಾನು ಹೇಗೆ ಬದುಕಲಿ?" ಅನ್ನುತ್ತಿದ್ದಳು. ದುರ್ದೈವಿ, ಅರಿಷ್ಟ ಮುಂಡೆ, ಈಗ ಹಾಯಾಗಿಯೇ ಇದ್ದಾಳೆ.

"ನಡೆ, ನಡೆ, ನೀನೆಲ್ಲಿಯ ಗಿರಿಧರನಾಗಿ ಕುಳಿತಿರುವೆ! ಮೂರ್ಖ, ನೀನಂತು ಶುದ್ಧ ಗೋಪಾಲನಿರುವೆ....ನೋಡು ಮತ್ತೆ, ನೀನು ನನಗಂತು ಯಾರು ಅಲ್ಲ."

ಅವಳು ಒಂದು ದಿನ ಮೊರವನ್ನು ಬೇಡಲು ಬಂದಿದ್ದಾಗ ಗೋಪಾಲನನ್ನು ಚುಡಾ ಯಿಸಹತ್ತಿದಳು. ಗೋಪಾಲನ ಕಣ್ಣುಗಳು ಅದೇಕೆ ತುಳುಕಿದವೊ ಏನೊ. ಅವಳು ವಿನೋದದಿಂದ, ಬಿದ್ದು ಬಿದ್ದು ನಗಹತ್ತಿದಳು.

"ಹಾಯ್ ನಾನು ಸತ್ತೆ. ಅರೆ, ಗಂಡಸರು ಎಲ್ಲಾದರೂ ಅಳುತ್ತಾರೆಯೇ? ಗಂಡಸಂತು ಇತರರನ್ನು ಅಳಿಸುತ್ತಾನೆ."

"ಜೋಗಿಂದರ್ ನಿನ್ನನ್ನು ಮನಸಾರೆ ಅಳಿಸುವನು"—ಅವನು ಶಪಿಸಿದ.

"ಅಳಿಸಿದನೆಂದರೆ ಅಳುತ್ತೇನೆ, ನಗಿಸಿದರೆ ನಗುತ್ತೇನೆ, ನನ್ನ ಸ್ವಾಮಿ ಇದ್ದಾನಲ್ಲ."

ಅವಳ ಸಣ್ಣ ಸಣ್ಣ ಬಿಳಿ ಹಲ್ಲುಗಳು ಅಕ್ಕಿಯಂತೆ ಚಲ್ಲಾಪಿಲ್ಲಿಯಾಗುವಹಾಗೆ ಅವಳ ಮುಖದಮೇಲೆ ಜೋರಾಗಿ ಏಟು ಕೊಡುವ ಮನಸ್ಸಾಯಿತು ಗೋಪಾಲನಿಗೆ. ಆದರೆ ಅವನು ಹೆಂಗಸಿನಮೇಲೆ ಕೈ ಎತ್ತುವುದನ್ನು ಕಲಿತಿದ್ದಿಲ್ಲ. ಅವನು ಎದ್ದು ಹೊರಟಕೂಡಲೆ ರಕ್ಷಿ ಹೆದರಿದಳು.

"ಅರೆ ಗೋಪಾಲಜಿ, ಸಿಟ್ಟಾದಿರೇನು? ಬೇಡಿ, ಸಿಟ್ಟಾಗಬೇಡಿ"—ಅವಳು ಅವನ ಕಾಲುಗಳನ್ನು ತೊಡರಿಕೊಂಡಳು—"ಹಾಯ್, ನೀವು ನಿಜವಾಗಿ ಸಿಟ್ಟಿಗೆದ್ದರೆ, ನನ್ನ ಪ್ರಾಣ ಹಾರಿಹೋಗುತ್ತದೆ. ಅರೆ, ನನ್ನ ಜಡೆಯನ್ನು ಕಿತ್ತು, ಎರಡು ಏಟು ಹೊಡೆದುಕೊ, ಆದರೆ ಕೋಪಗೊಳ್ಳಬೇಡ. ಗೋಪಿ, ನೀನೇ ನನ್ನ ಸರ್ವಸ್ವ"— ಅವಳು ಭಾರವಾದ ಧ್ವನಿಯಲ್ಲಿ ಹೇಳಿದಳು—"ಮದುವೆಯಂತು ಬೇರೆ ವಿಷಯ. ಗೆಳೆಯ, ನಿನ್ನದು ನನ್ನದು ಜನ್ಮ ಜನ್ಮದ ಸಂಬಂಧವಿದೆ. ನೀನೆ ನನ್ನ ಗಿರಿಧರ ಗೋಪಾಲ. ನೀನಿಲ್ಲದಿದ್ದರೆ ಬೇರೆ ಯಾರೂ ಇಲ್ಲ. ನೋಡು, ಗೋಪಿಯಾ, ಎಂದಾದರು ಯಾವುದೇ ಸಂಕಟ ಬಂದಾಗ ನಾನು ನಿನ್ನನ್ನೇ ಕೂಗುವೆನು. ಆಗ ನೀನು ನನ್ನ ರಕ್ಷಣೆಗಾಗಿ ನಿನ್ನ ಚಕ್ರವನ್ನು ತಿರುಗಿಸುತ್ತ ಬರಬೇಕು....ಬರುವೆಯಲ್ಲವೆ? ವಚನ ಕೊಡು."

ಗೋಪಾಲ ಅವಳನ್ನು ಕೊಡಹಿಕೊಂಡು ಮೇಲಿನ ಕೋಣೆಯಲ್ಲಿ ಹೋಗಿ ಬಿದ್ದುಕೊಂಡ. ಅವನು ರಕ್ಷಿಗೆ ಯಾವ ವಚನವನ್ನೂ ಕೊಡಲಿಲ್ಲ. ಆದರೆ ವಚನವನ್ನು ಕೊಡುವುದು, ಬಿಡುವುದು ನಮ್ಮ ವಶದಲ್ಲಿ ಇದೆಯೆ?

ಅವಳು ಬಂದಾಗಲೆಲ್ಲ ತನ್ನ ಪತಿಯ ಗುಣಗಾನ ಮಾಡುತ್ತಿದ್ದಳು.

"ಹಾಯ್ ರಾಮ...ನನ್ನನ್ನು ಎಷ್ಟು ಪ್ರೀತಿ ಮಾಡುತ್ತಾರೆ ಅಂದ್ರೆ....ಅಬ್ಬ.... ಸಾಕು"—ಅವಳು ಕಣ್ಣುಗಳಲ್ಲಿ ಆನಂದವನ್ನು ಸೂಸುತ್ತ ಹೇಳುತ್ತಿದ್ದಳು. ಗೋಪಾಲನ ಮೂಗು ಕೆಂಪು ಆಯಿತೆಂದರೆ ಬಹಳ ನಗುತ್ತಿದ್ದಳು.—"ಅರೇ ಗೋಪಿಯಾ, ನೀನಂತು ನನ್ನ ಗಂಡನ ಬಗ್ಗೆ ಅಸೂಯೆಪಡುತ್ತಿರುವೆ"—ಅವಳು ಚುಡಾಯಿಸುತ್ತಿದ್ದಳು.

"ಅವನು ನಿನ್ನನ್ನು ಎಕ್ಕಡದಿಂದ ಹೊಡೆಯುತ್ತಾನಲ್ಲ, ಆಗ?"

"ಹಾಂ! ಹೊಡೆಯುತ್ತಾರೆ. ಆದರೆ ಅಷ್ಟೆ ಪ್ರೀತಿಸುತ್ತಾರೆ"—ಅವಳು ಬಾಜಾರಿ ಹೆಂಗಸರ ಹಾಗೆ ಕಣ್ಣು ಮಿಟುಕಿಸುತ್ತ, "ಎಲ್ಲ ಗಂಡಂದಿರು ತಮ್ಮ ಹೆಂಡಂದಿರನ್ನು ಹೊಡೆಯುತ್ತಾರೆ. ನಿನ್ನ ಜೊತೆ ಮದುವೆಯಾಗಿದ್ದರೆ ನೀನು ಬಿಡುತ್ತಿದ್ದೆ ಏನು? ನೀನು ಕೂಡ ಹೊಡೆಯುತ್ತಿದ್ದಿ, ಬಡಿಯುತ್ತಿದ್ದಿ."

"ನಾನು ಹೊಡೆಯುತ್ತಿದ್ದಿಲ್ಲ, ಬಡಿಯುತ್ತಿದ್ದಿಲ್ಲ."

"ನಿಜವಾಗಿ? ಎಂದಾದರೂ, ಪ್ರೀತಿಯಿಂದಾದರೂ ಏಟು ಹಾಕುತ್ತಿದ್ದಿಲ್ಲವೆ?"

ಆದರೆ ರಕ್ಷಿಯ ಈ ನಗೆ ಸ್ವಲ್ಪೇ ದಿನಗಳದ್ದಾಗಿತ್ತು. ಒಂದು ವರ್ಷ ಕೂಡ ಆಗಿರಲಿಲ್ಲ. ಅಷ್ಟರಲ್ಲಿ ಜೋಗಿಂದರ್ ಎಷ್ಟೋ ದಿನಗಳವರೆಗೆ ಮನೆಯಿಂದ ಮಾಯವಾಗಿ ಇರಹತ್ತಿದ. ಅಮಲಿನಲ್ಲಿ ಮೈಮರೆತು ಬಂದು ಅವಳನ್ನು ಎಷ್ಟು ಕೆಟ್ಟ ರೀತಿಯಲ್ಲಿ ತಿರುತಿರುಗಿ ಬಡಿಯುತ್ತಿದ್ದನೆಂದರೆ ಇಡೀ ಮೊಹಲ್ಲಾ ಎಚ್ಚರಗೊಳ್ಳುತ್ತಿತ್ತು. ನಾಲ್ಕೂ ಕಡೆಯಿಂದ ಬೈಗಳು ಸುರಿಯುತ್ತಿದ್ದವು. ನಂತರ ಮೌನವಾಗುತ್ತಿತ್ತು. ಮೂರನೆಯ, ನಾಲ್ಕನೆಯ ದಿವಸ ಪುನಃ ಅದೇ ತಮಾಷೆ ನಡೆಯುತ್ತಿತ್ತು. ಬಳಿಕ ಅದು ದಿನಂಪ್ರತಿಯ ಮಾಮೂಲು ಆಯಿತು. ಇತ್ತ ಅರ್ಧ ರಾತ್ರಿ ಕಳೆಯಿತು, ಅತ್ತ ರಕ್ಷಿಯ ಚೀತ್ಕಾರಗಳು ಕೇಳಿಬರುತ್ತಿದ್ದವು. ಮೊಹಲ್ಲಾದವರಿಗೆ ಇದು ಅಭ್ಯಾಸವಾಗಿಬಿಟ್ಟಿತ್ತು. ಬಹಳಷ್ಟು ಗಲಾಟೆಯಾಯಿತೆಂದರೆ ಮಾತ್ರ ಸ್ವಲ್ಪ ಬೆಚ್ಚಿಬೀಳುತ್ತಿದ್ದರು. ಆದರೆ ರಕ್ಷಿಯ ಚೀತ್ಕಾರಗಳು ಕಾಯ್ದ ಸಲಾಕಿಗಳಂತೆ ಗೋಪಿಯ ಕಿವಿಗಳನ್ನು ಗಾಸಿಗೊಳಿಸುತ್ತಿದ್ದವು.

ರಕ್ಷಿಯ ಆಭರಣಗಳು ಒಂದೊಂದಾಗಿ ಅವಳ ದೇಹದಿಂದ ಮಾಯವಾಗಹತ್ತಿದವು. ಜೋಗಿಂದರ್ ವಾರಗಳವರೆಗೆ ಮಾಯವಾಗಹತ್ತಿದ್ದ. ಅವನು ನೌಕರಿಗಳನ್ನು ಸಹ ಅನೇಕ ಸಲ ಬದಲಿಸಿದ್ದ. ರಕ್ಷಿ ಜಡ್ಡಿನಿಂದ ಹಾಸಿಗೆಯನ್ನೇ ಹಿಡಿದಳು. ಗರ್ಭಪಾತವಾಗಿ, ಸ್ತ್ರೀಯರಿಗೆ ಸಂಬಂಧಿಸಿದ ಕೆಲವು ತೊಂದರೆಗಳು ತಲೆತೋರಿದ್ದವು. ಈಗ ಅವಳು ಮನೆಯಿಂದ ಹೊರಬೀಳುವದನ್ನು ಕೂಡ ಕಡಮೆ ಮಾಡಿದ್ದಳು.

ಯಾವನೊ ಗಂಡನು ತನ್ನ ಹೆಂಡತಿಯನ್ನು ಹೊಡೆದರೆ, ಬಡಿದರೆ, ಇಲ್ಲವೆ ಉಪೇಕ್ಷೆ ಮಾಡಿದರೆ ಜನರು ಹೆಂಡತಿಯನ್ನೇ ದೋಷಿಯೆಂದು ತಿಳಿಯುತ್ತಾರೆ. ಜನರು ರಕ್ಷಿಯಲ್ಲಿ ಇಲ್ಲದ ಐಬುಗಳನ್ನು ಕಂಡರು. ಮನ ಬಂದಂತೆ ಅವಳ ಮುಖದಮೇಲೆಯೆ ಅನ್ನಹತ್ತಿದರು.

ಒಂದು ದಿನ ಅವಳು ಕೆರೆಯಿಂದ ನೀರು ತುಂಬಿಕೊಂಡು ಹಿಂದಿರುಗುತ್ತಿದ್ದಳು. ಆಗ ಗೋಪಾಲನ ಭೆಟ್ಟಿಯಾಯಿತು. ಅವಳ ಬಟ್ಟೆಗಳು ಮಲಿನವಾಗಿದ್ದವು ಮತ್ತು ಹರಿದಿದ್ದವು. ಕೂದಲು ಒಣಗಿತ್ತು ಮತ್ತು ಮುಖವು ಹಳದಿಯಾಗಿತ್ತು. ಅವಳು ಬಕೀಟುಗಳನ್ನು ಎತ್ತಿಕೊಂಡು ಹೊರಟರೆ ಹೆಜ್ಜೆ ಸರಿಯಾಗಿ ಬೀಳುತ್ತಿರಲಿಲ್ಲ. ಗೋಪಾಲನ ರಕ್ತವು ಕುದಿಯಹತ್ತಿತು. ಅವನು ಅವಳ ಎದುರು ಹೋಗಿ ನಿಂತ.

"ಗೋಪಿ"—ಬಹಳ ಅಹಂಕಾರದಿಂದ ಅವಳು ಅಂದಳು—"ನನ್ನ ದಾರಿಯಿಂದ ದೂರ ಸರಿ." ಅವಳು ತೇಕುತ್ತಿದ್ದಳು. ಆದರೆ ಅವಳು ಬಕೀಟುಗಳನ್ನು ಬಿಡಲಿಲ್ಲ.

"ನಿನ್ನೆ ರಾತ್ರಿ ನಿನ್ನ ಗಂಡನ ಪ್ರೀತಿಯ ಧ್ವನಿಗಳು ಬಹಳ ಜೋರು ಜೋರಾಗಿ ಕೇಳುತ್ತಿದ್ದವು"—ಗೋಪಾಲ ವ್ಯಂಗ್ಯವಾಡಿದ.

"ಅದಕ್ಕೆ ನಿನಗೇನಂತೆ! ನೀನು ಯಾರು?"

"ನಾನು ನಿನಗೆ ಯಾರೂ ಅಲ್ಲವೆ ರಕ್ಷಿ?"

"ಇಲ್ಲ"—ರಕ್ಷಿ ಉಕ್ಕುತ್ತಿದ್ದ ಕಣ್ಣೀರಿನ ಭಯದಿಂದ ಕೊರಳು ಹೊರಳಿಸಿದಳು.
"ಗಿರಿಧರ ಅಲ್ಲ....ಗೋಪಾಲನೂ ಅಲ್ಲ?"
"ನನಗೆ ಹೋಗಲು ಬಿಡು, ಗೋಪಿಯಾ."
"ನನ್ನಿಂದ ಮರೆಮಾಚುತ್ತಿರುವೆಯಾ?"
"ಹೇಳುವುದರಿಂದ ಏನು ಲಾಭ? ಅವನಿಗೆ ಯಾರು ಏನು ಮಾಡಬಲ್ಲರು?"
"ನಾನು ಆ ಹರಾಮನ ಕತ್ತು ಹಿಚುಕಬಲ್ಲೆ."
"ಅಯ್ಯೊ ಅಮ್ಮ! ನೀನು ನನ್ನನ್ನು ವಿಧವೆ ಮಾಡುವೆ ಏನೋ?"
"ಹಾಂ! ಈಗ ನಿನ್ನ ಚೀತ್ಕಾರಗಳನ್ನು ನನ್ನಿಂದ ಕೇಳಲು ಸಾಧ್ಯವಿಲ್ಲ."
"ನೀನು ನಿನ್ನ ಕಿವಿಗಳಲ್ಲಿ ಅರಳೆ ತುರುಕಿಕೊ."
"ನಾನು ಅವನ ಗಂಟಲಲ್ಲಿ ಕೃಪಾಣವನ್ನು ಇಳಿಸುವೆ."
—ಗೋಪಾಲ ಕಂಪಿಸಹತ್ತಿದ.

"ಹಾಯ್ ರಾಮ! ಒಳ್ಳೆಯದು. ಇನ್ನುಮೇಲೆ ನಾನು ಚೀರುವುದಿಲ್ಲ. ಬಾಯಿಗೆ ಕೀಲಿ ಹಾಕಿಕೊಳ್ಳುತ್ತೇನೆ."

"ನಾನು ಆಗಲೂ ನಿನ್ನ ಚೀತ್ಕಾರಗಳನ್ನು ಕೇಳಬಲ್ಲೆ."

"ನಾನು ಕೂಗಲಿ ಅಥವಾ ಬಿಡಲಿ. ಗೋಪಾಲ ಚಕ್ರವನ್ನು ತೆಗೆದುಕೊಂಡು ಬರಬೇಕಾಗುತ್ತದೆ." ಅವಳು ಕಲ್ಲುಮೇಲೆ ಕುಳಿತು ನಗಹತ್ತಿದಳು. ಬಳಿಕ ಉದಾಸಳಾದಳು—"ಆ ದುರ್ದೈವಿ ಏನು ಮಾಡಬಲ್ಲನು? ಆ ರಂಡಿ ಬಹಳ ನಿರ್ದಯಿಯಾಗಿದ್ದಾಳೆ. ಮುನಿಸುಗೊಂಡಳೆಂದರೆ ಅವನನ್ನು ಹೊರಗೆ ಹಾಕಿ, ಕೊಂಡಿಯನ್ನು ಏರಿಸಿಬಿಡುತ್ತಾಳೆ. ಆಮೇಲೆ ಗಂಡಸು ತನ್ನ ಸಿಟ್ಟನ್ನು ಇನ್ನು ಯಾರಮೇಲೆ ಇಳಿಸಿಕೊಳ್ಳಬೇಕು?"

"ಒಂದು ವೇಳೆ ಈ ಸಲ ಅವನು ನಿನ್ನನ್ನು ಹೊಡೆದನೆಂದರೆ ನಾನು ಅವನನ್ನು ಮುಗಿಸಿಬಿಡುವೆ"—ಅವನು ಸಿಟ್ಟಿನಿಂದ ಎದ್ದು ಹೊರಡಲು ಸಿದ್ಧನಾದಾಗ ರಕ್ಷಿ ಅವನ ಕಾಲುಗಳನ್ನು ಹಿಡಿದುಕೊಂಡಳು. ಅವಳ ಈ ಸ್ಪರ್ಶದಿಂದ ಅವನ ದೇಹದ ಎಲ್ಲ ಶಕ್ತಿಯು ಉಡುಗಿ ನೀರಾಯಿತು.

"ಗೋಪಿ"—ಅವಳು ಮಂದ ಸ್ವರದಲ್ಲಿ ಅಂದಳು. ಗೋಪಾಲನ ಮನಸ್ಸು ಮುಳುಗಹತ್ತಿತು.

"ಏನು?"—ಅವನು ಸಿಡುಕಿನಿಂದ ಕೇಳಿದ.

"ನಿನ್ನ ರೂಪವನ್ನು ನೋಡಿ ಮನಸ್ಸು ತುಂಬುತ್ತಿಲ್ಲ"—ಅವಳು ಹಸಿದ ಕಣ್ಣುಗಳನ್ನು ಅವನ ಮುಖದಮೇಲೆ ಸ್ಥಿರಗೊಳಿಸಿ ಅಂದಳು.

"ನನಗೆ ಹೋಗಲು ಬಿಡು, ರಕ್ಷಿ"—ಗೋಪಾಲ ವಿನಂತಿ ಮಾಡಿದ.

"ಅರೆ, ಈಗ ನೀನು ಓಡಿ ಎಲ್ಲಿಗೆ ಹೋಗುವೆ ಗೋಪಿಯಾ?"—ಅವಳು ಅವನ

ಕಾಲು ಬಿಟ್ಟು, ಅವನ ಕೈಗಳನ್ನು ತನ್ನ ಬರಿದಾದ ಉಡಿಯಲ್ಲಿ ಇಟ್ಟುಕೊಂಡಳು. ಅದು ಕೆಂಡಗಳಿಂದ ತುಂಬಿ ಕೆಲವೇ ದಿನಗಳಾಗಿದ್ದವು; "ನನ್ನ ನಿನ್ನ ಸಂಬಂಧವು ಸುಲಭವಾಗಿ ಮುರಿದುಹೋಗುವ ಸಂಬಂಧವಲ್ಲ. ನಿನ್ನ ಮನ ಬಂದಿದ್ದಲ್ಲಿ ಹೊರಟು ಹೋಗು, ಆದರೆ ನನ್ನ ಮನದೊಳಗಿಂದ ಹೇಗೆ ಹೋಗಬಲ್ಲೆ!"

ಗೋಪಾಲ ಸಿಂಗ್ ಮುಂದಕ್ಕೆ ಬಾಗಿ ತಲೆಯನ್ನು ಅತ್ತ ಇತ್ತ ಕುಲಕಹತ್ತಿದ. ಯಾವದೋ ಇಕ್ಕಟ್ಟಾದ ರಂಧ್ರದಲ್ಲಿ ಅದು ಸಿಕ್ಕಿಕೊಂಡಿದೆ ಏನೊ ಅನ್ನುವಂತೆ.

"ಮುನಷಿಜಿ, ಕಿವಿ ಕೆದರುವದರಿಂದ ಅವಕಾಶವಿದ್ದರೆ, ಹಿಂದಿನ ಪೇಷಿಯ ಫಾಯಲ್ ಸರಿಸಿರಿ"—ವಕೀಲ ಸಾಹೇಬರು ನಿಟ್ಟುಸಿರುಬಿಟ್ಟರು—"ಸರದಾರಜಿ, ಹುಡುಗನು ಗುನುಗುನು ಮಾಡಲು ತತ್ಪರನಾಗಿದ್ದಾನೆ. ರಕ್ಷಿ ಇವನನ್ನು ತನ್ನ ಮೋಹದಲ್ಲಿ ಬಂಧಿಸಿಟ್ಟಿದ್ದಳು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ."

"ಇಲ್ಲ ವಕೀಲ ಸಾಹೇಬ, ಇಲ್ಲ"—ಗೋಪಾಲ ದಣಿದುಬಿಟ್ಟಿದ್ದ.

"ಅರೇ ಭಾಯಿ, ಎಷ್ಟೋ ಗಂಡಸರು ಸೆರೆ ಕುಡಿಯುತ್ತಾರೆ ಮತ್ತು ಹೆಂಡತಿಯರನ್ನು ಸಹ ಹೊಡೆಯುತ್ತಾರೆ. ಆದರೆ ಯಾರ ನಿದ್ರೆಯೂ ಹಾರಿಹೋಗುವದಿಲ್ಲ."

"ಆದರೆ ಅವಳ ಚೀತ್ಕಾರಗಳು ನನ್ನನ್ನು ಹುಚ್ಚನನ್ನಾಗಿ ಮಾಡುತ್ತಿದ್ದವು ವಕೀಲ ಸಾಹೇಬ, ಆದ್ದರಿಂದಲೇ ನಾನು ಜೋಗಿಂದರ್‌ನನ್ನು ಮುಗಿಸಿಬಿಡುತ್ತೇನೆ ಎಂದು ಶಪಥ ಮಾಡಿದೆ. ಆದರೆ ನಾನು ಬಹಳ ಅಂಜುಬುರುಕನಾಗಿ ಹೊರಬಿದ್ದೆ"—ಗೋಪಾಲ ಸಿಂಗ್ ತನ್ನ ತಲೆಯನ್ನು ಎರಡೂ ಕೈಗಳಿಂದ ಹಿಡಿದುಕೊಂಡ.

ಅವಳ ಚೀತ್ಕಾರಗಳು ಕಾರ್ಗತ್ತಲೆಯನ್ನು ಭೇದಿಸುತ್ತಿದ್ದವು. ಜನರು 'ದಿನದ ಪರಿಶ್ರಮವನ್ನೆಲ್ಲ ದಣಿಸಿಬಿಡುವ ಅಮಲಿನಲ್ಲಿ ಮುಳುಗಿ ಉನ್ಮತ್ತರಾಗಿದ್ದರು. ಆದರೆ ಒಬ್ಬ ಭಾಗ್ಯಹೀನನು ಮಾತ್ರ ಎಚ್ಚರವಾಗಿದ್ದನು.

ಅವನು ಬಾಗಿಲಿನ ಕೊಂಡಿಯನ್ನು ಕಟ್‌ಕಟ್ ಮಾಡಿದ. ಬಾಗಿಲು ತೆರೆದೇ ಇತ್ತು. ರಕ್ಷಿಯನ್ನು ಜೋಗಿಂದರ್ ಚಾರಪಾಯಿಯ ನಾಲ್ಕೂ ಕಡೆಗೆ ಓಡಿಸುತ್ತಿದ್ದ ದೃಶ್ಯ ಕಾಣಿಸಿತು. ರಕ್ಷಿಯ ದೇಹದ ಮೇಲೆ ಒಂದು ಎಳೆಯೂ ಉಳಿದಿರಲಿಲ್ಲ. ಅವಳ ಚಂದನದ ದೇಹವು ನೀಲಿಯಾಗುತ್ತಲಿತ್ತು, ಹಾವುಗಳು ಕಚ್ಚಿವೆ ಏನೋ ಅನ್ನುವ ಹಾಗೆ. ಗೋಪಾಲನನ್ನು ನೋಡಿ ಜೋಗಿಂದರ್‌ನ ಕಣ್ಣುಗಳು ಕೆಂಪಾಗಹತ್ತಿದವು.

"ನೀನು ಯಾರು ತಮ್ಮ?"—ಅವನು ಬಹಳ ಪ್ರೀತಿಯಿಂದ ಕೇಳಿದ.

"ಅವಳನ್ನು ಹೊಡೆಯಬೇಡ"—ಗೋಪಾಲ ವಿನಂತಿಸಿದ.

"ಯಾಕೆ?"—ಅವನು ಸಿಟ್ಟಿಗೆದ್ದ—"ನೀ ಏನಾದರೂ ಅವಳ ಮಿಂಡನೊ?"

"ಅಲ್ಲ."

"ಅರೆ, ನೀನು ಇವಳ ಮಿಂಡನಲ್ಲವೆ? ಯಾಕೆ? ನೀನೇಕೆ ಇವಳ ಮಿಂಡನಲ್ಲ? ನಾನು ಕೂಡ ಇವಳ ಮಿಂಡನಲ್ಲ. ಇವಳಿಗೆ ಯಾರೂ ಮಿಂಡರಿಲ್ಲ. ಇವಳ ದೇಹದಿಂದ ಮೂತ್ರದ ವಾಸನೆ ಬರುತ್ತಿದೆ. ಒಂದಿಷ್ಟು ಕೂಡ ಸುವಾಸನೆ ಇಲ್ಲ. ಸ್ವಲ್ಪ ಮೂಸಿ ನೋಡು. ಅರೆ, ನಾನು ಹೇಳುತ್ತಿರುವೆನಲ್ಲ, ಮೂಸಿ ನೋಡು."

"ನೀನು ಅಮಲಿನಲ್ಲಿರುವೆ, ಜೋಗಿಂದರ್."

"ಒಳ್ಳೆಯದು, ಅವಳನ್ನು ಚುಂಬಿಸು. ಅಗದೀ ಕಕ್ಕಸದಂಥ ವಾಸನೆ ಬರುತ್ತದೆ. ಅರೆ, ನೀನು ನನ್ನ ತಮ್ಮನಿರುವೆ. ನೀನು ಅವಳನ್ನು ಮುದ್ದಿಸು. ನಾನು ಹೇಳುತ್ತಿರುವೆನಲ್ಲ."

"ಹರಟೆ ನಿಲ್ಲಿಸು"—ಗೋಪಾಲನ ರಕ್ತ ಕುದಿಯಹತ್ತಿತು. ಅವನು ಏರಿಹೋಗಿ ಜೋಗಿಂದರ್‌ನ ಕೃಪಾಣವನ್ನು ಹಿಡಿದುಕೊಂಡು ಕುಲಕಹತ್ತಿದನು. ಆದರೆ ಅವನು ಒಂದು ಇಂಚು ಕೂಡ ಅಲುಗಾಡಲಿಲ್ಲ. ಬಂಡೆಯ ಹಾಗೆ ನಿಂತುಕೊಂಡು ನಗುತ್ತಲಿದ್ದ. ಗೋಪಾಲನು ಒಂದು ನೊಣದ ಹಾಗೆ ಝೇಂಕರಿಸಹತ್ತಿದ. ಆದರೆ ಜೋಗಿಂದರ್ ಮೆಲ್ಲಗೆ ಆ ನೊಣವನ್ನು ದೂರ ಜಾಡಿಸಿದ ಮತ್ತು ಬಾಗಿಲು ಮುಚ್ಚಿಕೊಂಡ. ಪುನಃ ಚೀತ್ಕಾರಗಳು ಎದ್ದವು ಮತ್ತು ಗೋಪಾಲನ ಮೆದುಳಿನಲ್ಲಿ ಸುತ್ತಿಗೆಯ ಹಾಗೆ ಜಜ್ಜತೊಡಗಿದವು.

ಆ ಅವಧಿಯಲ್ಲಿಯೇ ಗೋಪಾಲನಿಗೆ ಇಂದೂರದಿಂದ ಒಂದು ಸಂಬಂಧವು ಬಂದಿತ್ತು. ಅವನು ತನ್ನ ತಂದೆಯ ಜೊತೆ ತನ್ನ ವಧೂವನ್ನು ನೋಡಲು ಹೋದ. ಅಲ್ಲಿ ನಿರ್ಮಲ್‌ಳ ಮುಗುಳ್ನಗೆಗಳಿದ್ದವು, ರಕ್ಷಿಯ ಚೀತ್ಕಾರಗಳಿರಲಿಲ್ಲ. ವಿವಾಹ ನಿಶ್ಚಯದ ಬಳಿಕ ಅವರು ಮರಳಿದಮೇಲೆ ಎಲ್ಲರೂ ಶುಭ ಕೋರಲು ಬಂದರು. ರಕ್ಷಿ ಆ ದಿನಗಳಲ್ಲಿ ಕುಣಿಯುತ್ತ ಅಲೆದಳು. ಅವಳು ಆನಂದದಿಂದ ಇದ್ದದ್ದು ನೋಡಿ ಗೋಪಾಲ ಕೂಡ ಆನಂದಪಟ್ಟ.

"ಹೇಗೆ ಅನಿಸಿತು?"—ಎಲ್ಲರೂ ಅತ್ತಿತ್ತ ಆದ ಬಳಿಕ ರಕ್ಷಿ ಗೋಪಾಲನನ್ನು ಕೇಳಿದಳು.

"ಚೆನ್ನಾಗಿ ಅನಿಸಿತು."

"ನಿರ್ಮಲ್ ರಾಣಿಯ ಬಗ್ಗೆ ಹೇಳು—ದಪ್ಪವಿಲ್ಲ ತಾನೆ?"

"ಇಲ್ಲ. ಸರಿಯಾಗಿ ಇದ್ದಾಳೆ."

"ಎತ್ತರದಲ್ಲಿ ಉದ್ದವಾಗಿದ್ದಾಳೊ ಅಥವಾ ಗಿಡ್ಡಳೊ?"

"ನನ್ನ ಗದ್ದದವರೆಗೆ ಬರುತ್ತಾಳೆ."

"ಹಾಯ್ ಹಾಯ್! ಕೈಕಾಲುಗಳು ಹೇಗಿವೆ?"

"ಬಹಳ ಬೆಳ್ಳಗೇನೂ ಇಲ್ಲ, ಆದರೆ ಚಿಕ್ಕವಾಗಿವೆ."

"ಮತ್ತೆ ನಡು? ನಡುವಂತು ತೆಳ್ಳಗೆ ಇರಬಹುದು."

"ಈಗ ನನಗೇನು ಗೊತ್ತು, ನಡು ತೆಳ್ಳಗಿದೆಯೊ ದಪ್ಪವಿದೆಯೊ? ನಾನೇನು ಅಳೆದಿರುವೆನೆ?"

"ಅರೆ ಭೋಲೆನಾಥ, ನಡುವಿನದೇ ಎಲ್ಲ ಆಟವಿರುವದು. ಈ ಸಲ ಹೋದರೆ ಇಡೀ ದೇಹವನ್ನೇ ಅಳೆಯಬೇಕು....ಹಾಂ?".

"ನೀನು ನಿನ್ನ ಗಂಡನನ್ನು ಅಳೆದಿದ್ದೇನು?"

"ಅವನದೇಕೆ ಈ ಸಮಯದಲ್ಲಿ ಪ್ರಸ್ತಾಪ?"—ಅವಳು ಮುನಿದುಕೊಂಡಳು—"ನೀನು ನಿನ್ನದನ್ನು ಹೇಳು—ಅವಳನ್ನು ಮುದ್ದಿಸಿದೆ ತಾನೆ?"

ಗೋಪಾಲ ತಲೆಯಲ್ಲಾಡಿಸಿ ಮುಗುಳುನಕ್ಕನು.

"ಹಾಂ. ಮಜಾ ಅನಿಸಿರಬೇಕಲ್ಲ. ನನ್ನ ಗಂಡನು ಕೂಡ ಪ್ರೀತಿ ಮಾಡುತ್ತಿದ್ದಾಗ ಇಡೀ ಪ್ರಾಣವೆಲ್ಲ ತುಟಿಗಳಲ್ಲಿ ಬರುತ್ತಿತ್ತು."

"ಈಗ ಪ್ರೀತಿ ಮಾಡುವದಿಲ್ಲವೆ?"—ಗೋಪಾಲ ಕೆಣಕಿದ.

"ಹೋಗಲಿ ಬಿಡು, ನಾನಂತು ನತದೃಷ್ಟೆ."—ಅವಳು ನಿಟ್ಟುಸಿರುಬಿಟ್ಟಳು.

"ಗೋಪಾಲ ಸಿಂಗ, ರಕ್ಷಿ ಕೋರ್ಟಿನಲ್ಲಿ ನಿನ್ನ ಜೊತೆ ತನ್ನ ಅನುಚಿತ ಸಂಬಂಧ ವಿತ್ತೆಂದು ಬಯಾನ್ ಕೊಡಲು ಸಿದ್ಧಳಿದ್ದಾಳೆ."—ವಕೀಲ ಸಾಹೇಬರು ಪುನಃ ಹೇಳಿದರು.

"ದುಷ್ಟೆ, ಹಂದಿಮಗಳು!"—ಗೋಪಾಲ ಉರಿದೆದ್ದ—"ಹಾದರಕ್ಕೆ ಹುಟ್ಟಿ ದವಳು." ಅವನು ತನ್ನ ಸ್ವಂತ ರಕ್ಷಿಯಮೇಲೆ ಇಷ್ಟು ದೊಡ್ಡ ಪಾಪದ ಕಳಂಕ ವನ್ನು ಹಚ್ಚುತ್ತಿದ್ದ—ಆ ರಕ್ಷಿಯನ್ನು ಬೈಯಹತ್ತಿದ.

ಆ ಚೀತ್ಕಾರಗಳು ಮೊದಲಿಗಿಂತಲೂ ಹೆಚ್ಚು ಭಯಾನಕವಾಗುತ್ತ ಹೋದವು. ರಾತ್ರಿಯ ನೀರವತೆಯನ್ನು ಸೀಳುತ್ತಿರುವ ಭೂತಿನಿಯರ ಹಾಗೆ ಹೊರ ಹೊಮ್ಮು ತ್ತಿದ್ದವು. ನಂತರ ಬಿಕ್ಕುವಿಕೆಗಳಲ್ಲಿ ಮುಳುಗುತ್ತಿದ್ದವು. ಪುನಃ ಹೊರ ಹೊಮ್ಮು ತ್ತಿದ್ದವು. ಗೋಪಾಲನಿಗೆ ಮಲಗಿಕೊಳ್ಳಲಿಕ್ಕೂ ಭಯವಾಗುತ್ತಿತ್ತು. ಯಾಕೆಂದರೆ,

ಅವನು ಕಣ್ಣು ಮುಚ್ಚುತ್ತಿದ್ದ ಹಾಗೆ ಚೀತ್ಕಾರಗಳು ಜಾಗ್ರತವಾಗುತ್ತಿದ್ದವು. ಮತ್ತು ನಂತರ ನಿದ್ರೆ ಹಾರಿಹೋಗುತ್ತದೆ ಎಂದು ಅವನಿಗೆ ಅನಿಸುತ್ತಿತ್ತು. ಆಗಾಗ ಬೆಳಗಿನವರೆಗೆ ಅವನು ಚೀತ್ಕಾರದ ನಿರೀಕ್ಷೆಯಲ್ಲಿ ಎಚ್ಚರ ಇರುತ್ತಿದ್ದ. ಚೀತ್ಕಾರ ಬರುತ್ತಿರಲಿಲ್ಲ, ನಿದ್ರೆ ಕೂಡ ಬರುತ್ತಿರಲಿಲ್ಲ.

ಆ ರಾತ್ರಿ ಅವನು ಬಹಳ ತೃಪ್ತಿಯಿಂದ ಕುಡುಗೋಲನ್ನು ಅಟ್ಟದಮೇಲಿಂದ ಕೆಳಗಿಳಿಸಿದ. ಅದನ್ನು ಗೋದಿ ಕಲ್ಲಿನ ಮೇಲೆ ತಿಕ್ಕಿ ತಿಕ್ಕಿ ಹರಿತ ಮಾಡಹತ್ತಿದ.

ನಡುರಾತ್ರಿ ಕಳೆಯಿತು. ಆದರೆ ಚೀತ್ಕಾರದ ಧ್ವನಿ ಬರಲಿಲ್ಲ. ಬಹುಶಃ ಜೋಗಿಂದರ್‌ನ ರಂಡಿ ಕೃಪೆ ತೋರಿಸಿರಬಹುದು. ಗೋಪಾಲ ಸಿಂಗನಿಗೆ ತೂಕಡಿಕೆ ಬರಹತ್ತಿದವು. ಅವನು ಮನೆಗೆ ಬಂದು ಮಲಗಿಕೊಂಡ.

ಮೊದಲನೆಯ ಚೀತ್ಕಾರವು ಅವನ ಕಿವಿಯಮೇಲೆ ಅಪ್ಪಳಿಸಿದಾಗ ಅದು ತನ್ನ ಭ್ರಮೆಯೆಂದು ಭಾವಿಸಿದ. ಯಾವದೋ ಹಳೆಯ ಗತಿಸಿದ ಚೀತ್ಕಾರದ ಪ್ರತಿಧ್ವನಿ ಎಂದುಕೊಂಡ. ಆದರೆ ನಿರಂತರ ಅರ್ಧ ಗಂಟೆಯವರೆಗೆ ರಕ್ಷಿಯ ಚೀತ್ಕಾರಗಳು ಗೋಪಾಲನ ಮೆದುಳನ್ನು ಗರಗಸದ ಹಾಗೆ ಕೊರೆಯುತ್ತಿದ್ದವು. ತನ್ನ ತಲೆಯನ್ನೇ ಕುಡುಗೋಲಿನಿಂದ ಕೊಯ್ದುಕೊಳ್ಳಲು ಶಕ್ತನಾಗಿದ್ದರೆ ಈ ಚೀತ್ಕಾರಗಳಿಂದ ಬಿಡುಗಡೆ ಆಗುತ್ತಿತ್ತು.

ನಂತರ ಏನಾಯಿತು? ಸ್ವಲ್ಪ ಕೂಡ ನೆನಪಿಲ್ಲ. ಕೇವಲ ಇಷ್ಟೇ ನೆನಪಿದೆ: ಜೋಗಿಂದರ್ ರಕ್ಷಿಯ ಕೂದಲನ್ನು ಹಿಡಿದುಕೊಂಡು ಹಳೆಯ ಚಿಂದಿಯ ಹಾಗೆ ಜೋರಾಗಿ ಎಳೆಯುತ್ತಿದ್ದ. ರಕ್ಷಿಯ ದೇಹದಮೇಲೆ ಅವಳ ಸೀಳಿದ ಚರ್ಮದ ಹೊರತು ಮತ್ತೆ ಏನೂ ಇರಲಿಲ್ಲ. ಮೂಗು ಒಡೆದು ಗಾಢವಾದ ರಕ್ತವು ಎದೆಯ ಉಬ್ಬು-ತಗ್ಗುಗಳ ಮೇಲಿಂದ ಹರಿಯುತ್ತ ಮಂಡಿಯವರೆಗೆ ತೊಟ್ಟಿಕ್ಕುತ್ತಿತ್ತು. ಎಲ್ಲಿ ಎಂದೋ ಒಮ್ಮೆ ಅವಳ ಸುವಾಸನೆ ಬೀರುತ್ತಿದ್ದ ಮುಖವಿರುತ್ತಿತ್ತೊ ಅಲ್ಲಿ ಈಗ ಕೇವಲ ಒಂದು ಮಾಂಸದ ಕೆಂಪು ತುಂಡು ಇತ್ತು. ಜೋಗಿಂದರ್ ಅವಳ ತಲೆಯನ್ನು ಹಲಗೆಯ ಮೇಲೆ ಅಪ್ಪಳಿಸುತ್ತಿದ್ದ.

ರಕ್ಷಿಯ ಬಲಗೈಯ ಎಲುಬು ಮುರಿದು ಹೊರಗೆ ಬಂದಿತ್ತು. ಆಸರೆಗಾಗಿ ಅವಳು ನೆಲವನ್ನು ಹಿಡಿದುಕೊಳ್ಳುತ್ತಿದ್ದಾಗ ಅವಳ ತೂಗುತ್ತಿದ್ದ ಕೈ ಹಿಂದಕ್ಕೆ ಜಾರುತ್ತಿತ್ತು ಮತ್ತು ಎಲುಬು ಮಣ್ಣಿನ ಫರಶಿಯಲ್ಲಿ ನುಗ್ಗುತ್ತಿತ್ತು.

ಆ ಮಣ್ಣಿನ ಫರಶಿ ಗೋಪಾಲನ ಸ್ಪಂದಿಸುತ್ತಿದ್ದ ಎದೆಯಾಗಿತ್ತು.

ಈ ಕೊನೆಯ ಚಿತ್ರವನ್ನು ಅವನ ಕಣ್ಣಾಲಿಗಳು ಅಡಗಿಸಿಕೊಂಡವು. ಫಾಸಿಯ ನಂತರ ಚಿತೆಯು ಕೂಡ ಆ ಪ್ರತಿಬಿಂಬಗಳನ್ನು ಭಸ್ಮ ಮಾಡಲು ಸಾಧ್ಯವಿಲ್ಲ.

ಅವನ ಕೈಯ ಹತ್ತೂ ಬೆರಳುಗಳು ಅಗಣಿತ ಕುಡುಗೋಲಾದವು. ಜೋಗಿಂದರ್‌ನ ತಲೆಯು ಅವನ ಗೇಂಡಾ ಮೃಗದಂಥ ಕುತ್ತಿಗೆಯಿಂದ ಕೊಳೆತ ಪೇರಲ ಹಣ್ಣಿನಂತೆ

ಉದುರಿ ಚಾರಪಾಯಿಯ ಕೆಳಗೆ ಜಾರಿ ಹೋಯಿತು. ಆ ತಲೆಯನ್ನು ಒದ್ದು ಹೊರಗೆ ತೆಗೆದು ಗೋಪಾಲ ಅದನ್ನು ತುಂಡು ತುಂಡು ಮಾಡಿದ.

ಗೋಪಾಲನ ಶ್ವಾಸವು ಅವನ ಪುಪ್ಪುಸಗಳಲ್ಲಿ ಸಿಕ್ಕಿಕೊಳ್ಳುತ್ತಿತ್ತು. ಹಾಲನ್ನು ತುಳುಕಿಸುತ್ತಿದ್ದ ಬಟ್ಟಲುಗಳಲ್ಲಿ ಕಪ್ಪು ಕಪ್ಪು ನೊರೆ ಹೊಡಮರಳುತ್ತಿತ್ತು. ಹೊಂಬಣ್ಣದ ಮುಖಯಿಷ್‌ದ ಬಲೆಯು ಬಣ್ಣ ಕಳೆದುಕೊಂಡಿತ್ತು.

"ನಾನು ಜೋಗಿಂದರ್‌ನನ್ನು ಕೊಂದಿದ್ದೇನೆ, ಮತ್ತು ಜನ್ಮಜನ್ಮದಲ್ಲಿಯೂ ಕೊಲ್ಲುತ್ತಿರುವೆನು."

ವಕೀಲ ಸಾಹೇಬರ ಕಣ್ಣುಗಳು ತತ್ತರಿಸಿ ಬಾಗಿದವು.

ಮುದುಕ ಸರದಾರನ ಆಯುಷ್ಯದ ಇಪ್ಪತ್ತು ವರ್ಷಗಳು ಒಣಗಿದ ಎಲೆಗಳ ಹಾಗೆ ಉದುರಿಹೋದವು. ಎದೆ ಅಗಲವಾಯಿತು.

"ವಕೀಲ ಸಾಹೇಬ!"—ಅವನ ಧ್ವನಿಯಲ್ಲಿ ವಿಶ್ವಾಸದ ಗುಂಜನವಿತ್ತು—"ನನ್ನ ಮಗ ಯಾವ ಬಯಾನ್ ಕೊಡುತ್ತಿರುವನೋ ಅದನ್ನು ಬದಲಿಸುವ ಅವಶ್ಯಕತೆ ಇಲ್ಲ."

# ಚೌಥಿಯ ಉಡುಪು

ಸಹದರಿಯ ಚೌಕು ಆಸನದ ಮೇಲೆ ಪುನಃ ಈ ದಿನ ಸ್ವಚ್ಛವಾದ ರತ್ನಗಂಬಳಿಯನ್ನು ಹಾಸಲಾಗಿತ್ತು.

ಒಡೆದ ಹಂಚುಗಳ ಬಿರುಕುಗಳೊಳಗಿಂದ ಬಿಸಿಲಿನ ಅಂಕುಡೊಂಕಾದ ತುಂಡುಗಳು ದಾಲಾನ್‌ದಲ್ಲಿ ಚದುರಿದ್ದವು. ಮೊಹಲ್ಲಾ, ಕೇರಿಗಳ ಹೆಂಗಸರು ಮೌನವಾಗಿ, ಭಯಗೊಂಡು, ಯಾವುದೋ ದೊಡ್ಡ ಘಟನೆಯು ನಡೆಯುವದಿದೆ ಎನ್ನುವಂತೆ ಕುಳಿತುಕೊಂಡಿದ್ದರು. ತಾಯಂದಿರು ಮಕ್ಕಳಿಗೆ ಮೊಲೆಯುಣ್ಣಿಸುತ್ತಿದ್ದರು. ಆಗಾಗ ಯಾವುದೊ ಕೃಶ ಶರೀರದ, ಸಿಡುಕ ಮಗು ರಸದ್‌ನ ಸಹಾಯ ಯಾಚಿಸುತ್ತ ಕೂಗಿಕೊಳ್ಳುತ್ತಿತ್ತು.

"ಇಲ್ಲ, ಇಲ್ಲ, ನನ್ನ ಕಂದ"—ಬಡಕಲು ದೇಹದ ತಾಯಿ ಅದನ್ನು ತನ್ನ ಮಂಡಿಯ ಮೇಲೆ ಮಲಗಿಸಿಕೊಂಡು, ನೆಲ್ಲು ಬೆರೆತ ಅಕ್ಕಿಯನ್ನು ಮೊರದಲ್ಲಿ ಬೇರ್ಪಡಿಸುವಂತೆ, ಅಲ್ಲಾಡಿಸಹತ್ತಿದಳು. ಮಕ್ಕಳು ಅಬ್ಬರಿಸಿದಮೇಲೆ ಸುಮ್ಮನಾಗುತ್ತಿದ್ದವು.

ಇಂದು, ಎಷ್ಟು ಆಶೆ ತುಂಬಿದ ಕಣ್ಣುಗಳು ಕುಬರಾಳ ತಾಯಿಯ ಚಿಂತಿತ ಮುಖವನ್ನು ಎವೆಯಿಕ್ಕದೆ ನೋಡುತ್ತಿದ್ದವು. ಕಡಮೆ ಅಗಲದ ಕೈ ಪಟ್ಟಿಯ ಎರಡು ಭಾಗಗಳನ್ನು ಆಗಲೆ ಜೋಡಿಸಲಾಗಿತ್ತು. ಆದರೆ ಇನ್ನೂ ಬಿಳಿಯ ಗಜಿ (ಒರಟು ಬಟ್ಟೆ) ಯ ಚಿಹ್ನೆಯನ್ನು ಕತ್ತರಿಸಲು ಯಾರಿಗೂ ಧೈರ್ಯವಾಗಿರಲಿಲ್ಲ. ಕತ್ತರಿಸುವ ಕಲೆಯಲ್ಲಿ ಕುಬರಾಳ ತಾಯಿಯ ಸ್ಥಾನವು ಬಹಳ ಉನ್ನತವಾಗಿತ್ತು. ಅವರ ಕೃಶಗೊಂಡ ಕೈಗಳು ಅದೆಷ್ಟು ಜಹೇಜಗಳನ್ನು ಸಜ್ಜುಗೊಳಿಸಿದ್ದವೊ, ಎಷ್ಟು ಛಟ್ಟಿ, ಛೂಛಕಗಳನ್ನು ತಯಾರಿಸಿದ್ದವೂ ಮತ್ತು ಎಷ್ಟು ಕಫನ್‌ಗಳನ್ನು ಕತ್ತರಿಸಿದ್ದವೊ ಏನೊ. ಮೊಹಲ್ಲಾದಲ್ಲಿ ಎಲ್ಲಿಯಾದರೂ ಬಟ್ಟೆಯು ಕಡಮೆ ಬಿದ್ದರೆ, ಹಾಗೂ ಲಕ್ಷ ಸಲ ಪ್ರಯತ್ನಿಸಿದರೂ ಕತ್ತರಿಸುವದು ಹೊಂದದಿದ್ದರೆ, ಕುಬರಾಳ ತಾಯಿಯ ಹತ್ತಿರ ಅದನ್ನು ತರಲಾಗುತ್ತಿತ್ತು. ಕುಬರಾಳ ತಾಯಿ ಗಳಿಗೆಯನ್ನು ಮುರಿಯುತ್ತಿದ್ದರು, ಸುಕ್ಕು ತೀಡುತ್ತಿದ್ದರು, ಒಮ್ಮೊಮ್ಮೆ ತ್ರಿಕೋಣವನ್ನು ಮಾಡುತ್ತಿದ್ದರು. ಮತ್ತೊಮ್ಮೆ ಚೌಕೋಣವನ್ನು ಮಾಡುತ್ತಿದ್ದರು ಮತ್ತು ಮನಸ್ಸಿನಲ್ಲಿಯೇ ಕತ್ತರಿ ಚಲಾಯಿಸಿ ಕಣ್ಣುಗಳಿಂದ ಅಳತೆಯನ್ನೆಲ್ಲ ಮಾಡಿ ಮುಗುಳುನಗುತ್ತಿದ್ದರು.

"ಅಂಗಿಯ ತೋಳುಗಳು ಮತ್ತು ಸುತ್ತಳತೆಗಳಂತು ಹೊರಡುತ್ತವೆ. ಕೊರಳು

ಪಟ್ಟಿಗೆ ನನ್ನ ಸಣ್ಣ ಗಂಟಿನೊಳಗಿಂದ ತೆಗೆದುಕೊಳ್ಳಿರಿ." ತೊಂದರೆ ಸರಳವಾಗುತ್ತಿತ್ತು. ಬಟ್ಟೆಯನ್ನು ಕತ್ತರಿಸಿ ಅವರು ಕತ್ತರಿಸಿದ ತುಂಡುಗಳ ಒಂದು ಉಂಡಿಯನ್ನು ಮಾಡಿ ಕೈಯಲ್ಲಿ ಇಡುತ್ತಿದ್ದರು. ಆದರೆ ಇಂದು ಬಿಳಿಯ ಗಜಿಯ ತುಂಡು ಬಹಳಷ್ಟು ಸಣ್ಣದಿತ್ತು. ಇಂದು ಕುಬರಾಳ ತಾಯಿಯ ಲೆಕ್ಕ ಅಳತೆಗಳೆಲ್ಲ ಬುಡಮೇಲಾಗುವವು ಎಂಬ ವಿಶ್ವಾಸವು ಎಲ್ಲರಿಗೂ ಇತ್ತು. ಆದ್ದರಿಂದಲೆ ಎಲ್ಲರು ಉಸಿರು ಹಿಡಿದುಕೊಂಡು ಅವರ ಮುಖವನ್ನು ನಿಟ್ಟಿಸುತ್ತಿದ್ದರು. ಕುಬರಾಳ ತಾಯಿಯ ದೃಢತೆ ತುಂಬಿದ ಮುಖದ ಮೇಲೆ ಚಿಂತೆಯ ಯಾವ ಚಿಹ್ನೆಯೂ ಇರಲಿಲ್ಲ. ನಾಲ್ಕು ಗಿರ್ಹಾ ಗಜಿಯ ತುಂಡನ್ನು ಅವರು ಕಣ್ಣುಗಳಿಂದಲೇ ಕತ್ತರಿಸುತ್ತಿದ್ದರು. ಲಾಲ್‌ತೋಲ್‌ದ ನೆರಳು ಅವರ ಆಕಾಶ ನೀಲಿ-ಹಳದಿ ವರ್ಣದ ಮುಖದ ಮೇಲೆ ಸೂರ್ಯನ ಅರುಣ ವರ್ಣದ ಹಾಗೆ ಹೊರ ಹೊಮ್ಮುತ್ತಿತ್ತು. ಉದಾಸವಾದ, ಆಳವಾದ ಸುಕ್ಕುಗಳು ಅಂಧಕಾರದ ಗುಹೆಗಳ ಹಾಗೆ ಒಮ್ಮೆಲೆ ಪ್ರಕಟವಾದವು. ದಟ್ಟ ಅರಣ್ಯದಲ್ಲಿ ಬೆಂಕಿ ಪ್ರಜ್ವಲಿತವಾಗಿದೆ ಎನ್ನುವಂತೆ ಅವರು ಮುಗುಳುನಕ್ಕು ಕತ್ತರಿಯನ್ನು ಎತ್ತಿಕೊಂಡರು.

ಮೊಹಲ್ಲಾದ ಹೆಂಗಸರ ಗುಂಪಿನಿಂದ ಒಂದು ದೀರ್ಘವಾದ ತೃಪ್ತಿಕರ ಶ್ವಾಸವು ಹೊರಬಿದ್ದಿತು. ಉಡಿಯಲ್ಲಿಯ ಮಕ್ಕಳನ್ನು ಅಪ್ಪಳಿಸಲಾಯಿತು. ಗಿಡಗದಂಥ ತೀಕ್ಷ್ಣ ದೃಷ್ಟಿಯುಳ್ಳ ಕುಮಾರಿಯರು ತಟ್ಟನೆ ಸೂಜಿಯ ತೂತುಗಳಲ್ಲಿ ದಾರವನ್ನು ಪೋಣಿಸಿದರು. ನವವಿವಾಹಿತೆಯರು ಅಂಗುಸ್ತಾನಗಳನ್ನು ತೊಟ್ಟುಕೊಂಡರು. ಕುಬರಾಳ ತಾಯಿಯ ಕತ್ತರಿಯು ಕೆಲಸ ನಡೆಸಿತ್ತು. ಸಹದರಿಯ ಕೊನೆಯ ಮೂಲೆಯಲ್ಲಿ ಹೊರಸಿನ ಮೇಲೆ ಹಮೀದಾ ಕಾಲು ಜೋಲಾಡಿಸುತ್ತ ಅಂಗೈಮೇಲೆ ಗದ್ದವನ್ನು ಇಟ್ಟುಕೊಂಡು ಏನೋ ವಿಚಾರಿಸುತ್ತಿದ್ದಳು.

ಮಧ್ಯಾಹ್ನದ ಊಟ ತೀರಿಸಿಕೊಂಡು ಇದೇ ರೀತಿ ಬೀ ಅಮ್ಮಾ ಸಹದರಿಯ ಚೌಕು ಆಸನದ ಮೇಲೆ ಹೋಗಿ ಕೂಡ್ರುತ್ತಿದ್ದರು ಮತ್ತು ಸಣ್ಣ ಗಂಟು ಬಿಚ್ಚಿ ಬಣ್ಣ ಬಣ್ಣದ ಬಟ್ಟೆಗಳ ಜಾಲವನ್ನು ಹರವಿಬಿಡುತ್ತಿದ್ದರು. ತೊಟ್ಟಿಯ ಹತ್ತಿರ ಕುಳಿತು ಪಾತ್ರೆಗಳನ್ನು ತಿಕ್ಕುತ್ತಿದ್ದ ಕುಬರಾ ಓರೆಗಣ್ಣಿನಿಂದ ಆ ಕೆಂಪು ಕೆಂಪಾದ ಬಟ್ಟೆಗಳನ್ನು ನೋಡುತ್ತಿದ್ದರೆ ಒಂದು ಕೆಂಪು ಹೊಳಪು ಅವಳ ಹಳದಿ ಬೆರೆತ ಬೂದಿ ಬಣ್ಣದಲ್ಲಿ ಧಾವಿಸಿ ಬರುತ್ತಿತ್ತು. ಬೆಳ್ಳಿಯ ಬಣ್ಣದ ಬಟ್ಟಲುಗಳ (ಎದೆಗಳ ಮೇಲ್ಭಾಗ) ಜಾಲವನ್ನು ಪೂರ್ಣ ಕೈಗಳಿಂದ ತೆರೆದು ತಮ್ಮ ತೊಡೆಗಳ ಮೇಲೆ ಹರಡಿಕೊಂಡಾಗ ಅವರ ಬಾಡಿದ ಮುಖವು ವಿಚಿತ್ರವಾದ ಬಯಕೆ ತುಂಬಿದ ಬೆಳಕಿನಿಂದ ಥಳಥಳಿಸುತ್ತಿತ್ತು. ಆಳವಾದ ಕಂದಕಗಳಂಥ ಸುಕ್ಕುಗಳಮೇಲೆ ಬಟ್ಟಲುಗಳ ನೆರಳು ಸಣ್ಣ ಪುಟ್ಟ ದೀವಟಿಗೆಗಳ ಹಾಗೆ ಪ್ರಜ್ವಲಿಸುತ್ತಿದ್ದವು. ಪ್ರತಿ ಹೊಲಿಗೆಯ ಮೇಲೆ ಜರಿ ಕೆಲಸವು ಅಲ್ಲಾಡುತ್ತಿತ್ತು ಮತ್ತು ದೀವಟಿಗೆಗಳು ಥರಥರನೆ ಕಂಪಿಸುತ್ತಿದ್ದವು.

ಈ ಶಬ್ನಮಿ ದುಪ್ಪಟ್ಟಿಗಿಂತಲು ಮೊದಲು ಎಷ್ಟು ದುಪ್ಪಟ್ಟಿಗಳು ರೂಪಗೊಂಡವು,

ಹೊಲೆಯಲ್ಪಟ್ಟವು, ಸಿದ್ಧವಾದವು ಮತ್ತು ಕಟ್ಟಿಗೆಯ ಗೋರಿಯಂಥ ಭಾರಿ ಪೆಟ್ಟಿಗೆಯ ತಳದಲ್ಲಿ ಮುಳುಗಿದವು ಎಂಬುದು ನೆನಪಿಲ್ಲ. ಬಟ್ಟಲುಗಳ ಜಾಲವು ಮಾಸಿದವು. ಗಂಗಾಜಮುನಿ (ಹಳದಿ ಮತ್ತು ಬಿಳಿ ಜರಿ) ಕೊನೆ, ಮೂಲೆಗಳು ನಿಸ್ತೇಜಗೊಂಡವು. ತುರಾಯಿಯ ಗೊಂಡೆಗಳು ಕಳೆಗುಂದಿದವು. ಆದರೆ ಕುಬರಾಳ ಬರಾತ ಬರಲಿಲ್ಲ. ಒಂದು ಉಡುಪು ಹಳೆಯದಾದಾಗ ಅದನ್ನು ಚಾಲಾದ ಉಡುಪು ಎಂದು ಹೆಸರಿಟ್ಟು ಪುಕ್ಕಟ್ಟೆ ಕೊಡಲಾಗುತ್ತಿತ್ತು. ಬಳಿಕ ಇನ್ನೊಂದು ಉಡುಪಿನೊಡನೆ ಹೊಸ ಆಶೆಗಳನ್ನು ಕಟ್ಟಲಾಗುತ್ತಿತ್ತು. ಹೊಸ ಅನ್ವೇಷಣೆಯೊಂದಿಗೆ ಹೊಸ ಅತಲಸ್ (ಒಂದು ಬಗೆಯ ರೇಶ್ಮೆ ಬಟ್ಟೆ) ಅನ್ನು ಆರಿಸಲಾಗುತ್ತಿತ್ತು. ಸಹದರಿಯ ಚೌಕು ಆಸನದ ಮೇಲೆ ಸ್ವಚ್ಛವಾದ ರತ್ನಗಂಬಳಿಯನ್ನು ಹಾಸಲಾಗುತ್ತಿತ್ತು. ಮೊಹಲ್ಲಾದ ಹೆಂಗಸರು ಬಾಯಿಯಲ್ಲಿ ತಾಂಬೂಲ ಮತ್ತು ಮಗ್ಗಲಲ್ಲಿ ಮಕ್ಕಳನ್ನು ಒತ್ತಿಹಿಡಿದುಕೊಂಡು ಕಾಲಂದುಗೆಗಳನ್ನು ನುಡಿಸುತ್ತ ಬಂದುಬಿಡುತ್ತಿದ್ದರು.

"ಛೋಟಾ ಅರಿವೆಯ ಗೋಟು ಸರಳವಾಗಿ ಹೊರಡುತ್ತದೆ. ಆದರೆ ಬಚ್ಚೀ ಅರಿವೆ ಹೊರಡುವದಿಲ್ಲ."

"ಇದೇನು ಬೂವಾ, ಹಾಗೆಂದರೆ ಬೇವಾರ್ಸಿ ಕೈ ಪಟ್ಟಿಯ ಬಚ್ಚೀಗಳು ಹೊರಡುವವೇನು?"

ಪುನಃ ಎಲ್ಲರ ಮುಖಗಳು ಚಿಂತಿತಗೊಂಡವು. ಕುಬರಾಳ ತಾಯಿ ಮೌನದಿಂದ ರಸಾಯನತಜ್ಞನ ಹಾಗೆ ಕಣ್ಣುಗಳ ಟೇಪ್‌ದಿಂದ ಉದ್ದ ಮತ್ತು ಅಗಲಗಳನ್ನು ಅಳೆಯುತ್ತಿದ್ದರು ಮತ್ತು ಮಹಿಳೆಯರು ಪರಸ್ಪರ ಛೋಟಾ ಅರಿವೆಗಳ ಬಗ್ಗೆ ಗುಸುಗುಸು ಮಾಡಿ ಅಟ್ಟಹಾಸದಿಂದ ನಗುತ್ತಿದ್ದರು. ಇಂತಹದರಲ್ಲಿ ಯಾವಳೊ ರಸಿಕಳು ಸುಹಾಗ್ ಅಥವಾ ಬನಾವನ್ನಾಗಲಿ ಹಾಡಲಾರಂಭಿಸುತ್ತಿದ್ದಳು. ಇನ್ನೂ ನಾಲ್ಕು ಕೈ ಮುಂದಕ್ಕೆ ಹೋದ ಯಾವಳೊ ಕಲ್ಪಿತ ಬೀಗತಿಯರಿಗೆ ಬೈಯಲಾರಂಭಿಸುತ್ತಿದ್ದಳು. ಅಸಭ್ಯ, ಹೊಲಸಾದ ನಗಚಾಟಿಗೆ ಮತ್ತು ವಿನೋದಗಳು ಸುರು ಆಗುತ್ತಿದ್ದವು. ಇಂಥ ಸಮಯಗಳಲ್ಲಿ ಕುಮಾರಿ, ಬಾಲೆಯರಿಗೆ ಸಹದರಿಯಿಂದ ದೂರ, ತಲೆ ಮುಚ್ಚಿಕೊಂಡು ಹಂಚಿನ ಛಾವಣಿಯಲ್ಲಿ ಕೂಡ್ರುವ ಹುಕುಮ್ ಕೊಡಲಾಗುತ್ತಿತ್ತು. ಹೊಸ ಅಟ್ಟಹಾಸವು ಸಹದರಿಯಿಂದ ಹೊರ ಹೊಮ್ಮಿದಾಗ ದೀನ ಹುಡುಗಿಯರು ಒಂದು ನಿಟ್ಟುಸಿರು ಬಿಟ್ಟು ಸುಮ್ಮನಿರುತ್ತಿದ್ದರು. "ಅಲ್ಲಾಹ್! ಈ ಅಟ್ಟಹಾಸಗಳು ಅವರಿಗೆ ಎಂದು ಲಭ್ಯವಾಗುವವು?"

ಈ ವಿನೋದದಿಂದ ದೂರ, ಕುಬರಾ ಲಜ್ಜೆಗೊಂಡು ಗುಂಗಾಡು ತುಂಬಿದ ಕೋಣೆಯಲ್ಲಿ ತಲೆಬಾಗಿಸಿಕೊಂಡು ಕೂತಿರುತ್ತಿದ್ದಳು. ಅಷ್ಟರಲ್ಲಿ, ಕತ್ತರಿಸುವ ಕೆಲಸವು ಅತ್ಯಂತ ಸೂಕ್ಷ್ಮವಾದ ಸ್ಥಿತಿಗೆ ತಲುಪಿರುತ್ತಿತ್ತು. ಯಾವದೋ ಕಲೀ ಕ್ರಮ ತಪ್ಪಿ ಕತ್ತರಿಸಲ್ಪಡುತ್ತಿತ್ತು. ಅದರ ಜೊತೆಜೊತೆಗೆ ಮಹಿಳೆಯರ ಅಭಿಪ್ರಾಯಗಳು ಕೂಡ

ತುಂಡಾಗುತ್ತಿದ್ದವು. ಕುಬರಾ ಭಯಗೊಂಡು ಬಾಗಿಲಿನ ಮರೆಯಿಂದ ಇಣಕಿ ನೋಡುತ್ತಿದ್ದಳು.

ದುರ್ಭಾಗ್ಯಳಿಗೆ, ಯಾವ ಉಡುಪು ಕೂಡ ನೆಮ್ಮದಿಯಿಂದ ಸಿದ್ಧವಾಗುತ್ತಿದ್ದಿಲ್ಲ ಎಂಬುದೇ ಕಷ್ಟವಾಗಿತ್ತು. ಯಾವುದಾದರು ಕಲೀ ಕ್ರಮ ತಪ್ಪಿ ಕತ್ತರಿಸಲ್ಪಟ್ಟರೆ, ಹೊಸ ನಾವಲಿಗರವಳು ಹೊಂದಿಸಿದ ಮಾತಿನಲ್ಲಿ ಅವಶ್ಯವಾಗಿ ಯಾವುದಾದರು ಅಡ್ಡಿ ಹೊರಬೀಳುತ್ತದೆ; ಇಲ್ಲವೆ ಮದುಮಗನ ಯಾವಳೋ ಸೂಳೆಯು ಪ್ರಕಟವಾಗುತ್ತಾಳೆ ಅಥವಾ ಅವನ ತಾಯಿ ಗಟ್ಟಿಯಾದ ಕಡಗಗಳ ಸಲುವಾಗಿ ಪಟ್ಟು ಹಿಡಿಯುತ್ತಾಳೆ — ಎಂದು ತಿಳಿದುಕೊಳ್ಳಬೇಕು. ಗೋಟ್‌ನಲ್ಲಿ ನಿರಿಗೆ ಬಂದುಬಿಟ್ಟರೆ, ಮಹರ್‌ದಲ್ಲಿ ಮಾತು ಮುರಿಯುತ್ತದೆ ಅಥವಾ ಕಂಚಿನ ಕಾಲುಗಳುಳ್ಳ ಪಲ್ಲಂಗ್‌ದ ಬಗ್ಗೆ ಜಗಳವಾಗುತ್ತದೆ. ಚೌಥಿಯ ಮುಹೂರ್ತವು ಬಹಳ ಸೂಕ್ಷ್ಮವಿರುತ್ತದೆ. ಬೀ ಅಮ್ಮಾಳ ಎಲ್ಲ ನಿಪುಣತೆ ಮತ್ತು ಒಳ್ಳೆಯತನಗಳು ನಿರುಪಯೋಗಿ ಆಗಿಬಿಡುತ್ತಿದ್ದವು. ಸರಿಯಾದ ಸಮಯಕ್ಕೆ ಅದೇನು ಆಗುತ್ತಿತ್ತೊ ಏನೊ ಹವಿಜದಷ್ಟು ಮಾತು ಉದ್ದ ಬೆಳೆಯುತ್ತಿತ್ತು. ಬಿಸ್ಮಿಲ್ಲಾದ ದಿನದಿಂದ ತಾಯಿ ಜಹೇಜ್ ಅನ್ನು ಹೊಂದಿಸಲು ಪ್ರಾರಂಭಿಸಿದ್ದಳು. ಸ್ವಲ್ಪೇ ಬಟ್ಟೆಯ ತುಂಡು ಉಳಿದರೆ ತಲೆದಾನಿ ಅಥವಾ ಕಾಜಿನ ಗಿಲಾಫ್ ಹೊಲೆದು, ಧಂಕ್ ಗೋಖರೂಗಳಿಂದ ಸಿಂಗರಿಸಿ ಇಡುತ್ತಿದ್ದರು. ಹುಡುಗಿಯ ವಿಷಯವೇನಂತೆ? ಖೀರಾ ಸೌತೆಕಾಯಿಯ ಹಾಗೆ ಬೆಳೆಯುತ್ತಾಳೆ. ಬಾರಾತ್ ಬಂದಾಗ ಇದೇ ಹಸ್ತಕೌಶಲ್ಯವು ಕೆಲಸಕ್ಕೆ ಬರುತ್ತದೆ.

ಅಬ್ಬಾ ತೀರಿಕೊಂಡಾಗಿನಿಂದ ಹಸ್ತಕೌಶಲ್ಯವು ಕೂಡ ತೀಕಹತ್ತಿತ್ತು. ಹಮೀದಾಗೆ ಒಮ್ಮಿಂದೊಮ್ಮೆಲೆ ತನ್ನ ಅಬ್ಬಾ ನೆನಪಾದರು. ಅಬ್ಬಾ ಎಷ್ಟು ತೆಳ್ಳಗೆ ಬಡಕಲು ಆಗಿದ್ದರು! ಮೊಹರಮ್‌ದ ಅಲಂ (ಧ್ವಜಸ್ತಂಭ) ದ ಹಾಗೆ ಉದ್ದವಾಗಿದ್ದರು. ಒಂದು ಸಲ ಬಾಗಿದರೆಂದರೆ ಎದ್ದು ನಿಲ್ಲುವದು ಕಷ್ಟಕರವಾಗಿತ್ತು. ನಸುಕಿನಲ್ಲಿಯೆ ಎದ್ದು ಬೇವಿನ ಕಡ್ಡಿಯನ್ನು ಹಲ್ಲುಜ್ಜಲು ಮುರಿದುಕೊಂಡು, ಹಮೀದಾಳನ್ನು ಮಂಡಿಯ ಮೇಲೆ ಕೂಡ್ರಿಸಿಕೊಂಡು ಅದೇನು ವಿಚಾರಿಸುತ್ತಿದ್ದರೊ ಏನೊ? ಬಳಿಕ ಯೋಚಿಸುತ್ತ ಯೋಚಿಸುತ್ತ ಬೇವಿನ ಕಡ್ಡಿಯ ಯಾವುದೋ ತಂತು ಗಂಟಲಲ್ಲಿ ಹೋಗಿಬಿಡುತ್ತಿತ್ತು ಮತ್ತು ಅವರು ಕೆಮ್ಮುತ್ತಲೇ ಇರುತ್ತಿದ್ದರು. ಹಮೀದಾ ಕೋಪಿಸಿಕೊಂಡು ಅವರ ಮಡಿಲಲ್ಲಿಂದ ಇಳಿದುಬಿಡುತ್ತಿದ್ದಳು. ಕೆಮ್ಮಿನ ಆಘಾತಗಳಿಂದ ಹೀಗೆ ಅಲ್ಲಾಡುತ್ತ ಇರುವದು ಅವಳಿಗೆ ಎಳ್ಳಷ್ಟು ಇಷ್ಟವಿರಲಿಲ್ಲ. ಅವಳ ಪುಟ್ಟದಾದ ಕೋಪವನ್ನು ಕಂಡು ಅವರು ಇನ್ನಷ್ಟು ನಗುತ್ತಿದ್ದರು. ಆಗ ಕೆಮ್ಮು ಹೆಚ್ಚಾಗಿ ಕುತ್ತಿಗೆ ಕೊಯ್ದ ಪಾರಿವಾಳವು ಚಡಪಡಿಸಿದ ಹಾಗೆ ಚಡಪಡಿಸುತ್ತಿದ್ದರು. ಬೀ ಅಮ್ಮಾ ಬಂದು ಅವರಿಗೆ ಆಸರೆಯಾಗುತ್ತಿದ್ದರು. ಬೆನ್ನಮೇಲೆ ಧಪ್ ಧಪ್ ಎಂದು ತಟ್ಟಿ ಸಾಂತ್ವನಗೊಳಿಸುತ್ತಿದ್ದರು.

" ತೊಬಾ ಅದೆಂಥ ನಗೆ? "

ನೆತ್ತಿಗೆ ಹತ್ತಿದ್ದರಿಂದ ಕೆಂಪಾಗಿದ್ದ ಕಣ್ಣುಗಳನ್ನು ಮೇಲೆತ್ತಿ, ಅಬ್ಬಾ ಅಸಹಾಯಕ ರೀತಿಯಲ್ಲಿ, ಮುಗುಳ್ನಗಲು ಆರಂಭಿಸುತ್ತಿದ್ದರು. ಕೆಮ್ಮಂತು ನಿಲ್ಲುತ್ತಿತ್ತು, ಆದರೆ ಅವರು ಬಹಳಷ್ಟು ಸಮಯದವರೆಗೆ ತೇಕುತ್ತಿದ್ದರು.

" ಏನಾದರು ಉಪಚಾರ ಯಾಕೆ ಮಾಡಿಕೊಳ್ಳುವದಿಲ್ಲ? ಎಷ್ಟು ಸಲ ನಿಮಗೆ ಹೇಳಿಲ್ಲ? "

" ದೊಡ್ಡ ದವಾಖಾನೆಯ ಡಾಕ್ಟರ್, ಇಂಜಕ್ಶನ್ ಮಾಡಿಸಿಕೊ, ದಿನಾಲು ಮೂರು ಪಾವು ಹಾಲು ಮತ್ತು ಅರ್ಧ ಚಟಾಕ್ ಬೆಣ್ಣೆ ತಿನ್ನು ಎಂದು ಹೇಳುತ್ತಾರೆ."

" ಅಯ್, ಆ ಡಾಕ್ಟರ್‌ರ ಮುಖಕ್ಕೆ ಅಷ್ಟು ಮಣ್ಣು ಬೀಳಲಿ! ಮೊದಲೇ ಕೆಮ್ಮು. ಅದರಮೇಲೆ ಜಿಡ್ಡು ತಿಂದರೆ ಕಫ ಆಗುವದಿಲ್ಲವೆ? ಹಕೀಮ್‌ರಿಗೆ ತೋರಿಸಿರಿ."

" ತೋರಿಸುತ್ತೇನೆ "—ಅಬ್ಬಾ ಹುಕ್ಕಾವನ್ನು ಸೇದುತ್ತಿದ್ದರು ಮತ್ತು ಪುನಃ ನೆತ್ತಿಗೆ ಹತ್ತುತ್ತಿತ್ತು.

" ಬೆಂಕಿ ಬೀಳಲಿ ಈ ದಪ್ಪ ಹುಕ್ಕಾಕ್ಕೆ. ಇದೇ ಈ ಕೆಮ್ಮನ್ನು ಹಚ್ಚಿದೆ. ಹರೆಯದ ಮಗಳ ಕಡೆಯಾದರೂ ನೋಡಿರುವಿರೇನು ಕಣ್ಣೆತ್ತಿ...."

ಅಬ್ಬಾ ಕುಬರಾಳ ತಾರುಣ್ಯದತ್ತ ಕರುಣೆ ಯಾಚಿಸುವ ಕಣ್ಣುಗಳಿಂದ ನೋಡುತ್ತಿದ್ದರು. ಕುಬರಾ ತರುಣಿಯಾಗಿದ್ದಳು. ಅವಳನ್ನು ತರುಣಿಯೆಂದು ಯಾರು ಹೇಳುತ್ತಾರೆ? ಅವಳಂತು ಬಿಸ್ಮಿಲ್ಲಾದ ದಿನದಿಂದಲೇ ತನಗೆ ತಾರುಣ್ಯ ಬಂದುದನ್ನು ಅರಿತು ದಿಕ್ಕು ತಪ್ಪಿದ್ದಳು. ಅದೆಂಥ ಯೌವನ ಅವಳಿಗೆ ಬಂದಿತ್ತೊ ಏನೊ! ಅವಳ ಕಣ್ಣುಗಳಲ್ಲಿ ಅಪ್ಸರೆಯರೇನು ನರ್ತಿಸಲಿಲ್ಲ, ಅವಳ ಕೆನ್ನೆಯಮೇಲೆ ಕುರುಳುಗಳು ಅಸ್ತವ್ಯಸ್ತವಾಗಲಿಲ್ಲ. ಅವಳ ಎದೆಯಲ್ಲಿ ಬಿರುಗಾಳಿ ಏನೂ ಏಳಲಿಲ್ಲ ಅಥವಾ ಶ್ರಾವಣ-ಭಾದ್ರಪದದ ಮೋಡಗಳಿಂದ ನೆಪ ಹುಡುಕಿ, ಅವಳು ಪ್ರಿಯತಮ ಅಥವಾ ಮನದನ್ನನನ್ನೇನೂ ಬೇಡಲಿಲ್ಲ. ಆ ಬಗ್ಗಿ ಬಾಗಿದ, ಭಯಗ್ರಸ್ತ ಯೌವನವು, ಸದ್ದು ಮಾಡದ ಹೆಜ್ಜೆಗಳಿಂದ ಅವಳಮೇಲೆ ಅದೆಂದು ಹೊಟ್ಟೆಹೊಸೆಯುತ್ತ ಏರಿ ಬಂದಿತೇನೊ! ಅದೇ ರೀತಿ ಅದೆತ್ತ ಹೊರಟುಹೋಯಿತೇನೊ! ತಿಳಿಯದು. ಯೌವನದ ಮಧುರ ವರ್ಷಗಳು ಉಪ್ಪುಪ್ಪಾಗಿ ಕೊನೆಗೆ ಕಹಿಯಾದವು.

ಅಬ್ಬಾ ಒಂದು ದಿನ ಹೊಸ್ತಿಲ ಮೇಲೆ ಬೋರಲಾಗಿ ಬಿದ್ದರು. ಅವರನ್ನು ಎಬ್ಬಿಸಲು ಯಾವದೇ ಹಕೀಮ್ ಅಥವಾ ಡಾಕ್ಟರ್‌ನ ಔಷಧಿ-ಚೀಟಿ ಬರಲು ಶಕ್ಯವಾಗಲಿಲ್ಲ. ಹಮೀದಾ ಸಿಹಿ ರೊಟ್ಟಿಯ ಸಲುವಾಗಿ ಹಠ ಮಾಡುವುದನ್ನು ಬಿಟ್ಟುಬಿಟ್ಟಳು. ಕುಬರಾಳ ಮದುವೆ ಸಂದೇಶಗಳು ಎಲ್ಲಿ ದಾರಿ ತಪ್ಪಿದವೇನೊ ತಿಳಿಯದು. ಆ ಗೋಣಿಯ ಪರದೆಯ ಹಿಂದೆ ಯಾರದೊ ಯೌವನವು ಅಂತಿಮ ಬಿಕ್ಕುಗಳನ್ನು ಬಿಕ್ಕಳಿಸುತ್ತಿತ್ತು. ಹೊಸ ಯೌವನವು ಹಾವಿನ ಹೆಡೆಯ ಹಾಗೆ ಮೇಲೇಳುತ್ತಲಿದೆ

ಎಂಬುದು ಯಾರಿಗೂ ಗೊತ್ತೇ ಆಗಲಿಲ್ಲ. ಆದರೆ ಅಮ್ಮಾನ ವಾಡಿಕೆಯು ಮುರಿಯಲಿಲ್ಲ. ಅವರು ಇದೇ ರೀತಿ ಪ್ರತಿದಿನ ಮಧ್ಯಾಹ್ನ ಸಹದರಿಯಲ್ಲಿ ಬಣ್ಣ ಬಣ್ಣದ ಬಟ್ಟೆಗಳನ್ನು ಹರಡಿಕೊಂಡು ಗೊಂಬೆಗಳ ಆಟವನ್ನು ಆಡುತ್ತಿದ್ದರು. ಅವರು ಎಲ್ಲಿಂದಲಾದರು ಹೊಂದಿಸಿಕೊಂಡು ಷಬರಾತ್‌ದ ತಿಂಗಳಲ್ಲಿ ಕ್ರೇಪ್‌ಇನ ದುಪ್ಪಟ್ಟೆಯನ್ನು ಏಳುವರೆ ರೂಪಾಯಿಗಳಿಗೆ ಕೊಂಡುಕೊಂಡೇಬಿಟ್ಟರು. ವಿಷಯವೇ ಹಾಗಿತ್ತು, ಕೊಂಡುಕೊಳ್ಳದೇ ನಿರ್ವಾಹವೇ ಇರಲಿಲ್ಲ. ತಮ್ಮ ಹಿರಿಯ ಮಗ ರಾಹತ್ ಪೋಲಿಸ್ ಟ್ರೇನಿಂಗ್‌ದ ನಿಮಿತ್ತ ಬರಲಿದ್ದಾನೆ ಎಂದು ನಡುವಣ ಮಾಮೂನ ತಾರು ಬಂದಿತು. ಬೀ ಅಮ್ಮಾ ಅವರಿಗಂತು ಒಮ್ಮಿಂದೊಮ್ಮೆಲೆ ಗಾಬರಿಯಾಯಿತು. ರಾಹತ್ ಅಲ್ಲ—ಹೊಸ್ತಿಲಲ್ಲಿ ಬಾರಾತ್ ಬಂದು ನಿಂತಿದೆ ಮತ್ತು ಅವರಿನ್ನು ಮದುಮಗಳ ಬೈತಲೆಯ ಅಫಷಾನ್ (ಜರಿಯ ಕಣಗಳು) ಅನ್ನು ಕೂಡ ಕತ್ತರಿಸಿಲ್ಲವೆನ್ನುವ ಹಾಗೆ ಇತ್ತು. ಆದ್ದರಿಂದ ಕೂಡಲೆ ಅವರು ತಮ್ಮ ಮುಂಹ್ ಬೋಲಿ ಬಹನ್—ಬಿಂದೂಳ ತಾಯಿಗೆ ಹೇಳಿ ಕಳುಹಿಸಿದರು.

"ಅಕ್ಕ, ಈ ಕ್ಷಣವೆ ನೀವು ಬರದಿದ್ದರೆ, ನನ್ನ ಸತ್ತ ಮುಖ ನೋಡುವಿರಿ."

ನಂತರ ಇಬ್ಬರ ಮಧ್ಯೆ ಗುಸುಗುಸು ನಡೆಯಿತು. ನಡುವೆ ಇಬ್ಬರೂ ಒಂದು ದೃಷ್ಟಿ ಕುಬರಾಳಮೇಲೆ ಬೀರುತ್ತಿದ್ದರು. ಅವಳು ಪಡಸಾಲೆಯಲ್ಲಿ ಕುಳಿತುಕೊಂಡು ಅಕ್ಕಿಯನ್ನು ಕೇರುತ್ತಿದ್ದಳು. ಅವಳು ಆ ಕಿವಿಮಾತಿನ ಭಾಷೆಯನ್ನು ಚೆನ್ನಾಗಿ ತಿಳಿದುಕೊಳ್ಳುತ್ತಿದ್ದಳು. ಅದೇ ಸಮಯಕ್ಕೆ ಬೀ ಅಮ್ಮಾ ಕಿವಿಗಳ ನಾಲ್ಕು ಮಾಸಿಯ ಲವಂಗಗಳನ್ನು ಬಿಚ್ಚಿ, ಮುಂಹ್ ಬೋಲಿ ಬಹನ್‌ಳಿಗೆ ಒಪ್ಪಿಸಿ, ಹೇಗಾದರೂ, ಎಂತಾದರೂ ಮಾಡಿ ಸಂಜೆಯವರೆಗೆ ತೊಲೆಯಷ್ಟು ಗೋಖರು, ಆರು ಮಾಸಿ ಸಲ್ಮಾ ಸಿತಾರಾ ಮತ್ತು ನೇಫಾದ ಸಲುವಾಗಿ ಪಾವುಗಜ ತೋಲ್ ಇವುಗಳನ್ನು ತೆಗೆದು ಕೊಂಡು ಬಾ ಎಂದು ಹೇಳಿದರು. ಹೊರಗಡೆಯ ಕೋಣೆಯ ಕಸಗುಡಿಸಿ ಸಿದ್ಧ ಮಾಡಲಾಯಿತು. ಸ್ವಲ್ಪ ಸುಣ್ಣವನ್ನು ತರಿಸಿ ಕುಬರಾ ತನ್ನ ಕೈಯಿಂದ ಕೋಣೆಯನ್ನು ಸಾರಿಸಿದಳು. ಕೋಣೆಯಂತು ಬೆಳ್ಳಗಾಯಿತು. ಆದರೆ ಅವಳ ಅಂಗೈಯ ಚರ್ಮವು ಸುಲಿಯಿತು. ಸಾಯಂಕಾಲ ಮಸಾಲೆಯನ್ನು ಬೀಸಲು ಕುಳಿತಾಗ ತಲೆ ತಿರುಗಿ ಉರುಳಿಬಿದ್ದಳು. ರಾತ್ರಿಯೆಲ್ಲ ಮಗ್ಗಲು ಬದಲಿಸುವದರಲ್ಲಿಯೇ ಕಳೆಯಿತು. ಒಂದಂತು ಅಂಗೈಯ ಉರಿತದ ಕಾರಣದಿಂದ. ಎರಡನೆಯದು ಮರು ಮುಂಜಾನೆಯ ಗಾಡಿಯಿಂದ ರಾಹತ್ ಬರುವವನೆಂಬ ಅರಿವಿನಿಂದ.

"ಅಲ್ಲಾಹ್! ನನ್ನ ಅಲ್ಲಾಹ್ ಮಿಂಯಾ, ಈ ಸಲ ನನ್ನ ಅಕ್ಕನ ಭಾಗ್ಯ ತೆರೆಯಲಿ. ನನ್ನ ಅಲ್ಲಾ, ನಾನು ನೂರು ರಕಾತ್ (ನಮಾಜ್) ನಿನ್ನ ದರಗಾದಲ್ಲಿ ಮಾಡುತ್ತೇನೆ"—ಹಮೀದಾ ಮುಂಜಾವಿನ ನಮಾಜು ಓದಿ, ಪ್ರಾರ್ಥಿಸಿದಳು.

ಬೆಳಗ್ಗೆ ರಾಹತ್‌ಭಾಯಿ ಬಂದಾಗ ಕುಬರಾ ಮೊದಲಿನಿಂದಲೇ ಗುಂಗಾಡುಗಳುಳ್ಳ

ಕೋಣೆಯಲ್ಲಿ ಅಡಗಿ ಕುಳಿತಿದ್ದಳು. ಸೇವಿಗೆ ಹಾಗು ಪರಾಠಾಗಳ ನಾಶ್ತಾ (ಮುಂಜಾವಿನ ಉಪಹಾರ) ಮುಗಿಸಿಕೊಂಡು ಅವರು ದಿವಾನಖಾನೆಯಲ್ಲಿ ಹೋದ ನಂತರ ಮೆಲ್ಲಮೆಲ್ಲಗೆ ಹೊಸ ಮದುಮಗಳ ಹಾಗೆ ಹೆಜ್ಜೆ ಇಡುತ್ತ ಕುಬರಾ ಕೋಣೆಯಿಂದ ಹೊರಬಿದ್ದು, ಎಂಜಲು ಪಾತ್ರೆಗಳನ್ನು ಎತ್ತಿಕೊಂಡಳು.

"ನಾನು ತೊಳೆಯುವೆನು ಕೊಡು, ಬೀ ಆಪಾ"—ಹಮೀದಾ ತುಂಟತನದಿಂದ ಅಂದಳು.

"ಇಲ್ಲ"—ಅವಳು ಲಜ್ಜೆಯಿಂದ ಬಾಗಿದಳು.

ಹಮೀದಾ ಚುಡಾಯಿಸುತ್ತಿದ್ದಳು. ಬೀ ಅಮ್ಮಾ ಮುಗುಳುನಗುತ್ತಲಿದ್ದರು ಮತ್ತು ಕ್ರೇಪ್‌ಇನ ದುಪ್ಪಟ್ಟೆಯ ಮೇಲೆ ಸೆರಗು ಹಚ್ಚುತ್ತಲಿದ್ದರು. ಯಾವ ಮಾರ್ಗದಿಂದ ಕಿವಿಯಲ್ಲಿಯ ಲವಂಗಗಳು ಹೊರಟುಹೋಗಿದ್ದವೋ ಅದೇ ಮಾರ್ಗದಿಂದ ಹೂವು, ಎಲೆ ಮತ್ತು ಬೆಳ್ಳಿಯ ನೂಪುರಗಳು ಕೂಡ ಹೋದವು. ಬಳಿಕ ನಡುವಿನ ಮಾಮೂ ವೈಧವ್ಯ ಬಂದಾಗ ಕೊಟ್ಟಿದ್ದ ಕೈಗಳಲ್ಲಿಯ ಎರಡೆರಡು ಬಳೆಗಳು ಸಹ ಹೋದವು. ತಂಗುಳನ್ನು ಸ್ವತಃ ತಿಂದುಕೊಂಡು ಪ್ರತಿದಿನವೂ ರಾಹತ್‌ನ ಸಲುವಾಗಿ ಪರಾಠಾಗಳನ್ನು ಕರಿಯಲಾಗುತ್ತಿತ್ತು, ಕೋಫ್ತಾ (ಮಾಂಸದ ಪಲ್ಯ) ಗಳನ್ನು ಹುರಿಯಲಾಗುತ್ತಿತ್ತು, ಪುಲಾವ್‌ಗಳು ಕಂಪು ಬೀರುತ್ತಿದ್ದವು. ಸ್ವತಃ ಒಣಗಿದ ತುತ್ತನ್ನು ನೀರಿನಿಂದ ಒಳಗಿಳಿಸಿಕೊಂಡು ಅವರು ಆಗಲಿರುವ ಅಳಿಯನಿಗೆ ಮಾಂಸದ ಕರಿದ ತುಂಡುಗಳನ್ನು ತಿನ್ನಿಸುತ್ತಿದ್ದರು.

"ಕಾಲ ಬಹಳ ಕೆಟ್ಟದಿದೆ ಬೇಟಿ,"—ಅವರು ಹಮೀದಾ ತನ್ನ ಮುಖವನ್ನು ಸಿಂಡರಿಸಿದ್ದು ನೋಡಿ ಅನ್ನುತ್ತಿದ್ದರು ಮತ್ತು ಅವಳು ಯೋಚಿಸುತ್ತಿದ್ದಳು—"ನಾವು ಹಸಿವು ಕಟ್ಟಿ ಅಳಿಯನಿಗೆ ತಿನ್ನಿಸುತ್ತಿದ್ದೇವೆ. ಬೀ ಆಪಾ ನಸುಕಿನಲ್ಲಿಯೆ ಎದ್ದು ಜಾದೂದ ಯಂತ್ರದ ಹಾಗೆ ಕೆಲಸಕ್ಕೆ ಅಂಟಿಕೊಳ್ಳುತ್ತಾರೆ. ಬರಿ ಹೊಟ್ಟೆಗೆ ಗುಟುಕು ನೀರು ಕುಡಿದು ರಾಹತ್‌ನ ಸಲುವಾಗಿ ಪರಾಠಾಗಳನ್ನು ಕರಿಯುತ್ತಾಳೆ, ದಪ್ಪವಾದ ಕೆನೆ ಬರಲೆಂದು ಹಾಲನ್ನು ಕಾಯಿಸಿ ಗಟ್ಟಿ ಮಾಡುತ್ತಾಳೆ. ಸಾಧ್ಯವಿದ್ದಲ್ಲಿ ತನ್ನ ನೆಣವನ್ನು ತೆಗೆದು ಆ ಪರಾಠಾಗಳಲ್ಲಿ ತುಂಬಲೂ ಸಹ ಅವಳು ಸಿದ್ಧವಾಗಿದ್ದಳು. ಯಾಕೆ ತುಂಬಬಾರದಂತೆ, ಕೊನೆಗೊಂದು ದಿನ ಅವನು ಅವಳ ಸ್ವಂತದವನಾಗುತ್ತಾನೆ, ತಾನು ಗಳಿಸಿದ್ದೆಲ್ಲವನ್ನೂ ಅವಳ ಅಂಗೈಯಲ್ಲಿಯೇ ಇಡುತ್ತಾನೆ. ಹಣ್ಣು ಕೊಡುವ ಸಸಿಗೆ ಯಾರು ನೀರು ಹಾಯಿಸುವದಿಲ್ಲ?....ನಂತರ ಒಂದು ದಿನ ಹೂವುಗಳು ಅರಳಿ ಹೂವು ತುಂಬಿದ ಟೊಂಗೆಯು ಬಾಗಿದಾಗ, ಈಗ ವ್ಯಂಗ್ಯ ಮಾಡುವವರ ಮುಖಗಳ ಮೇಲೆ ಹೇಗೆ ಎಕ್ಕಡ ಬೀಳುವವು. ಆ ಕಲ್ಪನೆಯಿಂದ ನನ್ನ ಅಕ್ಕನ ಬಾಡಿದ ಮುಖದ ಮೇಲೆ ಸುಹಾಗ್ ಅರಳುತ್ತದೆ, ಕಿವಿಗಳಲ್ಲಿ ಶಹನಾಯಿಗಳು ಬಾರಿಸಹತ್ತುತ್ತವೆ. ಅವಳು ರಾಹತ್ ಭಾಯಿಯ ಕೋಣೆಯನ್ನು

ಗುಡಿಸುತ್ತಿದ್ದಳು, ಅವನ ಬಟ್ಟೆಗಳನ್ನು ಪ್ರೀತಿಯಿಂದ ಮಡಿಚುತ್ತಿದ್ದಳು. ಅವುಗಳ ಜೊತೆ ಮಾತಾಡುತ್ತಿರುವರೆಂಬ ಹಾಗೆ. ಆಕೆ ಅವನ ದುರ್ಗಂಧ ತುಂಬಿದ, ಕೊಳೆತ ಇಲಿಗಳಂತೆ ನಾರುವ ಕಾಲುಚೀಲಗಳನ್ನು ತೊಳೆಯುತ್ತಿದ್ದಳು. ಅವನ ಬೆವರಿನಿಂದ ನಾರುವ ಬನಿಯನ್ ಮತ್ತು ಸಿಂಬಳ ಮುಣುಗಿದ ಕರವಸ್ತ್ರಗಳನ್ನು ಸ್ವಚ್ಛ ಮಾಡುತ್ತಿದ್ದಳು. ಅವನ ಎಣ್ಣೆಯಿಂದ ಜಿಗುಟಾದ ತಲೆದಿಂಬಿನ ಚೀಲದ ಮೇಲೆ 'Sweet Dream' ಎಂದು ಬಿಡಿಸಿಕೊಡುತ್ತಿದ್ದಳು. ಆದರೆ ವಿಷಯವು ನಾಲ್ಕೂ ಮೂಲೆಗಳಿಗೆ ಪೂರ್ಣವಾಗಿ ಕೂಡ್ರುತ್ತಿದ್ದಿಲ್ಲ. ರಾಹತ್ ನಸಿಕಿನಲ್ಲಿಯೇ ರೊಟ್ಟಿ ಮತ್ತು ಪರಾಠಾಗಳನ್ನು ಕಬಳಿಸಿ ಹೋಗುತ್ತಿದ್ದ ಮತ್ತು ಸಾಯಂಕಾಲ ಬಂದು ಕೋಫ್ತಾಗಳನ್ನು ತಿಂದು ಮಲಗಿಬಿಡುತ್ತಿದ್ದ. ಬೀ ಅಮ್ಮಾನ ಮುಂಹ್ ಬೋಲಿ ಬಹನ್ ಗುಸುಗುಸು ಮಾಡುತ್ತಿದ್ದರು.

"ಪಾಪ, ಬಹಳ ನಾಚಿಕೆ ಸ್ವಭಾವದವನಿದ್ದಾನೆ"—ಬೀ ಅಮ್ಮಾ ನೆಪಗಳನ್ನು ಸೂಚಿಸುತ್ತಿದ್ದರು.

"ಹಾಂ! ಅದಂತೂ ಸರಿಯೇ, ಆದರೆ ಸ್ವಲ್ಪಾದರು ಲಕ್ಷಣಗಳಿಂದ, ಒಂದಿಷ್ಟು ಕಣ್ಣುಗಳಿಂದ ತಿಳಿಯಬೇಕಲ್ಲವೆ?"

"ಇದೇನು?....ನನ್ನ ಮಗಳು ಕಣ್ಣು ಕುಣಿಸದಿರಲಿ ಅಲ್ಲಾಹ್! ಅವಳ ಸೆರಗನ್ನು ಕೂಡ ಯಾರೂ ನೋಡೇ ಇಲ್ಲ"—ಬೀ ಅಮ್ಮಾ ಅಭಿಮಾನದಿಂದ ಅನ್ನುತ್ತಿದ್ದರು.

ಬೀ ಆಪಾ ನನ್ನ ಕಡೆ ನೋಡಿ ನಗುತ್ತಿದ್ದರು. "ನಡೆಯೇ ಹುಚ್ಚಿ."

"ಹಾಯ್. ಹಾಗಾದರೆ ನಾನು ಏನು ಮಾಡಲಿ ಖಾಲಾ?"

"ರಾಹತ್ ಮಿಂಯಾನ ಜೊತೆ ಯಾಕೆ ಮಾತಾಡುವದಿಲ್ಲವೇ ಬುದ್ಧಿಗೇಡಿ?"

"ದಮ್ಮಯ್ಯ, ನಮಗಂತು ನಾಚಿಕೆ ಬರುತ್ತದೆ...."

"ಏ,....ಅವನೇನು ನಿನ್ನನ್ನು ಹರಿದುಕೊಂಡು ತಿನ್ನುವನೆ?"—ಬೀ ಅಮ್ಮಾ ರೇಗಿ ಹೇಳುತ್ತಿದ್ದರು.

"ಇಲ್ಲ....ಆದರೆ...."—ನಾನು ನಿರುತ್ತರಳಾಗುತ್ತಿದ್ದೆ.

ಬಳಿಕ ಗುಟ್ಟಾಗಿ ಚರ್ಚೆ ನಡೆಯುತ್ತಿತ್ತು. ಬಹಳ ವಿಚಾರ ವಿನಿಮಯದ ನಂತರ ಹಿಂಡಿಯ ಕಬಾಬ್‌ಗಳನ್ನು ಮಾಡಲಾಯಿತು. ಭಾವನೊಡನೆ ಚೇಷ್ಟೆ ಮಾಡಲಿಕ್ಕೆ ಆ ದಿನ ಬೀ ಆಪಾ ಕೂಡ ಎಷ್ಟೋ ಸಲ ಮುಗುಳುನಗೆ ನಕ್ಕರು.

"ನೋಡು, ನಗಬಾರದು. ಇಲ್ಲವಾದರೆ ಆಟವೆಲ್ಲ ಕೆಟ್ಟುಬಿಡುತ್ತದೆ" ಎಂದು ಎಚ್ಚರಿಕೆ ಕೊಟ್ಟರು.

"ನಗುವದಿಲ್ಲ"—ನಾನು ವಚನ ಕೊಟ್ಟೆ.

"ಊಟ ಮಾಡಿರಿ"—ನಾನು ಮಣೆಯಮೇಲೆ ಊಟದ ತಾಟು ಇಡುತ್ತ ಹೇಳಿದೆ.

ಬಳಿಕ ತಟ್ಟೆಯ ಕೆಳಗೆ ಇಟ್ಟಿದ್ದ ಚೆಂಬುವಿನಿಂದ ಕೈ ತೊಳೆದುಕೊಳ್ಳುತ್ತಿದ್ದ

ಸಮಯದಲ್ಲಿ ರಾಹತ್ ನನ್ನ ಕಡೆ ತಲೆಯಿಂದ ಕಾಲುಗಳವರೆಗೆ ನೋಡಿದಾಗ ನಾನು ನಾಗಾಲೋಟದಿಂದ ಅಲ್ಲಿಂದ ಓಡಿದೆ.

ನನ್ನ ಎದೆ ಡವಡವ ಹಾರಹತ್ತಿತ್ತು—"ಅಲ್ಲಾ, ತೋಬಾ ಎಂಥ ರಾಕ್ಷಸೀ ಕಣ್ಣವೆ ಪಾಪೀದು...."

"ಹೋಗೆ ಬೇವಾರ್ಸಿ, ನೋಡಿಯಾದರು ನೋಡೆ—ಅವನು ಹೇಗೆ ಮುಖ ಮಾಡುತ್ತಿದ್ದಾನೆ. ಇವಳಂತು ಎಲ್ಲ ಮೋಜನ್ನು ಸಪ್ಪೆ ಮಾಡಿದಳು."

ಬೀ ಅಮ್ಮಾ ಅಡ್ಡಿ ಮಾಡಿದಳು. ಆದರೆ ನಾನು ಜಪ್ಪೆನ್ನಲಿಲ್ಲ.

ಆಪಾಜಿ ಒಂದು ಸಲ ನನ್ನತ್ತ ನೋಡಿದರು. ಅವರ ಕಣ್ಣುಗಳಲ್ಲಿ ಬೇಡಿಕೆಯಿತ್ತು, ಹಿಂದಿರುಗಿ ಹೋದ ಬರಾತ್‌ಗಳ ಧೂಳು ಇತ್ತು ಮತ್ತು ಚೌಥಿಯ ಹಳೆಯ ಉಡುವುಗಳ ರೀತಿಯ ಉದಾಸೀನತೆಯೂ ಇತ್ತು. ನಾನು ತಲೆ ತಗ್ಗಿಸಿಕೊಂಡು ಹೋಗಿ ಪುನಃ ಕಂಬಕ್ಕೆ ಒರಗಿ ನಿಂತುಕೊಂಡೆ.

ರಾಹತ್ ಮೌನದಿಂದ ಊಟ ಮಾಡುತ್ತಿದ್ದ. ನನ್ನ ಕಡೆ ನೋಡಲಿಲ್ಲ. ಹಿಂಡಿಯ ಕಬಾಬ್‌ಗಳನ್ನು ತಿನ್ನುತ್ತಿದ್ದುದನ್ನು ನೋಡಿ ನಾನು ಚೇಷ್ಟೆ ಮಾಡಬೇಕಿತ್ತು, ಅಟ್ಟಹಾಸದಿಂದ ನಗಬೇಕಾಗಿತ್ತು. ಆದರೆ ಯಾರೋ ನನ್ನ ಉಸಿರುನಾಳವನ್ನು ಹಿಚುಕಿ ಇಟ್ಟಂತೆ ಆಗಿತ್ತು.

ಬೀ ಅಮ್ಮಾ ಕೆರಳಿ ನನ್ನನ್ನು ವಾಪಸ್ ಕರೆಸಿಕೊಂಡರು ಮತ್ತು ಬಾಯಿಯಲ್ಲಿಯೆ ಶಪಿಸಹತ್ತಿದರು. ಅವನಂತು ಆನಂದದಿಂದ ತಿನ್ನುತ್ತಿದ್ದಾನೆ. ಪಾಪಿ, ನನ್ನಂತು ತಿನ್ನದಿದ್ದರೆ ಸಾಕು—ಎಂದು ಈಗ ಅವರಿಗೆ ನಾನು ಹೇಗೆ ಹೇಳಬೇಕು.

"ರಾಹತ್ ಭಾಯಿ, ಕೋಫ್ತಾ ಸೇರಿದವೆ?"—ಬೀ ಅಮ್ಮಾ ಕಲಿಸಿಕೊಟ್ಟ ನಂತರ ಕೇಳಬೇಕಾಯಿತು.

ಉತ್ತರ ಏನೂ ಇಲ್ಲ.

"ಹೇಳಿರಲ್ಲ?"

"ಅರೀ, ಸರಿಯಾಗಿ ಹೋಗಿ ಕೇಳು"—ಬೀ ಅಮ್ಮಾ ಗುದ್ದಿದರು.

"ತಾವು ತಂದುಕೊಟ್ಟಿರಿ. ನಾವು ತಿಂದುಬಿಟ್ಟೆವು. ರುಚಿಯಾಗಿಯೇ ಇರಬಹುದು."

"ಅರೆ, ವಾಹ್‌ರೆ ಜಂಗಲಿ"—ಬೀ ಅಮ್ಮಾಗೆ ತಡೆದುಕೊಳ್ಳಲಾಗದ್ದಕ್ಕೆ ಅಂದರು—"ನಿಮಗೆ ಗೊತ್ತೇ ಆಗಲಿಲ್ಲವೇನು? ಎಷ್ಟು ಆನಂದದಿಂದ ಹಿಂಡಿಯ ಕಬಾಬ್ ತಿಂದುಬಿಟ್ಟಿರಿ."

"ಹಿಂಡಿಯವು....? ಅರೆ, ಹಾಗಾದರೆ ದಿನಾಲು ತಿನ್ನುವುದಾದರೂ ಏನು? ನನಗಂತು, ಹಿಂಡಿ ಮತ್ತು ಹೊಟ್ಟು ತಿನ್ನುವುದು ರೂಢಿಯಾಗಿಬಿಟ್ಟಿದೆ."

—ರಾಹತ್ ಮೆಲ್ಲಗೆ ಹೇಳಿದ.

ಬೀ ಅಮ್ಮಾನ ಮುಖ ಕಳೆಗುಂದಿತು. ಬೀ ಆಪಾನ ಬಾಗಿದ ರೆಪ್ಪೆಗಳು ಪುನಃ

ಮೇಲಕ್ಕೇಳಲಿಲ್ಲ. ಮರುದಿನ ಆಪಾ ದಿನಾಲು ಮಾಡುವದರ ಎರಡಷ್ಟು ಹೋಲಿಗೆ ಮಾಡಿದಳು. ಸಂಜೆಗೆ ನಾನು ಊಟವನ್ನು ತೆಗೆದುಕೊಂಡುಹೋದಾಗ ರಾಹತ್— "ಹೇಳಿರಿ, ಇಂದೇನು ತಂದಿರುವಿರಿ? ಇಂದಂತು ಕಟ್ಟಿಗೆಯ ಪುಡಿಯ ಸರ್ತಿ ಇದೆ"—ಅಂದರು.

"ನಮ್ಮಲ್ಲಿಯ ಊಟ ತಮಗೆ ಸೇರುವದಿಲ್ಲವೆ?"—ನಾನು ಬೆಂಕಿಯಾಗಿ ಕೇಳಿದೆ.

"ಹಾಗೇನು ಇಲ್ಲ, ಸ್ವಲ್ಪ ವಿಚಿತ್ರವಾಗಿ ಅನಿಸುತ್ತದೆ. ಒಮ್ಮೆ ಹಿಂಡಿಯ ಕಬಾಬ್ ಆದರೆ ಮತ್ತೊಮ್ಮೆ ಹೊಟ್ಟನ ಕಾಯಿಪಲ್ಲೆ."

ನನ್ನ ಅಂಗಾಂಗಗಳಲ್ಲಿ ಬೆಂಕಿ ಹತ್ತಿತು. ನಾವು ತಂಗಳು ಉಂಡು ಇವನಿಗೆ ಆನೆಯ ಆಹಾರ ಕೊಟ್ಟೆವು. ತುಪ್ಪ ಬಸಿಯುತ್ತಿದ್ದ ಪರಾಠಾಗಳನ್ನು ಕೊಟ್ಟೆವು. ನನ್ನ ಬೀ ಆಪಾಗೆ ಕಾಢೆಯ ಭಾಗ್ಯವಿರಲಿಲ್ಲ. ಅವನಿಗೆ ಹಾಲು-ಕೆನೆಯನ್ನು ನುಂಗಿಸಿದೆವು. ನಾನು ರೊಚ್ಚಿಗೆದ್ದು ಹೊರಟುಬಂದೆ.

ಬೀ ಅಮ್ಮಾಗೆ ಮುಂಹ್ ಬೋಲಿ ಬಹನ್ ಹೇಳಿದ ಕ್ರಮವು ಕೆಲಸಕ್ಕೆ ಬಂದಿತು. ರಾಹತ್ ದಿನದ ಬಹು ಭಾಗವನ್ನು ಮನೆಯಲ್ಲಿಯೇ ಕಳೆಯಹತ್ತಿದ. ಅಕ್ಕನಂತು ಒಲೆಯಲ್ಲಿ ದುಃಖ ತೋಡಿಕೊಳ್ಳುತ್ತಿದ್ದಳು. ಬೀ ಅಮ್ಮಾ ಚೌಥಿಯ ಉಡುಪನ್ನು ಹೊಲೆಯುತ್ತಿದ್ದರು ಮತ್ತು ರಾಹತ್‌ನ ಕೆಟ್ಟ ಕಣ್ಣುಗಳು ಬಾಣಗಳಾಗಿ ನನ್ನ ಎದೆಯಲ್ಲಿ ಚುಚ್ಚುತ್ತಿದ್ದವು. ಮಾತಿರಲಿ, ಇಲ್ಲದಿರಲಿ, ಚುಡಾಯಿಸುವದು, ಊಟ ಮಾಡುತ್ತಿದ್ದಾಗ ಒಮ್ಮೆ ನೀರಿನ, ಇನ್ನೊಮ್ಮೆ ಉಪ್ಪಿನ ನೆಪದಿಂದ ಮಾತು ತೆಗೆಯುವದು ಮತ್ತು ಜೊತೆಗೆ ಅಂಥಿಂಥ ಮಾತುಕತೆ. ನಾನು ನಾಚಿ ಬೀ ಆಪಾನ ಬಳಿ ಬಂದು ಕುಳಿತುಕೊಳ್ಳುತ್ತಿದ್ದೆ. ಯಾರದೋ ಆಡಿಗೆ ಹುಲ್ಲು ಯಾರು ಹಾಕಬೇಕು. ಏ ಬೀ, ನನಗೆ ನಿನ್ನ ಹೋರಿಗೆ ಮುಗುದಾರ ಹಾಕಲು ಸಾಧ್ಯವಿಲ್ಲ—ಹೀಗೆ ಸ್ಪಷ್ಟವಾಗಿ ಹೇಳಿಬಿಡಬೇಕೆಂದು ಮನಸ್ಸು ಬಯಸಿತು. ಆದರೆ ಬೀ ಆಪಾನ ಕೆದರಿದ ಕೂದಲಮೇಲೆ ಒಲೆಯ ಹಾರುತ್ತಿರುವ ಬೂದಿ.... ಇಲ್ಲ!.... ನನ್ನ ಎದೆ ಧಸಕ್ ಎಂದಿತು. ನಾನು ಅವರ ಬಿಳಿಯ ಕೂದಲನ್ನು ಕೇಶಪಾಶದಲ್ಲಿ ಅಡಗಿಸಿದೆ. "ನಾಶವಾಗಲಿ ಈ ಬೇವಾರ್ಸಿ ನೆಗಡಿ! ದೀನಳ ಕೂದಲು ಹಣ್ಣಾಗಹತ್ತಿತು."

ರಾಹತ್ ಪುನಃ ಯಾವದೋ ನೆಪದಿಂದ ಕರೆದ.

"ಊಂಹು"—ನಾನು ರೇಗಿದೆ. ಆದರೆ ಬೀ ಆಪಾ, ಕೊಯ್ದ ಕೋಳಿಯ ಹಾಗೆ, ಹೊರಳಿ ನೋಡಿದಾಗ ನಾನು ಹೊರಡಲೇಬೇಕಾಯಿತು.

"ತಾವು ನಮ್ಮಮೇಲೆ ಕೋಪಿಸಿಕೊಂಡಿರುವಿರಿ"—ರಾಹತ್ ನೀರಿನ ಚೆಂಬು ತೆಗೆದುಕೊಂಡು ನನ್ನ ಮುಂಗೈಯನ್ನು ಹಿಡಿದುಕೊಂಡ. ನನ್ನ ಉಸಿರು ಹಾರಿ ಹೋಯಿತು. ಕೈ ಕೊಸರಿಕೊಂಡು ಓಡಿದೆ.

"ಏನು ಹೇಳುತ್ತಿದ್ದರು"—ಬೀ ಆಪಾ ನಾಚಿಕೆ, ಲಜ್ಜೆಗಳಿಂದ ಕುಂದಿದ ಧ್ವನಿ

ಯಲ್ಲಿ ಕೇಳಿದರು. ನಾನು ಮೌನವಾಗಿ ಅವರ ಮುಖವನ್ನು ದಿಟ್ಟಿಸಹತ್ತಿದೆ. ಏನು ಹೇಳಲು ಸಾಧ್ಯವಿತ್ತು ?

" ಯಾರು ಅಡಿಗೆ ಮಾಡಿದ್ದು. ವಾಹ್ ವಾಹ್....ಊಟ ಮಾಡುತ್ತಲೇ ಹೋಗಬೇಕು, ಅಡಿಗೆ ಮಾಡಿದವಳ ಕೈ ತಿನ್ನಬೇಕು ಎಂದೆನಿಸುತ್ತದೆ....ಓ....ಇಲ್ಲ ತಿನ್ನಬಾರದು, ಆದರೆ ಚುಂಬಿಸಬೇಕು ಎಂದು ಹೇಳುತ್ತಿದ್ದರು—ನಾನು ಹೇಳಲಾರಂಭಿಸಿದೆ ಮತ್ತು ಬೀ ಆಪಾಳ ಅಂದಗೆಟ್ಟ ಅರಿಸಿಣ ಮತ್ತು ಹವಿಜಗಳ ವಾಸನೆಯಲ್ಲಿ ಕೊಳೆಯುತ್ತಿದ್ದ ಕೈಗಳನ್ನು ನನ್ನ ಕೆನ್ನೆಗೆ ಇಟ್ಟುಕೊಂಡೆ. ನನ್ನ ಕಣ್ಣೀರು ಉಕ್ಕಿಬಂದವು. ನಾನು ಯೋಚಿಸಿದೆ—" ಮುಂಜಾವಿನಿಂದ ಸಂಜೆಯವರೆಗೆ ವ್ಯಸ್ತವಾಗಿಯೇ ಇರುವ ಈ ಕೈಗಳ ಬಿಟ್ಟಿ ಕೆಲಸ ಎಂದು ಕೊನೆಗೊಳ್ಳುತ್ತದೆ. ಇವುಗಳನ್ನು ಕೊಂಡುಕೊಳ್ಳುವವ ಎಂದಾದರು ಬರಲಿಕ್ಕಿಲ್ಲವೆ ? ಇವುಗಳನ್ನು ಯಾರಾದರು ಪ್ರೀತಿಯಿಂದ ಚುಂಬಿಸಲಿಕ್ಕಿಲ್ಲವೆ ? ಇವುಗಳ ಮೇಲೆ ಮದರಂಗಿಯ ಸಿಂಗಾರವಾಗಲಿಕ್ಕಿಲ್ಲವೆ ?.... ಇವುಗಳಲ್ಲಿ ಸುಹಾಗ್ (ಸೌಭಾಗ್ಯ) ನ ಅತ್ತರ್ ನೆಲಸಲಿಕ್ಕಿಲ್ಲವೇ ?....? " ಜೋರಾಗಿ ಚೀರಿಬಿಡಲೆ ಎಂದು ಮನಸ್ಸಾಯಿತು.

" ಮತ್ತೇನು ಹೇಳಿದರು."

ಬೀ ಆಪಾಳ ಕೈಗಳಂತು ಬಹಳ ಅಂದಗೆಟ್ಟಿದ್ದವು. ಆದರೆ ಧ್ವನಿಯು ಎಷ್ಟು ರಸಭರಿತ ಮತ್ತು ಮಧುರವಾಗಿ ಇತ್ತೆಂದರೆ, ರಾಹತ್‌ನಿಗೆ ಕಿವಿ ಇದ್ದಿದ್ದರೆ....ಆದರೆ ರಾಹತ್‌ನಿಗೆ ಕಿವಿಗಳಿರಲಿಲ್ಲ, ಮೂಗು ಇರಲಿಲ್ಲ, ಕೇವಲ ನರಕದಂಥ ಹೊಟ್ಟೆ ಇತ್ತು.

" ಇಷ್ಟು ಕೆಲಸ ಮಾಡಬೇಡವೆಂದು ನಿನ್ನ ಅಕ್ಕನಿಗೆ ಹೇಳು. ಅವರು ಕಾಢೆ ಕುಡಿಯಲಿ ಎಂದು ಹೇಳುತ್ತಿದ್ದರು."

" ಹೋಗೆ, ಸುಳ್ಳು ಹೇಳುತ್ತಿ ! "

" ಅರೆ, ವಾಹ್, ಸುಳ್ಳು ನಿಮ್ಮ ಆ ಅವರು ಹೇಳುತ್ತಿರಬಹುದು...."

" ಅಯ್ಯೊ, ಸುಮ್ಮನಾಗೆ ಕೆಟ್ಟವಳೆ "—ಅವರು ನನ್ನ ಬಾಯಿ ಮುಚ್ಚಿದರು.

" ನೋಡು ಸ್ವೇಟರ್ ಹೆಣೆದಾಯ್ತು. ಅವರಿಗೆ ಕೊಟ್ಟು ಬಾ. ಆದರೆ ನನ್ನ ಹೆಸರು ಹೇಳಕೂಡದು, ನನ್ನಾಣೆ."

" ಇಲ್ಲ ಬೀ ಆಪಾ. ಅವರಿಗೆ ಸ್ವೇಟರ್ ಕೊಡಬೇಡ. ನಿಮ್ಮ ಈ ಮುಷ್ಟಿಯಷ್ಟು ಎಲುವುಗಳಿಗೆ ಸ್ವೇಟರ್‌ದ ಅವಶ್ಯಕತೆ ಎಷ್ಟೊಂದಿದೆ."—ನಾನು ಹೇಳಬಯಸಿದೆ. ಆದರೆ ಹೇಳಲು ಆಗಲಿಲ್ಲ !

" ಆಪಾ ಬೀ, ನೀವು ಸ್ವತಃ ಯಾಕೆ ತೊಟ್ಟುಕೊಳ್ಳುವದಿಲ್ಲ ? "

" ಅರೆ, ನನಗೆ ಅವಶ್ಯಕತೆ ಏನಿದೆ ? ಒಲೆಯ ಹತ್ತಿರವಂತು ಹಾಗೆಯೆ ಸೆಕೆ ಇರುತ್ತದೆ."

ಸ್ವೇಟರ್ ನೋಡಿ ರಾಹತ್ ತನ್ನ ಒಂದು ಹುಬ್ಬನ್ನು ತುಂಟುತನದಿಂದ

ಮೇಲಕ್ಕೇರಿಸಿ ಕೇಳಿದ—" ಈ ಸ್ವೇಟರ್‌ಅನ್ನು ತಾವು ಹೆಣೆದಿರುವಿರೇನು ? "

" ಇಲ್ಲವಲ್ಲ."

" ಹಾಗಾವರೆ ನೋಡಿ, ನಾವು ತೊಟ್ಟುಕೊಳ್ಳುವದಿಲ್ಲ."

ಅವನ ಮುಖವನ್ನು ಪರಚಿಬಿಡಲೆ ಎಂದು ಮನಸ್ಸಾಯಿತು. ದುಷ್ಟ, ಮಣ್ಣಿನ ರಾಸಿಯೆ, ಈ ಸ್ವೇಟರ್‌ಅನ್ನು ಹೆಣೆದಿರುವ ಕೈಗಳು ಒಳ್ಳೆಯ ಗುಲಾಮ ಆಗಿರುತ್ತವೆ. ಅವುಗಳ ಒಂದೊಂದು ಬಂಧನದಲ್ಲಿ ಯಾರೋ ದುರ್ಭಾಗ್ಯಳ ಬಯಕೆಗಳ ಕೊರಳು ಗಳು ಸಿಕ್ಕಿಕೊಂಡಿವೆ. ತೊಟ್ಟಿಲು ತೂಗಲು ಹುಟ್ಟಿರುವ ಕೈಗಳು ಇದನ್ನು ಹೆಣೆದಿವೆ. ಈ ಕೈಗಳು ಒಡೆದ ಬಟನ್‌ಗಳನ್ನು ಹಚ್ಚಲು, ಹರಿದ ಸೆರಗನ್ನು ರಫ್ ಮಾಡಲು ನಿರ್ಮಿತಗೊಂಡಿವೆ. ಇವುಗಳನ್ನು ಹಿಡಿದುಕೊ ಕತ್ತೆ ಮತ್ತು ಈ ಎರಡು ಚುಕ್ಕಾಣಿ ಗಳು ದೊಡ್ಡ ದೊಡ್ಡ ಬಿರುಗಾಳಿಗಳ ಪೆಟ್ಟುಗಳಿಂದ ನಿಮ್ಮ ಜೀವನದ ನೌಕೆಯನ್ನು ರಕ್ಷಿಸಿ ದಾಟಿಸುತ್ತವೆ. ಇವು ಸಿತಾರ್‌ಅನ್ನು ನುಡಿಸಲಿಕ್ಕಿಲ್ಲ. ಮಣಿಪುರ ಮತ್ತು ಭರತನಾಟ್ಯಗಳನ್ನು ತೋರಿಸಲು ಶಕ್ಯವಿರಲಿಕ್ಕಿಲ್ಲ. ಇವುಗಳಿಗೆ ಪಿಯಾನೊ ವಾದನಕ್ಕನುಗುಣವಾಗಿ ನೃತ್ಯ ಮಾಡುವುದನ್ನು ಕಲಿಸಿರಲಿಕ್ಕಿಲ್ಲ. ಇವುಗಳಿಗೆ ಹೂವು ಗಳೊಡನೆ ಆಡುವ ಭಾಗ್ಯ ಲಭಿಸಿಲ್ಲ ; ಆದರೆ ಈ ಕೈಗಳು, ನಿನ್ನ ದೇಹಕ್ಕೆ ಬೇಕಾದ ಉಡುಪನ್ನು ಹೊಲಿಯುಲು ಮುಂಜಾವಿನಿಂದ ಸಂಜೆಯವರೆಗೆ ದುಡಿಯುತ್ತವೆ. ಸಬಕಾರ ಮತ್ತು ಸೋಡಾಗಳಲ್ಲಿ ಗೋತ ಹೊಡೆಯುತ್ತವೆ. ಒಲೆಯ ಬಿಸಿಯನ್ನು ಸಹಿಸುತ್ತವೆ. ನೀವು ಉಜ್ವಲ, ಶುಭ್ರ ಬೂಟಾಟಿಕೆಯ ದಾಸಯ್ಯನ ಸೋಗು ಹಾಕಿ ಕೊಂಡು ಇರಲು ನಿಮ್ಮ ಎಲ್ಲ ಕೊಳೆಗಳನ್ನು ಈ ಕೈಗಳು ತೊಳೆಯುತ್ತವೆ. ಪರಿಶ್ರಮವು ಇವುಗಳಲ್ಲಿ ಗಾಯಗಳನ್ನು ತುಂಬಿಬಿಟ್ಟಿದೆ. ಇವುಗಳಲ್ಲಿ ಎಂದೂ ಬಳೆಗಳು ಖಣಖಣ ಶಬ್ದ ಮಾಡಿಲ್ಲ. ಇವುಗಳನ್ನು ಎಂದೂ ಯಾರೂ ಪ್ರೀತಿಯಿಂದ ಹಿಡಿದುಕೊಂಡಿಲ್ಲ.

ಆದರೆ ನಾನು ಸುಮ್ಮನಿದ್ದೆ. ನನ್ನ ಹೊಸ ಹೊಸ ಗೆಳತಿಯರು ನನ್ನ ತಲೆಯನ್ನು ಕೆಡಿಸಿದ್ದಾರೆ ಮತ್ತು ನನಗೆ ಎಂಥ ಹೊಸ ಹೊಸ ಮಾತುಗಳನ್ನು—ಭಯಾನಕ, ಮೃತ್ಯುವಿನ ಮಾತುಗಳು, ಹಸಿವು ಮತ್ತು ಕ್ಷಾಮಗಳ ಮಾತುಗಳು, ಸ್ಪಂದಿಸುವ ಹೃದಯಗಳನ್ನು ತಟ್ಟನೆ ಸುಮ್ಮನಾಗಿಸುವಂಥ ಮಾತುಗಳು—ಕಲಿಸಿಕೊಡುತ್ತಿದ್ದಾರೆ ಎಂದು ಬೀ ಅಮ್ಮಾ ಹೇಳುತ್ತಾರೆ.

" ಈ ಸ್ವೇಟರ್‌ಅನ್ನು ತಾವೇ ತೊಟ್ಟುಕೊಳ್ಳಿರಿ. ನೋಡಿರಲ್ಲ, ತಮ್ಮ ಕುರ್ತಾ ಎಷ್ಟು ತೆಳ್ಳಗಿದೆ."

ಕಾಡುಬೆಕ್ಕಿನ ಹಾಗೆ ನಾನು ಅವನ ಮುಖ, ಮೂಗು, ಕೊರಳಪಟ್ಟಿ ಮತ್ತು ಕೂದಲುಗಳನ್ನು ಪರಚಿ ಹಾಕಿ ನನ್ನ ಹೊರಸಿನ ಮೇಲೆ ಹೋಗಿ ಬಿದ್ದುಕೊಂಡೆ.

ಬೀ ಆಪಾ ಕೊನೆಯ ರೊಟ್ಟಿಯನ್ನು ಹಾಕಿ ಬೇಗ ಬೇಗ ಡಬರಿಯಲ್ಲಿ ಕೈ ತೊಳೆದು ಕೊಂಡು ಸೆರಗಿನಿಂದ ಒರೆಸಿಕೊಳ್ಳುತ್ತ ನನ್ನ ಬಳಿ ಬಂದು ಕುಳಿತರು.

"ಏನು ಹೇಳಿದರು?"—ಅವರಿಗೆ ತಡೆದುಕೊಳ್ಳಲು ಆಗದ್ದಕ್ಕೆ ಡವಡವಿಸುತ್ತಿದ್ದ ಹೃದಯದಿಂದ ಕೇಳಿದರು.

"ಬೀ ಆಪಾ....ಈ ರಾಹತ್ ಭಾಯಿ ಬಹಳ ಕೆಟ್ಟವರಿದ್ದಾರೆ."

ಇಂದು ಎಲ್ಲವನ್ನು ಹೇಳಿಬಿಡಬೇಕೆಂದು ನಾನು ಯೋಚಿಸಿದೆ.

"ಯಾಕೆ?"—ಅವರು ಮುಗುಳುನಕ್ಕರು.

"ನನಗೆ ಅವರು ಸೇರುವದಿಲ್ಲ....ಇಲ್ಲಿ ನೋಡಿ....ನನ್ನ ಎಲ್ಲ ಬಳೆಗಳು ಒಡೆದು ಹೋಗಿವೆ"—ನಾನು ಕಂಪಿಸುತ್ತ ಹೇಳಿದೆ.

"ಬಹಳ ತುಂಟರಿದ್ದಾರೆ"—ಅವರು 'ರೊಮಾಂಟಿಕ್ ಧ್ವನಿಯಲ್ಲಿ ನಾಚುತ್ತ ಅಂದರು.

"ಬೀ ಆಪಾ....ಕೇಳಿ ಆಪಾ....ಈ ರಾಹತ್ ಒಳ್ಳೆಯ ಮನುಷ್ಯರಲ್ಲ"—ನಾನು ಉರಿದೆದ್ದು ಹೇಳಿದೆ—"ಇಂದು ಬೀ ಅಮ್ಮಾಗೆ ಹೇಳಿಬಿಡುವೆ."

"ಏನಾಯಿತು?"—ಬೀ ಅಮ್ಮಾ ನಮಾಜ್ ಮಾಡುವ ವಸ್ತುಗಳನ್ನು ಹರವುತ್ತ ಕೇಳಿದರು.

"ನನ್ನ ಬಳೆಗಳನ್ನು ನೋಡಿ ಬೀ ಅಮ್ಮಾ."

"ರಾಹತ್ ಒಡೆದು ಹಾಕಿದನೆ?"—ಬೀ ಅಮ್ಮಾ ಸಂತೋಷದಿಂದ ಉಲಿದರು.

"ಹಾಂ."

"ಚೆನ್ನಾಗಿ ಮಾಡಿದ್ದಾನೆ. ನೀನು ಅವನನ್ನು ಬಹಳ ಗೋಳಾಡಿಸುತ್ತಿದ್ದಿ. ಅರೆ, ನಿನ್ನ ಉಸಿರು ಏಕೆ ಹಾರಿದೆ? ಮೇಣದಿಂದ ಮಾಡಿದ ಗೊಂಬೆಯಂತೆ ಸ್ವಲ್ಪ ಕೈ ತಾಕಿದರಾಯ್ತು ಕರಗಿಬಿಟ್ಟೆ." ಬಳಿಕ "ಒಳ್ಳೆಯದು, ನೀನು ಕೂಡ ಚೌಥಿಯಲ್ಲಿ ಮುಯ್ಯಿ ತೀರಿಸಿಕೊ. ಮಿಯಾಂಜಿ ನೆನಪು ಇಡುವಂತೆ ಮಾಡು," ಅಂದು ಬೆನ್ನು ತಟ್ಟಿದರು.

ಇದನ್ನು ಹೇಳಿ ಅವರು ರೇಶ್ಮೆಯ ವಸ್ತ್ರವನ್ನು ಹೊದ್ದುಕೊಂಡರು.

ಮುಂಹ್ ಬೋಲಿ ಬಹನ್ ಜೊತೆ ಪುನಃ ಕಾನ್ಫರನ್ಸ್ ನಡೆಯಿತು. ಕಾರ್ಯಗಳು ಆಶೆಯ ದಾರಿಯಲ್ಲಿ ನಡೆಯುತ್ತಿದ್ದುದನ್ನು ನೋಡಿ ಅಳತೆ ಮೀರಿದ ಸಂತೋಷದಿಂದ ಮೆಲುನಗೆ ಬೀರಿದರು.

"ಏ....ನೀನಂತು ಬಹಳ ಸೋಮಾರಿ. ನಾವಂತು ನಮ್ಮ ಭಾವಂದಿರಿಗೆ ದೇವರಾಣೆಗೂ ಬಹಳ ಗೋಳು ಹೊಯ್ದುಕೊಳ್ಳುತ್ತಿದ್ದೆವು."—ಮುಂಹ್ ಬೋಲಿ ಬಹನ್ ಅಂದರು.

ಅವರು ನನಗೆ ಭಾವಂದಿರ ಜೊತೆ ಗೇಲಿ ಮಾಡುವ ರೀತಿಗಳನ್ನು ಹೇಳಹತ್ತಿದರು: ಯಾವ ಪ್ರಕಾರ ಅವರು ಗೇಲಿಯ ರಾಮಬಾಣದಂಥ ಕ್ರಮಗಳಿಂದ ತಮ್ಮ ಇಬ್ಬರು ಅಕ್ಕಂದಿರ ಮದುವೆಗಳನ್ನು ಮಾಡಿಸಿದ್ದರು. ಅವರಿಬ್ಬರ ನಾವೆಗಳನ್ನು ದಾಟಿಸುವ

ಪ್ರಯತ್ನಗಳೆಲ್ಲ ಮುಗಿದಿದ್ದವು. ಒಬ್ಬ ಭಾವ ಹಕೀಮ್‌ಜಿ ಇದ್ದರು. ಆ ಬಡಪಾಯಿ ಎಲ್ಲಿಯೇ ಹೋಗಲಿ ಹುಡುಗಿಯರು, ಬಾಲೆಯರು, ಅವರ ಗೇಲಿ ಮಾಡುತ್ತಿದ್ದರು ಹಾಗು ಅವರು ನಾಚುತ್ತಿದ್ದರು. ನಾಚುತ್ತ ನಾಚುತ್ತ ಅವರ ನಾಡಿಯ ಬಡಿತವು ಹೆಚ್ಚಾಗುತ್ತಿತ್ತು. ಒಂದು ದಿನ ಮಾಮೂ ಸಾಹೇಬರನ್ನು, ನನ್ನನ್ನು ಗುಲಾಮಿಯಲ್ಲಿ ತೆಗೆದುಕೊಳ್ಳಿರಿ ಎಂದು ಕೇಳಿಕೊಂಡರು.

ಇನ್ನೊಬ್ಬರು ವಾಯುಸ್‌ರಾಯರ ಕಚೇರಿಯಲ್ಲಿ ಕ್ಲಾರ್ಕ ಇದ್ದರು. ಅವರು ಹೊರಗೆ ಬರುತ್ತಲೆ ಹುಡುಗಿಯರು ಚೇಷ್ಟೆ ಮಾಡಲು ಆರಂಭಿಸುತ್ತಿದ್ದರೆಂದು ಕೇಳಿ ಬಂದಿತ್ತು. ಒಮ್ಮೊಮ್ಮೆ ಪಾನಪಟ್ಟಿಗಳಲ್ಲಿ ಮೆಣಸಿನಕಾಯಿ ತುಂಬಿ ಕಳಿಸುತ್ತಿದ್ದರು. ಇನ್ನೊಮ್ಮೆ ಶಾವಿಗೆಯಲ್ಲಿ ಉಪ್ಪು ಹಾಕಿ ತಿನ್ನಿಸಿದ್ದರು.

"ಇದು ನೋಡು, ಅವರಂತು ದಿನಾಲು ಬರಹತ್ತಿದರು. ಬಿರುಗಾಳಿ ಬರಲಿ, ಮಳೆ ಸುರಿಯಲಿ, ಅವರು ಬರದೇ ಇರುವದು ಸಾಧ್ಯವೆ? ಕೊನೆಗೊಂದು ದಿನ ಕೇಳಿಸಿಯೇಬಿಟ್ಟರು. ಅವರ ಮನೆಯಲ್ಲಿ ಮದುವೆ ಮಾಡಿಸಿರೆಂದು ತಮ್ಮ ಪರಿಚಯಸ್ಥರಿಗೆ ಕೇಳಿದರು. "ಯಾರ ಜೊತೆ" ಎಂದು ಕೇಳಿದರೆ, "ಯಾರ ಜೊತೆಗಾದರೂ ಮಾಡಿಸಿರಿ" ಎಂದರು.

ನಾನು ಹೇಳುತ್ತಿರುವದು ದೇವರಾಣೆಗೂ ಸುಳ್ಳಲ್ಲ. ಅಕ್ಕನ ರೂಪವನ್ನು ನೋಡಿದರೆ ಸಾಕು ಮುಖ ಕಿವುಚಬೇಕು. ಸಣ್ಣವಳಂತು ದೇವರೇ ಗತಿ. ಒಂದು ಕಣ್ಣು ಪೂರ್ವವಾದರೆ ಇನ್ನೊಂದು ಕಣ್ಣು ಪಶ್ಚಿಮ. ಹದಿನೈದು ತೊಲೆ ಬಂಗಾರ ಕೊಟ್ಟಿದ್ದಾನೆ ಅವರ ತಂದೆ ಮತ್ತು ದೊಡ್ಡ ಸಾಹೇಬರ ಕಚೇರಿಯಲ್ಲಿ ನೌಕರಿ ಬೇರೆ ಕೊಡಿಸಿದ್ದಾರೆ.

"ಹಾಂ ಹಾಂ! ಯಾರ ಹತ್ತಿರ ಹದಿನೈದು ತೊಲ ಬಂಗಾರವಿದೆಯೊ ಮತ್ತು ದೊಡ್ಡ ಸಾಹೇಬರ ಕಚೇರಿಯಲ್ಲಿ ನೌಕರಿ ಉಂಟೊ ಅವರಿಗೆ ಹುಡುಗ ಸಿಗುವದು ತಡವೆ?"—ಬೀ ಅಮ್ಮಾ ನಿಟ್ಟುಸಿರುಬಿಟ್ಟು ಹೇಳಿದರು.

"ವಿಷಯ ಹಾಗಿಲ್ಲ ತಂಗಿ! ಈಗಿನ ಕಾಲದ ಹುಡುಗರ ಮನಸ್ಸಂತು ಬುಡವಿಲ್ಲದ ಗಡಿಗೆಯ ಹಾಗೆ ಇರುತ್ತದೆ. ಯಾವ ಕಡೆ ಉರಳಿಸಿದರೆ ಆ ಕಡೆ ಉರಳುತ್ತದೆ."

"ಆದರೆ ರಾಹತ್ ಅಂತು ಗಡಿಗೆಯಲ್ಲ, ಒಳ್ಳೆಯ ಗಟ್ಟಿಮುಟ್ಟಾದ ಪರ್ವತ. ಅದರ ಬಾಗುವಿಕೆಯಲ್ಲಿ ನಾನೇ ನುಚ್ಚು-ನೂರಾಗಬಾರದು"—ನಾನು ಯೋಚಿಸಿದೆ.

ಆದರೂ ನಾನು ಬೀ ಆಪಾನ ಕಡೆ ನೋಡಿದೆ. ಅವರು ಹೊಸಲಮೇಲೆ ಕುಳಿತು ಮೌನವಾಗಿ ಹಿಟ್ಟು ನಾದುತ್ತಿದ್ದರು ಮತ್ತು ಎಲ್ಲವನ್ನು ಕೇಳುತ್ತಲಿದ್ದರು. ಅವರ ಶಕ್ತಿಗೆ ಸಾಧ್ಯವಿದ್ದಿದ್ದರೆ, ಭೂಮಿಯ ಎದೆಯನ್ನು ಸೀಳಿ ಅವರು ತಮ್ಮ ಕೌಮಾರ್ಯಾವಸ್ಥೆಯ ಶಾಪದ ಸಮೇತ ಅದರಲ್ಲಿ ಸೇರಿ ಹೋಗುತ್ತಿದ್ದರು.

ನನ್ನ ಆಪಾಗೆ ಗಂಡಿನ ಹಸಿವು ಇತ್ತೇ? ಇಲ್ಲ. ಅವರು ಹಸಿವಿನ ಅನುಭವಕ್ಕಿಂತ

ಮೊದಲೇ ಭಯಭೀತರಾಗಿದ್ದಾರೆ. ಗಂಡಿನ ಕಲ್ಪನೆ ಅವರ ಅರಿವಿನಲ್ಲಿ ಉತ್ಸಾಹ ವಾಗಿ ಹೊರಹೊಮ್ಮಲಿಲ್ಲ. ಆದರೆ ರೊಟ್ಟಿ ಮತ್ತು ಬಟ್ಟೆಯ ಪ್ರಶ್ನೆಯಾಗಿ ತಲೆ ಯೆತ್ತಿತು. ಅವರು ಒಬ್ಬ ವಿಧವೆಯ ಎದೆಭಾರವಾಗಿದ್ದರು. ಆ ಭಾರವನ್ನು ಇಳಿಸಬೇಕಾಗಿತ್ತು.

ಆದರೆ ಸನ್ನೆ ಸಂಕೇತಗಳು ಆದಮೇಲೆಯೂ ರಾಹತ್ ಮಿಯಾಂ ಸ್ವತಃ ವಿಷಯ ವನ್ನು ಎತ್ತಲಿಲ್ಲ ಅಥವಾ ಅವರ ಮನೆಯಿಂದ ಸಂದೇಶವೇ ಬರಲಿಲ್ಲ. ದಣಿದು ಬಳಲಿ ಬೀ ಅಮ್ಮಾ ಕಾಲಿನ ತೋಡೆಗಳನ್ನು ಅಡವು ಇಟ್ಟು ಸಂಕಟ ನಿವಾರಣಾರ್ಥ ವಾಗಿ ಪೀರನ ಹರಕೆಯನ್ನು ಹೊತ್ತರು. ಮಧ್ಯಾಹ್ನವೆಲ್ಲ ಮೊಹಲ್ಲಾ, ಓಣಿಯ ಹುಡುಗಿಯರು ಅಂಗಳದಲ್ಲಿ ಗದ್ದಲ ಹಾಕುತ್ತಿದ್ದರು. ಬೀ ಆಪಾ ನಾಚುತ್ತ, ಸಂಕೋಚ ಪಡುತ್ತ ಗುಂಗಾಡು ಇದ್ದ ಕೋಣೆಯಲ್ಲಿ ತಮ್ಮ ರಕ್ತದ ಕೊನೆಯ ಹನಿಯನ್ನು ಹೀರಿಸಲು ಹೋಗಿ ಕುಳಿತುಕೊಂಡರು. ಬೀ ಅಮ್ಮಾ ಸಹದರಿಯಲ್ಲಿ ತಮ್ಮ ಮಂಚದ ಮೇಲೆ ಕುಳಿತುಕೊಂಡು ಚೌಥಿಯ ಉಡುಪಿನಲ್ಲಿ ಕೊನೆಯ ಹೊಲಿಗೆಗಳನ್ನು ಹಾಕು ತ್ತಿದ್ದರು. ಇಂದು ಅವರ ಮುಖದಮೇಲೆ ಹಮ್ಮಿಕೊಂಡ ಕಾರ್ಯವು ಪೂರೈಸುವ ಲಕ್ಷಣಗಳಿದ್ದವು. ಇಂದು ಸಂಕಟವು ಪರಿಹಾರವಾಗುತ್ತದೆ. ಕೇವಲ ಅಷ್ಟಿಷ್ಟು ಚಿಟಕೆಯ ಕೆಲಸಗಳು ಉಳಿದಿವೆ. ಅವುಗಳು ಕೂಡ ಪೂರ್ತಿಯಾಗುವವು. ಇಂದು ಅವರ ಸುಕ್ಕುಗಳಲ್ಲಿ ಪುನಾ ದೀವಟಿಗೆಗಳು ಅದರುತ್ತಿದ್ದವು. ಬೀ ಆಪಾ ಅವರ ಗೆಳತಿಯರು ಚುಡಾಯಿಸುತ್ತಿದ್ದರು ಮತ್ತು ಅವರ ರಕ್ತದ ಉಳಿದ ಕೆಲವೇ ಹನಿಗಳಲ್ಲಿ ಆವೇಶ ತುಂಬಲು ಪ್ರಯತ್ನಿಸುತ್ತಿದ್ದರು. ಈ ದಿನ ಎಷ್ಟೋ ದಿನಗಳಿಂದ ಇದ್ದ ಜ್ವರವು ಇಳಿದಿರಲಿಲ್ಲ. ದಣಿದ ಸೋತ ದೀಪದ ಹಾಗೆ ಅವರ ಮುಖವು ಒಂದು ಸಲ ಮಿನುಗು ತ್ತಿತ್ತು ಮತ್ತು ಬಳಿಕ ಆರಿಬಿಡುತ್ತಿತ್ತು. ಸನ್ನೆಗಳಿಂದ ಅವರು ನನ್ನನ್ನು ತಮ್ಮ ಬಳಿ ಕರೆದರು. ತಮ್ಮ ಸೆರಗನ್ನು ಎತ್ತಿ ಪ್ರಸಾದದ ತಟ್ಟೆಯನ್ನು ನನಗೊಪ್ಪಿಸಿದರು.

"ಇದರಮೇಲೆ ಮೌಲ್ವಿ ಸಾಹೇಬರು ಮಂತ್ರಿಸಿ ಊದಿದ್ದಾರೆ."—ಅವರ ಜ್ವರ ದಿಂದ ಜ್ವಲಿಸುತ್ತಿದ್ದ ಬಿಸಿ ಬಿಸಿ ಉಸಿರುಗಳು ನನ್ನ ಕಿವಿಯಲ್ಲಿ ಬರತೊಡಗಿದವು.

ತಟ್ಟೆಯನ್ನು ತೆಗೆದುಕೊಂಡು ನಾನು ಯೋಚಿಸಹತ್ತಿದೆ—"ಮೌಲ್ವಿ ಸಾಹೇಬರು ಮಂತ್ರಿಸಿ ಊದಿದ್ದಾರೆ.... ಈ ಪವಿತ್ರಗೊಂಡ ಮಾಲಿದಿಯನ್ನು ಈಗ ರಾಹತ್‌ನ ತಂದೂರ್ (ರೊಟ್ಟಿ ಮಾಡುವ ಭಟ್ಟಿ) ದಲ್ಲಿ ಸುರುವಲಾಗುವದು. ಆ ತಂದೂರ್‌ಅನ್ನು ನಾವು ಆರು ತಿಂಗಳಿಂದ ನಮ್ಮ ರಕ್ತದ ಹನಿಗಳಿಂದ ಬೆಚ್ಚಗಿಟ್ಟಿದ್ದೇವೆ. ಈ ಮಂತ್ರಿ ಸಲ್ಪಟ್ಟ ಮಾಲದಿಯು ಇಚ್ಛೆಯನ್ನು ಪೂರೈಸುವದೊ?" ನನ್ನ ಕಿವಿಗಳಲ್ಲಿ ಮದುವೆಯ ವಾಲಗ ಬಾರಿಸಹತ್ತಿದವು. ನಾನು ಓಡುತ್ತ ಓಡುತ್ತ ಕೋಠಿಯಿಂದ ಬರಾತ್ ನೋಡಲು ಹೋಗುತ್ತಿರುವೆ. ಮದುಮಗನ ಮುಖದಮೇಲೆ ಉದ್ದವಾದ ಸೆಹರಾ (ಬಾಸಿಂಗ) ತೂಗುತ್ತಿದೆ. ಅದು ಹೆಣ್ಣು ಕುದುರೆಯ ಆಮಾಲವನ್ನು

ಚುಂಬಿಸುತ್ತಿದೆ....ಚೌಥಿಯ ಅಚ್ಚು ಕೆಂಪು ಬಣ್ಣದ ಉಡುಪು ಧರಿಸಿ, ಹೂವುಗಳನ್ನು ಹೇರಿಕೊಂಡು, ನಾಚಿಕೆಯಿಂದ, ಮೆಲ್ಲ ಮೆಲ್ಲಗೆ ದಣಿದ ಹೆಜ್ಜೆಗಳನ್ನು ತೂಗುತ್ತ ಬೀ ಆಪಾ ಬರುತ್ತಲಿದ್ದಾರೆ. ಚೌಥಿಯ ಜರತಾರಿ ಉಡುಪು ಮಿನುಗುತ್ತಿತ್ತು. ಬೀ ಅಮ್ಮಾನ ಮುಖವು ಹೂವಿನ ಹಾಗೆ ಅರಳಿದೆ. ಬೀ ಆಪಾಳ ನಾಚಿಕೆಯಿಂದ ಭಾರವಾದ ಕಣ್ಣುಗಳು ಒಂದು ಸಲ ಮೇಲಕ್ಕೆ ಏಳುತ್ತವೆ. ಕೃತಜ್ಞತೆಯ ಕಣ್ಣೀರು ಅಫಷಾನ್‌ದ ಕಣಗಳಲ್ಲಿ ಹೊಮೂಮಾ (ವಿವಿಧ ವರ್ಣಗಳ ಗಾಜಿನ ಗೋಳ)ದ ಹಾಗೆ ಸೇರುತ್ತಿದೆ.

"ಇದೆಲ್ಲ ನಿನ್ನ ಪ್ರೇಮದ ಫಲ"—ಬೀ ಆಪಾನ ಮೌನವು ನುಡಿಯುತ್ತಿದೆ. ಹಮೀದಾಳ ಗಂಟಲು ತುಂಬಿ ಬಂದಿತು.

"ಹೋಗೆ, ನನ್ನ ಬನ್ನೂ"—ಆಪಾ ಅವಳನ್ನು ಎಚ್ಚರಿಸಿದರು. ಅವಳು ಬೆಚ್ಚಿಬಿದ್ದು ಓಡಣಿಯ ಸೆರಗಿನಿಂದ ಕಣ್ಣೀರನ್ನು ಒರೆಸಿಕೊಳ್ಳುತ್ತ ಹೆಬ್ಬಾಗಿಲಿನತ್ತ ಸಾಗಿದಳು."

"ಈ....ಈ ಮಾಲಿದಿ..."—ಅವಳು ಜಿಗಿದಾಡುತ್ತಿದ್ದ ಮನಸ್ಸನ್ನು ವಶದಲ್ಲಿ ಇಟ್ಟುಕೊಳ್ಳುತ್ತ ಅಂದಳು. ಅವಳ ಕಾಲು, ಹಾವಿನ ಹುತ್ತದಲ್ಲಿ ಒಳಸೇರಿವೆ ಏನೋ ಅನ್ನುವ ಹಾಗೆ ಕಂಪಿಸುತ್ತಿದ್ದವು. ಪರ್ವತವು ಸಮೀಪಕ್ಕೆ ಸರಿಯಿತು. ರಾಹತ್ ಬಾಯಿ ತೆರೆದ. ಅವಳು ಒಂದು ಹೆಜ್ಜೆ ಹಿಂದೆ ಸರಿದಳು. ಆದರೆ ದೂರ ಎಲ್ಲಿಯೋ ಶಹನಾಯಿಗಳು, ಯಾರೋ ತಮ್ಮ ಕತ್ತು ಹಿಚುಕುತ್ತಿದ್ದಾರೇನೊ ಅನ್ನುವಂತೆ, ಚೀತ್ಕರಿಸಿದವು. ನಡುಗುತ್ತಿದ್ದ ಕೈಗಳಿಂದ ಪವಿತ್ರ ಮಾಲಿದಿಯ ತುತ್ತು ಮಾಡಿ ಅವಳು ರಾಹತ್‌ನ ಬಾಯಿಯ ಕಡೆ ಚಾಚಿದಳು. ಒಂದು ಸೆಳೆತದಲ್ಲಿ ಅವಳ ಕೈ ಪರ್ವತದ ಗುಹೆಯಲ್ಲಿ ಮುಳುಗುತ್ತ ಹೊರಟಿತು....ಕೆಳಗೆ, ಬಹಳ ಕೆಳಗೆ, ಕತ್ತಲೆಯ ತಳವಿಲ್ಲದ ಗುಹೆಯ ಆಳಗಳಲ್ಲಿ ಒಂದು ದೊಡ್ಡ ಬಂಡೆ ಅವಳ ಚೀತ್ಕಾರದ ಕತ್ತು ಹಿಚುಕಿತು.

ಪ್ರಸಾದದ ಮಾಲಿದಿಯ ತಾಟು ಕೈಯಿಂದ ಜಾರಿ ಕಂದೀಲಿನಮೇಲೆ ಬಿತ್ತು. ಕಂದೀಲು ನೆಲದಮೇಲೆ ಬಿದ್ದು ಒಂದೆರಡು ಸಲ ಬಿಕ್ಕಿ ಬಿಕ್ಕಿ ನಂದಿತು. ಹೊರಗೆ ಅಂಗಳದಲ್ಲಿ ಮೊಹಲ್ಲಾದ ಬಹೂ-ಬೇಟಿಯರು ಸಂಕಟ ನಿವಾರಣೆಗಾಗಿ ಪೀರನ ಭಕ್ತಿಗೀತಗಳನ್ನು ಹಾಡುತ್ತಿದ್ದರು.

ಬೆಳಗಿನ ಗಾಡಿಯಿಂದ ರಾಹತ್, ಅತಿಥಿ ಸತ್ಕಾರಕ್ಕೆ ಕೃತಜ್ಞತೆ ಹೇಳುತ್ತ, ಹೊರಟು ಹೋದನು. ಅವನ ಮದುವೆಯ ದಿನಾಂಕವು ನಿಶ್ಚಿತವಾಗಿತ್ತು ಮತ್ತು ಅವನಿಗೆ ಅವಸರವಿತ್ತು. ಆ ಬಳಿಕ ಆ ಮನೆಯಲ್ಲಿ ತತ್ತಿಗಳನ್ನು ಕರಿಯುವುದು ನಿಂತಿತು. ಪರಾಠಾಗಳು ಬೇಯಲಿಲ್ಲ ಮತ್ತು ಸ್ವೇಟರ್‌ಗಳು ಹೆಣೆಯಲಾಗಲಿಲ್ಲ. ಒಂದು ಅವಧಿಯಿಂದ ಬೀ ಆಪಾನ ಶೋಧನೆಯಲ್ಲಿ ಓಡುತ್ತ ಓಡುತ್ತ ಬೆನ್ನುಹತ್ತಿದ್ದ ಕ್ಷಯಜ್ವರವು

ಒಂದೇ ನೆಗೆತದಲ್ಲಿ ಅವರನ್ನು ಹಿಡಿದು ಅಮುಕಿತು. ಅವರು ತಲೆತಗ್ಗಿಸಿಕೊಂಡು ತಮ್ಮ ದುರ್ಭಾಗ್ಯದ ಅಸ್ತಿತ್ವವನ್ನು ಅದರ ಅಪ್ಪುಗೆಯಲ್ಲಿ ಒಪ್ಪಿಸಿಬಿಟ್ಟರು.

ಬಳಿಕ ಅದೇ ಸಹದರಿಯ ಚೌಕು ಆಸನದಮೇಲೆ ಸ್ವಚ್ಛವಾದ ರತ್ನಗಂಬಳಿಯನ್ನು ಹಾಸಲಾಯಿತು. ಮೊಹಲ್ಲಾದ ಬಹೂ-ಬೇಟಿಯರು ಕೂಡಿದರು. ಕಫನ್‌ದ ಬೆಳ್ಳ ಬೆಳ್ಳಗಿನ ಲಟ್ಠಾ (ಒಂದು ಬಗೆಯ ಬಿಳಿಯ ಬಟ್ಟೆ) ಮೃತ್ಯುವಿನ ಸೆರಗಿನ ಹಾಗೆ ಬೀ ಅಮ್ಮಾನ ಎದುರಿಗೆ ಹರಡಿತು. ಸಹನೆಯ ಭಾರದಿಂದ ಅವರ ಮುಖವು ಕಂಪಿಸು ತ್ತಿತ್ತು. ಎಡಗಡೆಯ ಹುಬ್ಬು ಹಾರುತ್ತಿತ್ತು. ಕೆನ್ನೆಗಳ ಹಾಳುಬಿದ್ದ ತೊರೆಗಳು, ಅವರ ಮುಖದಮೇಲೆ ಭಯಾನಕ ಶಾಂತಿ ಮತ್ತು ಮೃತ್ಯುಭರಿತ ನೆಮ್ಮದಿಗಳು ಇದ್ದ ಹಾಗೆ ಭಣಭಣಗುಡುತ್ತಿದ್ದವು.

ಕಫನ್‌ದ ಲಟ್ಠಾದ ಗಳಿಗೆಯನ್ನು ಮುರಿದು ಅವರು ನಾಲ್ಕು ಮಡಿಕೆಗಳನ್ನು ಮಾಡಿದರು. ಅವರ ಹೃದಯದಲ್ಲಿ ಅಗಣಿತ ಕತ್ತರಿಗಳನ್ನು ಆಡಿಸಿದಂತಾಯಿತು. ಇಂದು ಅವರ ಮುಖದಮೇಲೆ, ಇತರ ಉಡುಪುಗಳ ಹಾಗೆ ಚೌಥಿಯ ಈ ಉಡುಪನ್ನು ಹೊಲಿಯಬೇಕಾಗಿಲ್ಲವೆಂಬ ಪೂರ್ಣ ವಿಶ್ವಾಸವಿದ್ದ ಹಾಗೆ, ಭಯಾನಕ ಶಾಂತಿ ಮತ್ತು ಮೃತ್ಯುಭರಿತ ನೆಮ್ಮದಿಗಳು ಇದ್ದವು.

ಒಮ್ಮಿಂದೊಮ್ಮೆಲೆ ಸಹದರಿಯಲ್ಲಿ ಕುಳಿತ ಹುಡುಗಿಯರು ಮೈನಾ ಪಕ್ಷಿಗಳ ಹಾಗೆ ಉಲಿಯತೊಡಗಿದರು. ಹಮೀದಾ ಭೂತಕಾಲವನ್ನು ದೂರ ಕೊಡಹಿ ಅವರ ಜೊತೆ ಹೋಗಿ ಕೂಡಿಕೊಂಡಳು. ಕೆಂಪು ಕಂಕುಳು ಪಟ್ಟೆಯಮೇಲೆ ಬಿಳಿಯ ಗಜಿಯ ಗುರ್ತು. ಅದರ ಕೆಂಪುತನದಲ್ಲಿ ಅದೆಷ್ಟು ಮುಗ್ಧ ಮದುವಣಿಗಿತ್ತಿಯರ ಬಯಕೆ ರಚಿತವಾಗಿದೆ ಮತ್ತು ಅದರ ಬಿಳಿಯತನದಲ್ಲಿ ಎಷ್ಟು ಬಯಕೆ ಈಡೇರದ ಕುಮಾರಿ ಯರ ಕಫನ್‌ದ ಬಿಳಿಯ ವರ್ಣವು ಮುಳುಗಿ ಹೊರಹೊಮ್ಮಿದೆ ಏನೋ ತಿಳಿಯದು. ಬಳಿಕ ತಟ್ಟನೆ ಎಲ್ಲರು ಮೌನವಾದರು. ಬೀ ಅಮ್ಮಾ ಕೊನೆಯ ಹೊಲಿಗೆಯನ್ನು ತುಂಬಿ ತುಂಡರಿಸಿದರು. ಎರಡು ದಪ್ಪ ದಪ್ಪವಾದ ಕಣ್ಣೀರು ಹನಿಗಳು ಅರಳೆಯಂಥ ಮೃದುವಾದ ಕೆನ್ನೆಗಳ ಮೇಲೆ ಮೆಲ್ಲಮೆಲ್ಲಗೆ ತೆವಳಹತ್ತಿದವು. ಅವರ ಮುಖದ ಸುಕ್ಕುಗಳಿಂದ ಬೆಳಕಿನ ಕಿರಣಗಳು ಹೊರಹೊರಟವು. ಈ ದಿನ, ತಮ್ಮ ಕುಬರಾಳ ಉಡುಪು ಹೊಲಿಯಲ್ಪಟ್ಟು ಸಿದ್ಧವಾಗಿದೆ ಮತ್ತು ಯಾವ ಕ್ಷಣದಲ್ಲಾದರು ಶಹನಾಯಿ ಗಳು ಬಾರಿಸಬಹುದು ಎಂದು ತಮಗೆ ವಿಶ್ವಾಸ ಉಂಟಾಗಿದೆ ಎನ್ನುವ ಹಾಗೆ ಅವರು ಮುಗುಳುನಗೆ ಬೀರಿದರು.

ದೊಡ್ಡ ಮಾಮಿಯ ಕಫನ್ ಕೂಡ ಮಾಸಿರಲಿಕ್ಕಿಲ್ಲ. ಅಷ್ಟರಲ್ಲೆ, ಮನೆಯವರಿಗೆಲ್ಲ ಷುಜಾಅತ್ ಮಾಮೂನ ಎರಡನೆಯ ಮದುವೆಯ ಚಿಂತೆ ಬಾಧಿಸಹತ್ತಿತ್ತು. ಕುಳಿತಲ್ಲಿ, ನಿಂತಲ್ಲಿ ಕನ್ಯೆಯ ಶೋಧನೆ ನಡೆಯುತ್ತಿತ್ತು. ಊಟ-ಉಪಚಾರವನ್ನೆಲ್ಲ ಪೂರೈಸಿಕೊಂಡು ಹೆಂಗಸರು ಗಂಡುಮಕ್ಕಳ ಬರಿ ಅಥವಾ ಹೆಣ್ಣುಮಕ್ಕಳ ಜಹೇಜನ್ನು ಹೊಲೆಯುತ್ತ ಕುಳಿತರೆಂದರೆ ಸಾಕು, ಮಾಮೂನ ಸಲುವಾಗಿ ಕನ್ಯೆಯನ್ನು ಹುಡುಕುವ ಚರ್ಚೆ ಪ್ರಾರಂಭವಾಗುತ್ತಿತ್ತು.

"ಅರೆ, ನಮ್ಮ ಕನೀಜ ಫಾತಿಮಾ ಹೇಗೆ ಅನಿಸುವಳು?"

"ಏ ಕತ್ತೆ, ಹುಲ್ಲು ತಿಂದಿಲ್ಲವಷ್ಟೆ, ಕನೀಜ ಫಾತಿಮಾಳ ಅತ್ತೆ ಇದನ್ನು ಕೇಳಿದ ಳೆಂದರೆ ಮೂಗು, ತುರುಬು ಕೊಯ್ದು ಅಂಗೈಯಲ್ಲಿ ಇಡುವಳು. ಹರೆಯದ ಮಗನ ಹೆಣವನ್ನು ಎತ್ತುತ್ತಲೆ ಆಕೆ ಸೊಸೆಯ ಸುತ್ತಲು ಕುಂಡಲ ಹಾಕಿ ಕುಳಿತುಬಿಟ್ಟಿದ್ದಾರೆ. ಅಂದಿನಿಂದ ಈವರೆಗೂ ಅವಳಿಗೆ ಹೊಸಲು ದಾಟಗೊಟ್ಟಿಲ್ಲ. ಆ ಅರಿಷ್ಟ ಮುಂಡೆದಕ್ಕೆ ತವರುಮನೆಯಲ್ಲಿ ಯಾರಾದರೂ ದಿಕ್ಕು ಇದ್ದಿದ್ದರೆ ಬಹುಶಃ ಹೋಗುವದು ಬರುವದು ಸಾಗುತ್ತಿತ್ತು."

"ಮತ್ತೆ ನೋಡಿ, ಷಜ್ಜನ್ ಭಯ್ಯಾಗೆ ಮೊದಲ ಸಂಬಂಧದ ಹುಡುಗಿ ಸಿಗುವದಿಲ್ಲ ವೇನು? ಅವರು ಎಂಜಲು ಎಣ್ಣೆ ಏಕೆ ನೆಕ್ಕಬೇಕಂತೆ! ಜನರು ಕನ್ಯೆಯನ್ನು ಕೊಡಲು ತುದಿಗಾಲಮೇಲೆ ನಿಂತಿದ್ದಾರೆ. ನಲವತ್ತು ಆದವರಂತೆ ಕೂಡ ಕಾಣಿಸು ವದಿಲ್ಲ"—ಅಸಗರೀ ಬೇಗಂ ಅಂದರು.

"ಉಯ್ ಅಲ್ಲಾಹ್, ಒಳ್ಳೆಯದು ಮಾಡಲಿ. ಬೂವಾ, ಪೂರ್ತಿ ಹತ್ತು ವರ್ಷ ಗಳನ್ನು ನುಂಗಿಬಿಟ್ಟೆಯಲ್ಲ! ಅಲ್ಲಾಹ್ ರಕ್ಷಿಸಲಿ. 'ಖಾಲಿ' ತಿಂಗಳಿಗೆ ಪೂರಾ ಐವತ್ತು...."

ಅಲ್ಲಾಹ್! ಪಾಪ ಇಮ್ತಿಯಾಜಿ ಸೋದರತ್ತೆ ಮಾತಾಡಿ ಪರಿತಪಿಸಿದರು. ಷುಜಾಅತ್ ಮಾಮೂನ ಐದು ಜನ ಅಕ್ಕತಂಗಿಯರು ಒಂದು ಕಡೆ ಮತ್ತು ಆ ನಿರ್ಭಾಗ್ಯ ಇನ್ನೊಂದು ಕಡೆ. ಮಾಷಾ ಅಲ್ಲಾಹ್! ಐವರೂ ಅಕ್ಕತಂಗಿಯರ ನಾಲಿಗೆಗಳು, ಸರಿ, ಹೆಗಲಮೇಲೆ ಇದ್ದವೇನೊ. ಮಾರು ಮಾರು ಉದ್ದ. ಯಾವು ದಾದರೂ ಜಗಳವಾದರೆ ಸಾಕು ಐವರೂ ಅಕ್ಕತಂಗಿಯರು ತಕ್ಷಣ ಪಡೆ ಕಟ್ಟಿಕೊಂಡು ಎದುರಾಳಿಯ ಸಮ್ಮುಖದಲ್ಲಿ ಸಿದ್ಧರಾಗಿರುತ್ತಿದ್ದರು. ಮೈದಾನದಲ್ಲಿ ಎದುರಿಸಿ ನಿಲ್ಲಲು

ಯಾವ ಪಠಾಣಿ, ಮುಗಲಾನಿಗೆ ಧೈರ್ಯವಿರಲಿಲ್ಲ. ಪಾಪ, ಶೇಖಾನಿಗಳು ಮತ್ತು ಸಯ್ಯದಾನಿಗಳ ವಿಷಯವನ್ನಂತೂ ಕೇಳಲೇಬೇಡಿ....ಎಂಥೆಂಥ ಎದೆಗಾರ್ತಿಯರು ಕಂಗೆಡುತ್ತಿದ್ದರು.

ಆದರೆ ಇಮ್ತಿಯಾಜಿ ಸೋದರತ್ತೆಯು ಕೂಡ ಈ ಐವರು ಪಾಂಡವರಮೇಲೆ ನೂರು ಕೌರವರಿಗಿಂತಲೂ ಭಾರಿಯಾಗಿ ಆಕ್ರಮಣ ಮಾಡುತ್ತಿದ್ದರು. ಅವರ ಎಲ್ಲದಕ್ಕಿಂತ ಅಪಾಯಕಾರಿ ಅಸ್ತ್ರವೆಂದರೆ ಅವರ ಬೈರಿಗೆಯ ಅಲಗಿನ ಹಾಗೆ ಚೂಪಾದ, ಕೀರಲು ಧ್ವನಿ. ಅವರು ಮಾತಾಡಲು ಪ್ರಾರಂಭಿಸಿದರೆಂದರೆ, ಮೆಷೀನ್ ಗನ್ ಗುಂಡುಗಳು ಒಂದು ಕಿವಿಯಲ್ಲಿ ಹೊಕ್ಕು ಇನ್ನೊಂದು ಕಿವಿಯಿಂದ ಝುಣ್ ಎಂದು ಹೊರಬೀಳುತ್ತಿವೆ ಏನೊ ಎಂದೆನಿಸುತ್ತಿತ್ತು. ಯಾರ ಜೊತೆಗಾದರೂ ಅವರ ತಕರಾರು ಸುರು ಆಗುತ್ತಿದ್ದ ಹಾಗೆ, ಇಡೀ ಮೊಹಲ್ಲಾದ ತುಂಬ, ಇಮ್ತಿಯಾಜಿ ಬೂವಾ ಯಾರ ಜೊತೆಗೊ ಕಾದಾಡುತ್ತಿದ್ದಾಳೆ ಎಂಬ ಸುದ್ದಿ ತಕ್ಷಣ ಹಬ್ಬುತ್ತಿತ್ತು. ಹೆಂಗಸರು ಕೋಣೆಗಳನ್ನು ನೆಗೆಯುತ್ತ, ಛಜ್ಜಾಗಳನ್ನು ಜಿಗಿಯುತ್ತ, ಅಖಾಡಾದ ಕಡೆ ಹಲ್ಲೆ ನಡೆದಿದೆ ಎಂದು ಹೇಳುತ್ತ ಧಾವಿಸುತ್ತಿದ್ದರು.

ಐವರೂ ಅಕ್ಕತಂಗಿಯರು ಇಮ್ತಿಯಾಜಿ ಸೋದರತ್ತೆಯನ್ನು ಹೇಗೆ ಬೆನ್ನು ಹತ್ತಿದ್ದರೆಂದರೆ, ಪಾಪ ಅವರು ಅಪಖ್ಯಾತಿ ಪಡೆದರು. ಅವರ ಮೂರನೆಯ ಮಗಳು ಗೋರಿ ಖಾನಂ ಈವರೆಗೂ ಮದುವೆ ಕಾಣದೆ ಕುಳಿತಿದ್ದಳು. ಮುವ್ವತ್ತಾರನೆಯ ವರ್ಷ ಎದೆಯಮೇಲೆ ಸವಾರಿ ಮಾಡುತ್ತಿತ್ತು. ಆದರೆ ಭಾಗ್ಯ ತೆರೆಯುವ ಲಕ್ಷಣಗಳು ಎಲ್ಲಿಯೂ ಕಾಣಿಸುತ್ತಿರಲಿಲ್ಲ. ಮೊದಲ ಸಂಬಂಧ ದೊರೆಯುತ್ತಿರಲಿಲ್ಲ, ವಿವಾಹಿತರು ವಿಧುರರಾಗುತ್ತಿದ್ದಿಲ್ಲ. ಮೊದಲಿನ ಕಾಲದಲ್ಲಿ ಪ್ರತಿ ಗಂಡಸು ಮೂರು ನಾಲ್ಕು ಹೆಂಗಸರನ್ನು ಗೊತ್ತಿಗೆ ಹಚ್ಚುತ್ತಿದ್ದ. ಎಂದಿನಿಂದ ಈ ಹಾಸ್ಪಿಟಲ್, ಈ ಡಾಕ್ಟರ್‌ಗಳು ಹುಟ್ಟಿದ್ದಾರೊ ಅಂದಿನಿಂದ ಹೆಂಡತಿಯರು ಸಾಯದಿರುವ ಆಣೆ ಮಾಡಿರುವರು. ಯಾರನ್ನು ನೋಡಿದರು ಮುಂದಿನ ಜನ್ಮದ ಬಂಗಳನ್ನು ಕೂಡಿಟ್ಟುಕೊಳ್ಳುವದರಲ್ಲಿ ವ್ಯಸ್ತರಾಗಿರುದಿದ್ದರು. ದೊಡ್ಡ ಮಾಮಿಯ ಕಾಹಿಲೆಯ ದಿನಗಳಿಂದಲೆ ಎಣಿಕೆ ಹಾಕುತ್ತಿದ್ದರು. ಆದರೆ ಎರಡನೆಯ ಸಂಬಂಧದ ಗಂಡನ್ನು ಕೂಡ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಹುಡುಕಬೇಕಾಗುವುದು ಎಂಬುದು ಅವರ ದೇವತೆಗಳಿಗೂ ತಿಳಿದಿರಲಿಲ್ಲ.

ಷುಜಾಅತ್ ಮಾಮೂನ ವಯಸ್ಸಿನ ವಿಷಯವು ಬಹಳ ಸೂಕ್ಷ್ಮರೂಪವನ್ನು ತಾಳಿತು. ಖಮರ್ ಆರಾ ಮತ್ತು ನೂರ್ ಖಾಲಾ ಇವರಿಗಂತೂ ಅವರು ಇನ್ನೂ ಹುಡುಗನ ಹಾಗೆ ಇದ್ದರು. ಆದ್ದರಿಂದ ಇವರು ಗಾಬರಿಗೊಂಡು ವರ್ಷಗಳ ಎಣಿಕೆಯಲ್ಲಿ ಪದೇ ಪದೇ ಯದ್ವಾ ತದ್ವಾ ಮಾಡುತ್ತಿದ್ದರು. ಯಾಕೆಂದರೆ, ಅವರ ವಯಸ್ಸಿನ ಲೆಕ್ಕ ಹತ್ತಿದರೆ ಸ್ವತಾ ಖಾಲಾಗಳ ವಯಸ್ಸಿನ ರಹಸ್ಯ ಸ್ಫೋಟವಾಗುತ್ತಿತ್ತು. ಆದ್ದರಿಂದ ಐವರೂ ಅಕ್ಕತಂಗಿಯರು ಸಂಪೂರ್ಣವಾಗಿ ಬೇರೆ ಬೇರೆ ದಿಕ್ಕುಗಳಿಂದ

ಆಕ್ರಮಣ ಮಾಡುತ್ತಿದ್ದರು. ಇವರು ತಕ್ಷಣ ಇಮ್ತಿಯಾಜಿ ಸೋದರತ್ತೆಯ ಮೊಮ್ಮಗಳ ಗಂಡನ ವಿಷಯವನ್ನೆತ್ತಿದರು. ಅವನ ಪ್ರಸ್ತಾಪವು ಸೋದರತ್ತೆಗೆ ನೋಯುವ ನರವಾಗಿತ್ತು. ಯಾಕೆಂದರೆ, ಅವನು ಅವರ ಮೊಮ್ಮಗಳಮೇಲೆ ಸವತಿಯನ್ನು ತಂದಿದ್ದ.

ಆದರೆ ನಮ್ಮ ಸೋದರತ್ತೆ ಕೂಡ ಪಕ್ಕಾ ಮುಗಲಾನಿ ಇದ್ದರು. ಅವರ ತಂದೆ ಷಾಹಿ ಸೈನ್ಯದಲ್ಲಿ ತೋಪುಖಾನೆಯ ಮುಖ್ಯಸ್ಥನಿದ್ದ. ಅವರು ಹೊಡೆತ ತಿನ್ನುವವ ರಾಗಿರಲಿಲ್ಲ. ತಕ್ಷಣ ಪಟ್ಟು ಬದಲಿಸಿ ಏಟು ತಪ್ಪಿಸಿಕೊಂಡರು. ಬಳಿಕ ಷಹಜಾದಿ ಬೇಗಮ್ ಮೊಮ್ಮಗಳಮೇಲೆ ಹರಿಹಾಯ್ದರು. ಅವಳು ಬಹಿರಂಗವಾಗಿ ಮನೆತನದ ಮರ್ಯಾದೆ ಕಳೆಯುತ್ತಿದ್ದಾಳೆ. ಯಾಕೆಂದರೆ, ಅವಳು ದಿನಾಲೂ ಡೋಲಿಯಲ್ಲಿ ಕುಳಿತು ಧನಕೋಟದ ಸ್ಕೂಲಿನಲ್ಲಿ ಓದಲು ಹೋಗಿ ಬರುತ್ತಿದ್ದಳು. ಆ ಕಾಲದಲ್ಲಿ ಸ್ಕೂಲಿಗೆ ಹೋಗುವದೆಂದರೆ ಈಗಿನ ಕಾಲದಲ್ಲಿ ಚಲನ ಚಿತ್ರಗಳಲ್ಲಿ ಯಾರಾದರೂ ಕುಣಿಯಲು ಹಾಡಲು ತೊಡಗಿದಷ್ಟು ಭಯಾನಕವೆಂದು ತಿಳಿಯಲಾಗುತ್ತಿತ್ತು.

ಷುಜಾಅತ್ ಮಾಮೂ ಬಹಳ ಸಭ್ಯ ಮನುಷ್ಯ. ಒಳ್ಳೆಯ ಲಕ್ಷಣವಾದ ಮುಖ ಚರ್ಯೆ, ಚಟುವಟಿಕೆಯ ದೇಹ, ಮಧ್ಯಮ ನಿಲುವು. ಅವರು ಖಜಾಬ್ ಹಚ್ಚು ತ್ತಾರೆಂದು ಇಮ್ತಿಯಾಜಿ ಸೋದರತ್ತೆ ಎಲ್ಲ ಕಡೆಗೂ ಹೇಳುತ್ತಲಿದ್ದರು. ಆದರೆ ಈವರೆಗೆ ಯಾರೂ ಅವರ ತಲೆಯಲ್ಲಿ ಒಂದಾದರೂ ಬಿಳಿಯ ಕೂದಲನ್ನು ನೋಡಲಿಲ್ಲ. ಹೀಗಾಗಿ ಖಜಾಬ್ ಹಚ್ಚುವುದು ಎಂದಿನಿಂದ ಸುರು ಆಗಿದೆಯೆಂದು ಅಂದಾಜು ಮಾಡುವದು ದುಸ್ತರವಾಗಿತ್ತು. ಹಾಗೆ ನೋಡಲು ಒಳ್ಳೇ ತರುಣರಂತೆ ಕಾಣು ತ್ತಿದ್ದರು. ನಿಜವಾಗಿಯೂ ನಲವತ್ತು ಆದವರಂತೆ ಅನಿಸುತ್ತಿರಲಿಲ್ಲ. ತಮ್ಮ ಮದುವೆಯ ಸಂದೇಶಗಳು ಮಳೆಯಂತೆ ಜೋರಾಗಿ ಸುರಿಯತೊಡಗಲು ಅವರು ಗಾಬರಿಗೊಂಡು ಆ ವಿಷಯವನ್ನು ತಮ್ಮ ಅಕ್ಕತಂಗಿಯರಿಗೆ ಒಪ್ಪಿಸಿದರು. ಹುಡುಗಿ ತಮ್ಮ ಮಗಳು ಎನ್ನುವಷ್ಟು ಬಾಲಿಶ (ಚಿಕ್ಕವಳು) ಇರಬಾರದು ಮತ್ತು ತಮ್ಮ ತಾಯಿ ಅನ್ನುವ ಹಾಗೆ ಮುದಿಗೊಡ್ಡು ಇರಬಾರದು ಎಂದು ಹೇಳಿದ್ದರು.

ಬಹಳ ಶೋಧನೆ ನಡೆಯಿತು. ಕೊನೆಗೆ 'ಖುರ್‌ಆ' ದಲ್ಲಿ ರುಖ್ಸಾನಾ ಬೇಗಮ್‌ಳ ಹೆಸರು ಬಂದಿತು.

" ಉಯ್ ! ಎಂಥ ಹೆದರಿಕೆ ಬರುವಂತಹ ಹೆಸರಿದು." ಇಮ್ತಿಯಾಜಿ ಸೋದರತ್ತೆಗೆ ಇನ್ನೇನು ಹೊಳೆಯದಿದ್ದರೂ ಹೆಸರಿನಲ್ಲಿಯೇ ಹುಳುಕು ತೆಗೆಯಹತ್ತಿದರು. ಆದರೆ ಅಕ್ಕತಂಗಿಯರು ಅವರ ಮಾತನ್ನು ಹೇಗೆ ಹೊಡೆದುಹಾಕಿದರೆಂದರೆ ಯಾರೂ ಅದನ್ನು ಕೇಳಲಿಲ್ಲ.

" ಹುಡುಗಿಗೆ ಹದಿನಾರು ವರ್ಷದ ಮೇಲೆ ಒಂದು ದಿನ ಜಾಸ್ತಿಯಾಗಿದ್ದರೆ, ನೂರು ಎಕ್ಕಡ ಮುಂಜಾನೆ, ನೂರು ಎಕ್ಕಡ ಸಾಯಂಕಾಲ ಮತ್ತು ಮೇಲೆ ಹುಕ್ಕಾದ ನೀರು"

ಎಂದರು. ಆದರೆ ಅವರ ಮಾತನ್ನು ಯಾರೂ ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ಅವರು ತಮ್ಮ ಗೋರಿ ಬೇಗಮ್‌ಳ ನಾವೆಯನ್ನು ದಾಟಿಸುವದಕ್ಕಾಗಿ ನಿಸ್ಸಹಾಯಕರಾಗಿ ಗುಲ್ಲೆಬ್ಬಿಸುತ್ತಿದ್ದರು.

ರುಖ್ಸಾನಾ ಬೇಗಮ್‌ಳ ಚೆಲುವು ಒಮ್ಮೆ ನೋಡಿದವರು ನೋಡುತ್ತಲೇ ಇದ್ದು ಬಿಡುವರು, ಪ್ರತಿಪದೆಯ ನಾಜೂಕಾದ ಲಜ್ಜಿತ ಚಂದ್ರನನ್ನು ಯಾರೋ ಕೆಳಗಿಳಿಸಿದ್ದಾರೆ ಅನ್ನುವ ಹಾಗೆ. ಮುಖವನ್ನು ಎಷ್ಟು ನೋಡಿದರೂ ಮನಸ್ಸು ತುಂಬುತ್ತಿರಲಿಲ್ಲ. ತೂಕ ಮಾಡಿದರೆ ಐದು ಹೂಗಳಮೇಲೆ ಆರನೆಯದು ಏರಲಿಕ್ಕಿಲ್ಲ. ಬಣ್ಣವು ಹೊಳೆಯುವ ಕುಂದಣದಂತೆ. ದೇಹದಲ್ಲಿ ಎಲುವಿನ ಹೆಸರೇ ಇರಲಿಲ್ಲ. ಗಟ್ಟಿ ಮೈದಾ ಹಿಟ್ಟಿನ ಮೇಲೆ ಆಕಳ ಕೆನೆಯನ್ನು ಲೇಪಿಸಿದೆ ಎನ್ನುವಂತೆ ಹೆಣ್ಣುತನವು ಡಜನ್‌ಗಟ್ಟಲೆ ಹೆಂಗಸರ ಸತ್ವವನ್ನು ಹಿಂಡಿ ತುಂಬಿದೆ ಏನೊ ಎನ್ನುವ ಹಾಗೆ ಧಾರಾಳವಾಗಿತ್ತು. ಬಿಸಿಬಿಸಿಯಾದ ದೇಹಗಂಧದ ಅಲೆಗಳು ಹೊರಡುತ್ತಿದ್ದವು. ಬಹುಶಃ ಸೋದರತ್ತೆಯ ಪ್ರಕಾರ ಹದಿನಾರು ವರ್ಷದವಳಿರಬಹುದು. ಆದರೆ ಹತ್ತೊಂಬತ್ತು, ಇಪ್ಪತ್ತರ ಬೆಳವಣಿಗೆ ಇತ್ತು. ಅಕ್ಕತಂಗಿಯರು ಮಾಮೂಗೆ ಇಪ್ಪತ್ತೈದು ವರ್ಷದಾಕೆ ಎಂದು ಹೇಳಿದ್ದರು. ಅವರಿಗೆ ಒಂದಿಷ್ಟು ಸಂಕೋಚವೆನಿಸಿತು. ಆದರೆ ಎಳೆಯ ವಯಸ್ಸು ಅಂಥ ದೊಡ್ಡ ಅಪರಾಧವಲ್ಲವೆಂದು ಅದನ್ನು ತಳ್ಳಿಹಾಕಿದರು.

ಎಲ್ಲದಕ್ಕಿಂತ ದೊಡ್ಡ ವಿಷಯವೆಂದರೆ ಆಕೆ ಕಡುಬಡವರ ಮನೆಯ ಭಾರವಾಗಿದ್ದರಿಂದ ಎರಡೂ ಕಡೆಯ ಖರ್ಚು ಮಾಮೂನ ತಲೆಗೆ ಬಂದಿತು. ಮದುವೆಯ ಬಳಿಕ ರುಖ್ಸಾನಾ ಮಾಮಿ ಬಂದಮೇಲೆ ಅವರನ್ನು ನೋಡಿ ಮಾಮೂಗೆ ಬೆವರಿಳಿಯಿತು.

"ಅಕ್ಕಾಜಿ, ಇವಳಂತು ಶುದ್ಧ ಮಗುವಿನ ಹಾಗೆ ಇರುವಳು."—ಅವರು ಗಾಬರಿಗೊಂಡು ಅಂದರು.

"ಉಯ್! ಖುದಾ ಒಳ್ಳೆಯದು ಮಾಡಲಿ! ಏ ಮಿಯಾ, ಎಣ್ಣೆ ನೋಡು, ಎಣ್ಣೆಯ ಧಾರೆಯನ್ನು ನೋಡು. ಅರವತ್ತು ವರ್ಷದ ಗಂಡ ಗೋರಿಗೆ ಹೋದ, ಇಪ್ಪತ್ತು ವರ್ಷದ ಹೆಂಡತಿ ಹೆರಚಿಹೋದಳು. ಮೂರು ನಾಲ್ಕು ಮಕ್ಕಳು ಆದರಾಯಿತು, ಎಲ್ಲ ಥಳಕು ಇಳಿದುಹೋಗುತ್ತದೆ. ಮಕ್ಕಳ ಹೇಲು-ಉಚ್ಚೆಯಲ್ಲಿ ಈ ಷೋಡಶ ಶೃಂಗಾರಗಳಿರುವದಿಲ್ಲ. ಈ ಬಣ್ಣ ಈ ಬೆಡಗು ಇರುವದಿಲ್ಲ, ಈ ಉಂಗುರದಂತಹ ಬಡಕಲು ನಡವೂ ಉಳಿಯುವದಿಲ್ಲ; ಈ ತೋಳುಗಳ ಬಳಕು ತಾಳುವದಿಲ್ಲ. ಅವಳು ನಿನಗೆ ಬರಾಬರಿಯಾಗಿ ಅನಿಸದಿದ್ದರೆ ನಾನು ಕಳ್ಳತನ ಮಾಡಿದ ಹಾಗೆ. ಇನ್ನೇನು ಹೇಳಲಿ?....ಹತ್ತು ವರ್ಷಗಳಲ್ಲಿ ದೊಡ್ಡ ಭಾಭಿಜಾನ್‌ಳ ಹಾಗೆ ಆಗುತ್ತಾಳೆ."

"ಹಾಗಾದರೆ ನಾವು ನಮ್ಮ ತಮ್ಮನಿಗೆ ಹನ್ನೆರಡುವರೆ ವರ್ಷದವಳನ್ನು ತರೋಣ

ವಂತೆ."—ನೂರ್ ಖಾಲಾ ಸರಸದಿಂದ ಹೇಳಿದರು.

"ಹಶ್ತ್"—ಮಾಮೂ ನಾಚಿದರು.

"ಎರಡನೆಯ ಹೆಂಡತಿ ಬದುಕುವದಿಲ್ಲವಂತೆ. ಅದಕ್ಕೆ ಮೂರನೆಯವಳು."—ಷಮ್ಸಾ ಬೇಗಂ ಹೇಳಿದರು.

"ಏನು ಬೊಗಳುತ್ತಿರುವೆ?"

"ಹಾಂ! ಮಿಂಯಾ ಹಿರಿಯರಿಂದ, ಮುದುಕರಿಂದ ಕೇಳುತ್ತ ಬಂದಿದ್ದೇವೆ. ಎರಡನೆಯವಳು ಮೂರನೆಯವಳ ಬಲಿ ಇರುವಳಂತೆ. ಅದಕ್ಕೆಂತಲೆ ಹಿಂದಿನ ಕಾಲದಲ್ಲಿ ಜನರು ಎರಡನೆಯ ಮದುವೆಯನ್ನು ಗೊಂಬೆಯ ಜೊತೆ ಮಾಡಿಸುತ್ತಿದ್ದರು. ಬರುವ ಮದುಮಗಳು ಮೂರನೆಯವಳು ಆಗಲಿ ಎಂದು."

ಅಕ್ಕತಂಗಿಯರು ತಿಳಿಸಿ ಹೇಳಿದರು ಮತ್ತು ಮಾಮೂ ತಿಳಿದುಕೊಂಡರು. ನಂತರ ರುಖ್ಸಾನಾ ಬೇಗಮ್ ಕೂಡ ಬೇಗನೆ ತಿಳಿಸಿಕೊಟ್ಟರು. ಎರಡು ಮೂರು ವರ್ಷಗಳಲ್ಲಿ ಒಳ್ಳೆಯ ಊಟ, ಉಡಿಗೆ ಮತ್ತು ರಸಿಕ ಗಂಡ—ಇವುಗಳು ಎಂಥ ಜಾದೂ ಮಾಡಿದವೆಂದರೆ ಆ ಪ್ರತಿಪದೆಯ ಚಂದಿರವು ಚತುರ್ದಶಿಯ ಚಂದ್ರವಾಯಿತು. ನೋಡುವವರ ಕಣ್ಣು ಕೋರೈಸುವಂತೆ ಬೆಳದಿಂಗಳನ್ನು ಬೀರಹತ್ತಿತು. ಅಂಗ-ಅಂಗದಿಂದ ಕಿರಣಗಳು ಹೊರಹೊಮ್ಮತೊಡಗಿದವು. ಷುಜಾಅತ್ ಮಾಮೂನಮೇಲೆ ಎಂಥ ಅಮಲು ಏರಿತೆಂದರೆ ಆವರು ಸಂಪೂರ್ಣವಾಗಿ ಮೋಹಪರವಶವಾದರು. ಬೇಗನೆ ಪೆನ್‌ಷನ್ ಆಗುವದಿತ್ತೆಂದು ಒಳ್ಳೆಯದಾಯಿತು. ಇಲ್ಲದಿದ್ದರೆ ದಿನಾಲು ಆಫೀಸ್‌ಗೆ ಗೋತಾ ಹೊಡೆಯುವದರ ಬಣ್ಣ ಖಂಡಿತ ತಿಳಿಯುತ್ತಿತ್ತು.

ಅಕ್ಕತಂಗಿಯರಿಗಂತು ಹೇಳಿ ಕೇಳಿ ಒಬ್ಬನೇ ಸೋದರನಿದ್ದ. ದೊಡ್ಡ ಮಾಮಿಯವರ ಮನಸ್ಸಂತೂ ಮದುವಣಿಗಿತ್ತಿಯ ಅವಸ್ಥೆಯಲ್ಲಿಯೆ ಕುಗ್ಗಿಹೋಗಿತ್ತು. ಅವರ ಬಯಕೆ ಎಂದೂ ಚಿಗುರಲಿಲ್ಲ. ಅವರು ಬದುಕಿರುವವರೆಗೆ ಪತಿಯ ಮುಖದರ್ಶನಕ್ಕೆ ಪರಿತಪಿಸಿದರು. ಮಕ್ಕಳ ಜೊತೆಗಾದರೂ ಹಾಯಾಗಿ ಇರಬೇಕೆಂದರೆ ದೇವರು ಅವುಗಳನ್ನೂ ಕರುಣಿಸಲಿಲ್ಲ. ಗಂಡ ಅಕ್ಕತಂಗಿಯರ ಮೆಚ್ಚಿನ ಸೋದರ. ಮುಖ ನೋಡದಿದ್ದರೆ ತಿಂದದ್ದು ಅರಗುತ್ತಿದ್ದಿಲ್ಲ. ಆಫೀಸ್‌ನಿಂದ ನೇರವಾಗಿ ಯಾವಳಾದರೂ ಸೋದರಿಯ ಮನೆಗೆ ಹೋಗುತ್ತಿದ್ದರು. ರಾತ್ರಿಯ ಊಟ ಅಲ್ಲಿಯೇ ಮುಗಿಸಿಕೊಂಡು ಬರುತ್ತಿದ್ದರು. ಆದರೂ ದಿನಾಲು ತಟ್ಟಿ ಸಿಂಗರಿಸಿಕೊಂಡು ರಾತ್ರಿಯವರೆಗೆ ಪ್ರತೀಕ್ಷೆ ಮಾಡುತ್ತಿದ್ದರು. ಎಂದಾದರೂ ಅಕಸ್ಮಾತ್ತಾಗಿ ಊಟ ಮಾಡಿದರೆಂದರೆ ಅವರ ಜೀವನದ ಬಯಕೆ ಪೂರ್ಣಗೊಳ್ಳುತ್ತಿತ್ತು. ಮರುದಿನ ಅಕ್ಕತಂಗಿಯರಲ್ಲಿ ದೊಂಬೆ ಏಳುತ್ತಿತ್ತು. ಅಪ್ಪಿತಪ್ಪಿ ಎಂದಾದರೂ ಭಾಭಿಯನ್ನು ಕರೆಸಿಕೊಳ್ಳುತ್ತಿದ್ದರು. ಆದರೆ ಈ ಬಡಪಾಯಿ ಅಲ್ಲಿ ದಿಕ್ಕಿಲ್ಲದವರಂತೆ ಆಗುತ್ತಿದ್ದಳು. ಎಲ್ಲರೂ

ಅವರನ್ನು ಕರೆಯುವದನ್ನು ನಿಲ್ಲಿಸಿದರು. ಷುಜಾಅತ್ ಮಾಮೂ ಯಾವಾಗಾದರು ಗೆಳೆಯರಿಗೆ ಪಾರ್ಟಿ ಕೊಡುವದಿದ್ದರೆ ಇಲ್ಲವೆ ನೃತ್ಯ-ಗಾಯನಗಳ ಮಹಫಿಲ್‌ಗಳು ಸೇರುತ್ತಿದ್ದರೆ ಅವರ ಹೆಂಡತಿಗೆ ಅವುಗಳ ಪತ್ತೆ ಕೂಡ ಇರುತ್ತಿದ್ದಿಲ್ಲ. ಅಕ್ಕತಂಗಿಯರೇ ಎಲ್ಲ ವ್ಯವಸ್ಥೆ ಮಾಡುತ್ತಿದ್ದರು. ಅವರು ಸೋದರಿಯರ ಕೈಯಲ್ಲಿಯೇ ಹಣ ಕೊಡುತ್ತಿದ್ದರು.

ಗಂಡನನ್ನು ವಶದಲ್ಲಿ ಇಟ್ಟುಕೊಳ್ಳಲು ಒಂದೇ ಉಪಾಯವಿದೆ ಎಂದು ಯಾರೊ ಮಾಮಿಗೆ ಸಲಹೆ ಕೊಟ್ಟರು. ಅವರಿಗೆ ಎಂಥ ಊಟ ಮಾಡಿಸಬೇಕೆಂದರೆ, ಮತ್ತೊಬ್ಬರ ಮನೆಯ ಒಂದು ತುತ್ತು ಕೂಡ ಅವರ ಬಾಯಿಗೆ ರುಚಿಸಿರಬಾರದು. ಸರಿ, ಮಾಮಿ ಅಡಿಗೆ-ವಿಧಾನದ ಪುಸ್ತಕಗಳನ್ನು ತರಿಸಿದರು. ಬಳ್ಳೊಳ್ಳಿಯ ಖೀರು, ಬದಾಮದ ವಡೆ, ದಮ್ ದಿಯಾ ಮುರ್ಗ್, ಮೀನಗಳ ಕಬಾಬ್ ಇವುಗಳನ್ನು ತಯಾರಿಸಿದರು. ಅವುಗಳನ್ನು ತಿಂದು, ತಮಗೆ ವಿಷಕೊಟ್ಟು ಸಾಯಿಸಬೇಕೆಂದು ಬಯಸುತ್ತಿದ್ದಾಳೆ ಎಂದು ಮಾಮೂ ನಿರ್ಣಯಕೊಟ್ಟರು.

ಮಾಮಿ ರಕ್ತವನ್ನು ಉಗುಳಿ ಉಗುಳಿ ಸತ್ತರು.

ಆದರೆ ಹೊಚ್ಚ ಹೊಸ ಮದುಮಗಳು ಬರುತ್ತಲೆ ಅವಳ ಜಾದೂ ತಲೆಗೇರಿ ಮಾತನಾಡತೊಡಗಿತು. ಮಾಮೂಗೆ ಎಲ್ಲಿಗೂ ಹೋಗುವದು ಇರಲಿಲ್ಲ, ಬರುವದು ಇರಲಿಲ್ಲ; ಮತ್ತು ಯಾರಾದರೂ ಬರುವದೂ ಸೇರುತ್ತಿರಲಿಲ್ಲ. ಗಂಡ ಮತ್ತು ಹೆಂಡತಿ, ಸಾಕು. ಎಂಥ ಹೂಮನಸ್ಸಿನ ಸೋದರ ಚುಟಿಕೆ ಬಾರಿಸುವಷ್ಟರಲ್ಲಿ ಹೇಗೆ ನಿಷ್ಕರುಣಿ ಹಾಗೂ ಅಸಭ್ಯನಾಗಿಬಿಟ್ಟನಲ್ಲ! ಜಗತ್ತು ಹಾಳಾಯಿತು. ತಮ್ಮ ಕಾಲುಗಳ ಮೇಲೆ ತಾವೇ ಕಲ್ಲುಹಾಕಿಕೊಂಡಂತೆ ಆಯಿತು. ಗೋರಿ ಬೇಗಮ್ ಜೊತೆ ಮದುವೆ ಮಾಡಿಸಿದ್ದರೆ ತಮ್ಮ ಅಣ್ಣ ತಮ್ಮಿಂದ ದೂರವಾಗುತ್ತಿರಲಿಲ್ಲ.

"ಅಯ್ ಭಾಭಿ, ನಮ್ಮಣ್ಣನನ್ನು ಎಲ್ಲಿಯವರೆಗೆ ಸೆರಗಿನಲ್ಲಿ ಕಟ್ಟಿಡುವೆ? ಹಗಲೆಲ್ಲ ಕುಂಡಿಗೆ ಹಚ್ಚಿಕೊಂಡು ಕುಳಿತಿರಲು ಅವನೇನು ಮಗು ಅಲ್ಲ, ಗಂಡಸಿದ್ದಾನೆ."

ಲೆಕ್ಕವಿಲ್ಲದಷ್ಟು ಶಾಪಗಳನ್ನು ಕೊಡಲಾಗುತ್ತಿತ್ತು. ಆದರೆ ರುಖ್ಸಾನಾ ಬೇಗಮ್ ಅಂತೂ ಖಿಖಿ ನಗುತ್ತಿದ್ದಳು. ಮಿಂಯಾ ಬೆಪ್ಪತಕ್ಕಡಿಯ ಹಾಗೆ ಹಿ ಹಿ ಹಿ ಮಾಡುತ್ತಿದ್ದರು. ಆಕೆ ತನ್ನ ಹೆಂಡತಿ, ನೆರೆಯುವನ ಹೆಂಡತಿ ಅಲ್ಲವಲ್ಲ! ಸರಿ, ದಿಟ್ಟಿಸಿದ್ದೇ ದಿಟ್ಟಿಸಿದ್ದು, ಬಜರಬಟ್ಟೂವಿನ ಹಾಗೆ.

ಮಾಮೂ ಹಿಂದಿನ ಷುಜಾಅತ್ ಮಾಮೂ ಆಗಿ ಉಳಿಯಲಿಲ್ಲ. ಎಲ್ಲಿಯ ಖವಾಲಿಗಳು! ಎಲ್ಲಿಯ ಮುಜರಾಗಳು (ನೃತ್ಯ-ಗೀತ)! ಹೆಂಡತಿ ಮೂರು ಪಟ್ಟು ಕುಣಿಸುತ್ತಿದ್ದಳು ಮತ್ತು ಅವರು ಕುಣಿಯುತ್ತಿದ್ದಾರೆ, ಅಷ್ಟೆ.

"ಅಯ್ಯೋ ಸಾಕು, ಇನ್ನು ಸ್ವಲ್ಪ ದಿನಗಳ ವೈಯಾರವಿದು. ಒಂದು ಸಲ ಗರ್ಭ ನಿಂತರಾಯಿತು, ಮದುವಣಗಿತ್ತಿತನ ಎಲ್ಲ ಮುಗಿದುಬಿಡುತ್ತದೆ. ಒಂದಿಲ್ಲ ಒಂದು

ದಿನವಂತು ಸೋದರನ ಮನಸ್ಸು ತುಂಬುವುದು." ಮನಸ್ಸನ್ನು ಸಮಾಧಾನ ಮಾಡಿಕೊಳ್ಳಲಾಗುತ್ತಿತ್ತು.

ಅಲ್ಲಾಹ್, ಅಲ್ಲಾಹ್, ಎನ್ನುತ್ತ ರುಖ್ಸಾನಾ ಮಾಮಿಯ ಗರ್ಭ ನಿಂತಿತು. ಆದರೆ ಅಲ್ಲಾಹ್ ತೋಬಾ! ವಾಂತಿಯು ಇಲ್ಲ, ದೇಹಾಲಸ್ಯವೂ ಇಲ್ಲ. ಮುಖದ ಮೇಲೆ ಇನ್ನಿಷ್ಟು ಕಳೆ ಉಕ್ಕಿ ಹರಿಯಿತು. ಒಂದಿನಿತಾದರೂ ಆಯಾಸವಿಲ್ಲದೆ ಹೊಸ ಮದುವಣಗಿತ್ತಿಯರಿಗೆ ಇರುವ ಅದೇ ವೈಯಾರ, ಅದೇ ಪ್ರೇಯಸಿಯಂತಹ ಸೊಬಗು. ಅವರನ್ನು ಎತ್ತಿಕೊಂಡು ತಮ್ಮ ಎದೆಗಳಲ್ಲಿ ಅಡಗಿಸಿ ಇಡುವುದು ಮಾಮೂ ಅವರ ನಿಯಂತ್ರಣವನ್ನು ಮೀರಿತ್ತು. ಹೃದಯವನ್ನು ತೆಗೆದು ಅವರ ಕಾಲುಗಳ ಮೇಲೆ ಇರಿಸುತ್ತಿದ್ದರು. ಮನದಿಂದ ಕೆಳಗಿಳಿಯುವ ಬದಲು ಅವರು ಮಾಮೂನ ಬುದ್ಧಿಯನ್ನು ಆಕ್ರಮಿಸಿಬಿಟ್ಟರು.

ದಿನ ತುಂಬಿದ ಸಮಯದಲ್ಲೂ ರುಖ್ಸಾನಾ ಮಾಮಿಯ ಚೆಲುವಿಕೆಗೆ ಗ್ರಹಣವು ಹಿಡಿಯಲಿಲ್ಲ. ದೇಹ ಉಬ್ಬಿತು, ಆದರೆ ಚಂದ್ರ ಹೊಳೆಯುತ್ತಲೇ ಇದ್ದ. ಕಾಲುಗಳ ಮೇಲೆ ಬಾವು ಇಲ್ಲ. ಕಣ್ಣುಗಳ ಸುತ್ತ ಕಪ್ಪು ಕಲೆಗಳೂ ಇಲ್ಲ. ತಿರುಗಾಡಲು ಯಾವ ತೊಂದರೆಯೂ ಇರಲಿಲ್ಲ.

ಬಾಣಂತಿತನದ ಬಳಿಕ ಬೇಗನೆ ಚೇತರಿಸಿಕೊಂಡರು. ಅವಳ ನಡುವಿನಲ್ಲಿ ಕೂದಲೆಳೆಯಷ್ಟಾದರೂ ಹೆಚ್ಚುಕಡಮೆಯಾಗಿದ್ದರೆ ಹೇಳಿ! ಅದೇ ಕುಮಾರಿಯರಂಥ ಬಳಕುವ ದೇಹ. ಬಾಣಂತಿತನದಲ್ಲಿ ಎಂಥವರದಾದರೂ ಕೂದಲು ಉದುರುವುದು. ಆದರೆ ಅವರ ಕೂದಲು ಎಷ್ಟು ಅಳತೆ ಮೀರಿ ಬೆಳೆಯಿತೆಂದರೆ ಒಬ್ಬರೇ ತಲೆ ತೊಳೆದುಕೊಳ್ಳುವುದು ದುಸ್ತರವಾಯಿತು.

ಹಾಂ, ಹೆಂಡತಿಯ ಬದಲು ಮಾಮೂ ತೆಳ್ಳಗಾದರು. ತಾವೆ ಕೂಸನ್ನು ಹೆತ್ತವರ ಹಾಗೆ ಸ್ವಲ್ಪ ಹೊಟ್ಟೆ ಬೆಳೆಯಿತು. ಕೆನ್ನೆಗಳ ಮೇಲಿನ ಉದ್ದುದ್ದ ಗೆರೆಗಳು ಆಳವಾದವು. ಕೂದಲು ಮೊದಲಿಗಿಂತ ಹೆಚ್ಚು ಬೆಳ್ಳಗಾದವು. ದಾಡಿ ಮಾಡಿಕೊಂಡಿರದಿದ್ದರೆ ಕೆನ್ನೆಗಳ ಮೇಲೆ ಇರುವೆಯ ಬಿಳಿ ತತ್ತಿಗಳನ್ನು ಇಟ್ಟಹಾಗೆ ಕಾಣುತ್ತಿತ್ತು.

ಎರಡು ವರ್ಷಗಳ ನಂತರ ಮಗಳು ಹುಟ್ಟಿದಾಗ ಮಾಮೂನ ಹೊಟ್ಟೆ ಇನ್ನಿಷ್ಟು ಮುಂದಕ್ಕೆ ಬೆಳೆಯಿತು. ಕಣ್ಣುಗಳ ಕೆಳಗೆ ಚರ್ಮ ಸುಕ್ಕುಗಟ್ಟಿತು. ಕೆಳಗಿನ ದವಡೆ ಹಲ್ಲು ನೋವು ಅಸಹನೀಯವಾದಾಗ ಅನಿವಾರ್ಯವಾಗಿ ಅದನ್ನು ಕೀಳಿಸಬೇಕಾಯಿತು. ಒಂದು ಇಟ್ಟಿಗೆ ಜಾರಿದ್ದಕ್ಕೆ ಇಡೀ ಇಮಾರತಿಯು ಸಡಿಲಾಯಿತು.

ಆ ಅವಧಿಯಲ್ಲಿ ಮಾಮಿಗೆ ಬುದ್ಧಿಯ ಹಲ್ಲು ಒಡೆದಿತ್ತು.

ಷುಜಾಅತ್ ಮಾಮಾನ ಹಲ್ಲಿನ ಸೆಟ್ ಅಸಲಿ ಹಲ್ಲುಗಳಿಗಿಂತ ಹೆಚ್ಚು ಸುಂದರವಿತ್ತು. ವಯಸ್ಸಿನ ದೋಷವು ಶೈತ್ಯದಲ್ಲಿ ತಲೆದೋರಿತು.

ಇಮ್ತಿಯಾಜ ಸೋದರತ್ತೆಯ ಲೆಕ್ಕದ ಪ್ರಕಾರ ರುಖ್ಸಾನಾ ಮಾಮಿಗೆ ಇಪ್ಪತ್ತಾರು

ವರ್ಷ ತುಂಬಿದ್ದವು. ಈಗಲೂ ಅವರು ಎಂದಾದರೂ ಮಕ್ಕಳ ಜೊತೆ ತುಂಟತನ ಮಾಡುವ 'ಮೂಡ್'ನಲ್ಲಿದ್ದಾಗ ಹದಿನಾರು ವರ್ಷದವರ ಹಾಗೆ ಕಾಣುತ್ತಿದ್ದರು. ಎಷ್ಟೋ ವರ್ಷಗಳಿಂದ ಪ್ರಾಯ ಬೆಳೆಯುವುದು ನಿಂತುಬಿಟ್ಟಿತ್ತು. ಅವರ ಪ್ರಾಯವು ಹಠಮಾರಿ ಕುದುರೆಯ ಹಾಗೆ ಒಂದೇ ಜಾಗೆಯಲ್ಲಿ ನಿಂತುಬಿಟ್ಟದೆ. ಮುಂದೆ ಹೋಗುವ ಹೆಸರೇ ಇಲ್ಲವೇನೋ ಎಂದೆನಿಸುತ್ತಿತ್ತು. ನಾದಿನಿಯರ ಹೃದಯವನ್ನು ಕರಗಸ ಕೊರೆಯುತ್ತಿದ್ದವು.

ಹಾಗೆಯೆ ಕೈಕಾಲುಗಳು ಶಕ್ತಿಗುಂದತೊಡಗಿದಾಗ, ತರುಣರ ಬೆಡಗು ಬಿನ್ನಾಣ ಗಳು ಲಗಾಮ್ ಇಲ್ಲದ ಕುದುರೆಯ ಹಿಂಗಾಲುಗಳ ಒದೆತಗಳ ಹಾಗೆ ಎದೆಯಲ್ಲಿ ನಡುತ್ತವೆ. ಮಾಮಿಯಂತೂ ನಿಚ್ಚಳವಾಗಿ ತಮ್ಮ ಕರ್ತವ್ಯದಲ್ಲಿ ವಂಚನೆ ಮಾಡು ತ್ತಿದ್ದರು. ಅವರು ಗಂಡನನ್ನು ತಮ್ಮ ಪಾಲಿನ ದೇವರೆಂದು ಭಾವಿಸಕೊಳ್ಳಬೇಕು, ಸುಖ-ದುಃಖದಲ್ಲಿ ಅವರಿಗೆ ಜೊತೆ ಕೊಡಬೇಕು—ಎಂದು ಶಿಷ್ಟತೆ ಮತ್ತು ಸದಾಚಾರ ಗಳ ಕಟ್ಟಳೆಯಿತ್ತು. ಅದನ್ನು ಬಿಟ್ಟು ಮಾಮೂ ದಣಿದು ಸುಸ್ತಾಗಿ ಕುಳಿತಿರುವುದು ಮತ್ತು ಬೇಗಮ್ ಯಾವ ಪರವೆಯಿಲ್ಲದೆ ಕೋಳಿಗಳ ಹಿಂದೆ ಓಡುತ್ತಿರುವುದು ಉಚಿತವಾಗಿರಲಿಲ್ಲ.

"ಏ, ಭಾಭಿ, ಖುದಾ ನಿನಗೆ ಶಿಕ್ಷೆ ಕೊಡಲಿ, ತಲೆಯ ಖಬರೂ ಇಲ್ಲ ಕಾಲಿನ ಖಬರೂ ಇಲ್ಲ. ತುಂಟ ಹುಡುಗಿಯಂತೆ ಕೋಳಿಗಳನ್ನು ಓಡಾಡಿಸುತ್ತಿರುವಿ."

"ಅಯ್, ಮತ್ತೆ ಏನು ಮಾಡಲಿ ಖಾಲಾ, ಆ ದಪ್ಪ ಬೆಕ್ಕು...."

"ಉಯ್, ನೋಡಿರಿ, ಇನ್ನಿಷ್ಟು ಕೇಳಿರಿ. ಏ ಬೀಬಿ, ನಾನು ನಿನ್ನ ಖಾಲಾ ಎಂದಿನಿಂದ ಆದೆ? ಷಜನ್ ಭಾಯಿ ನನಗಿಂತ ನಾಲ್ಕು ವರ್ಷ ದೊಡ್ಡವರು. ಮಾಷಾ ಅಲ್ಲಾಹ್! ಅಣ್ಣನು ತಂದೆಯ ಸಮಾನ. ನೀನು ನನಗೆ ಹಿರಿಯಳು. ಖಬರ್‌ದಾರ್, ನೀನು ಮತ್ತೆ ನನಗೆ ಖಾಲಾ ಅಂದೀಯೆ."

"ಒಳ್ಳೆಯದು" ಮದುವೆಯ ಮೊದಲು ರುಖ್ಸಾನಾ ಮಾಮಿಯು ಅಮ್ಮಾ ಅವರ ದುಪ್ಪಟ್ಟಾ ಬದಲ್ ಬಹನ್ ಎಂದು ಕರೆಯಲ್ಪಡುತ್ತಿದ್ದರು.

ಯಾವ ಚೆಲುವು ಮತ್ತು ಎಳೆತನಗಳು ಒಮ್ಮೆ ಷುಜಾಅತ್ ಮಾಮೂ ಅವರನ್ನು ಗುಲಾಮರನ್ನಾಗಿ ಮಾಡಿದ್ದವೊ, ಅವೇ ಈಗ ಅವರ ಕಣ್ಣಿಗೆ ಕರೆಕರೆಯಾಗಿದ್ದವು. ಕುಂಟುವ ಮಗು ಇತರ ಮಕ್ಕಳ ಜೊತೆ ಓಡಲು ಅಸಾಧ್ಯವಾದಾಗ, ನೀವು ಅನ್ಯಾಯ ಮಾಡುತ್ತಿರುವಿರಿ ಎಂದು ಕೆರಳಿ ಹಾರಾಡುವುದು. ಒಮ್ಮೊಮ್ಮೆಯಂತೂ ಅವರು ಬಾಲೆಯರಂತೆ ನಗುವುದು ಓಡಾಡುವುದು ನೋಡಿ ಮಾಮೂನ ಮನಸ್ಸಿನಲ್ಲಿ ನೋವು, ಸಂಕಟಗಳು ಪುಟದೇಳುತ್ತಿದ್ದವು. ಅವರು ಸುಟ್ಟು ಸುಟ್ಟು ಇದ್ದಲಿ ಯಾಗುತ್ತಿದ್ದರು.

"ಹುಡುಗರನ್ನು ಮರಳುಮಾಡಲು ಎಷ್ಟು ಡೌಲಿನಿಂದ ಅಡ್ಡಾಡುತ್ತಿರುವೆ."

*

ಅವರು ವಿಷ ಉಗುಳತೊಡಗಿದರು. "ಹಾಂ, ಈಗ ಯಾವನಾದರೊಬ್ಬ ಹರೆಯದ ಪಹಿಲ್ವಾನನನ್ನು ಹುಡುಕಿಕೊ."

ಮೊದಲಿಗಂತು ಮಾಮಿ ಸಕ್ಕು ಅದನ್ನು ಹಾರಿಸಿಬಿಡುತ್ತಿದ್ದರು. ನಂತರ ನಾಚಿ ಗುಲ್ನಾರ್ ಹೂವು ಆಗುತ್ತಿದ್ದರು. ಅದನ್ನು ಕಂಡು ಮಾಮೂ ಇನ್ನಿಷ್ಟು ರೊಚ್ಚಿಗೇಳುತ್ತಿದ್ದರು ಮತ್ತು ಭಾರಿ ಭಾರಿಯಾದ ದೋಷಗಳನ್ನು ಹೊರಿಸುತ್ತಿದ್ದರು :—"ಇಂಥವರ ಜೊತೆ ಕಣ್ಣು ಮಿಟುಕಿಸುತ್ತಿದ್ದೆ ; ಅಂಥವರ ಜೊತೆ ನಿನ್ನ ಸಂಬಂಧವಿದೆ."

ಆಗ ಮಾಮಿ ಸ್ತಂಭಿತರಾಗುತ್ತಿದ್ದರು. ದಪ್ಪ ದಪ್ಪ ಕಣ್ಣೀರು ಉಕ್ಕುತ್ತಿದ್ದವು. ಗಳದ ಮೇಲಿದ್ದ ದುಪ್ಪಟ್ಟಾವನ್ನು ಎಳೆದುಕೊಂಡು ತಮ್ಮ ದೇಹವನ್ನು ಮುಚ್ಚಿಕೊಂಡು, ತಲೆತಗ್ಗಿಸಿ ಕೋಣೆಯಲ್ಲಿ ಹೋಗುತ್ತಿದ್ದರು. ಮಾಮೂ ಅವರ ಹೃದಯ ಚೂರಾಗುತ್ತಿತ್ತು. ಅವರ ಕಾಲುಗಳ ಕೆಳಗಿಂದ ಭೂಮಿ ಕುಸಿಯುತ್ತಿತ್ತು. ಮಾಮೂ ಅವಳ ಅಂಗಾಲನ್ನು ಚುಂಬಿಸುತ್ತ, ಅವಳ ಕಾಲುಗಳ ಮೇಲೆ ತಲೆ ಚೆಚ್ಚುತ್ತ, ಅವಳೆದುರು ಮೂಗು ತಿಕ್ಕುತ್ತ ಅಳತೊಡಗುವರು. "ನಾನು ನೀಚನಿರುವೆ, ಸೂಳೆಯಮಗನಿರುವೆ. ಎಕ್ಕಡ ತೆಗೆದುಕೊಂಡು ಎಷ್ಟು ಬೇಕೊ ಅಷ್ಟು ಹೊಡೆ.... ನನ್ನ ಪ್ರಾಣವೆ, ನನ್ನ ರುಖಿ, ನನ್ನ ಅರಸಿಯೆ, ನನ್ನ ರಾಜಕುಮಾರಿ...."

ರುಖ್ಸಾನಾ ಬೇಗಂ ತಮ್ಮ ಬೆಳ್ಳಿಯ ತೋಳುಗಳನ್ನು ಅವರ ಕೊರಳಿನ ಸುತ್ತಲು ಹಾಕಿ 'ಭೋ' ಎಂದು ಅಳುವರು. "ನಿನ್ನ ಹಲುಬುವ ಪ್ರಿಯಕರ ನಾನು, ನನ್ನ ಪ್ರಾಣವೆ, ಅಸೂಯೆ-ಮತ್ಸರಗಳಿಂದ ಸುಟ್ಟು ಸುಟ್ಟು ಬೂದಿಯಾಗುತ್ತಲಿರುವೆ. ನೀನು ಮಗುವನ್ನು ಮಡಿಲಲ್ಲಿ ತೆಗೆದುಕೊಂಡಾಗ ನನ್ನ ರಕ್ತ ಕುದಿಯಹತ್ತುವುದು. ಅವನ ಕುತ್ತಿಗೆ ಹಿಚುಕಬೇಕೆಂದು ಅನಿಸುತ್ತದೆ. ನನ್ನನ್ನು ಕ್ಷಮಿಸು, ಪ್ರಾಣವೆ!!"

ಅವರು ಚಟ್ಟನೆ ಕ್ಷಮಿಸಿಬಿಡುತ್ತಿದ್ದರು. ಎಷ್ಟು ಕ್ಷಮಿಸುತ್ತಿದ್ದರೆಂದರೆ ಷುಜಾಅತ್ ಮಾಮೂ ಅವರ ಕಣ್ಣುಗಳ ಸುತ್ತಲಿನ ಕಪ್ಪು ಇನ್ನಿಷ್ಟು ಕಪ್ಪಾಗುತ್ತಿತ್ತು ಮತ್ತು ಅವರು ಬಹಳ ಹೊತ್ತಿನ ತನಕ, ದಣಿದ ಹೇಸರಗತ್ತೆಯ ಹಾಗೆ ತೇಕುತ್ತಿದ್ದರು.

ನಂತರ ಅವರು ಎಂದೂ ಕ್ಷಮೆ ಕೇಳಲು ಶಕ್ಯವಿಲ್ಲದಂಥ ದಿನಗಳೂ ಬಂದವು. ಎಷ್ಟೋ ದಿನಗಳವರೆಗೆ ಅವರು ಮುನಿದುಕೊಂಡು ಮಲಗಿರುತ್ತಿದ್ದರು. ಸೋದರಿಯರ ಆಶೆಯಲ್ಲಿ ಬಂಧಿತರಾಗುತ್ತಿದ್ದರು.

"ಭಯ್ಯಾ ಜಾನ್ ಭಾಭಿಯನ್ನು ಪೀಡಿಸಿ ಪೀಡಿಸಿ ಹೊಡೆಯುತ್ತಿದ್ದಾರೆ. ಇನ್ನು ಸ್ವಲ್ಪ ದಿನಗಳ ನಂತರ ಮುಂದಿನ ಜಗಳಗಳು ಅವಶ್ಯವಾಗಿ ಪರಿಣಾಮ ಬೀರುವವು."

ಮಾಮಿ ಮರೆಯಲ್ಲಿ ಗಂಟೆಗಟ್ಟಲೆ ಅಳುತ್ತಿದ್ದರು. ನೀರು ತುಂಬಿದ ಕಣ್ಣುಗಳಲ್ಲಿ ಕೆಂಪು ಕೆಂಪು ಸಿರಾಗಳು ಇನ್ನಿಷ್ಟು ದುಃಖವನ್ನು ನೆಲೆಗೊಳಿಸುತ್ತಿದ್ದವು. ಕಣ್ಣೀರು ಕೋಡಿಯಿಟ್ಟ ಹಳದಿ ಮುಖವು, ಯಾವನೋ ಅಪ್ರಮಾಣಿಕ ಅಕ್ಕಸಾಲಿಗನು ಬಂಗಾರದಲ್ಲಿ ಸವರಸ್ನಿನ ಬೆರಕೆಯನ್ನು ಹೆಚ್ಚಿಸಿದ್ದಾನೆ ಎನ್ನುವ ಹಾಗೆ ಕಾಣಿಸುತ್ತಿತ್ತು.

ಒಣಗಿದ ತುಟಿಗಳು, ಹಣೆಯ ಮೇಲೊಂದು ಸಿಕ್ಕುಗೊಂಡ, ಅಂಕೆ ಮೀರಿದ ಕುರುಳು. ನೋಡುವವರ ಹೃದಯ ಹಿಂಡಿದಂತಾಗುತ್ತಿತ್ತು. ದುಃಖಿತ ಚೆಲುವನ್ನು ನೋಡಿ ಮಾಮೂ ಅವರ ಬೆನ್ನು ಇನ್ನಿಷ್ಟು ಬಾಗುತ್ತಿತ್ತು. ಕಣ್ಣುಗಳಲ್ಲಿಯ ವೇದನೆ ಮತ್ತಿಷ್ಟು ಹೆಚ್ಚುತ್ತಿತ್ತು.

ಒಂದು ಬಳ್ಳಿ ಇರುತ್ತದೆ—ಅಮೃತಬಳ್ಳಿ. ಅದರ ಕಾಂಡ ಹಸಿರು ಹಸಿರಾಗಿ ಹಾವಿನ ಮರಿಗಳ ಹಾಗೆ ಇರುತ್ತದೆ. ಬೇರು ಇರುವದಿಲ್ಲ. ಈ ಹಸಿರು ಕಾಂಡವನ್ನು ಯಾವುದಾದರೂ ಹಚ್ಚಹಸಿರಾದ ಗಿಡದ ಮೇಲೆ ಹಾಕಿಬಿಟ್ಟರೆ ಬಳ್ಳಿಯು ಆ ಗಿಡದ ರಸವನ್ನು ಹೀರಿಕೊಂಡು ಹಬ್ಬುತ್ತದೆ. ಈ ಬಳ್ಳಿ ಎಷ್ಟು ಹಬ್ಬುತ್ತ ಹೋಗುವುದೋ ಆ ಗಿಡವು ಅಷ್ಟೇ ಒಣಗುತ್ತ ಹೋಗುವದು.

ಹೇಗೆ ಹೇಗೆ ರುಖ್ಸಾನಾ ಬೇಗಮ್ ಅವರ ತೋಟವು ನಳನಳಿಸಹತ್ತಿತೊ ಹಾಗೆ ಹಾಗೆ ಮಾಮೂ ಒಣಗತೊಡಗಿದರು. ಅಕ್ಕತಂಗಿಯರು ತಲೆಗೂಡಿಸಿ ಗುಸುಗುಸು ಮಾಡುತ್ತಿದ್ದರು. ಸೋದರನ ದಿನೇ ದಿನೇ ಕುಸಿಯುತ್ತಿದ್ದ ಆರೋಗ್ಯವನ್ನು ನೋಡಿ ಅವರಿಗೆ ದುಃಖ ಒತ್ತರಿಸುತ್ತಿತ್ತು. ಮಾಮೂ ಪೂರ್ತಿಯಾಗಿ ಮುದುಡಿಹೋಗಿದ್ದರು. ಸಂಧಿವಾತದ ತೊಂದರೆಯಂತು ಇತ್ತೇ ಇತ್ತು. ಶೈತ್ಯ ಬೇರೆ ಪ್ರಾಣ ಹಿಂಡುತ್ತಿತ್ತು. ಖಿಜಾಬ್ ಎಳ್ಳಷ್ಟು ಉಚಿತವಲ್ಲವೆಂದು ಡಾಕ್ಟರ್ ಹೇಳಿದ್ದರಿಂದ ನಿರ್ವಾಹವಿಲ್ಲದೆ ಮದರಂಗಿಯನ್ನು ಹಚ್ಚತೊಡಗಿದರು.

ಪಾಪ, ರುಖ್ಸಾನಾ ಒಬ್ಬೊಬ್ಬರಿಂದ ಕೂದಲನ್ನು ಬೆಳ್ಳಗೆ ಮಾಡುವ ವಿಧಾನಗಳನ್ನು ಕೇಳುತ್ತ ತಿರುಗಿದಳು. ಯಾರೋ ಸುವಾಸನೆಯ ಎಣ್ಣೆಯನ್ನು ಹಚ್ಚಿದರೆ ಕೂದಲು ಬೇಗನೆ ಬೆಳ್ಳಗಾಗುವದೆಂದು ಹೇಳಿದರು. ದುಖ್ಯಿಯಾ ಅತ್ತರ್‌ನ್ನು ತಲೆಗೆ ಮೆತ್ತಿಕೊಂಡರು. ಷಮಾಮುತಲ್-ಅಂಬರ್‌ದ ಅಮಲೇರಿಸುವ ಸುವಾಸನೆಯ ಅಲೆಗಳು ಮಾಮೂ ಅವರ ಮೂಗಿಗೆ ತಾಕಿದಾಗ, ಅವರು ಎಂಥ ಕೊಳಕಾದ ದೋಷವನ್ನು ಮಾಮಿಯ ಮೇಲೆ ಹೊರಿಸಿದರೆಂದರೆ, ಮಕ್ಕಳ ಲಕ್ಷ್ಯವೊಂದಿರದಿದ್ದರೆ ಮಾಮಿ ಬಾವಿಯಲ್ಲಿ ಜಿಗಿದುಬಿಡುತ್ತಿದ್ದರು. ಮಾಮಿಯ ಕೂದಲು ಬೆಳ್ಳಗೆ ಆಗುವ ಬದಲು ಮತ್ತಿಷ್ಟು ಮೃದುತ್ವ ಮತ್ತು ಹೊಳಪು ಪಡೆದು ಕಚ್ಚಹತ್ತಿತು.

ಮಾಮಿಯ ಯೌವನವನ್ನು ಮುರಿಯಲು ಮಾಮೂ ಅವರು ಯುನಾನಿ ಚಿಕಿತ್ಸೆಯ ಎಲ್ಲ ಶಕ್ತಿವರ್ಧಕ ಮತ್ತು ವಾಜೀಕಾರಕ ಲೇಹ, ತೈಲಗಳನ್ನು ಉಪಯೋಗಿಸಿಬಿಟ್ಟರು. ಕೆಲದಿನಗಳವರೆಗೆ ಅವರ ಓಡಿಹೋಗುತ್ತಿದ್ದ ತಾರುಣ್ಯವು ನಿಂತುಕೊಂಡಿತು. ರಸಿಕತೆ ಮರಳಿ ಬಂದಿತು. ಮಾಮಿಗೆ ಕೆಲವು ಸಾಂಸಾರಿಕ ಪೇಚು, ಗತ್ತುಗಳು ತಿಳಿದಿರಲಿಲ್ಲ. ತಂತಾನೆ ಹುಟ್ಟಿದ ಸಸಿಯಾಗಿದ್ದರು. ಎಂದಾದರೂ, ಯಾರೂ ಸೂಕ್ಷ್ಮತೆಗಳನ್ನು

ತಿಳಿಸಿಕೊಟ್ಟಿರಲಿಲ್ಲ. ಅವರು ಇಪ್ಪತ್ತೆಂಟು ವರ್ಷದವರಾಗಿದ್ದರೂ ಹದಿನೆಂಟು ವರ್ಷದವರಂತೆ ಅನನುಭವಿ ಮತ್ತು ಬೆಪ್ಪೆಯಾಗಿದ್ದರು.

ಮೋಟರ್ ಮೇಲೆ ಅತ್ಯಧಿಕ ಭಾರ ಬಿದ್ದರೆ ಇಂಜನ್ ಸುಟ್ಟುಹೋಗುತ್ತದೆ. ಔಷಧಿಗಳ ಪ್ರತಿಕ್ರಿಯೆಯು ಆರಂಭವಾಗುತ್ತಲೆ ಷುಜಾಅತ್ ಮಾಮೂ ಕುಸಿದುಬಿಟ್ಟರು. ಒಮ್ಮೆಲೆ ವೃದ್ಧಾಪ್ಯವು ಒತ್ತರಿಸಿ ಬಂದಿತು. ಅವರು ದೇಹ ಮತ್ತು ಬುದ್ಧಿಗಳನ್ನು ಈ ರೀತಿ ದಣಿಸಿರದಿದ್ದರೆ ಅರವತ್ತೆರಡು ವರ್ಷಗಳಲ್ಲಿ ಪರಿಸ್ಥಿತಿಯು ಅಷ್ಟು ಕೆಡುತ್ತಿರಲಿಲ್ಲ. ಈಗ ಅವರು ತಮ್ಮ ಪ್ರಾಯಕ್ಕಿಂತ ಹೆಚ್ಚು ಮುದಿ ಕಾಣುತ್ತಿದ್ದರು.

ಅಕ್ಕತಂಗಿಯರು ಕಣ್ಣೀರ ಕೋಡಿ ಹರಿಸುತ್ತಿದ್ದರು. ಹಕೀಮ್ ಮತ್ತು ಡಾಕ್ಟರರು ಕೈಬಿಟ್ಟಿದ್ದರು. ತರುಣರಾಗಲಿಕ್ಕಂತೂ ಲಕ್ಷಗಟ್ಟಲೆ ಅನುಪಾನಗಳನ್ನು ಕಂಡುಹಿಡಿಯಲಾಗಿದೆ. ಆದರೆ ವಯಸ್ಸಿಗಿಂತ ಮೊದಲೆ ಮುದುಕರಾಗುವ ಯಾವ ಔಷಧಿಯು ಇರಲಿಲ್ಲ. ಹಾಗಿದ್ದಿದ್ದರೆ ಅದನ್ನು ಮಾಮಿಗೆ ಕೊಡಬಹುದಾಗಿತ್ತು. ಖಂಡಿತವಾಗಿ ಅವರ ಮೇಲೆ ನಗನಗಿಸುವ ವಸಂತದ ಪ್ರೇತ ಸವಾರವಾಗಿತ್ತು ಅಥವಾ ಪೀರ್‌ಮರ್ದ್ ಆಸಕ್ತನಾಗಿದ್ದ. ಆದ್ದರಿಂದಲೆ ಅವರ ಯೌವನವು ಯಾವ ರೀತಿಯಿಂದಲೂ ಕುಗ್ಗುವ ಹೆಸರೇ ಇಲ್ಲ. ತಾಯಿತಗಳು, ದಾರಗಳು ಸೋತುಹೋದವು, ಜಾದೂ ಮಂತ್ರಗಳು ಹುಸಿಯಾದವು.

ಅಮೃತಬಳ್ಳಿ ಹಬ್ಬುತ್ತಲೇ ಇತ್ತು
ಆಲದ ಮರ ಒಣಗುತ್ತಲೇ ಇತ್ತು.

ಚಿತ್ರವಾಗಿದ್ದರೆ ಯಾರಾದರೂ ಹರಿಯಬಹುದಾಗಿತ್ತು, ಮೂರ್ತಿಯಾಗಿದ್ದರೆ ಕುಟ್ಟಿ ಕುಟ್ಟಿ ಪುಡಿ ಮಾಡಲು ಸಾಧ್ಯವಿತ್ತು. ದೇವರ ಕೈಯಿಂದ ಮಾಡಲ್ಪಟ್ಟ ಗೊಂಬೆ ಸಜೀವವು ಸುಂದರವು ಇದ್ದು ಅದರ ಪ್ರತಿ ಉಸಿರಿನಲ್ಲಿಯೂ ಯೌವನದ ಕಾವು ಗಮಗಮಿಸುತ್ತಲಿದ್ದರೆ ಅದರೆದುರು ಯಾವ ಆಟವೂ ನಡೆಯುವದಿಲ್ಲ. ಅದರ ಏರುತ್ತಿರುವ ಸೂರ್ಯನನ್ನು ಕೆಳಗಿಳಿಸುವ ಮಾರ್ಗ ಒಂದೇ ಒಂದು : ಊಟದಲ್ಲಿ ಕೊರತೆ ಮಾಡುವುದು. ತುಪ್ಪ, ಮಾಂಸ, ತತ್ತಿ, ಹಾಲು ಇವೆಲ್ಲ ಪೂರ್ಣ ವರ್ಜ್ಯ. ಷುಜಾಅತ್ ಮಾಮೂ ಅವರ ಪಚನಕ್ರಿಯೆ ಎಂದು ಕೈಕೊಟ್ಟಿತ್ತೊ ಅಂದಿನಿಂದ ಮಾಮಿ ಕೇವಲ ಮಕ್ಕಳ ಸಲುವಾಗಿ ಮಾಂಸ ಮೊದಲಾದುವುಗಳನ್ನು ತರಿಸುತ್ತಿದ್ದರು. ಏನೋ ಒಂದೊಂದು ಸಲ ತಾವೂ ಒಂದು ತುತ್ತು ತಿನ್ನುತ್ತಿದ್ದರು. ಈಗ ಅದರ ಪಥ್ಯವನ್ನು ಕೂಡ ಮಾಡಹತ್ತಿದರು. ಈಗ ಇನ್‌ಷಾ ಅಲ್ಲಾಹ್! ಖಂಡಿತವಾಗಿ ವೃದ್ಧಾಪ್ಯವು ಬಂದೇ ಬರುವದು ಎಂದು ಎಲ್ಲರೂ ಆಶೆ ಕಟ್ಟಿದರು.

" ಏ ಭಾಭಿ, ಬೀದಿ ಬಸವಿಯರ ಹಾಗೆ ಹಾಳಾದ ಶಲ್ವಾರ್ ಕಮೀಜ್ ಕೊಡುತ್ತಿರುವೆ? ಇನ್ನಷ್ಟು ಸಣ್ಣವಳಾಗಬೇಕಾಗಿದೆ ಏನು? ಒಳ್ಳೆ ದಪ್ಪವಾದ ಬಟ್ಟೆಗಳನ್ನು ತೊಟ್ಟು ನಿನ್ನ ಪ್ರಾಯದವಳಾಗಿ ಕಾಣು " ನಾದನಿಯರು ಹೇಳಿದರು.

ಮಾಮಿ ಹೊಲಿದ ದುಪ್ಪಟ್ಟಾ ಮತ್ತು ಗರಾರಾ ತೊಡಹತ್ತಿದರು.

"ಯಾವನೊ ಮಿಂಡನ ಮಗ್ಗಲಿಗೆ ಹೋಗುವ ಸಿದ್ಧತೆ ಏನಿದು?" ಮಾಮೂ ಚುಚ್ಚಿ ಮಾತನಾಡಿದರು. ಮಾಮಿ ಬಟ್ಟೆಗಳಿಂದಲೂ ಹೆದರಹತ್ತಿದರು.

"ಎ ಬೀ, ಇದೇನು ಒಂದೆರಡು ಸಲ ನಮಾಜ್ ಓದುತ್ತಿರುವೆ. ಐದು ಸಲದ ರೂಢಿ ಮಾಡಿಕೊ."

ಮಾಮಿ ಐದು ಹೊತ್ತು ನಮಾಜ್ ಓದಹತ್ತಿದರು. ಮಾಮೂ ಅವರ ನಿದ್ರೆಯು ಎಂದು ಮುದಿ ಮತ್ತು ವೈಯಾರಿ ಆಯಿತೊ ಅಂದಿನಿಂದ ತಹಜದ್ (ಮಧ್ಯ ರಾತ್ರಿಯ ನಮಾಜ್) ಸಮಯದಿಂದ ಎಚ್ಚರವಿರಬೇಕಾಗುತ್ತಿತ್ತು.

"ನಾನು ಸಾಯಲೆಂದು ನಫಲ್ (ಇಷ್ಟಾರ್ಥಸಿದ್ಧಿಗೆ ಮಾಡುವ ಪ್ರಾರ್ಥನೆ) ಓದುತ್ತಿರುವೆ ಏನು?" ಮಾಮೂ ಅಳುಮೋರೆ ಮಾಡುತ್ತಿದ್ದರು.

ತೆಳ್ಳಗಂತು ಇದ್ದೇ ಇದ್ದರು. ಹಗಲು ರಾತ್ರಿಯ ಜಗಳಾಟದ ಮಾತುಗಳಿಂದ ಮತ್ತಿಷ್ಟು ಬತ್ತದ ಸಸಿಯ ಹಾಗೆ ಆದರು. ತುಪ್ಪ, ಮಾಂಸಗಳನ್ನು ವರ್ಜಸಿದ್ದರಿಂದ ಮೈಬಣ್ಣವು ಇನ್ನಷ್ಟು ಮಿರುಗತೊಡಗಿತು. ಚರ್ಮವು ಎಷ್ಟು ಪರಿಶುಭ್ರವಾಯಿತೆಂದರೆ ಯಾವುದೇ ಕ್ಷಣದಲ್ಲಿ ಅದು ಬಲ್ಲೂರ್ ಹರಳಿನ ಹಾಗೆ ಪಾರದರ್ಶಕವಾಗಿ ಕಾಣಿಸಬಹುದಾಗಿತ್ತು. ಮುಖದ ಮೇಲೆ ವಿಲಕ್ಷಣವಾದ ಕಾಂತಿಯು ಹೊರಹೊಮ್ಮಹತ್ತಿತು. ಮೊದಲು ನೋಡುವವರ ಬಾಯಲ್ಲಿ ನೀರು ಊರುತ್ತಿತ್ತು. ಈಗ ಅವರ ಕಾಲುಗಳ ಮೇಲೆ ತಲೆಯನ್ನು ಚಚ್ಚುವ ಬಯಕೆಯು ಜಾಗ್ರತಗೊಳ್ಳುತ್ತಿತ್ತು. ನಸುಕಿನಲ್ಲಿ ನಮಾಜ್ ಫಜ್ಜರ್ (ಮುಂಜಾನೆಯ ನಮಾಜ್) ಮುಗಿಸಿದ ಮೇಲೆ ಕುರಾನ್ ಓದುತ್ತಿರುವಾಗ ಅವರ ಮುಖದ ಮೇಲೆ ಹಜರತ್ ಮರಿಯಮ್ ಅವರ ಮುಗ್ಧತೆ ಮತ್ತು ಫಾತಿಮಾ ಜುಹರಾ ಅವರ ಪವಿತ್ರತೆಗಳು ಪಸರಿಸುತ್ತಿದ್ದವು. ಅವರು ಮತ್ತಿಷ್ಟು ಅಲ್ಪ ಪ್ರಾಯದವರು ಮತ್ತು ಕುಮಾರಿಯಾಗಿ ಕಾಣಿಸುತ್ತಿದ್ದರು.

ಮಾಮೂ ಅವರ ಗೋರಿ ಇನ್ನಷ್ಟು ಸಮೀಪಕ್ಕೆ ಸರಿಯಿತು. ಅವರು, ಮಾಮಿಗೆ, ಬಾಯಿಗೆ ಬಂದ ಹಾಗೆ ಶಪಿಸುವುದು ಹೆಚ್ಚಾಯಿತು. ಅಕ್ಕನ ಮಗ ಮತ್ತು ಅಣ್ಣನ ಮಗ ಇವರ ಬಳಿಕ ಮಾಮಿ ದೆವ್ವಗಳ ಮತ್ತು ದೇವತೆಗಳ ವ್ರತಗಳನ್ನಾಚರಿಸಿ ಅವುಗಳನ್ನು ವಶಮಾಡಿಕೊಂಡಿದ್ದಾರೆ, ದೆವ್ವಗಳಿಂದ ಜಾದೂ ಬೇರುಗಳನ್ನು ತರಿಸಿಕೊಂಡು ತಿನ್ನುತ್ತಾರೆ ಎಂದು ಬಯ್ಯುತ್ತಿದ್ದರು.

ಖಜಾಬದ ನಂತರ ಈಗ ಮದರಂಗಿ—ಕೂಡ ಮಾಮೂ ಅವರಿಗೆ ಕಣ್ಣು ತೋರಿಸಹತ್ತಿತು. ಮದರಂಗಿ ಹಚ್ಚಿಕೊಂಡರೆ ಸೀನು ಬಂದು ಶೈತ್ಯ ಉಂಟಾಗುತ್ತಿತ್ತು. ಅಲ್ಲದೆ ಅವರಿಗೆ ಮದರಂಗಿಯ ಬಗ್ಗೆ ತಿರಸ್ಕಾರ ಬರಹತ್ತಿತ್ತು. ರುಖ್ಸಾನಾ ಮಾಮಿ

ಅವರ ಕೊದಲಿಗೆ ಮದರಂಗಿ ಹಚ್ಚುತ್ತಿದ್ದರೆ ಎಷ್ಟು ಎಚ್ಚರ ವಹಿಸಿದರು ಕೂಡ ಮಾಮಿಯ ಕೈಗಳಲ್ಲಿಯೂ ದೀಪಗಳು ಮಿನುಗುತ್ತಿದ್ದವು. ಮಾಮಿಯ ಕೈ ನೋಡಿ ಷುಜಾಅತ್ ಮಾಮೂ ಅವರಿಗೆ ಆಕೆ ಮದರಂಗಿಯಲ್ಲಿ ಅಲ್ಲ, ತಮ್ಮ ಹೃದಯದ ರಕ್ತದಲ್ಲಿ ಕೈಗಳನ್ನು ಮುಳುಗಿಸಿದ್ದಾರೆ ಎಂದು ಅನಿಸುತ್ತಿತ್ತು. ಯಾವ ಕೈಗಳನ್ನು ಅವರು ಎಂದೊ ಚಮೇಲಿಯ ಬಾಯಿಮುಚ್ಚಿದ ಮೊಗ್ಗುಗಳೆಂದು ಚುಂಬಿಸುತ್ತಿದ್ದರೊ ಕಣ್ಣುಗಳಿಗೆ ಒತ್ತಿಕೊಳ್ಳುತ್ತಿದ್ದರೊ, ಈಗ ಅವೇ ಗಿಡಗದ ಕ್ರೂರ ಪಂಜಾಗಳ ಹಾಗೆ ಅವರ ಕಣ್ಣುಗಳಲ್ಲಿ ಚುಚ್ಚುತ್ತಲಿದ್ದವು.

ಎಷ್ಟೆಷ್ಟು ಅವರು ಮಾಮಿಯ ತಲೆಯನ್ನು ನೆಲದ ಮೇಲೆ ತಿಕ್ಕುತ್ತಿದ್ದರೊ ಆಕೆ ಗಂಧದ ಹಾಗೆ ಸುವಾಸನೆಯನ್ನು ಬೀರುತ್ತಿದ್ದರು.

ಸೋದರಿಯರು ತಮ್ಮ ಮನೆಯಿಂದ ಸ್ವಾದಿಷ್ಠ ಅಡಿಗೆ ತಯಾರಿಸಿ ಸೋದರನಿಗೆ ತಿನ್ನಿಸಲು ತರುತ್ತಿದ್ದರು,—ಎಲ್ಲಾದರು ಅತ್ತಿಗೆ ವಿಷವನ್ನು ಹಾಕದಿರಲಿ ಎಂದು ತಾವೇ ಸ್ವತಾ ತಮ್ಮ ಕೈಗಳಿಂದ ತಿನ್ನಿಸುತ್ತಿದ್ದರು. ಆದರೆ ಆ ಊಟಗಳಿಂದ ಮಾಮೂ ಅವರ ಸ್ಥಿತಿ ಇನ್ನಿಷ್ಟು ಸೂಕ್ಷ್ಮವಾಗಹತ್ತಿತು. ಮೂಲವ್ಯಾಧಿಯ ಹಳೆಯ ತೊಂದರೆ ಹೆಚ್ಚಾಗಿ ಉಳಿದಿದ್ದ ಅಷ್ಟಿಷ್ಟು ರಕ್ತವನ್ನು ಹೀರಿಬಿಟ್ಟಿತು. ಇನ್ನೂ ಆ ವಿಫಲಗೊಂಡ ವಾಜೀಕಾರಕದ ಪ್ರಭಾವವು ಬಾಕಿ ಇತ್ತು. ಅದನ್ನು ಅವರು ಕಳೆದ ಚಳಿಗಾಲದಲ್ಲಿ ಮುರಾದಾಬಾದ್‌ದ ಓರ್ವ ಪ್ರಸಿದ್ಧ ಗರಾಮಿ ಹಕೀಮ್ ಸಾಹೇಬರ ಅನುಪಾನದಂತೆ ನೂರಾರು ರೂಪಾಯಿಯ ಖರ್ಚಿನಿಂದ ತಯಾರ್ ಮಾಡಿಸಿದ್ದರು. ಅನುಪಾನವು ಸಂಪೂರ್ಣ ರಾಜಮನೆತನದ್ದು. ಅದನ್ನು ತಿಂದು ಹೆಣವು ಕೂಡ ಪುಟಪುಟದು ಎದ್ದು ನಿಲ್ಲುತ್ತಿತ್ತು. ಆದರೆ ಮಾಮೂ ಅವರು ಚಳ್ಳಕಾಯಿಯ ಹಾಗೆ ಹುಣ್ಣುಗಳಿಂದ ಮೆತ್ತಲ್ಪಟ್ಟರು.

ದುಃಖಿತ ಮಾಮಿ ತುಪ್ಪವನ್ನು ನೂರು ಸಲ ನೀರಿನಿಂದ ತೊಳೆಯುತ್ತಿದ್ದರು ಮತ್ತು ಅದರಲ್ಲಿ ಗಂಧಕ ಮತ್ತು ಅನೇಕ ಔಷಧಿಗಳನ್ನು ಕುಟ್ಟಿ ಸೋಸಿ ಬೆರೆಸುತ್ತಿದ್ದರು. ಮಣಗಟ್ಟಲೆ ಮುಲಾಮು ಮೆತ್ತಲಾಗುತ್ತಿತ್ತು. ತಪೇಲಿಗಟ್ಟಲೆ ಬೇವಿನ ಸೊಪ್ಪಿನ ನೀರನ್ನು ಕುದಿಸಲಾಗುತ್ತಿತ್ತು. ಮುಂಜಾನೆ ಮತ್ತು ಸಂಜೆ, ಕೀವು ಮತ್ತು ರಕ್ತಗಳನ್ನು ತೊಳೆಯುತ್ತಿದ್ದರು. ಅವುಗಳಲ್ಲಿ ಕೆಲವು ಹುಣ್ಣುಗಳು ಸದಾ ಬಸಿಯುತ್ತಿದ್ದವು. ಅವು ಮಾಮೂನನ್ನು ನುಂಗುತ್ತಿದ್ದವು.

ಬಳಿಕ ಒಂದು ದಿನವಂತು ಅತ್ಯಾಚಾರವೇ ನಡೆಯಿತು. ಮಾಮು ಬಹಳ ಅಶಕ್ತರಾಗಿದ್ದರು. ಅಕ್ಕತಂಗಿಯರು ಕುಳಿತುಕೊಂಡು ಅತ್ತಿಗೆಯ ಗೋಳು ತೋಡಿಕೊಳ್ಳುತ್ತಿದ್ದಾಗ ನಜ್ಜು ಮುದುಕಿ, ಎಲ್ಲಿಂದಲೊ ಏನೊ ಖುದಾಗೆ ಗೊತ್ತು, ಬಂದುಬಿಟ್ಟಳು. ಮೊದಲಂತು ಷುಜಾತ್ ಮಾಮಾಗೆ ನಾನಾಜಾನ್ ಎಂದು ಕುಚೇಷ್ಟೆ ಮಾಡಹತ್ತಿದಳು. ಯಾವ ಕಾಲದಲ್ಲಿಯೋ ನಾನಾಜಾನ್ ಆಕೆಯ ಮೇಲೆ ಬಹಳ ಪ್ರಸನ್ನ

ರಾಗಿದ್ದರು. ಮುದುಕಿ ಬಯಕೆ ಈಡೇರದ್ದಕ್ಕೆ ಮುರ್ಖಳಾಗಿದ್ದಳು. ನಾನಾಜಾನ್ ಸತ್ತು ಇಪ್ಪತ್ತು ವರ್ಷವಾಗಿತ್ತು. ಅವಳು ತನ್ನ ಪಿಚ್ಚು ತುಂಬಿದ ಕಣ್ಣುಗಳಲ್ಲಿ ಹಿಂದಿನ ಕನಸುಗಳನ್ನು ಜಾಗ್ರತಗೊಳಿಸುವ ಬಗ್ಗೆ ಹಟಹಿಡಿದಿದ್ದಳು. ಬಹಳ ಪ್ರಯತ್ನಿಸಿ ಮಾಮೂನ ಅಸಲಿ ಪರಿಸ್ಥಿತಿಯನ್ನು ತಿಳಿದುಕೊಂಡ ಕೂಡಲೆ ಸತ್ತ ಮಾಮಿಯ ದುಃಖವನ್ನು ಎತ್ತಿ ಕುಳಿತಳು. "ಹೆ,....ಹೆ, ಮುದಿತನದಲ್ಲಿ ಹೇಗೆ ಮೋಸ ಮಾಡಿ ಹೋದರಲ್ಲ ..." ಅಕಸ್ಮಾತ್ ಆಕೆಯ ದೃಷ್ಟಿ ಮಾಮಿಯ ಮೇಲೆ ಬಿದ್ದಿತು. ಮಾಮಿ ಅಂಗಳದಲ್ಲಿ ಪಾರಿವಾಳಗಳಿಗೆ ಕಾಳು ಹಾಕುತ್ತಿದ್ದರು. ವಿಲಕ್ಷಣವಾದ ಮುದ್ದಾದ ರೀತಿಯಲ್ಲಿ ಅವರು ಕುತ್ತಿಗೆಯನ್ನು ಹೊರಳಿಸಿ, ಚಿತ್ರ ತೆಗೆಯಿಸುತ್ತಿರುವರೇನೊ ಎನ್ನುವ ಹಾಗೆ ಕುಳಿತಿದ್ದರು. ಪಾರಿವಾಳಗಳ ತುಪ್ಪಳಗಳು ಮಿರುಗುತ್ತಿದ್ದ ಅಂಗೈಯನ್ನು ಕಚಗುಳಿ ಇಡುತ್ತಿದ್ದವು ಮತ್ತು ಎಲ್ಲೆ ಮೀರಿ ನಗುತ್ತಿದ್ದರು.

"ಹಾಯ್, ನಾನು ಸತ್ತೆ!" ಮುದುಕಿ ತನ್ನ ಚಪಾತಿಯಂಥ ಮುಖವನ್ನು ತಟ್ಟಿಕೊಂಡು ರುಖ್ಸಾನಾ ಮಾಮಿಯು ಕಡೆ ಗಾಳಿಯಲ್ಲಿ ನಿವಾಳಿ ತೆಗೆದು ಮೆಲಕುಗಳ ಮೇಲೆ ಹತ್ತೂ ಬೆರಳುಗಳನ್ನು ಚಟ ಚಟ ಮುರಿದಳು.

"ಅಲ್ಲಾಹ್ ಪಾಕ್! ಕೆಟ್ಟ ಕಣ್ಣುಗಳಿಂದ ರಕ್ಷಣೆ ಮಾಡಲಿ. ಮಗಳಂತು ಚಂದ್ರನ ತುಣುಕಾಗಿದ್ದಾಳೆ. ಅವಳು ಹರೆಯಕ್ಕೆ ಬಂದಿದ್ದಾಳೆ, ನನಗೆ ಗೊತ್ತು" ಆಕೆ ರಹಸ್ಯ ತಿಳಿದ ರೀತಿಯಲ್ಲಿ ಮಾಮೂನ ಬಳಿಗೆ ನುಸುಳಿದಳು. "ಸೌದಾಗರ್ ಅವರ ನಡುವಿನ ಮಗ ವಿಲಾಯತ್ ಪಾಸ್ ಮಾಡಿ ಬಂದಿದ್ದಾನೆ. ಅಲ್ಲಾಹ್ ಕಸಮ್! (ದೇವರಾಣೆ) ಒಳ್ಳೆ ಚಂದ್ರ ಮತ್ತು ಸೂರ್ಯರ ಜೋಡಿ ಆಗುತ್ತದೆ."

ಯಾವುದೋ ಕಾಲದಲ್ಲಿ ಮುದುಕಿ ಉಚ್ಚಮಟ್ಟದ, ಹಿರಿಯ ಮಷಾತಾ ಇದ್ದಳು. ಈಗ ಅವಳ ವ್ಯಾಪಾರ ನಿಂತುಬಿಟ್ಟಿತ್ತು. ತುರುಬು ಬೆಳ್ಳಗಾಗಿ, ಕೈಕಾಲುಗಳಿಂದ ವಂಚಿತಳಾದ ಬಳಿಕ, ತುಣುಕು ಬೇಡಿಕೊಂಡು ಕಾಲಕಳೆಯುತ್ತಿದ್ದಳು.

ಸ್ವಲ್ಪ ಸಮಯದವರೆಗಂತೂ, ಹೆಣದಂಥ ಮುದುಕಿ ಏನು ಬೊಗಳುತ್ತಿದ್ದಾಳೆಂದು ಯಾರಿಗೂ ತಿಳಿಯಲಿಲ್ಲ. ಸೌದಾಗರ್ ಅವರ ವಿಲಾಯತ್ ಪಾಸಾದ ಮಗ ಎಲ್ಲರ ದೃಷ್ಟಿಯಲ್ಲಿಯೂ ಇದ್ದ. ಈ ಅಸಾಧ್ಯ ಕುಟಿಲೆ ರುಖ್ಸಾನಾ ಸಂಬಂಧವನ್ನು ಹೊಂದಿಸುವ ಹೊಂಚಿನಲ್ಲಿ ಇದ್ದಾಳೆಂದು ಯಾರಿಗೂ ಸಂಶಯ ಕೂಡ ಬರಲಿಲ್ಲ.

"ಇಮಾಮ್ ಹುಸೇನರ ಆಣೆ, ಮಿಂಯಾ ನಾನಂತು ಬಳೆಗಳ ಜೋಡಿ ತೆಗೆದುಕೊಳ್ಳುವಾಕೆ....ಮಾತು ಎತ್ತಲೆ?"

ಮಾತು ಹೊರಬಿದ್ದು ಅದರ ದೋಷ ಗೊತ್ತಾಗುತ್ತಲೆ ಕಡಜೇರಿಗೆಯ ಹುಟ್ಟನ್ನು ಕೆದಕಿದಂತಾಯಿತು. ನಾಲ್ಕು ಕಡೆಗಳಿಂದಲೂ ತೋಪು ಗುಂಡು ಹಾರಿದವು.

"ಹಾಯ್ ಹಾಯ್, ನನ್ನಂಥ ಬದುಕು ಹಾಳಾದವಳಿಗೆ ಏನು ಗೊತ್ತು?" ಮುದುಕಿ ಸ್ಲಿಪರ್ ಮೆಟ್ಟಿಕೊಳ್ಳುತ್ತ ಹೊರಗೆ ಜಾರಿಕೊಂಡಳು. ಹೋಗುತ್ತಿದ್ದಂತೆ

ಆಕೆ ಮಾಮಿಯು ಸೋತ ಮುಖದ ಮೇಲೆ ಸಂದೇಹಗ್ರಸ್ತ ದೃಷ್ಟಿ ಬೀರಿ, "ಮುಖದ ಮೇಲಂತು ಸ್ಪಷ್ಟವಾಗಿ ಕೌಮಾರ್ಯ ಸುರಿಯುತ್ತಿದೆ" ಎಂದರು.

ಆ ದಿವಸ, ಷುಜಾಅತ್ ಮಾಮೂ ಕುರಾನ್ ಎತ್ತಿಕೊಂಡು ಎಲ್ಲರೆದುರು, ಎರಡೂ ಮಕ್ಕಳು ತಮ್ಮವು ಅಲ್ಲ, ನೆರೆಹೊರೆಯವರ ಕೃಪೆಯ ಫಲಗಳವು, ನೆರೆಯವರ ಮೋಡಿ ರುಖ್ಸಾನಾ ಬೇಗಮ್ ಕಣ್ಣುಮಿಟುಕಿಸುತ್ತಿದ್ದಳು, ಎಂದು ಹೇಳಿದರು.

ಆ ರಾತ್ರಿ ಅವರು ಅಳುತ್ತಲಿದ್ದರು, ನರಳುತ್ತಲಿದ್ದರು, ಕೆಂಡದ ಮೇಲೆ ಹೊರಳಾಡುತ್ತಲಿದ್ದರು. ಆ ರಾತ್ರಿ ಅವರಿಗೆ ದೊಡ್ಡ ಮಾಮಿ ಬಹಳ ನೆನಪಾದರು. ಆಕೆಯ ಕೂದಲಂತು ಸಮಯದ ಮೊದಲೇ ಹಣ್ಣಾಗಿತ್ತು. ಅವರ ಯೌವನ, ಅವರ ಮದುವಣಗಿತ್ತಿತನಗಳು ಕಣ್ಣೀರಿನಲ್ಲಿ ತೇಲಿಹೋಗಿದ್ದವು. ಸಭ್ಯತೆ ಮತ್ತು ಪವಿತ್ರತೆಗಳ ಮೂರ್ತಿ, ವಿಶ್ವಾಸದ ಗೊಂಬೆ. ತಮ್ಮ ಪಾಲಿನ ವೃದ್ಧಾಪ್ಯವನ್ನು ಕೂಡ ಆಕೆ ತನ್ನ ಅಸ್ತಿತ್ವದಲ್ಲಿ ಪಡೆದುಕೊಂಡರು ಮತ್ತು ಕುಲೀನ ಪತ್ನಿಯರ ಹಾಗೆ ಸ್ವರ್ಗವನ್ನು ಪಡೆದರು. ಇಂದು ಆಕೆ ಇದ್ದಿದ್ದರೆ, ಈ ದುಃಖ, ಈ ಉರಿ, ಈ ಬಿಳಿ ಬೇರುಳ್ಳ ಮದರಂಗಿ ಹಚ್ಚಿದ ಕೂದಲು, ಈ ಕೀವುರಕ್ತ ಸೋರುವ ಹುಣ್ಣುಗಳು, ಈ ಒಂಟಿತನ— ಎಲ್ಲವೂ ಅಳಕಿ ಹೋಗುತ್ತಿದ್ದವು. ನಂತರ ವೃದ್ಧಾಪ್ಯವು ಈ ರೀತಿ ಹೆದರಿಸುತ್ತಿರಲಿಲ್ಲ. ಇಬ್ಬರೂ ಜೊತೆಯೆ ಮುದುಕರಾಗುತ್ತಿದ್ದೆವು ಮತ್ತು ಒಬ್ಬರು ಮತ್ತೊಬ್ಬರ ದುಃಖವನ್ನು ಅರ್ಥಮಾಡಿಕೊಳ್ಳುತ್ತಿದ್ದೆವು, ಆಸರೆ ಕೊಡುತ್ತಿದ್ದೆವು.

ಅಮೃತಬಳ್ಳಿ ಹಗಲು ಎರಡು ಪಟ್ಟು, ರಾತ್ರಿ ನಾಲ್ಕು ಪಟ್ಟು ಹಬ್ಬುತ್ತಲಿತ್ತು. ಆಲದಮರದ ಬೊಡ್ಡೆ ಟೊಳ್ಳಾಯಿತು....ಟೊಂಗೆಗಳು ಬಾಗಿದವು, ಎಲೆಗಳು ಉದುರಿದವು....ಬಳ್ಳಿ ಸಮೀಪದ ಹಸಿರುಹಸಿರಾದ ಗಿಡದ ಮೇಲೆ ತೆವಳಿಕೊಂಡಿತು.

ಎಂಥ ಮನೋವೇಧಕ ದೃಶ್ಯವಿತ್ತು ! ಷುಜಾಅತ್ ಮಾಮೂ ಅವರ ಹೆಣವನ್ನು ಸಿಂಗರಿಸಿ ಅಂಗಳದಲ್ಲಿ ಇಡಲಾಗಿತ್ತು. ಸೋದರಿಯರು ನಿಂತು, ಬಿದ್ದು, ಹೊರಳಾಡಿ ಗೋಳಿಡುತ್ತಿದ್ದರು. ಮಾಮೂ ತಮ್ಮ ಎಲ್ಲ ಆಸ್ತಿಯನ್ನು ಅಕ್ಕತಂಗಿಯರ ಹೆಸರಿಗೆ ಮಾಡಿದ್ದರು.

ರುಖ್ಸಾನಾ ಮಾಮಿ ಎಲ್ಲರಿಂದ ಬೇರೆಯಾಗಿ ಬಾಗಿಲಿಗೆ ಹತ್ತಿಕೊಂಡು ಕುಳಿತಿದ್ದರು. ಇಷ್ಟು ಸುಂದರ ಹಾಗೂ ದುಃಖಿತ ವಿಧವೆಯನ್ನು ತಮ್ಮ ಜೀವಮಾನದಲ್ಲಿ ಎಂದೂ ನೋಡಿಲ್ಲವೆಂದು ಅನ್ನುವವರು ಅನ್ನುತ್ತಿದ್ದರು. ಬಿಳಿಯ ಬಟ್ಟೆಗಳಲ್ಲಿ ಅವರು ವಿಲಕ್ಷಣವಾದ, ರಹಸ್ಯಪೂರ್ಣ ಕನಸಿನ ಹಾಗೆ ಕಾಣುತ್ತಿದ್ದರು. ಅತ್ತು ಅತ್ತು ಅವರ ಕಣ್ಣುಗಳು ಮಾದಕವಾಗಿದ್ದವು, ಭಾರವಾಗಿದ್ದವು. ಹಳದಿ ಮುಖವು ಪುಖರಾಜದ ಹರಳಿನಂತೆ ನಿಗಿನಿಗಿಸುತ್ತಿತ್ತು. ಶೋಕ ಪ್ರದರ್ಶನ ಮಾಡುವವರು ಎಲ್ಲವನ್ನು ಮರೆತು ಮಾಮಿಯನ್ನೇ ದಿಟ್ಟಿಸುತ್ತ ನಿಂತುಬಿಟ್ಟರು. ಸತ್ತವನ ಒಳ್ಳೆಯ ಭಾಗ್ಯದ ಬಗ್ಗೆ ಅವರಿಗೆ ಹೊಟ್ಟೆಯುರಿ ಆಗುತ್ತಿತ್ತು.

ಮಾಮಿಯನ್ನು ಅಸಹನೀಯವಾದ ದುಃಖ ಮತ್ತು ವಿವಶತೆಗಳು ಆವರಿಸಿದ್ದವು. ಭಯ-ಭೀತಿ ಮತ್ತು ಉದ್ವಿಗ್ನತೆಗಳಿಂದ ಅವರ ಮುಖವು ಇನ್ನಿಷ್ಟು ಮುಗ್ಧ ಕಾಣ ಹತ್ತಿತ್ತು. ಎರಡು ಮಕ್ಕಳು ಅವರಿಗೆ ಹತ್ತಿಕೊಂಡು ಕುಳಿತಿದ್ದವು. ಅವರು ಅಕ್ಕನ ಹಾಗೆ ಕಾಣುತ್ತಿದ್ದರು.

ಅವರು ಮೌನದಿಂದ ಕುಳಿತಿದ್ದರು, ಸೃಷ್ಟಿಯ ಸರ್ವಶ್ರೇಷ್ಠ ಕಲಾವಿದನು ತನ್ನ ಅನುಪಮ ಕುಂಚದಿಂದ ಯಾವದೊ ಉಚ್ಚತಮ ಕೃತಿಯನ್ನು ನಿರ್ಮಿಸಿ ಸಿಂಗರಿಸಿರುವ ನೇನೊ ಎನ್ನುವ ಹಾಗೆ.

## ಎರಡು ಕೈಗಳು

ರಾಮ ಅವತಾರ ಬ್ರಿಗೇಡ್‌ದಿಂದ ವಾಪಸು ಬರುವವನಿದ್ದ. ಜಾಡಮಾಲಿ ಮುದುಕಿ ಅಬ್ಬಾ ಮಿಂಯಾ ಅವರಿಂದ ಪತ್ರವನ್ನೋದಿಸಲು ಬಂದಿದ್ದಳು. ರಾಮ ಅವತಾರನಿಗೆ ರಜಾ ಸಿಕ್ಕುಬಿಟ್ಟದೆ. ಯುದ್ಧ ಮುಗಿದಿತ್ತಲ್ಲವೆ ? ಆದ್ದರಿಂದ ರಾಮ ಅವತಾರ ಮೂರು ವರ್ಷಗಳ ನಂತರ ವಾಪಸು ಬರುತ್ತಲಿದ್ದ. ಜಾಡಮಾಲಿ ಮುದುಕಿಯ ಪಿಚ್ಚು ತುಂಬಿದ ಕಣ್ಣುಗಳಲ್ಲಿ ನೀರು ತೇಲುತ್ತಿತ್ತು. ಕೃತಜ್ಞತಾ ಭಾವದಿಂದ ಆಕೆ ಓಡಿ ಓಡಿ ಎಲ್ಲರ ಕಾಲುಗಳನ್ನು ಸ್ಪರ್ಶಿಸುತ್ತಿದ್ದಳು, ಆ ಕಾಲುಗಳ ಒಡೆಯರೇ ಆಕೆಯ ಏಕಮಾತ್ರ ಮಗನನ್ನು ಯುದ್ಧದಿಂದ ಜೀವಂತ ಕರೆಸಿದ್ದಾರೆ ಎನ್ನುವ ಹಾಗೆ.

ಮುದುಕಿ ಐವ್ವತ್ತು ವರ್ಷದವಳಿರಬಹುದು. ಆದರೆ ಎಪ್ಪತ್ತರಷ್ಟು ಕಾಣುತ್ತಿದ್ದಳು. ಹತ್ತು ಹನ್ನೆರಡು ಸತ್ತ, ಬದುಕಿದ ಮಕ್ಕಳನ್ನು ಹಡೆದಳು. ಅವುಗಳಲ್ಲಿ ರಾಮ ಅವತಾರ ಮಾತ್ರ ಅನೇಕ ಹರಕೆ, ವ್ರತಗಳಿಂದ ಬದುಕಿದ್ದ. ಅವನ ಮದುವೆಯಾಗಿ ಇನ್ನೂ ಒಂದು ವರ್ಷವಾಗಿರಲಿಲ್ಲ. ಅಷ್ಟರಲ್ಲೆ ರಾಮ ಅವತಾರನಿಗೆ ಕರೆ ಬಂದಿತು. ಜಾಡಮಾಲಿಣಿ ಮುದುಕಿ ಬಹಳಷ್ಟು ಗುಲ್ಲು ಎಬ್ಬಿಸಿದಳು. ಆದರೆ ಏನೂ ನಡೆಯ ಲಿಲ್ಲ. ರಾಮ ಅವತಾರ ವರ್ದಿ (ಜವಾನರ ಉಡುಪು) ಧರಿಸಿ ಕೊನೆಯ ಸಲ ಆಕೆಯ ಕಾಲು ನಮಸ್ಕರಿಸಲು ಬಂದಾಗ ಅವನ ಥಾಟು—ಠೀವಿಗಳಿಂದ ಅಮಿತವಾಗಿ ಪ್ರಭಾ ವಿತಳಾದಳು, ಅವನು ಕರ್ನಲ್‌ನೇ ಆಗಿಬಿಟ್ಟದ್ದಾನೆ ಎನ್ನುವ ಹಾಗೆ.

ಮನೆಗೆಲಸದವರ ವಿಚಾರದಲ್ಲಿ ನೌಕರರು ಮುಗುಳ್ನಗುತ್ತಿದ್ದರು. ರಾಮ ಅವತಾರ ಬಂದ ನಂತರ ಯಾವ ನಾಟಕ ನಡೆಯಬಹುದೆಂದು ನಿರೀಕ್ಷೆಯಿತ್ತೋ, ಎಲ್ಲರೂ ಅದರ ಮೇಲೆಯೆ ಆಶೆಯಿರಿಸಿ ಕುಳಿತಿದ್ದರು. ವಾಸ್ತವದಲ್ಲಿ ರಾಮ ಅವತಾರ ಸೇನೆಯ ದಳದಲ್ಲಿ ತೋಪು, ಬಂದೂಕುಗಳನ್ನು ಹಾರಿಸಲೇನು ಹೋಗಿರಲಿಲ್ಲ. ಆದರೂ ಜವಾನರ ಕೊಳೆಗಳನ್ನು ಎತ್ತುತ್ತ ಎತ್ತುತ್ತ ಅವನಲ್ಲಿಯೂ ಸ್ವಲ್ಪ ಜವಾನರಂಥ ಠೀವಿ, ಡೌಲು ಹಾಗೂ ತಿಮರು ಬೆಳೆದಿದ್ದವು. ಬೂದಿ ವರ್ಣದ ವರ್ದಿಯನ್ನು ಧರಿಸಿ ಕೊಂಡು ಅವನು ಹಿಂದಿನ ರಾಮ ಅವತಾರವಾ ಅಂತು ಖಂಡಿತ ಇರಲಿಕ್ಕಿಲ್ಲ. ಗೋರಿ (ಕೆಂಬಿಯ) ವರ್ಣನೆಗಳನ್ನೂ ಕೇಳಿದ ನಂತರ ಅವನ ತರುಣ ರಕ್ತವು ಅಪ ಮಾನದಿಂದ ಕುದಿಯಲಿಕ್ಕಿಲ್ಲವೆಂಬುದು ಅಸಂಭವವಾಗಿತ್ತು.

ಮದುವೆಯಾಗಿ ಬಂದಾಗ ಹೇಗೆ ಮುಸುಮುಸುಗುಡುತ್ತಿದ್ದಳು ಗೋರಿ. ರಾಮ ಅವತಾರ ಇದ್ದಲ್ಲಿಯವರೆಗೆ ಅವಳ ಮುಸುಕು ಅಡಿಯಷ್ಟು ಉದ್ದವಾಗಿರುತ್ತಿತ್ತು ;

ಯಾರೂ ಅವಳ ಮುಖದ ಮೇಲೆ ಬೆಳಕಿನ ಲಾಸ್ಯವನ್ನು ನೋಡಿರಲಿಲ್ಲ. ಗಂಡ ಹೋದಾಗ ಹೇಗೆ ಬಳಲಿ ಬಳಲಿ, ತನ್ನ ಸೌಭಾಗ್ಯವು ಕೊನೆಯವರೆಗೆ ಹಾರಿಹೋಗುತ್ತಿದೆ ಏನೊ ಅನ್ನುವಂತೆ, ಅತ್ತಿದ್ದಳು. ಕೆಲವು ದಿನ ಕಣ್ಣುಗಳಲ್ಲಿ ನೀರು ತುಂಬಿಕೊಂಡು, ತಲೆ ತಗ್ಗಿಸಿಕೊಂಡು ಕೊಳೆಯ ಬುಟ್ಟಿಯನ್ನು ಎತ್ತಿಕೊಂಡು ಅಲೆದಾಡಿದಳು. ಬಳಿಕ ಅವಳ ಮುಸುಗಿನ ಅಳತೆಯು ಕ್ರಮೇಣ ಕಡಮೆಯಾಗತೊಡಗಿತು.

ಇದೆಲ್ಲ ವಸಂತಋತು ಬೀರಿದ ಪ್ರಭಾವವೆಂದು ಹಲವು ಜನರ ವಿಚಾರ. ಕೆಲವು ಸ್ಪಷ್ಟವಾದಿಗಳು ಗೋರಿ ಇದ್ದದ್ದೆ ಛಿನಾಲಿ ಎನ್ನುತ್ತಿದ್ದರು. ರಾಮ ಅವತಾರ ಹೋಗುತ್ತಲೇ ಪ್ರಳಯವಾಯಿತು. ಅರಿಷ್ಟಮುಂಡೆ, ಸದಾ ಹೀ ಹೀ ಮಾಡುತ್ತ ಯಾವಾಗಲು ಬಿಂಕದಿಂದ ತಿರುಗುತ್ತದೆ. ಟೊಂಕದಮೇಲೆ ಕೊಳೆಯ ಬುಟ್ಟಿ ಇಟ್ಟುಕೊಂಡು ಕಂಚಿನ ಕಡೆಗಳನ್ನು ಝುಣಝುಣ ಮಾಡುತ್ತ ಅವಳು ಯಾವ ಕಡೆಯಿಂದ ಹಾಯ್ದು ಹೋಗುತ್ತಿದ್ದಳೊ ಅಲ್ಲಿಯ ಜನರ ಪ್ರಜ್ಞೆ ತಪ್ಪುತ್ತಿತ್ತು: ಅಗಸನ ಕೈಯಲ್ಲಿಂದ ಸಬಕಾರದ ವಡಿ ಜಾರಿ ತೊಟ್ಟಿಯಲ್ಲಿ ಬೀಳುತ್ತಿತ್ತು, ಅಡಿಗೆಯವನ ದೃಷ್ಟಿ ಹಂಚಿನ ಮೇಲೆ ಹೊತ್ತುತ್ತಿರುವ ರೊಟ್ಟಿಯಿಂದ ದೂರವಾಗುತ್ತಿತ್ತು, ನೀರು ತುಂಬುವವನ ಕೊಡವು ಬಾವಿಯಲ್ಲಿ ಮುಳುಗಿಹೋಗುತ್ತಿತ್ತು, ಎಲ್ಲಿಯವರೆಗೆಂದರೆ ಚಪರಾಸಿಗಳ (ಪರಿಚಾರಕರ) ಬಿಲ್ಲಾ ಹಚ್ಚಿದ ರುಮಾಲುಗಳು ಸಡಿಲಾಗಿ ಕೊರಳಲ್ಲಿ ತೂಗತೊಡಗುತ್ತಿದ್ದವು. ಈ ನಖಶಿಖಾಂತ ಪ್ರಳಯವು ಮುಸುಕಿನೊಳಗಿಂದ ಬಾಣಗಳನ್ನೆಸೆಯುತ್ತ ಹಾಯ್ದು ಹೊರಟಿತೆಂದರೆ ಇಡೀ ಮನೆಗೆಲಸದವರ ವಠಾರವು ನಿರ್ಜೀವ ಹೆಣದಂತೆ ಅಪಸ್ಮಾರದಲ್ಲಿ ಇರುತ್ತಿತ್ತು. ನಂತರ ಒಮ್ಮೆಲೆ ಗಾಬರಿಗೊಂಡು ಅವರು ಒಬ್ಬರು ಇನ್ನೊಬ್ಬರ ದುಃಸ್ಥಿತಿಯ ಬಗ್ಗೆ ವ್ಯಂಗ್ಯ ಮಾಡಹತ್ತುವರು ಅಗಸರವಳು ಸಿಟ್ಟಿನಿಂದ ಗಂಜಿಯ ಗುಂಡಿಯನ್ನು ಬಗ್ಗಿಸುತ್ತಿದ್ದಳು. ಚಪರಾಸಿಣಿ (ಚಪರಾಸಿಯ ಹೆಂಡತಿ) ಎದೆಗೆ ಅಪ್ಪಿಕೊಂಡಿದ್ದ ಮಗುವಿಗೆ ವಿನಾಕಾರಣ ಏಟು ಹಾಕುತ್ತಿದ್ದಳು. ಅಡಿಗೆಯವನ ಮೂರನೆಯ ಹೆಂಡತಿಗೆ ಹಿಸ್ಟೀರಿಯಾ ಕೆರಳುತ್ತಿತ್ತು.

ಅವಳು, ಹೆಸರಿಗೆ ಮಾತ್ರ ಗೋರಿ—ಕೆಂಚಿಯಾಗಿದ್ದಳು. ಆದರೆ ಹಾಳಾದವಳು ಬಹಳ ಕಪ್ಪಗಿದ್ದಳು. ಹಂಚಿನ ಹಿಂಬದಿಯ ಮೇಲೆ ಯಾರೋ ಕೊಳಕು ಹೆಣ್ಣು ಪರಾಠಾಗಳನ್ನು ಬೇಯಿಸಿ ಹೊಳೆಯುವ ಹಾಗೆ ಮಾಡಿಬಿಟ್ಟಂತೆ ಇತ್ತು. ಊದು ಗೊಳವಿಯ ಹಾಗಿರುವ ಮೂಗು, ಅಗಲವಾಗಿ ಹರಡಿದ ಬಾಯಿ, ಹಲ್ಲು, ತಿಕ್ಕುವ ಫ್ಯಾಶನ್ ಅನ್ನು ಅವಳ ಏಳು ಪೀಳಿಗೆಯು ಬಿಟ್ಟಿದೆ ಎನ್ನುವಂತಿತ್ತು. ಕಣ್ಣುಗಳಲ್ಲಿ ಬಟ್ಟುಗಟ್ಟಲೆ ಕಾಡಿಗೆಯನ್ನು ತುಂಬಿಕೊಂಡ ಮೇಲೂ ಬಲಗಣ್ಣಿನ ಓರೆತನವು ಅಡಕವಾಗುತ್ತಿರಲಿಲ್ಲ. ಆದರೂ ಓರೆಗಣ್ಣಿನಿಂದ ವಿಷದಲ್ಲಿ ಅದ್ದಿದ ಬಾಣಗಳನ್ನು ಅದು ಹೇಗೆ ಎಸೆಯುತ್ತಿದ್ದಳೊ ಏನೊ ಅವು ಮಾತ್ರ ನೇರವಾಗಿ ಗುರಿಯುಮೇಲೆ ನಾಟುತ್ತಿದ್ದವು. ಟೊಂಕದಲ್ಲಿ ಕೂಡ ಬಳುಕು ಇರಲಿಲ್ಲ. ಒಳ್ಳೇ ಹಲಸಿನ ಹಣ್ಣಿ

ನಂತಿತ್ತು. ಎಂಜಲು ಕೂಳು ತಿಂದು ತಿಂದು ದಪ್ಪ ಟಗರಿನ ಹಾಗೆ ಆಗುತ್ತಿದ್ದಳು. ಕೊಬ್ಬಿದ ಎಮ್ಮೆಯಂತಹ ಕಾಲುಗಳು. ಅವಳು ಎಲ್ಲೆಲ್ಲಿ ಹಾಯ್ದು ಹೋಗುತ್ತಿದ್ದಳೊ ಅಲ್ಲಲ್ಲಿ ಕೆಟ್ಟ ಎಣ್ಣೆಯ ದುರ್ಗಂಧವು ಹಬ್ಬುತ್ತಿತ್ತು. ಹಾಂ. ಧ್ವನಿಯಂತು ಅತ್ಯಂತ ಮಧುರವಾಗಿತ್ತು. ಹಬ್ಬ ಹುಣ್ಣಿಮೆಗಳಲ್ಲಿ ಉತ್ಸಾಹದಿಂದ ಕಜರಿ ಗೀತೆಗಳನ್ನು ಹಾಡಿದಳೆಂದರೆ ಅವಳ ಧ್ವನಿಯು ಎಲ್ಲರಿಗಿಂತ ಹೆಚ್ಚು ತರಂಗವೇಳಿಸುತ್ತ ಏರುತ್ತ ಹೋಗುತ್ತಿತ್ತು.

ಜಾಡಮಾಲಿಣಿ ಮುದುಕಿ, ಅಂದರೆ ಅವಳ ಅತ್ತೆ, ಮಗನು ಹೋದ ಕೂಡಲೆ ಅವಳ ಬಗ್ಗೆ ಅಳತೆ ಮೀರಿ ಸಂಶಯಗ್ರಸ್ತಳಾದಳು. ಕುಳಿತಾಗ, ನಿಂತಾಗ, ಮುನ್ನೆಚ್ಚರಿಕೆ ಕೊಡಲು ಬಯ್ಯುತ್ತಿದ್ದಳು. ಅವಳ ಮೇಲೆ ಕಣ್ಣಿಡುತ್ತಿದ್ದಳು. ಹಿಂದೆ ಹಿಂದೆ ಅಲೆದಾಡಿದಳು. ಆದರೆ ಈಗ ಮುದುಕಿ ಹಣ್ಣಾಗಿದ್ದಳು. ನಲವತ್ತು ವರ್ಷ ಹೊಲಸು ತೊಳೆದಿದ್ದರಿಂದ ಅವಳ ಸೊಂಟವು ಶಾಶ್ವತವಾಗಿ ಒಂದು ಕಡೆ ಬಾಗಿ ಅಲ್ಲಿಯೇ ಸ್ಥಗಿತವಾಗಿತ್ತು. ನಮ್ಮ ಹಳೆಯ ಜಾಡಮಾಲಿಣಿ ಆಗಿದ್ದಳು. ನಮ್ಮೆಲ್ಲರ ಹುರಿಯನ್ನು ಹುಗಿದಿದ್ದಳು. ಅವ್ವನಿಗೆ ಬೇನೆಗಳು ಏಳುತ್ತಲೆ ಜಾಡಮಾಲಿಣಿ ಬಂದು ಹೊಸಲ ಮೇಲೆ ಕೂಡ್ರುತ್ತಿದ್ದಳು. ಕೆಲವು ಸಲ ಲೇಡಿ ಡಾಕ್ಟರಿಗೂ ಸಹ ಸೂಕ್ತ ಸಲಹೆಗಳನ್ನು ಕೊಡುತ್ತಿದ್ದಳು. ಸಂಕಟಗಳನ್ನು ದೂರ ಮಾಡಲು ಕೆಲವು ಮಂತ್ರಿಸಿದ ತಾಯಿತಗಳನ್ನು ತಂದು ಪಲ್ಲಂಗದ ಪಟ್ಟಿಗೆ ಕಟ್ಟುತ್ತಿದ್ದಳು. ಜಾಡಮಾಲಿಣಿಗೆ ಮನೆಯಲ್ಲಿ ಒಳ್ಳೆ ಹಿರಿಯತನದ ಸ್ಥಾನಮಾನವಿತ್ತು.

ಇಷ್ಟು ಅಚ್ಚುಮೆಚ್ಚಿನ ಜಾಡಮಾಲಿಣಿಯು ಸೊಸೆ ಒಮ್ಮಿಂದೊಮ್ಮೆಲೆ ಜನರ ಕಣ್ಣುಗಳಲ್ಲಿ ಮುಳ್ಳಾದಳು. ಚಪರಾಸಿಣಿ ಮತ್ತು ಅಡಿಗೆಯಾಕೆಯ ವಿಷಯವಿರಲಿ, ನಮ್ಮ ಒಳ್ಳೆಯ, ಸಭ್ಯ ಭಾಭಿಯರ ಹಣೆ, ಅವಳು ಬಿಂಕದಿಂದ ನಡೆಯುವದನ್ನು ನೋಡಿ, ಗಂಟುಗೊಳ್ಳುತ್ತಿದ್ದವು. ತಮ್ಮ ಗಂಡಂದಿರು ಇರುವ ಕೋಣೆಯನ್ನು ಅವಳು ಕಸಗುಡಿಸಲು ಹೋದರೆ, ಇವರು ಅಡಬಡಿಸಿ ಹಾಲು ಕುಡಿಯುತ್ತಿದ್ದ ಮಗುವಿನ ಬಾಯಿಯಿಂದ ಮೊಲೆ ಕಿತ್ತುಕೊಂಡು ಧಾವಿಸುತ್ತಿದ್ದರು, ಈ ಜಾದುಗಾರಿಣಿ ತಮ್ಮ ಗಂಡಂದಿರ ಮೇಲೆ ಎಲ್ಲಾದರೂ ಮಂತ್ರ ಹಾಕಿಬಿಡುತ್ತಾಳೊ ಎನ್ನುವ ಹಾಗೆ.

ಗೋರಿ ಏನಾಗಿದ್ದಳು? ಕೇವಲ ಒಂದು ಇರುಕಲು, ಉದ್ದುದ್ದ ಕೋಡುಗಳುಳ್ಳ ಹೋರಿಯಂತಿದ್ದು ಅದು ಯಾವ ಬಂಧನವಿಲ್ಲದೆ ಅಲೆದಾಡುತ್ತಿತ್ತು. ಜನರು ತಮ್ಮ ಗಾಜಿನ ಪಾತ್ರೆ, ಭಾಂಡಿಗಳನ್ನು ಎರಡೂ ಕೈಗಳಿಂದ ಎದೆಗೆ ತಬ್ಬಿಕೊಂಡಿರುತ್ತಿದ್ದರು. ಆದರೆ ಪರಿಸ್ಥಿತಿಯು ಸೂಕ್ಷ್ಮರೂಪವನ್ನು ತಾಳಿದ ಮೇಲೆ ಮನೆಗೆಲಸದವರ ವಠಾರದ ಹೆಂಗಸರ ಒಂದು ಅಧಿಕೃತ ನಿಯೋಗವು ಅಮ್ಮಾ ಅವರೆದುರು ಪ್ರತ್ಯಕ್ಷವಾಯಿತು. ಬಹಳ ಜೋರಿನಿಂದ ಸದ್ಯದ ಅಪಾಯ ಮತ್ತು ಅದರ ಭಯಾನಕ ಪರಿಣಾಮಗಳ ಬಗ್ಗೆ ವಾದವಿವಾದ ನಡೆಯಿತು. ಪತಿ ರಕ್ಷಣೆಯ ಒಂದು ಕಮೀಟಿಯನ್ನು ರಚಿಸ

ಲಾಯಿತು. ಅದರಲ್ಲಿ ಎಲ್ಲ ಭಾಭಿಗಳು ಉತ್ಸಾಹದಿಂದ ವೋಟ್ ಕೊಟ್ಟರು ಮತ್ತು ಅಮ್ಮಾ ಅವರಿಗೆ ಗೌರವಾಧ್ಯಕ್ಷತೆಯ ಪದವನ್ನು ಒಪ್ಪಿಸಲಾಯಿತು. ಎಲ್ಲ ಮಹಿಳೆಯರು ತಮ್ಮ ಸ್ಥಾನಮಾನಕ್ಕನುಸರಿಸಿ ನೆಲ, ಪೀಡಿ ಮತ್ತು ಪಲ್ಲಂಗದ ಪಟ್ಟಿಗಳ ಮೇಲೆ ಕುಳಿತುಕೊಂಡರು. ಎಲೆ-ಅಡಕೆಯನ್ನು ಹಂಚಲಾಯಿತು ಮತ್ತು ಮುದುಕಿಯನ್ನೂ ಕರೆಸಲಾಯಿತು. ಪೂರ್ಣ ನೆಮ್ಮದಿಯಿಂದ ಮಕ್ಕಳ ಬಾಯಿಗೆ ಹಾಲು ಕೊಟ್ಟು ಸಭೆಯಲ್ಲಿ ಶಾಂತತೆಯನ್ನು ನೆಲೆಗೊಳಿಸಲಾಯಿತು ಮತ್ತು ಮೊಕದ್ದಮೆಯನ್ನು ಸಾದರ್‌ಪಡಿಸಲಾಯಿತು.

"ಯಾಕಲೆ ಡಾಕಿನಿ, ನಿನ್ನ ಛಿನಾಲಿ ಸೊಸೆ, ನಮ್ಮ ನೆತ್ತಿಮೇಲೆ ಮೆಣಸು ಅರೆಯಲಿ ಎಂದು ಅವಳ ಕಟ್ಟು ಬಿಚ್ಚಿ ಬಿಟ್ಟಿರುವೆ ಏನು?....ನಿನ್ನ ಮನಸ್ಸಿನಲ್ಲಿ ಏನಿದೆ? ಮುಖಕ್ಕೆ ಮಸಿ ಹಚ್ಚಬೇಕೆಂದು ಮಾಡಿರುವೆ ಏನು?"

ಜಾಡಮಾಲಿಣಿ ಒಳಗೆ ತುಂಬಿಕೊಂಡೇ ಕುಳಿತಿದ್ದಳು. "ಏನ್ ಮಾಡ್ಲಿ, ಬೇಗಮ್ ಸಾಹೇಬ್, ಹರಾಮ್‌ಕೋರಳಿಗೆ ನಾಲ್ಕೇಟು ಬಿಗಿದಿರುವೆ. ಏನ್ ಮಾಡ್ಲಿ? ಅವಳಿಗೆ ತಿನ್ನಲಿಕ್ಕೆ ರೋಟ್ಟೀನೂ ಕೊಡ್ತಾ ಇಲ್ಲ....ಆದರೆ ಆ ರಂಡಿಯಂತು ನನ್ನ ಹತೋಟಿಗೆ ಮಿಕ್ಕಿದ್ದಾಳೆ" ಎಂದು ಅರ್ಭಟಿಸಿದಳು.

"ಅರೆ, ರೊಟ್ಟಿ ಏನು ಕಡಮೆಯಂತೆ ಅವಳಿಗೆ?"—ಅಡಿಗೆಯವಳು ಕಲ್ಲು ಎಸೆದಳು. ಅವಳು ಸಹಾರನಪೂರದ ಖಾಂದಾನಿ ಅಡಿಗೆಯವಳು ಮತ್ತು ಮೂರನೆಯ ಹೆಂಡತಿ, ಎಷ್ಟು ತೀಕ್ಷ್ಣವಾಗಿದ್ದಳೆಂದರೆ ಅಲ್ಲಾನೆ ಕಾಯಬೇಕು! ಬಳಿಕ ಚಪರಾಸಿಣಿ, ತೋಟಗಾರಿಣಿ ಮತ್ತು ಅಗಸರವಳು ಮೊಕದ್ದಮೆಯನ್ನು ಇನ್ನಿಷ್ಟು ಕ್ಲಿಷ್ಟ ಮಾಡಿದರು. ಪಾಪ ಜಾಡಮಾಲಿಣಿ ಕುಳಿತು ಎಲ್ಲರ ಬೈಗುಳನ್ನು ಕೇಳುತ್ತಿದ್ದಳು ಮತ್ತು ತನ್ನ ಕಜ್ಜಿ ಹತ್ತಿದ ಮೀನಗಂಡವನ್ನು ಕೆರೆದುಕೊಳ್ಳುತ್ತಿದ್ದಳು.

"ಬೇಗಮ್‌ಸಾಹೇಬ್ ತಾವು ಹೇಗೆ ಹೇಳ್ತೀರೊ ಹಾಗೆ ಮಾಡದಿದ್ರೆ ನನಗೆ ಸಾವು ಬರಲಿ. ಆದ್ರೆ ಏನ್ ಮಾಡ್ಲಿ? ಆ ರಂಡಿದು ಕತ್ತು ಹಿಚುಕಿಬಿಡ್ಲಾ?"

ಕತ್ತು ಹಿಚುಕುವ ಸುಂದರ ವಿಚಾರದಿಂದ ಮಹಿಳೆಯರಲ್ಲಿ ಸಂತೋಷದ ಒಂದು ಅಲೆ ತೇಲಿಹೋಯಿತು. ಎಲ್ಲರಲ್ಲೂ ಮುದುಕಿಯ ಬಗ್ಗೆ ಅಪಾರವಾದ ಸಹಾನುಭೂತಿ ಮೂಡಿತು.

"ದುಷ್ಟೆಯನ್ನು ತವರುಮನೆಗೆ ಅಟ್ಟಿಬಿಡು"—ಅಮ್ಮಾ ಸಲಹೆ ಕೊಟ್ಟರು.

"ಅಯ್ ಬೇಗಮ್ ಸಾಹೇಬ್, ಎಲ್ಲಾದ್ರು ಹೀಗ್ ಆದೀತಾ? ಸೊಸೆ ಏನ್ ಪುಕ್ಕಟೆ ಕೈಗೆ ಸಿಕ್ಲಿಲ್ಲ. ಇಡೀ ಬಾಳಿನ್ ದುಡುಮೆ ಪೂರಾ ಎರಡ್‌ನೂರು ಚೆಲ್ಲಿದೆ. ಆಗ ದುಷ್ಟೆ ಕೈಗೆ ಬಂದಿದಾಳೆ. ಅಷ್ಟು ಹಣ ಕೊಟ್ಟಲ್ಲಿ ಎರಡು ಆಕಳು ಬರ್ತಾ ಇದ್ದವು. ಆರಾಮಾಗಿ ಬಿಂದಿಗೆ ತುಂಬ ಹಾಲು ಕೊಡ್ತಿದ್ದವು. ಆದರೆ ಈ ರಂಡಿ ಮಾತ್ರ ಎರಡೂ ಕಾಲಿನ ಒದೆ ಕೊಡ್ತಾ ಇದ್ದಾಳೆ. ಅವಳ್ನ ತವರುಮನೆಗೆ ಅಟ್ಟಿದ್ರೆ,

ಅವಳಪ್ಪ ಅವಳ್ನ ಇನ್ನೊಬ್ಬ ಜಾಡಮಾಲಿ ಕೈಗೆ ಮಾರಿಕೊಳ್ತಾನೆ. ಸೊಸೆ ಮಗನ ಹಾಸಿಗೆಯ ಸಿಂಗಾರ ಅಷ್ಟೇ ಅಲ್ಲ ಎರಡು ಕೈಗಳು ಇದ್ದವಳು. ಆದರೆ ನಾಕು ಜನ್ರ ಕೆಲ್ಸ ಪೂರೈಸ್ತಾಳೆ. ರಾಮ ಅವತಾರ್ ಹೋದ್ ಮೇಲೆ ಮುದುಕಿಯಾದ ನನಗೆ ಇಷ್ಟೆಲ್ಲ ಕೆಲ್ಸ ಸಂಭಾಳಿಸಲಿಕ್ಕೆ ಆಗ್‌ತಿತ್ತಾ? ಈಗ ಮುದುಕಿಯಾಗಿರುವ ನನಗೆ ಸೊಸೆಯ ಎರಡು ಕೈಗಳು ಇಕ್ಕಿದ ಭಿಕ್ಷೆ ಮೇಲೆ ಕಾಲ ಕಳೀಬೇಕಾಗಿದೆ" ಜಾಡಮಾಲಿಣಿ ಹೇಳಿದಳು.

ಮಹಿಳೆಯರೇನು ತಿಳುವಳಿಕೆಯಿಲ್ಲದವರಾಗಿರಲಿಲ್ಲ. ಪ್ರಕರಣವು ಈಗ ನೈತಿಕತೆಯಿಂದ ಸರಿದು ಆರ್ಥಿಕ ಮಟ್ಟಕ್ಕೆ ಬಂದಿತ್ತು. ನಿಜವಾಗಿಯು ಸೊಸೆ ಇರುವುದು ಮುದುಕಿಗೆ ಅವಶ್ಯವಿತ್ತು. ಎರಡು ನೂರು ರೂಪಾಯಿಗಳ ಮಾಲನ್ನು ಚೆಲ್ಲಲು ಯಾರ ಮನಸ್ಸು ಆದೀತು? ಈ ಎರಡು ನೂರರ ಹೊರತು, ಮದುವೆಗೆ ಬನಿಯಾಗಳಲ್ಲಿ ಸಾಲಮಾಡಿ ಖರ್ಚು ಮಾಡಲಾಗಿತ್ತು. ಯಜಮಾನರಿಗೆ ಊಟೋಪಚಾರ ನಡೆಯಿತು. ಬಿರಾದರಿ (ಒಂದೇ ಜಾತಿಯವರ ಸಮೂಹ) ಯನ್ನು ಸಂತುಷ್ಟ ಮಾಡಲಾಯಿತು. ಈ ಎಲ್ಲ ಖರ್ಚಿಗೆ ಹಣ ಬರುವದು ಎಲ್ಲಿಂದ! ರಾಮ ಅವತಾರನ ಸಂಬಳವೆಲ್ಲ ಸಾಲಗಳಿಗೆ ಮುಗಿಯುತ್ತಿತ್ತು. ಇಂಥ ದಷ್ಟಪುಷ್ಟ ಸೊಸೆ ಈಗಂತು ನಾಲ್ಕು ನೂರಕ್ಕಿಂತ ಕಡಮೆಗೆ ಸಿಗುವದಿಲ್ಲ. ಇಡೀ ಕೋಠಿಯನ್ನು ಸ್ವಚ್ಛಮಾಡಿದ ನಂತರ ಮತ್ತೆ ಸುತ್ತುಮುತ್ತಲಿನ ನಾಲ್ಕು ಕೋಠಿಗಳ ಕೆಲಸ ಮಾಡುತ್ತಿದ್ದಳು. ರಂಡಿ ಹಾಗೆ ಕೆಲಸದಲ್ಲಿ ಜಾಣೆ.

ಆದರೂ ಅಮ್ಮಾ ಅವರು ಅಲ್ಟಿಮೇಟಮ್ ಕೊಟ್ಟುಬಿಟ್ಟರು : "ಆದಷ್ಟು ಬೇಗ ಈ ಲುಚ್ಚಿಯ ಬಗ್ಗೆ ಏನಾದರು ವ್ಯವಸ್ಥೆ ಮಾಡದಿದ್ದರೆ, ಕೋಠಿಯ ಕಾಂಪೌಂಡ್‌ದಲ್ಲಿ ಇರಗೊಡುವುದಿಲ್ಲ."

ಮುದುಕಿ ಬಹಳ ಗುಲ್ಲೆಬ್ಬಿಸಿದಳು. ಮನೆಗೆ ಹೋಗಿ ಸೊಸೆಗೆ ಮನವಾರೆ ಬೈದಳು. ತಲೆಗೂದಲನ್ನು ಹಿಡಿದು ಜಗ್ಗಿ ಹೊಡೆದಳು. ಆಕೆ ಹೊಡೆಯುತ್ತಲೇ ಇದ್ದಳು, ಬಡಬಡಿಸುತ್ತಲೇ ಇದ್ದಳು. ಮರುದಿನ ಸೇಡು ತೀರಿಸಿಕೊಳ್ಳಲು, ಇಡೀ ಮನೆಗೆಲಸದವರ ಹೊಲಸು ಹೊರಗೆಳೆಯಹತ್ತಿದಳು. ಅಡಿಗೆಯವನು, ನೀರು ಎತ್ತುವವನು, ಅಗಸ ಮತ್ತು ಚಪರಾಸಿಗಳು ತಮ್ಮ ಹೆಂಡಂದಿರನ್ನು ಥಳಿಸಿದರು. ಎಲ್ಲಿಯವರೆಗೆಂದರೆ ಗೋಠಿಯ ಬಗ್ಗೆ ನನ್ನ ಸಾಧ್ವಿ ಭಾಭಿಗಳು ಮತ್ತು ಸಾತ್ವಿಕ ಅಣ್ಣಂದಿರ ನಡುವೆ ಕೂಡ ತಕರಾರು ನಡೆಯಿತು ಮತ್ತು ಭಾಭಿಗಳ ತವರುಮನೆಗಳಿಗೆ ತಂತಿ ಹೋಗ ಹತ್ತಿದವು. ಒಟ್ಟಿನಲ್ಲಿ ನಳಿನಳಿಸುತ್ತಿದ್ದ ಮನೆತನಕ್ಕೆ ಅವಳು ಹಸಿರು ಮುಳ್ಳಾದಳು.

ಆದರೆ ಮೂರು ನಾಲ್ಕು ದಿನಗಳ ನಂತರ ಜಾಡಮಾಲಿಣಿ ಮುದುಕಿಯ ಮೈದುನನ ಮಗ ರತಿರಾಮ ತನ್ನ ದೊಡ್ಡಮ್ಮನನ್ನು ನೋಡಲು ಬಂದ. ಬಳಿಕ ಅಲ್ಲಿಯೇ ಇದ್ದುಬಿಟ್ಟ. ಮೂರು ನಾಲ್ಕು ಕೋಠಿಗಳಲ್ಲಿ ಕೆಲಸ ಹೆಚ್ಚಾಗಿತ್ತು. ಅದನ್ನು ಅವನು

ಸಂಭಾಳಿಸಿಕೊಂಡ. ತನ್ನ ಊರಲ್ಲಿ ಉಂಡಾಡಿಯಾಗಿ ಅಲೆಯುತ್ತಿದ್ದ. ಅವನ ಹೆಂಡತಿ ಇನ್ನೂ ದೊಡ್ಡವಳಾಗಿರಲಿಲ್ಲ. ಆದ್ದರಿಂದ ಇನ್ನೂ ಮನೆ ತುಂಬಿಸಿಕೊಂಡಿರಲಿಲ್ಲ.

ರತಿರಾಮ ಬರುತ್ತಲೇ ಋತು ಒಮ್ಮೆಲೆ ತಿರುಗುಮುರುಗಾಗಿ ಪೂರ್ತಿಯಾಗಿ ಬದಲಿಸಿತು, ಘನಘೋರ ಮೋಡಗಳು ಗಾಳಿಯ ಹೊಯ್ಲಿಗೆ ಚೆಲ್ಲುವರೆದು ಹೋದ ವೇನೊ ಎನ್ನುವ ಹಾಗೆ. ಗೋರಿಯ ಅಟ್ಟಹಾಸ ಮೌನವಾಯಿತು. ಕಂಚಿನ ಕಡೆ ಗಳು ಮೂಕವಾದವು. ಹೇಗೆ ಆಕಾಶ ಪುಟ್ಟಿಯಲ್ಲಿಂದ ಹವೆಯು ಹೊರಟುಹೋದ ನಂತರ ಅದು ಸುಮ್ಮನೆ ಹೊಯ್ದಾಡಹತ್ತುವದೋ ಹಾಗೆ ಗೋರಿಯ ಮುಸುಕು ತೂಗುತ್ತ ತೂಗುತ್ತ ಕೆಳಗಿಳಿಯಿತು. ಮುಗುದಾಣವಿಲ್ಲದ ಹೋರಿಗೆ ಪ್ರತಿಯಾಗಿ ಅವಳು ಅತ್ಯಂತ ನಾಚುವ ಸೊಸೆಯಾದಳು. ಮಹಿಳೆಯರೆಲ್ಲರು ನೆಮ್ಮದಿಯ ಉಸಿರು ಎಳೆದುಕೊಂಡರು. ಕೆಲಸದಾಳುಗಳು ಅವಳ ಗೇಲಿ ಮಾಡಿದಾಗ್ಯೂ ಕೂಡ ಅವಳು ಮುಟ್ಟಲು ಮುನಿಯುವ ಬಳ್ಳಿಯ ಹಾಗೆ ನಾಚುತ್ತಿದ್ದಳು. ಹೆಚ್ಚು ಪೀಡಿಸಿದರೆ ಅವಳು ಮುಸುಕಿನಲ್ಲಿಂದ ಓರೆಗಣ್ಣನ್ನು ಇನ್ನಿಷ್ಟು ಓರೆಮಾಡಿ ರತಿರಾಮನ ಕಡೆ ನೋಡುತ್ತಿದ್ದಳು. ಅವನು ತಟ್ಟನೆ ತೋಳೇರಿಸುತ್ತ ಎದುರಿಗೆ ಬಂದು ನಿಲ್ಲುತ್ತಿದ್ದನು. ಮುದುಕಿ ನೆಮ್ಮದಿಗೊಂಡ ರೀತಿಯಲ್ಲಿ ಹೊಸಲ ಮೇಲೆ ಕುಳಿತು ಅರೆದೆರೆದ ಕಣ್ಣು ಗಳಿಂದ ಈ ತಮಾಷೆಯನ್ನು ನೋಡುತ್ತ ಗುಡಗುಡಿ ಸೇದುತ್ತಿದ್ದಳು. ನಾಲ್ಕೂ ಕಡೆಯಲ್ಲಿ ಹಿತಕರ ಲಕ್ಷಣಗಳು ಆವರಿಸಿದವು, ಕುರುವಿನ ಕೀವು ಹೋಗಿದೆಯೇನೊ ಎನ್ನುವ ಹಾಗೆ.

ಆದರೆ ಈಗೀಗ ಅವರ ಸೊಸೆಯ ವಿರುದ್ಧ ಒಂದು ಹೊಸ ರಣರಂಗವು ಸ್ಥಾಪಿತ ವಾಯಿತು. ಅದು ಚಾಕರಿಯ ಗಂಡಸು ಜಾತಿಯನ್ನು ಒಳಗೊಂಡಿತ್ತು. ಅವಳಿಗೆ ಪರಾಠಾ ಮಾಡಿಕೊಡುತ್ತಿದ್ದ ಅಡಿಗೆಯವನು ಈಗ ವಿಷಯವಿರಲಿ ಬಿಡಲಿ, ಬಿಂದಿಗೆ ಯನ್ನು ಸರಿಯಾಗಿ ತೊಳೆದಿಲ್ಲವೆಂದು ಬೈಯಹತ್ತಿದ. ಅಗಸರವನು, ತಾನು ಗಂಜಿಯಲ್ಲಿ ಅದ್ದಿ ಬಟ್ಟೆಗಳನ್ನು ಹಗ್ಗದ ಮೇಲೆ ಒಣಹಾಕಿದಾಗ ಅವಳು ಧೂಳು ಹಾರಿಸುತ್ತ ಬರುವಳೆಂದು, ತಕರಾರು ಮಾಡುತ್ತಿದ್ದ. ಚಪರಾಸಿಗಳು ಗಂಡಸರ ಕೋಣೆಗಳನ್ನು ಹತ್ತು ಹತ್ತುಸಲ ಕಸಗೂಡಿಸ ಹಚ್ಚುತ್ತಿದ್ದರು. ಆದರೂ ಅಲ್ಲಿಯ ಹೊಲಸಿನ ಬಗ್ಗೆ ಗೊಣಗಾಡುತ್ತಿದ್ದರು. ಅವಳು ಕೈತೊಳೆಯಲು ಎಷ್ಟೋ ಕೊಳಗ ಗಳನ್ನು ತುಂಬಿ ತಯಾರ್ ಇಡುತ್ತಿದ್ದ ನೀರು ಸೇದುವವನು, ಈಗ ಅವಳು ಅಂಗಳ ದಲ್ಲಿ ನೀರು 'ಚಳೆ' ಹೊಡೆ ಎಂದು ಗಂಟೆಗಟ್ಟಲೆ ಹೇಳಿದರೂ ಅದನ್ನು ಹಾಗೆಯೇ ತಳ್ಳಿಹಾಕುತ್ತಿದ್ದ. ಯಾಕೆಂದರೆ, ಅವಳು ಒಣ ನೆಲವನ್ನು ಗುಡಿಸಿದರೆ ಧೂಳು ಎಬ್ಬಿಸಿದ ತಪ್ಪಿಗೆ ಚಪರಾಸಿಗಳು ಅವಳನ್ನು ಬೈಯಲು ಸಾಧ್ಯವಿತ್ತು.

ಆದರೆ ಗೋರಿ ತಲೆ ತಗ್ಗಿಸಿಕೊಂಡು ಎಲ್ಲರ ಗದ್ದರಿಕೆ, ಧೂತ್ಕಾರಗಳನ್ನು ಒಂದು ಕಿವಿಯಿಂದ ಕೇಳಿ ಇನ್ನೊಂದು ಕಿವಿಯಿಂದ ಹಾರಿಬಿಡುತ್ತಿದ್ದಳು. ಮನೆಗೆ ಹೋಗಿ

ಅತ್ತೆಗೆ ಏನು ಹೇಳುತ್ತಿದ್ದಳೊ ಏನೊ ಆಕೆ ಕಾವ್ ಕಾವ್ ಮಾಡುತ್ತ ಎಲ್ಲರ ತಲೆ ತಿನ್ನತೊಡಗುತ್ತಿದ್ದಳು. ಈಗ ಆಕೆಯ ದೃಷ್ಟಿಯಲ್ಲಿ ಸೊಸೆಯು ಪವಿತ್ರಳು ಮತ್ತು ಸಂಭಾವಿತೆ ಆಗಿದ್ದಳು.

ಬಳಿಕ ಒಂದು ದಿನ, ಎಲ್ಲ ನೌಕರರ ಸರದಾರನು ಮತ್ತು ಅಬ್ಬಾ ಅವರ ವಿಶೇಷ ಸಲಹೆಗಾರನೆಂದು ಭಾವಿಸಲ್ಪಟ್ಟವನು ಆದ ಗಡ್ಡದ ದರೋಗಾಜಿ ಅಬ್ಬಾನ ಸಮ್ಮುಖದಲ್ಲಿ ಕೈಕಟ್ಟಿ ಹಾಜರ್ ಆದ ಮತ್ತು ಆ ಭಯಾನಕ ಕೆಟ್ಟ ಅಡಿಗೆ ಮತ್ತು ಕಸದ ತೊಂದರೆಗಳನ್ನು ತೋಡಿಕೊಳ್ಳಹತ್ತಿದ. ಗೋರಿ ಮತ್ತು ರತಿರಾಮ ಇವರ ಅನುಚಿತ ಸಂಬಂಧಗಳು ಇಡೀ ಮನೆಗೆಲಸದವರ ವಿಚಾರವನ್ನು ಹೊಲಸು ಮಾಡಿದ್ದವು. ಅಬ್ಬಾ ಅವರು ಮೊಕದ್ದಮೆಯನ್ನು ಸೆಸನ್ಸ್‌ಗೆ ಅಂದರೆ ಅಮ್ಮಾ ಅವರಿಗೆ ಒಪ್ಪಿಸಿಬಿಟ್ಟರು. ಮಹಿಳೆಯರ ಸಭೆ ಮತ್ತೊಮ್ಮೆ ಸೇರಿತು. ಮುದುಕಿಯನ್ನು ಕರೆಯಿಸಿ ಅವಳನ್ನು ತರಾಟೆಗೆ ತೆಗೆದುಕೊಳ್ಳಲಾಯಿತು.

"ಏ ತಲೆಮಾಸಿದವಳೆ, ನಿನ್ನ ಲೌಡಿ ಸೊಸೆ ಏನು ಧಂದೆ ನಡೆಸಿದ್ದಾಳೆಂದು ನಿನಗೆ ಗೊತ್ತಿದೆಯೆ?"

ಜಾಡಮಾಲಿಣಿ, ಪಾಪ ಯಾರ ಪ್ರಸ್ತಾಪ ನಡೆದಿದೆಯೊ ಏನೊ, ತನಗೆ ಏನೂ ಗೊತ್ತಿಲ್ಲವೆನ್ನುವ ಹಾಗೆ, ಕಣ್ಣು ಪಿಳುಕಿಸಿ ನೋಡಿದಳು. ಕಣ್ಣಾರೆ ಕಂಡ ಸಾಕ್ಷಿಗಳ ಹೇಳಿಕೆಯ ಪ್ರಕಾರ ಸೊಸೆ ಮತ್ತು ರತಿರಾಮ ಇವರ ಸಂಬಂಧಗಳು ಅಸಹ್ಯದ ಮಟ್ಟ ತಲುಪಿವೆ. ಇಬ್ಬರೂ ಆಕ್ಷೇಪಣೀಯ ಸ್ಥಿತಿಗಳಲ್ಲಿ ಸಿಕ್ಕುಬಿದ್ದಿದ್ದಾರೆ, ಎಂದು ಸ್ಪಷ್ಟವಾಗಿ ಹೇಳಿದಮೇಲೆ, ಮುದುಕಿ ತನ್ನ ಹಿತೈಷಿಗಳಿಗೆ ಕೃತಜ್ಞತೆ ಹೇಳುವ ಬದಲು ಉರಿದೆದ್ದಳು. ರಾಮ ಅವತರವಾ ಇದ್ದಿದ್ದರೆ, ತನ್ನ ಮುಗ್ಧ ಸೊಸೆಯ ಮೇಲೆ ದೋಷ ಹೊರಿಸುವವ ಜನರನ್ನು ನೋಡಿಕೊಳ್ಳುತ್ತಿದ್ದ. ಪಾಪ ಸೊಸೆ ಈಗ ರಾಮ ಅವತಾರನ ನೆನಪಿನಲ್ಲಿ ಕಣ್ಣೀರು ಸುರಿಸುತ್ತಲಿದ್ದಾಳೆ. ಕೆಲಸಗಳನ್ನು ಮನಸ್ಸಿಟ್ಟು ಮಾಡುತ್ತಾಳೆ. ಯಾರ ತಕರಾರೂ ಇಲ್ಲ. ಗದ್ದಲಗಳನ್ನು ಮಾಡುತ್ತಿಲ್ಲ, ಜನರು ವಿನಾ ಕಾರಣ ಅವಳ ವೈರಿಯಾಗಿದ್ದಾರೆ—ಎಂದು ಗುಲ್ಲೆಬ್ಬಿಸಿದಳು, ಬಹಳಷ್ಟು ತಿಳಿಸಿ ಹೇಳಿದರೂ ಆಕೆ—ಇಡೀ ಜಗತ್ತೇ ತನ್ನ ಜೀವ ತಿನ್ನತೊಡಗಿದೆ. ಕೊನೆಗೆ ಮುದುಕಿ ಮತ್ತು ಅವಳ ಮುಗ್ಧ ಸೊಸೆ ಯಾರಿಗೆ ಯಾವ ಕೆಡಕು ಮಾಡಿದ್ದಾರೆ. ಆಕೆಯಂತು ಯಾರ ಕೊಡುವುದರಲ್ಲಾಗಲಿ ಅಥವಾ ತೆಗೆದುಕೊಳ್ಳುವದರಲ್ಲಾಗಲಿ ಇಲ್ಲ. ಆಕೆಯಂತು ಎಲ್ಲರ ವಿಶ್ವಾಸಿಯಾಗಿದ್ದಳು. ಈವರೆಗೂ ಆಕೆ ಯಾರಿಗೂ ವಿಶ್ವಾಸಘಾತ ಮಾಡಿಲ್ಲ. ಯಾರದೋ ದೋಷ ಆರಿಸುತ್ತ ಅಲೆದಾಡಲು ಆಕೆಗೆ ಯಾವ ಅವಶ್ಯಕತೆ ಇದೆಯಂತೆ. ಕೋಠಿಗಳ ಹಿತ್ತಲಲ್ಲಿ ಏನೆಲ್ಲ ನಡೆಯುವದಿಲ್ಲ? ಜಾಡಮಾಲಿಣಿಯಿಂದ ಯಾರ ದೋಷವೂ ಮರೆಯಾಗುವದಿಲ್ಲ. ಈ ಮುದಿ ಕೈಗಳು ದೊಡ್ಡ ಜನರ ಪಾಪಗಳನ್ನು ಮುಚ್ಚಿವೆ. ಈ ಎರಡು ಕೈಗಳು ಇಷ್ಟಪಟ್ಟರೆ ರಾಣಿಯರ

ಸಿಂಹಾಸನಗಳನ್ನು ಉರುಳಿಸಬಲ್ಲವು. ಆದರೆ ಹಾಗೆ ಮಾಡುವದಿಲ್ಲ. ಆಕೆಗೆ ಯಾರ ಬಗ್ಗೆಯೂ ದ್ವೇಷವಿಲ್ಲ. ಅಂಥಾಕೆಯ ಕತ್ತಿಗೆ ಚೂರಿ ಹಾಕಿದರೆ ತಪ್ಪಾಗುವದು. ಹಾಗೆ ಆಕೆ ಯಾರ ರಹಸ್ಯಗಳನ್ನು ತನ್ನ ಮುದಿ ಹೃದಯದಿಂದ ಹೊರಹೋಗಗೊಟ್ಟಿಲ್ಲ?—ಎಂದು ದುಃಖಿಸಹತ್ತಿದಳು.

ಆಕೆಯ ಆವೇಶವನ್ನು ನೋಡಿ, ಚೂರಿ ಹಾಕಬೇಕೆನ್ನುವವರ ಕೈಗಳು ತಟ್ಟನೆ ಸಡಿಲಾದವು. ಎಲ್ಲ ಮಹಿಳೆಯರು ಅವಳ ಸಮರ್ಥನೆ ಮಾಡಹತ್ತಿದರು. ಸೊಸೆ ಏನೆ ಮಾಡಲಿ, ತಮ್ಮ ಕೋಟೆಗಳಂತು ಭದ್ರವಾಗಿವೆ. ಅಂದಮೇಲೆ ಆಕ್ಷೇಪಣೆ ಎಂಥದು? ಬಳಿಕ ಕೆಲವು ದಿನಗಳವರೆಗೆ ಸೊಸೆಯ ಪ್ರಣಯದ ಚರ್ಚೆ ಕಡಮೆಯಾಗಹತ್ತಿತ್ತು. ಜನರು ಕೊಂಚ ಮರೆಯತೊಡಗಿದರು. ಆದರೆ ಗುರುತಿಸುವವರು, ಆಕೆಯ ಸೊಸೆಯಲ್ಲಿ ಐಬು ಇದೆಯೆಂದು ಕಂಡುಹಿಡಿದರು. ಸೊಸೆಯ ದಷ್ಟಪುಷ್ಟ ದೇಹ ಕೂಡ ಈ ಕಳಂಕವನ್ನು ಬಹಳ ದಿನಗಳವರೆಗೆ ಮುಚ್ಚಿಡಲು ಶಕ್ಯವಾಗಲಿಲ್ಲ. ಜನರು ಕಷ್ಟಪಟ್ಟು ಮುದುಕಿಗೆ ತಿಳಿಸಿ ಹೇಳಹತ್ತಿದರು. ಆದರೆ ಈ ಹೊಸ ವಿಷಯದ ಬಗ್ಗೆ ಮುದುಕಿ ಸಂಪೂರ್ಣ ಹಾರಿಕೆಯ ಉತ್ತರಗಳನ್ನು ಕೊಡಹತ್ತಿದಳು. ಕಿವಿ ಮಂದವಾಗಿವೆ ಎನ್ನುವ ಹಾಗೆ ಆಗಿಬಿಡುತ್ತಿದ್ದಳು. ಈಗ ಆಕೆ ಹೆಚ್ಚಾಗಿ ಮಂಚದ ಮೇಲೆ ಒರಗಿಕೊಂಡು ಸೊಸೆ ಮತ್ತು ರತಿರಾಮ ಅವರ ಮೇಲೆ ಹುಕುಮ್ ನಡೆಸುತ್ತಿದ್ದಳು. ಎಂದಾದರು ಆಕೆ ಕೆಮ್ಮುತ್ತ, ಸೀನುತ್ತ ಹೊರಗೆ ಬಿಸಿಲಲ್ಲಿ ಬಂದು ಕುಳಿತರೆ, ಅವರಿಬ್ಬರು ಆಕೆ ಪಟ್ಟದ ರಾಣಿ ಏನೊ ಎನ್ನುವಂತೆ ಆಕೆಯ ದೇಖರೇಖಿ ಮಾಡುತ್ತಿದ್ದರು.

ಸಭ್ಯ ಗೃಹಿಣಿಯರು ಆಕೆಗೆ ಬಹಳ ತಿಳಿಸಿ ಹೇಳಿದರು: ರತಿರಾಮನ ಮುಖಕ್ಕೆ ಮಸಿ ಹಚ್ಚು, ರಾಮ ಅವತಾರ ಹಿಂದಿರುಗಿ ಬರುವ ಮೊದಲೇ ಸೊಸೆಯ ಉಪಚಾರ ಮಾಡಿ ಮುಗಿಸಿಬಿಡು. ಆಕೆ ಸ್ವತಃ ಆ ಕಲೆಯಲ್ಲಿ ನಿಷ್ಣಾತಳಾಗಿದ್ದಳು. ಎರಡು ದಿನಗಳಲ್ಲಿ ಎಲ್ಲವೂ ಸ್ವಚ್ಛವಾಗುತ್ತಿತ್ತು. ಆದರೆ ಮುದುಕಿ ಏನನ್ನೂ ತಿಳಿದುಕೊಳ್ಳಲು ಯತ್ನಿಸಲಿಲ್ಲ. ಆಕೆ ಪೂರ್ತಿ ಆ ಕಡೆ, ಈ ಕಡೆಯ ದೂರುಗಳನ್ನು ಹೇಳಹತ್ತಿದಳು: ಆಕೆಯ ಮೊಳಕಾಲದ ಸಂಧಿಯಲ್ಲಿ ಮೊದಲಿಗಿಂತ ಹೆಚ್ಚು ನೋವಿದೆ, ಪಕ್ಕದ ಕೋಣೆಯಲ್ಲಿ ಜನರು ಬಹಳಷ್ಟು ಬರಷಣದ ವಸ್ತುಗಳನ್ನು ತಿನ್ನಹತ್ತಿದ್ದಾರೆ. ಒಂದಿಲ್ಲ ಒಂದು ಕೋಣೆಯಲ್ಲಿ ಯಾರಿಗಾದರು ಅತಿಸಾರವಿದ್ದೇ ಇರುತ್ತದೆ. ಆಕೆ ನೆಪ ಹೇಳುವದನ್ನು ನೋಡಿ ಉಪದೇಶ ಮಾಡುವವರು ಸುಟ್ಟು ಕರಕಾದರು. ಸೊಸೆ ಹೆಣ್ಣು ಹೆಂಗಸು, ತಿಳಿಗೇಡಿ ಮತ್ತು ಮುಗ್ಧೆ ಇದ್ದಾಳೆಂದು ಒಪ್ಪೋಣ. ದೊಡ್ಡ ದೊಡ್ಡ ಸಭ್ಯರೆನಿಸಿಕೊಳ್ಳುವವರು ಕೂಡ ತಪ್ಪು ಮಾಡುತ್ತಾರೆ. ಆದರೆ ಆ ದೊಡ್ಡ ಮನೆತನಗಳ ಹಿರಿಯರಾದ ಅತ್ತೆಯಂದಿರು ಹೀಗೆ ಕಿವಿಯಲ್ಲಿ ಅರಳೆ ತುರುಕಿಕೊಂಡು ಕುಳಿತುಕೊಳ್ಳುವದಿಲ್ಲ. ಆದರೆ ಈ ಮುದುಕಿ ಹೀಗೇಕೆ ಅರಳುಮರುಳಾಗಿರುವಳೊ ಏನೊ.

*

ಯಾವ ಕಳಂಕವನ್ನು ಅವಳು ಸಸಾರವಾಗಿ ಕೋಠಿಯ ತಿಪ್ಪೆಯ ತಳದಲ್ಲಿ ಹುಗಿದು ಬಿಡಬಹುದಾಗಿತ್ತೋ ಅದನ್ನು ಕಣ್ಣು ಮುಚ್ಚಿಕೊಂಡು ಬೆಳೆಯಗೊಟ್ಟಿದ್ದಾಳೆ.

ರಾಮು ಅವತಾರ ಬರುವದರ ನಿರೀಕ್ಷೆ ಇತ್ತು. ಪ್ರತಿಸಲವು, "ರಾಮು ಅವತಾರ ಬರಲಿ. ನಿನ್ನನ್ನು ಚೆನ್ನಾಗಿ ಮೈ ಮುರಿ ಹೊಡೆಸುವೆ" ಎಂದು ಬೆದರಿಕೆಗಳನ್ನು ಮಾತ್ರ ಕೊಡುತ್ತಿದ್ದಳು. ಈಗ ರಾಮು ಅವತಾರ ಯುದ್ಧದಿಂದ ಬದುಕಿ ವಾಪಸ್ ಬರುತ್ತ ಲಿದ್ದ. ಇಡೀ ವಾತಾವರಣವು ಉಸಿರು ತಡೆಹಿಡಿದಿತ್ತು. ಜನರು ಒಂದು ಭಯಾನಕ ಗೊಂದಲವನ್ನು ನಿರೀಕ್ಷಿಸುತ್ತಿದ್ದರು.

ಆದರೆ ಸೊಸೆಯು ಗಂಡುಮಗುವಿಗೆ ಜನ್ಮ ಕೊಟ್ಟಾಗ ಜನರಿಗೆಲ್ಲ ಬಹಳ ವ್ಯಥೆ ಆಯಿತು. ಅವಳಿಗೆ ವಿಷ ಕೊಡುವದರ ಬದಲು ಮುದುಕಿ ಆನಂದಾತಿರೇಕದಿಂದ ಗಹಗಹಿಸಿ ನಕ್ಕಳು. ರಾಮು ಅವತಾರ ಹೋಗಿ ಎರಡು ವರ್ಷದ ಮೇಲೆ ಮೊಮ್ಮಗ ಹುಟ್ಟಿದ್ದಕ್ಕೆ ಎಳ್ಳಷ್ಟು ಆಶ್ಚರ್ಯವಾಗಲಿಲ್ಲ. ಮನೆಮನೆಗೆ ತಿರುಗಾಡಿ ಹರಿದ ಹಳೆಯ ಬಟ್ಟೆಗಳನ್ನು ಮತ್ತು ಶುಭಾಶಯಗಳನ್ನು ಸ್ವೀಕರಿಸಿದಳು. ಆಕೆಯ ಹಿತೈಷಿಗಳು ಲೆಕ್ಕ ಹಾಕಿ ತೋರಿಸಿ, ಈ ಮಗು ರಾಮು ಅವತಾರನದು ಆಗಲು ಸಾಧ್ಯವೇ ಇಲ್ಲ ವೆಂದು ತಿಳಿಸಿ ಹೇಳಿದರು. ಆದರೆ ಮುದುಕಿ ಒಂದಿಷ್ಟೂ ತಿಳಿಯಲು ಯತ್ನಿಸಲಿಲ್ಲ. ರಾಮು ಅವತಾರ ಸೇನೆಯ ದಳಕ್ಕೆ ಹೋದದ್ದು ಆಷಾಢದಲ್ಲಿ. ತಾನು ಹಳದಿ ಕೋಠಿಯ ಇಂಗ್ಲೀಷ್ ರೀತಿಯ ಕಕ್ಕಸದಲ್ಲಿ ಜಾರಿಬಿದ್ದಾಗ ಚೈತ್ರ ನಡೆಯುತ್ತಿತ್ತು. ಜ್ಯೇಷ್ಠ ತಿಂಗಳಲ್ಲಿ ತನಗೆ ಉರಿಬಿಸಿಲಿನ ಝಳ ಬಡಿದು ಅರ್ಧ್ದೇಗೊ ಉಳಿದಿದ್ದಳು. ಅಂದಿನಿಂದಲೇ ತನ್ನ ಮೊಳಕಾಲ ಸಂಧಿಯಲ್ಲಿಯ ನೋವು ಹೆಚ್ಚಾಯಿತು—ಎಂದು ಹೇಳುತ್ತಿದ್ದಳು. ನಂತರ, "ವೈದ್ಯರು ಪೂರ್ತಿ ಹರಾಮಿ ಇದ್ದಾರೆ. ಔಷಧಿಯಲ್ಲಿ ಖಡು (ಸೀಮೆ ಸುಣ್ಣ) ಬೆರೆಸಿ ಕೊಡ್ತಾರೆ" ಎಂದು ಆಕೆ ಅಸಲು ಪ್ರಶ್ನೆಯಿಂದ ದೂರ ಸರಿದು ಹುಚ್ಚಿಯ ಹಾಗೆ ಬೈಯುತ್ತಿದ್ದಳು, ಬೊಗಳುತ್ತಿದ್ದಳು. ತಿಳಿದುಕೊಳ್ಳಬಾರ ದೆಂದೇ ನಿರ್ಧರಿಸಿದ ಆ ಚಾಲಾಕು ಮುದುಕಿಗೆ ಆ ವಿಷಯವನ್ನು ತಿಳಿಸಿಕೊಡುವಷ್ಟು ಶಕ್ತಿ ಯಾರ ಬುದ್ಧಿಯಲ್ಲಿ ಇತ್ತು!

ಮಗು ಹುಟ್ಟಿದ ಬಳಿಕ ಆಕೆ ರಾಮು ಅವತಾರನಿಗೆ ಪತ್ರ ಬರೆಸಿದಳು.

"ರಾಮು ಅವತಾರನಿಗೆ ಪ್ರೀತಿ ಮುದ್ದುಗಳ ಬಳಿಕ ತಿಳಿಸುವದೇನಂದರೆ: ಇಲ್ಲಿ ಎಲ್ಲರೂ ಕುಶಲವಿರುತ್ತಾರೆ ಮತ್ತು ನಿನ್ನ ಕುಶಲತೆಯನ್ನು ದೇವರಲ್ಲಿ ಬೇಡಿಕೊಳ್ಳು ತ್ತೇವೆ. ನಿನ್ನ ಮನೆಯಲ್ಲಿ ಮಗ ಹುಟ್ಟಿದ್ದಾನೆ. ಆದ್ದರಿಂದ ಈ ಪತ್ರವನ್ನು ತಾರ್ ಎಂದು ತಿಳಿದುಕೊ ಮತ್ತು ಬೇಗನೆ ಬರಬೇಕು."

ರಾಮು ಅವತಾರ ಕೆರಳಿ ಬೆಂಕಿಯಾಗಬಹುದೆಂದು ಜನರು ಭಾವಿಸಿದರು. ಆದರೆ, ಮಗನ ಸಲುವಾಗಿ ಕಾಲುಚೀಲ ಮತ್ತು ಬನಿಯನ್ ತರುವೆ ಮತ್ತು ಈಗ ಯುದ್ಧ ಮುಗಿದಿದೆ, ಇನ್ನೇನು ನಾನು ಬರುವವನೇ ಇರುವೆ—ಎಂದು ತಿಳಿಸುವ ರಾಮು

ಅವತಾರನ ಸಂತೋಷಭರಿತ ಪತ್ರ ಬಂದಕೂಡಲೆ ಎಲ್ಲರ ಬಯಕೆಗಳ ಮೇಲೆ ತಣ್ಣೀರು ಚೆಲ್ಲಿದಂತಾಯಿತು. ಮುದುಕಿ ಮೊಮ್ಮಗನನ್ನು ಮೊಳಕಾಲುಗಳ ಮೇಲೆ ಮಲಗಿಸಿಕೊಂಡು ಮಂಚದ ಮೇಲೆ ಕುಳಿತು ರಾಜ್ಯವಾಳುತ್ತಿದ್ದಳು. ಎಲ್ಲ ಕೋಣೆಗಳ ಕೆಲಸ ಪಟಪಟ ಮುಗಿಯುತ್ತಿದೆ ಮತ್ತು ಮಹಾಜನ (ಸಾಹುಕಾರ) ನ ಬಡ್ಡಿ ಸರಿಯಾಗಿ ಮುಟ್ಟುತ್ತಿದೆ ಮತ್ತು ಮೊಳಕಾಲ ಮೇಲೆ ಮೊಮ್ಮಗ ಮಲಗಿದ್ದಾನೆ—ಇದಕ್ಕಿಂತ ಸುಂದರ ವೃದ್ಧಾಪ್ಯ ಇನ್ನೇನು ಇದ್ದೀತು !

ಸರಿ. ರಾಮು ಅವತಾರ ಬರಲಿ, ಅಸಲ್ ವಿಷಯ ತಿಳಿದಮೇಲೆ ನೋಡೋಣ ವಂತೆ ಎಂದು ಜನರು ಯೋಚಿಸಿದರು. ಈಗ ರಾಮು ಅವತಾರ ಯುದ್ಧ ಗೆದ್ದು ಬರುತ್ತಿದ್ದಾನೆ. ಎಷ್ಟೆಂದರು ಸಿಪಾಯಿ ಅಲ್ಲವೆ? ರಕ್ತವೇಕೆ ಕುದಿಯಲಿಕ್ಕಿಲ್ಲ?.... ಜನರ ಹೃದಯ ಡವಡವನೆ ಬಡಿದುಕೊಳ್ಳುತ್ತಿದ್ದವು. ಸೊಸೆಯು ಬಣ್ಣ ಬದಲಾಯಿಸಿದ್ದರಿಂದ ಮಲಗಿಕೊಂಡಿದ್ದ ಮನೆಗೆಲಸದವರ ವಿಚಾರವು, ಮೂರು ನಾಲ್ಕು ಕೊಲೆಗಳಾಗುವ ಮತ್ತು ಮೂಗುಗಳು ಕೊಯ್ದುಹೋಗುವ ಆಶೆಯಿಂದ ಜಾಗ್ರತಗೊಂಡಿತು.

ರಾಮು ಅವತಾರ ಹಿಂದಿರುಗಿದಾಗ ಮಗು ಒಂದು ವರ್ಷದ್ದಿರಬೇಕು. ಮನೆಗೆಲಸದವರ ವಿಚಾರದಲ್ಲಿ ಗುಲ್ಲು ಎದ್ದಿತು. ನೆಮ್ಮದಿಯಿಂದ ಹಗರಣದ ರುಚಿಯನ್ನು ಸವಿಯಬಹುದೆಂದು ಅಡಿಗೆಯವನು ಹಂಡೆಯಲ್ಲಿ ಹುಯ್ಯೆಂದು ನೀರು ಸುರಿವಿದ, ಅಗಸನು ಗಂಜಿಯ ಪಾತ್ರೆಯನ್ನು ಕೆಳಗಿಳಿಸಿ ಕಟ್ಟೆಯ ಮೇಲೆ ಇರಿಸಿದ ಮತ್ತು ನೀರು ಸೇದುವವನು ಡಬ್ಬಿಯನ್ನು ಬಾವಿಯ ಹತ್ತಿರ ಕುಕ್ಕರಿಸಿದ.

ರಾಮು ಅವತಾರನನ್ನು ನೋಡುತ್ತಲೆ ಮುದುಕಿ ಅವನ ಟೊಂಕವನ್ನು ಅಪ್ಪಿಕೊಂಡು ಛೀಳಿಟ್ಟಳು. ಆದರೆ ಮರುಕ್ಷಣದಲ್ಲಿಯೆ ಹಲ್ಲು ಕಿಸಿಯುತ್ತ ಮಗುವನ್ನು ರಾಮು ಅವತಾರನ ಉಡಿಯಲ್ಲಿ ಕೊಟ್ಟು, ಎಂದೂ ಅತ್ತೇ ಇಲ್ಲವೇನೊ ಎನ್ನುವ ಹಾಗೆ ನಗಹತ್ತಿದಳು.

ರಾಮು ಅವತಾರ ಮಗುವನ್ನು ನೋಡುತ್ತಲೆ ತಾನೇ ಅದರ ತಂದೆಯಿದ್ದ ಹಾಗೆ ನಾಚತೊಡಗಿದ. ಕೂಡಲೆ ಅವನು ಪೆಟ್ಟಿಗೆಯನ್ನು ತೆರೆದು ಸಾಮಾನುಗಳನ್ನು ಹೊರ ತಗೆಯಹತ್ತಿದ. ಜನರು ಅವನು ಬಹುಶಃ ಚೂರಿ ಅಥವಾ ಚಾಕುವನ್ನು ಹೊರಗೆ ತಗೆಯಬಹುದೆಂದು ಭಾವಿಸಿದ್ದರು. ಆದರೆ ಅವನು ಅದರಲ್ಲಿಂದ ಕೆಂಪು ಬನಿಯನ್ ಮತ್ತು ಹಳದಿ ಕಾಲುಚೀಲಗಳನ್ನು ತಗೆದುಕೊಂಡಾಗ, ಚಾಕರಿಯವರ ಗಂಡಸುತನಕ್ಕೆ ದೊಡ್ಡ ಏಟು ತಗುಲಿತು—ಹಾಳಾದವನೆ....ಸಿಪಾಯಿ ಹೋಗಿ ಜಗತ್ತಿನಲ್ಲಿ ಇಲ್ಲದ ಹಿಜಡಾ ಆಗುತ್ತಿದ್ದಾನೆ, ಮಂಕು....ಮತ್ತು ಸೊಸೆ! ಹೊಚ್ಚ ಹೊಸ ಮದುಮಗಳ ಹಾಗೆ ನಾಚಿ ಮುದ್ದೆಯಾಗುತ್ತಿದ್ದಳು. ಕಂಚಿನ ತಾಟಿನಲ್ಲಿ ನೀರು ತುಂಬಿಕೊಂಡು, ರಾಮು ಅವತಾರನ ದುರ್ವಾಸನೆ ತುಂಬಿದ ಸೈನಿಕ ಬೂಟು

ಬಿಚ್ಚಿ ಚರಣಗಳನ್ನು ತೊಳೆದುಕೊಂಡು ಕುಡಿದಳು.

ಜನರು ರಾಮ ಅವತಾರನಿಗೆ ತಿಳಿಸಿ ಹೇಳಿದರು. ಅಣಕಿಸುವವರು ಅವನಿಗೆ ಮೂರ್ಖ ಎಂದರು. ಆದರೆ ಅವನು ಪೆದ್ದರಂತೆ ಹಲ್ಲು ಕಿಸಿಯುತ್ತ ನಗುತ್ತಿದ್ದ, ತನಗೆ ಏನೂ ಅರ್ಥವಾಗುತ್ತಿಲ್ಲವೆನ್ನುವ ಹಾಗೆ. ರತಿರಾಮನ ಪುಚ್ಚ ಬೆಳಗುವದಿತ್ತು, ಆದರೆ ಅವನು ಹೊರಟುಹೋದ.

ರಾಮ ಅವತಾರನ ಈ ವರ್ತನೆಯಿಂದ ಜನರಿಗೆ ಆಶ್ಚರ್ಯಕ್ಕಿಂತ ಹೆಚ್ಚು ಕೋಪ ಬಂದಿತು. ಸಾಮಾನ್ಯವಾಗಿ ನೌಕರರ ವಿಷಯದಲ್ಲಿ ಆಸಕ್ತಿ ವಹಿಸಿದ ನಮ್ಮ ಅಬ್ಬಾ ಅವರು ಕೂಡ ತಪ್ತಗೊಂಡರು. ತಮ್ಮ ಕಾನೂನಿನ ಜ್ಞಾನವನ್ನೆಲ್ಲ ಝಣಕ್ಕಿಟ್ಟು ರಾಮ ಅವತಾರನಿಗೆ ತಿಳುವಳಿಕೆ ಹೇಳಲು ತತ್ಪರರಾದರು.

"ಯಾಕಲೋ, ನೀನು ಮೂರು ವರ್ಷದ ನಂತರ ಹಿಂದುರುಗಿ ಬಂದಿರುವೆ. ಅಲ್ಲವೆ?"

"ಗೊತ್ತಿಲ್ಲಾ ಹುಜೂರ್. ಸ್ವಲ್ಪ ಹೆಚ್ಚು ಕಡ್ಮೆ ಅಷ್ಟೇ ಇರಬೋದು."

"ಮತ್ತು ನಿನ್ನ ಮಗನಿಗೆ ಒಂದು ವರ್ಷ ತುಂಬಿದೆ."

"ಅಷ್ಟೇನೇ ಆಗಿರಬೋದು ಸರ್ಕಾರ್. ಆದ್ರೆ ಬಹಳ ಬದ್ಮಾಷ್ ಇದ್ದಾನೆ ಸರ್."

—ರಾಮ ಅವತಾರ ನಾಚಿದ

"ಲೋ ನೀನು ಲೆಕ್ಕ ಮಾಡಿಕೊ."

"ಲೆಕ್ಕ? ಏನು ಮಾಡ್ಲಿ ಸರ್ಕಾರ್."

—ರಾಮ ಅವತಾರ ಸತ್ತಂಥ ಧ್ವನಿಯಲ್ಲಿ ಹೇಳಿದ.

"ಮೂರ್ಖ, ಹೇಳು ಇದೆಲ್ಲ ಹೇಗೆ ಆಯಿತು?"

"ಈಗ ನನ್ಗೇನ್ ತಿಳಿಯುತ್ತೆ ಸರ್ಕಾರ್?....ದೇವ್ರು ಕೊಟ್ಟಿದ್ದು."

"ದೇವರು ಕೊಟ್ಟಿದ್ದು, ನಿನ್ನ ತಲೆ. ಈ ಮಗು ನಿನ್ನ ಮಗ ಆಗಲಿಕ್ಕೆ ಸಾಧ್ಯವಿಲ್ಲ."

ಅಬ್ಬಾ ಅವರು ಅವನನ್ನು ನಾಲ್ಕೂ ಕಡೆಯಿಂದ ಸುತ್ತುಗಟ್ಟಿಕೊಂಡು ಈ ಮಗು ಹರಾಮಿ ಎಂದು ತಿಳಿಸಿ ಹೇಳಬೇಕೆಂದು ಬಯಸಿದರು. ಅವನು ಅಷ್ಟಕಷ್ಟೆ ತಿಳಿದು ಕೊಂಡಂತೆ ಅನಿಸಿತು. ಬಳಿಕ ಸತ್ತ ಧ್ವನಿಯಲ್ಲಿ ಪೆದ್ದನ ಹಾಗೆ ಹೇಳಿದ.

"ಹಾಗಾದ್ರೆ ಈಗ ನಾನೇನ್ ಮಾಡ್ಲಿ ಸರ್ಕಾರ್....ಆ ಹಾದರಗಿತ್ತಿನ್ನ ಚೆನ್ನಾಗಿ ಹೊಡೆದಿರುವೆ" ಅವನು ಸಿಟ್ಟಿನಿಂದ ಕೆರಳಿ ಹೇಳಿದ.

"ನೀನೊಬ್ಬ ಮಹಾ ಮೂರ್ಖ....ಆ ಅರಿಷ್ಟಳನ್ನು ಹೊರಗೆ ಏಕೆ ಹಾಕುವದಿಲ್ಲ?"

"ಇಲ್ಲ ಸರ್ಕಾರ್ ಎಲ್ಲಾದ್ರು ಹೀಗಾದೀತಾ?" ರಾಮ ಅವತಾರ ಬೇಡಿಕೊಳ್ಳ ಹತ್ತಿದ.

"ಯಾಕೆ?"

" ಹುಜೂರ್ ಮತ್ತೆ ಮೂರುವರೆ ನೂರು ಎರಡ್ನೆ ಮದ್ವೆಗೆ ಎಲ್ಲಿಂದ ತರ್ಲಿ ? ಅಲ್ದೆ ಬಿರಾದರಿ ಊಟ, ಅದು ಇದು ಅಂತ ನೂರು ಎರಡುನೂರು ಬೇರೆ ಖರ್ಚಾಗುತ್ತೆ."

" ಯಾಕಲೊ, ನೀನೇಕೆ ಬಿರಾದರಿಗೆ ಊಟ ಹಾಕಬೇಕು ? ಸೊಸೆಯ ಬದ್ಮಾಷ ತನಕ್ಕೆ ನೀನೇಕೆ ದಂಡ ತೆತ್ತಬೇಕಂತೆ ? "

" ನನ್ಗೆ ಗೊತ್ತಿಲ್ಲ ಸರ್ಕಾರ್. ನಮ್ಮಲ್ಲಿ ಹೀಗೇನೆ ಆಗೋದು."

" ಆದರೆ ಮಗು ನಿನ್ನದಲ್ಲ ರಾಮ ಅವತಾರ್. ಅದು ಆ ಹರಾಮ ರತಿರಾಮ ನದು."—ಅಬ್ಬಾ ಅವರು ಬೇಸತ್ತು ತಿಳಿಹೇಳಿದರು.

" ಆದ್ರೆ ಏನಾಯ್ತು ಸರ್ಕಾರ್ ?....ನನ್ಗೆ ತಮ್ಮ ಆಗ್ತಾನೆ ರತಿರಾಮ. ಅವನೇನೂ ಹೊರಗಿನವನಲ್ಲ....ನಮ್ಮದೆ ರಕ್ತ."

" ಶುದ್ಧ ಶುಂಠಿ " ಅಬ್ಬಾ ಉರಿದೆದ್ದರು.

" ಸರ್ಕಾರ್, ಮಗ ದೊಡ್ಡವನಾದ್ಮೇಲೆ ನನ್ನ ಕೆಲ್ಸ ನೋಡಿಕೊಳ್ತಾನೆ "—ರಾಮ ಅವತಾರ ವಿನಂತಿಪೂರ್ಣ ಧ್ವನಿಯಲ್ಲಿ ತಿಳಿಸಿ ಹೇಳಿದ—" ಅವನು ಎರಡು ಕೈ ಕೂಡಿ ಸಿದನಂದ್ರೆ ನನ್ನ ಮುದಿತನ ಹಾಯಾಗಿ ಇರುತ್ತೆ." ರಾಮ ಅವತಾರನ ತಲೆ ಪಶ್ಚಾತ್ತಾಪ ದಿಂದ ತಗ್ಗಿತು.

ಅದೇಕೋ ಏನೊ ರಾಮ ಅವತಾರನ ಜೊತೆ ಅಬ್ಬಾ ಅವರ ತಲೆಯು ಬಾಗಿತು, ಅವರ ಅರಿವಿನ ಮೇಲೆ ಲಕ್ಷಗಟ್ಟಲೆ, ಕೋಟಿಗಟ್ಟಲೆ ಕೈಗಳು ಆವರಿಸಿದವೊ ಏನೊ ಅನ್ನುವಂತೆ,....ಈ ಕೈಗಳು ಹರಾಮಿಯೂ ಅಲ್ಲ, ಹಲಾಲಿ (ಉಚಿತ) ಯೂ ಅಲ್ಲ.... ಇವಂತು ಜಗತ್ತಿನ ಮುಖದಿಂದ ಕೊಳೆ ತೊಳೆಯುವ, ಅವನ ಮುದಿತನದ ಭಾರ ವನ್ನು ಹೊರುವ ಸದೃಢವಾದ ಕೈಗಳು ಅಷ್ಟೆ.

ಈ ಪುಟ್ಟ ಪುಟ್ಟ ಮಣ್ಣು ಮೆತ್ತಿದ ಕಪ್ಪು ಕೈಗಳು ಧರಿತ್ರಿಯ ಬೈತಲೆಯಲ್ಲಿ ಕುಂಕುಮವನ್ನು ಸಿಂಗರಿಸುತ್ತಲಿವೆ.

# ಬಿಚ್ಚೂ ಸೋದರತ್ತೆ

ಮೊದಲ ಸಲ ನಾನು ಅವರನ್ನು ಕಂಡಾಗ ಅವರು ರಹಮಾನ್ ಭಾಯಿಯ ಮೊದಲ ಅಂತಸ್ತಿನ ಕಿಡಕಿಯಲ್ಲಿ ಬಾಯಿಗೆ ಬಂದಂತೆ ಬೈಯ್ಯುತ್ತ, ಶಪಿಸುತ್ತ ಕುಳಿತಿದ್ದರು. ಆ ಕಿಡಕಿಯು ನಮ್ಮ ಅಂಗಳದಲ್ಲಿ ತೆರೆಯುತ್ತಿತ್ತು. ಅದು ಪರದೆಯಲ್ಲಿರುವ ಹೆಂಗಸರಿಗೆ ನೇರವಾಗಿ ಎದುರಾಗುವ ಭಯವಿತ್ತು. ಆದ್ದರಿಂದ ಕಾಯ್ದೆಯ ಪ್ರಕಾರ ಅದನ್ನು ಮುಚ್ಚಿಸಬಹುದಾಗಿತ್ತು. ರಹಮಾನ್ ಭಾಯಿ ರಂಡಿಯರ ಜಮಾದಾರನಿದ್ದ. ಯಾವುದಾದರೂ ವಿವಾಹ, ಸುಂತಿ, ಬಿಸ್ಮಿಲ್ಲಾದ ವಿಧಿ ಇದ್ದರೆ, ರಹಮಾನ್ ಭಾಯಿ ಕಡಿಮೆ ಬೆಲೆಗೆ ಆ ರಂಡಿಯರನ್ನು ಕರೆದೊಯ್ಯುತ್ತಿದ್ದರು. ಹೀಗಾಗಿ ಬಡವರ ಮನೆಯಲ್ಲೂ ವಹೀದಾ ಜಾನ್, ಮುಷ್ತರಿ ಭಾಯಿ ಮತ್ತು ಅನ್ವರಿ ಇವರು "ಕುಹರವಾ" ನೃತ್ಯವನ್ನು ಕುಣಿದು ಹೋಗುತ್ತಿದ್ದರು.

ಆದರೆ ವಠಾರ ಮತ್ತು ಓಣಿಯಲ್ಲಿನ ಹುಡುಗಿಯರು, ಅವರ ದೃಷ್ಟಿಯಲ್ಲಿ ತಮ್ಮ ಸ್ವಂತ ತಾಯಿ-ತಂಗಿಯರಿದ್ದಂತೆ ಇದ್ದರು. ಅವರ ತಮ್ಮಂದಿರಾದ ಬುಂದೂ ಮತ್ತು ಗೆಂದಾ ಮಾತ್ರ ಹುಡುಗಿಯರಿಗೆ ಕಣ್ಣು ಮಿಟುಕಿಸಿ ಸರತಿಯ ಮೇಲೆ ಹೊಡೆಸಿಕೊಳ್ಳುತ್ತಿದ್ದರು. ಹಾಗೆ ನೋಡಿದರೆ ರಹಮಾನ್ ಭಾಯಿ ಮೊಹಲ್ಲಾದವರ ದೃಷ್ಟಿಯಲ್ಲಿ ಅಂತಹ ಒಳ್ಳೆಯ ಸ್ಥಾನವನ್ನೇನೂ ಪಡೆದಿದ್ದಿಲ್ಲ. ಅವರು ತಮ್ಮ ಹೆಂಡತಿ ಬದುಕಿದ್ದಾಗಲೇ ತಮ್ಮ ಸಾಲಿಯ (ನಾದಿನಿಯ) ಜೊತೆ ವ್ಯವಹಾರ ಇಟ್ಟುಕೊಂಡಿದ್ದರು. ಆ ಅನಾಥ ಸಾಲಿಗೆ ಅಕ್ಕನನ್ನು ಬಿಟ್ಟರೆ ಮತ್ತಾರೂ ಗತಿ ಇರಲಿಲ್ಲ. ಅಕ್ಕನ ಬಳಿಯೇ ಇದ್ದು ಅವಳ ಮಕ್ಕಳನ್ನು ಜೋಪಾನ ಮಾಡುತ್ತಿದ್ದಳು. ಕೇವಲ ಮೊಲೆ ಕುಡಿಸುವದು ಬಿಟ್ಟು ಉಳಿದೆಲ್ಲ ಹೇಲು-ಉಚ್ಚೆ ತೊಳೆಯುವದು ಅವಳೇ ಮಾಡುತ್ತಿದ್ದಳು. ಬಳಿಕ ಯಾವಳೋ ದಿಮಾಕಿನವಳು ಒಂದು ದಿನ ಅವಳು ಅಕ್ಕನ ಮಗುವಿಗೆ ಮೊಲೆ ಕುಡಿಸುವದನ್ನು ನೋಡಿಬಿಟ್ಟಳು. ಗುಟ್ಟು ರಟ್ಟಾಯಿತು. ಅರ್ಧದಷ್ಟು ಮಕ್ಕಳು "ಚಿಕ್ಕಮ್ಮ"ನನ್ನು ಹೋಲುತ್ತಿದ್ದುದರ ರಹಸ್ಯ ತಿಳಿಯಿತು. ಮನೆಯಲ್ಲಿ, ರಹಮಾನನ ಹೆಂಡತಿ ತನ್ನ ತಂಗಿಯನ್ನು ದುರ್ಗತಿಗೆ ಎಳೆಯುತ್ತಿದ್ದರೂ ಪಂಚರ ಎದುರು ಮಾತ್ರ ಎಂದೂ ಅದನ್ನು ಒಪ್ಪಿಕೊಳ್ಳಲಿಲ್ಲ. "ದೇವರು ಮದುವೆಯಾಗದ ಹುಡುಗಿಯರಿಗೆ ಅನ್ನುವವರ ಕಣ್ಣು ಕಳೆಯುವನು, ಕಾಲು ಕುಂಟು ಮಾಡುವನು" ಎಂದೇ ಅವಳು ಹೇಳುತ್ತಿದ್ದಳು. ಆದರೆ ತಂಗಿಗಾಗಿ ವರನ ಶೋಧನೆಯಲ್ಲಿ ಸದಾ ಕೊರಗುತ್ತಿದ್ದಳು. ಆದರೆ ಆ ಹುಳುಬಿದ್ದ ಕಬಾಬ್‌ಕ್ಕೆ ಜೋಡಿ ಹೇಗೆ ಸಿಕ್ಕೀತು. ಒಂದು ಕಣ್ಣಲ್ಲಿ ದೊಡ್ಡ

ಕವಡಿಯಷ್ಟು ಮೋತಿ ಬಿಂದು ಇತ್ತು. ಒಂದು ಕಾಲು ಸ್ವಲ್ಪ ಸಣ್ಣದಿತ್ತು. ಕುಂಡಿಯನ್ನು ಅದುಮಿ ನಡೆಯುತ್ತಿದ್ದಳು.

ಇಡೀ ಮೊಹಲ್ಲಾದವರು ಒಂದು ವಿಚಿತ್ರ ರೀತಿಯ "ಬಾಯ್‌ಕಾಟ್" ಮಾಡಿದ್ದರು. ರಹಮಾನ್ ಭಾಯಿಯ ಜೊತೆ ಕೆಲಸ ಬಿದ್ದಾಗ, ಜನರು ಅವರಿಗೆ, "ಮೊಹಲ್ಲಾದಲ್ಲಿ ಇರಲು ಅನುಮತಿ ಕೊಟ್ಟಿದ್ದೇವೆ, ಇದೇನು ಕಡಮೆ ಉಪಕಾರವೆ" ಎಂದು ಬೆದರಿಕೆ ಹಾಕುತ್ತಿದ್ದರು. ರಹಮಾನ್ ಭಾಯಿ ಇದನ್ನೆ ತಮ್ಮ ಸನ್ಮಾನ ವೃದ್ಧಿಯೆಂದು ತಿಳಿಯುತ್ತಿದ್ದರು.

ಅವರು ರಹಮಾನ್ ಭಾಯಿಯ ಕಿಡಕಿಯಲ್ಲಿ ಕುಳಿತು ಉದ್ದುದ್ದ ಬೈಗಳನ್ನು ಅನ್ನುತ್ತಿದ್ದುದಕ್ಕೆ ಇದೇ ಕಾರಣವಿತ್ತು. ಯಾಕೆಂದರೆ, ಮೊಹಲ್ಲಾದ ಬಾಕಿ ಜನರು ಮೆಜಿಸ್ಟ್ರೇಟ್‌ರ ಜೊತೆ ಯಾಕೆ ವೈರ ಕಟ್ಟಿಕೊಳ್ಳುವದೆಂದು ಅಬ್ಬಾ ಅವರಿಗೆ ಅಂಜುತ್ತಿದ್ದರು.

ಆ ದಿವಸ, ಆಕೆ ನಮ್ಮ ಏಕ ಮಾತ್ರ ಖಾಸಾ ಸೋದರತ್ತೆ ಬಾದಷಾಹಿ ಖಾನಂ ಇರುವಳೆಂದು ಮತ್ತು ಈ ಉದ್ದುದ್ದ ಬೈಗಳು ನಮ್ಮ ಮನೆತನಕ್ಕೆ ಸಂಬಂಧಿಸಿದ್ದವೆಂಬುದು ನನಗೆ ಮೊದಲ ಸಲ ಗೊತ್ತಾಯಿತು.

ಅಮ್ಮಾನ ಮುಖವು ವ್ಯಗ್ರಗೊಂಡಿತ್ತು. ಸೋದರತ್ತೆಯ ಧ್ವನಿಯು ತಮ್ಮ ಮೇಲೆ ಮಿಂಚು ಬಿದ್ದಹಾಗೆ ಬೀಳುತ್ತಿದೆ ಎನ್ನುವಂತೆ ಅವರು ಒಳಗೆ ಕೋಣೆಯಲ್ಲಿ ಹೆದರಿ ಕುಳಿತಿದ್ದರು. ಆಗಾಗ, ಬಾದಷಾಹಿ ಖಾನಂ ರಹಮಾನ್ ಭಾಯಿಯ ಕಿಡಕಿಯಲ್ಲಿ ಹೀಗೆ ಹೂಂಕರಿಸುತ್ತ ಕುಳಿತಾಗ, ಅಬ್ಬಾ ಮಿಂಯಾ ಅವರಿಂದ ಸ್ವಲ್ಪ ಮರೆಯಾಗಿ ಚಕ್ಕಂದದಿಂದ ಆರಾಮ ಕುರ್ಚಿಯ ಮೇಲೆ ಒರಗಿಕೊಂಡು ವೃತ್ತಪತ್ರಿಕೆಯನ್ನು ಓದುತ್ತಿದ್ದರು. ಮತ್ತು ಸಮಯ ಸಂದರ್ಭ ನೋಡಿ ಯಾರಾದರೂ ಹುಡುಗರ ಮುಖಾಂತರ ಉತ್ತರದಲ್ಲಿ ಯಾವುದೋ ಇಂಥ ಮಾತನ್ನು ಹೇಳಿಸುತ್ತಿದ್ದರೆಂದರೆ ಅದನ್ನು ಕೇಳಿ ಬಾದಷಾಹಿ ಸೋದರತ್ತೆ ಮತ್ತಿಷ್ಟು ಉದ್ರಿಕ್ತರಾಗುತ್ತಿದ್ದರು. ನಾವೆಲ್ಲರೂ ಆಟ-ಪಾಟ, ಓದು-ಬರಹ ಎಲ್ಲ ಮರೆತು, ಅಂಗಳದಲ್ಲಿ ಒಟ್ಟಾಗಿ ನಿಂತುಕೊಂಡು ಪಿಳಿಪಿಳಿ ಕಣ್ಣುಬಿಡುತ್ತಾ ನಮ್ಮ ಪ್ರೀತಿಯ ಸೋದರತ್ತೆಯ ಶಾಪಗಳನ್ನು ಕೇಳುತ್ತಿದ್ದೆವು. ಅವರು ಕುಳಿತುಕೊಳ್ಳುತ್ತಿದ್ದ ಕಿಡಕಿಯು ಅವರ ಉದ್ದವಾದ ದೇಹದಿಂದ ಭರಪೂರ ತುಂಬಿರುತ್ತಿತ್ತು. ಅಬ್ಬಾ ಮಿಂಯಾ ಅವರ ಹೋಲಿಕೆ ಎಷ್ಟಿತ್ತೆಂದರೆ ಸ್ವತಾ ಅವರೇ ಮೀಸೆ ತಗೆದು, ದುಪ್ಪಟ್ಟಾ ಹೊದ್ದುಕೊಂಡು ಕುಳಿತುಕೊಂಡಿರುವರೇನೊ ಎನ್ನುವಷ್ಟು. ಶಪಿಸುವದನ್ನು ಮತ್ತು ಬೈಗಳುಗಳನ್ನು ಕೇಳುವದಷ್ಟೇ ಅಲ್ಲದೆ ನಾವು ಹೆಚ್ಚು ನೆಮ್ಮದಿಯಿಂದ ಅವರನ್ನು ದಿಟ್ಟಿಸುತ್ತಿದ್ದೆವು.

ಐದುವರಿ ಅಡಿ ಎತ್ತರ, ನಾಲ್ಕು ಅಂಗುಲದಗಲ ಮಣಿಕಟ್ಟು, ಹುಲಿಯಂತಹ ಗಲ್ಲ, ಕೊಕ್ಕರೆಯಂತೆ ಬೆಳ್ಳಗೆ ಇರುವ ಕೂದಲು, ದೊಡ್ಡ ಬಾಯಿ, ದೊಡ್ಡ ದೊಡ್ಡ

ಹಲ್ಲು, ಭಾರಿಯಾದ ಗಡ್ಡ ಮತ್ತು ಧ್ವನಿಯಂತೂ, ದೇವರ ಕೃಪೆಯಿಂದ, ಅಬ್ಬಾ ಮಿಂಯಾ ಅವರದಕ್ಕಿಂತ ಒಂದು ಸುರ ಕೆಳಗೆಯೇ ಇತ್ತು.

ಬಾದಷಾಹಿ ಸೋದರತ್ತೆ ಯಾವಾಗಲೂ ಬಿಳಿಯ ಬಟ್ಟೆಗಳನ್ನು ತೊಡುತ್ತಿದ್ದರು. ಯಾವ ದಿವಸ ಮಸ್‌ವೂದ್ ಅಲಿ ಮಾಮಾ ಜಾಡಮಾಲಿ ಹೆಣ್ಣಿನ ಜೊತೆ ಮಂಗ ಚೇಷ್ಟೆ ಪ್ರಾರಂಭಿಸಿದರೋ ಅಂದೇ ಸೋದರತ್ತೆ ಕುಟ್ಟಣಿಯಿಂದ ಎಲ್ಲ ಬಳೆಗಳನ್ನು ಪಟಪಟ ಒಡೆದು ಹಾಕಿದರು. ಬಣ್ಣದ ದುಪಟ್ಟಾ ತೆಗೆದೊಗೆದರು. ಅಂದಿನಿಂದ ಅವರನ್ನು "ಸತ್ತವ" ಅಥವಾ "ಸಾಯುವವ" ಎಂದು ಅನ್ನುತ್ತಿದ್ದರು. ಜಾಡಮಾಲಿ ಹೆಣ್ಣನ್ನು ಸ್ಪರ್ಶಿಸಿದ ಆ ಕೈಕಾಲುಗಳನ್ನು ಅವರು ತಮ್ಮ ದೇಹಕ್ಕೆ ಸೋಂಕಗೊಡಲಿಲ್ಲ.

ಈ ದುರ್ಘಟನೆಯು ಒಳ್ಳೇ ತಾರುಣ್ಯದಲ್ಲಿ ನಡೆಯಿತು. ಅವರು ಅಂದಿನಿಂದಲೇ "ರಂಡೆತನ" ವನ್ನು ಸಹಿಸುತ್ತಿದ್ದರು. ಮಸ್‌ವೂದ್ ಅಲಿ ಮಾಮಾ ನಮ್ಮ ತಾಯಿಯ ಕಕ್ಕಂದಿರೂ ಸಹ ಆಗಿದ್ದರು. ಹಾಗೆ ಅದೇನು ಗೊಂದಲವಿತ್ತೋ ಏನೊ ನನ್ನ ಅಬ್ಬಾ ನನ್ನ ಅಮ್ಮಾಗೆ ಚಚಾ ಆಗುತ್ತಿದ್ದರು. ನನ್ನ ಅಮ್ಮಾ ಮದುವೆಗೆ ಮೊದಲು ಸಣ್ಣವರಿದ್ದಾಗ ನನ್ನ ಅಬ್ಬಾನನ್ನು ಕಂಡರೆ ಉಚ್ಚೆ ಹೊಯ್ದುಕೊಳ್ಳುತ್ತಿದ್ದರು. ತಮ್ಮ ವಿವಾಹ ನಿಶ್ಚಯವು ಆ ಭಯಾನಕ ದೆವ್ವದ ಜೊತೆ ಆಗಲಿದೆ ಎಂದು ಗೊತ್ತಾದಾಗ ಅವರು ತಮ್ಮ ಅಜ್ಜಿ ಎಂದರೆ ಅಬ್ಬಾನ ಸೋದರತ್ತೆಯ ಬುಟ್ಟಿಯೊಳಗಿಂದ ಅಫೀಮು ಕದ್ದು ತಿಂದಿದ್ದರು. ಅಫೀಮು ಬಹಳವಿರಲಿಲ್ಲವಾದ್ದರಿಂದ ಅವರು ಕೆಲವು ದಿನ ಸಂಕಟಪಟ್ಟು ನೆಟ್ಟಗಾದರು. ಆಗ ಅಬ್ಬಾ ಅಲೀಗಢ್ ಕಾಲೇಜಿನಲ್ಲಿ ಓದುತ್ತಿದ್ದರು. ಅಮ್ಮಾನ ಬೇನೆಯ ಸುದ್ದಿ ಕೇಳಿ ಅವರು ಪರೀಕ್ಷೆ ಬಿಟ್ಟು ಓಡಿ ಬಂದಿದ್ದರು. ನಮ್ಮ ನಾನಾ—ಅವರು ಅಬ್ಬಾನ ಸೋದರತ್ತೆ ಜಾತ ಅಣ್ಣನು ಮತ್ತು ಹಿರಿಯ ಸ್ನೇಹಿತರೂ ಆಗಿದ್ದರು—ಬಹಳ ತಿಳಿಸಿ ಹೇಳಿ ಅವರನ್ನು ಪರೀಕ್ಷೆ ಕೊಡಲು ವಾಪಸ್ ಕಳಿಸಿದ್ದರು. ಅವರು ಇದ್ದಷ್ಟು ಹೊತ್ತು ಕೂಳು-ನೀರಿಲ್ಲದೆ ಅಲೆದಾಡುತ್ತಲೇ ಇದ್ದರು. ನನ್ನ ಅಮ್ಮಾ ಅರೆದೆರೆದ ಕಣ್ಣುಗಳಿಂದ ಪರದೆಯ ಹಿಂದೆ ನಿಂತು ಅವರ ಧಡೂತಿ ನೆರಳು ವಿವಶತೆಯಿಂದ ಬಳಲುತ್ತಿರುವುದನ್ನು ನೋಡಿದರು.

"ಉಮರಾಮ್ ಭಾಯಿ! ಅವರಿಗೆ ಏನಾದರೂ ಆಗಿಬಿಟ್ಟರೆ...."

—ದೆವ್ವದ ಧ್ವನಿ ಕಂಪಿಸುತ್ತಿತ್ತು. ನಾನಾ ಬಹಳ ನಕ್ಕರು.

"ಇಲ್ಲ ತಮ್ಮ, ಧೈರ್ಯವಾಗಿರು, ಏನೂ ಆಗುವದಿಲ್ಲ."

ಆ ಗಳಿಗೆಯಲ್ಲಿ ನನ್ನ ಮಗುವಿನಂಥ ಮುಗ್ಧ ತಾಯಿಯ ಹೃದಯದಲ್ಲಿ ಒಮ್ಮೆಲೆ ಹೆಣ್ಣುತನವು ಅರಳಿತ್ತು. ಅವಳ ಮನಸ್ಸಿನಿಂದ ಹಠಾತ್ ಆಗಿ ದೆವ್ವ ಜಾತ ಮನುಷ್ಯನ ಹೆದರಿಕೆ ಹೊರಟುಹೋಯಿತು. ಅದಕ್ಕಿಂತಲೆ ನನ್ನ ಬಾದಷಾಹಿ ಸೋದರತ್ತೆ, ನನ್ನ ಅಮ್ಮಾ ಜಾದೂಗಾರಿಣಿ ಇರುವಳು ಮತ್ತು ಅವಳು ತನ್ನ ಅಣ್ಣನ ಜೊತೆ ಮದುವೆಗೆ ಮೊದಲೇ ಸಂಬಂಧ ಬೆಳೆಸಿ ಹೊಟ್ಟೆ ಕೆಡವಿಸಿಕೊಂಡಿದ್ದಾಳೆ, ಎಂದು ಹೇಳುತ್ತಿದ್ದರು.

ನನ್ನ ಅಮ್ಮಾ ತಮ್ಮ ಹರೆಯದ ಮಕ್ಕಳೆದುರು ಈ ಬೈಗುಳುಗಳನ್ನು ಕೇಳಿದಾಗ ಎಷ್ಟೊಂದು ಮುಸು ಮುಸು ಅಳುತ್ತಿದ್ದರೆಂದರೆ ನಮಗೆ ಅವರ ಹೊಡೆತಗಳು ಮರೆತು ಹೋಗಿ ಪ್ರೀತಿ ಉಕ್ಕಿ ಬರುತ್ತಿತ್ತು. ಆದರೆ ಈ ಬೈಗುಳನ್ನು ಕೇಳಿ ಅಬ್ಬಾ ಅವರ ಗಂಭೀರ ಕಣ್ಣುಗಳಲ್ಲಿ ತುಂಟುತನ ಇಣುಕುತ್ತಿತ್ತು. ಅವರು ಬಹಳ ಪ್ರೀತಿಯಿಂದ ಸಣ್ಣ ತಮ್ಮನ ಮುಖಾಂತರ ಹೇಳಿಸುತ್ತಾರೆ :

" ಯಾಕೆ ಫೂಪಿ, ಇಂದು ಏನು ತಿಂದಿರುವೆ ? "

" ನಿನ್ನ ಅಮ್ಮಾನ ಹೃದಯ."

ಈ ಅಸಂಬದ್ಧ ಉತ್ತರದಿಂದ ಸೋದರತ್ತೆ ಉರಿದು ಬೀಳುತ್ತಿದ್ದಳು. ಅಬ್ಬಾ ಅವರು ಮತ್ತೆ ಉತ್ತರ ಕೊಡಿಸುವರು :

" ಅಯ್ಯೊ ಫೂಪಿ, ನಿನ್ನ ಬಾಯಲ್ಲಿ ಮೂಲವ್ಯಾಧಿ ಆಗಿದೆ. ಜುಲಾಬ್ ತೆಗೆದುಕೊ ಜುಲಾಬ್."

ಅವರು ನನ್ನ ತರುಣ ಅಣ್ಣನ ಬುಜುಗುಡುವ ಹೆಣದ ಮೇಲೆ ಕಾಗೆಗಳಿಗೆ, ಹದ್ದುಗಳಿಗೆ ಆಹ್ವಾನ ಕೊಡಹತ್ತಿದರು ; ಅವನ ಹೆಂಡತಿಗೆ—ಪಾಪ ಅವಳೀಗ ಅದೆಲ್ಲೊ ಕುಳಿತು ತನ್ನ ಕಲ್ಪನಾಲೋಕದ ಪತಿಯ ಪ್ರೇಮದಲ್ಲಿ ಕಂಪಿಸುತ್ತಿರುವಳೊ ಏನೊ—ರಂಡೆತನದ ಹರಕೆ ಕೊಡಹತ್ತಿದರು. ನನ್ನ ಅಮ್ಮಾ ಕಿವಿಗಳಲ್ಲಿ ಬೆರಳಿಟ್ಟು ಬಡಬಡಿಸಹತ್ತಿದರು : ಜಲ್ ತೂ ಜಲಾಲ್ ತೂ—ಆಯಿ ಬಲಾ ಕೊ ಟಾಲ್ ತೂ (ಶಕ್ತಿವಂತನು ನೀನು, ದುಷ್ಟ ಮರ್ದಕ ನೀನು, ಬಂದಿರುವ ಸಂಕಟವ ಪಾರು ಮಾಡು).

ಬಳಿಕ ಅಬ್ಬಾ ಹಚ್ಚಿಕೊಡುವರು ಮತ್ತು ಸಣ್ಣ ತಮ್ಮ ಕೇಳುವನು.

" ಫೂಪಿ ಬಾದಷಾಹಿ, ಜಾಡಮಾಲಿ ಫೂಪಿಯ ಆರೋಗ್ಯ ಚೆನ್ನಾಗಿದೆ ತಾನೆ ? " ಎಲ್ಲಾದರೂ ಸೋದರತ್ತೆ ಕಿಡಕಿಯಿಂದ ಜಿಗಿದುಬಿಟ್ಟಾಳೆಂದು ನಮಗೆಲ್ಲ ಭಯವಾಗುತ್ತಿತ್ತು.

" ಹೋಗಲೊ ಹಾವಿನ ಮರಿ, ನನ್ನ ಜೊತೆ ಬಾಯಿಗೆ ಹತ್ತಬೇಡ. ಇಲ್ಲದಿದ್ದರೆ ಚಪ್ಪಲಿಯಿಂದ ನಿನ್ನ ಮುಖ ಜಜ್ಜಿಹಾಕುವೆ. ಆ ಮುದುಕ ಒಳಗೆ ಕುಳಿತು ಏನು ಹುಡುಗರಿಗೆ ಕಲಿಸುತ್ತಿರುವ ? ಮುಗಲ್ ರಕ್ತಕ್ಕೆ ಹುಟ್ಟಿದ್ದರೆ ಎದುರಿಗೆ ಬಂದು ಮಾತಾಡಲಿ."

" ರಹಮಾನ್ ಭಾಯಿ, ಓ ರಹಮಾನ್ ಭಾಯಿ, ಈ ಹುಚ್ಚು ಹೆಣ್ಣುನಾಯಿಗೆ ಶಂಖಪಾಷಾಣ ಯಾಕೆ ತಿನ್ನಿಸುವದಿಲ್ಲ ? "

—ಅಬ್ಬಾ ಕಲಿಸಿಕೊಟ್ಟಮೇಲೆ ಸಣ್ಣ ತಮ್ಮ ಹೆದರುತ್ತ ಹೇಳಿದ.

ವಾಸ್ತವದಲ್ಲಿ ಅವನಿಗೆ ಹೆದರುವ ಅವಶ್ಯಕತೆ ಇರಲಿಲ್ಲ. ಯಾಕೆಂದರೆ, ಧ್ವನಿ ಅವನದು, ಆದರೆ ಶಬ್ದಗಳು ಅಬ್ಬಾ ಅವರವು ಎಂದು ಎಲ್ಲರಿಗೂ ಗೊತ್ತಿತ್ತು. ಆದ್ದರಿಂದ ದೋಷವು ಸಣ್ಣ ತಮ್ಮನ ಮೇಲೆ ಬರುತ್ತಿರಲಿಲ್ಲ. ಆದರೂ ಪೂರಾ ಅಬ್ಬಾ ಅವರ

ಪ್ರತಿರೂಪದಂತಿದ್ದ ಸೋದರತ್ತೆಯ ಸಮ್ಮುಖದಲ್ಲಿ ಏನನ್ನಾದರೂ ಅನ್ನಬೇಕಾದರೆ ಅವನಿಗೆ ಬೆವರಿಳಿಯುತ್ತಿತ್ತು.

ಎಷ್ಟು ಭೂಮ್ಯಾಕಾಶದ ಅಂತರವಿತ್ತು ನಮ್ಮ ದಧಿಯಾಲ್ ಮತ್ತು ನನ್ಹಿಯಾಲ್ ಅವರ ನಡುವೆ. ನನ್ಹಿಯಾಲ್ ಹಕೀಮರ ಗಲ್ಲಿಯಲ್ಲಿತ್ತು ಮತ್ತು ದಧಿಯಾಲ್ ಗಾಡಿಬಾನ್ ಅವರ ಮೊಹಲ್ಲಾದಲ್ಲಿತ್ತು. ನನ್ಹಿಯಾಲ್‌ದವರು ಸಲೀಂ ಚಿಸ್ತಿಯ ವಂಶಜರಾಗಿದ್ದರು. ಚಿಸ್ತಿಯವರಿಗೆ ಮುಗಲ್ ಬಾದಷಹರು ಮುರಷದ್‌ನ (ಧರ್ಮ ಗುರು) ಸ್ಥಾನವನ್ನಿತ್ತು ಮೋಕ್ಷದ ದಾರಿ ಕಂಡುಕೊಂಡಿದ್ದರು. ಹಿಂದೂಸ್ತಾನದಲ್ಲಿ ಅವರು ವಾಸಿಸಹತ್ತಿ ಅನೇಕ ವರ್ಷವಾಗಿತ್ತು. ಬಣ್ಣಗಳು ಸಾದುಗಪ್ಪಾಗಿದ್ದವು ; ಮುಖಲಕ್ಷಣಗಳು ಮೆತ್ತಗಾಗಿದ್ದವು ; ಸ್ವಭಾವಗಳು ತಣ್ಣಗಾಗಿದ್ದವು.

ದಧಿಯಾಲ್‌ದವರು ಹೊರಗಿನಿಂದ ಕಟ್ಟಕಡೆಯ ಜಲಸಂಚಾರದಲ್ಲಿ ಬಂದವರ ಪೈಕಿ ಇದ್ದರು. ಬೌದ್ಧಿಕ ಮಟ್ಟದಲ್ಲಿ, ಇಂದಿಗೂ ಕುದುರೆಗಳ ಮೇಲೆ ಸವಾರಿ ಮಾಡಿ ಗಮ್ಯ ಸ್ಥಾನಗಳನ್ನು ಹೆಚ್ಚಿಸುವದರಲ್ಲಿದ್ದರು. ರಕ್ತದಲ್ಲಿ ಲಾವಾ ಕುದಿಯುತ್ತಿತ್ತು. ಬಿಚ್ಚು ಗತ್ತಿಯ ಹಾಗೆ ಮುಖಲಕ್ಷಣಗಳು, ಕೆಂಪು ಫರಂಗಿಗಳಂತಹ ಮುಖ, ಗೋರಿಲ್ಲಾದ ನಿಲುವು ಮತ್ತು ಅಂಗಸೌಷ್ಟವ, ಹುಲಿಯಂತಹ ಗರ್ಜಿಸುವ ಧ್ವನಿ, ತೊಲೆ-ಕಂಭ ಗಳಂತಹ ಕೈಕಾಲುಗಳು.

ನನ್ಹಿಯಾಲ್‌ದವರು ನಾಜೂಕಾದ ಕೈಕಾಲುಗಳುಳ್ಳ, ಕವಿ ಹೃದಯದ, ಮೆಲು ಧ್ವನಿಯಲ್ಲಿ ಮಾತನಾಡುವ ಸಭ್ಯಸ್ತರು. ಇವರು ಹೆಚ್ಚಾಗಿ ಹಕೀಮ್, ಆಲಿಮ್ (ಪಂಡಿತ) ಮತ್ತು ಮೌಲ್ವಿ ಇದ್ದರು. ಆದ್ದರಿಂದಲೇ ಮೊಹಲ್ಲಾದ ಹೆಸರು ಹಕೀಮ್‌ರ ಗಲ್ಲಿ ಎಂದು ಬಿದ್ದಿತ್ತು. ಕೆಲವರು ವ್ಯಾಪಾರದಲ್ಲಿಯೂ ಭಾಗವಹಿಸಹತ್ತಿದ್ದರು. ಷಾಲ್ ಬಾಫ್ (ಶಾಲು ವ್ಯಾಪಾರಿ), ಜರ್‌ದೋಜ್ (ಜರತಾರಿ ಕೆಲಸ ಮಾಡುವವ) ಮತ್ತು ಅತ್ತಾರ್ (ಅತ್ತಾರ್ ಮಾಡುವವ) ಮುಂತಾದವರಾಗಿದ್ದರು. ವಾಸ್ತವದಲ್ಲಿ ನನ್ನ ದಧಿಯಾಲ್‌ದವರು ಇಂಥ ಜನರಿಗೆ ಕುಂಜಡಾ (ತರಕಾರಿ ಮಾರುವವ) ಗಳು, ಕಸಾಯಿಗಳು ಎಂದೇ ಅನ್ನುತ್ತಿದ್ದರು. ಯಾಕೆಂದರೆ, ಅವರು ಸ್ವತಃ ಹೆಚ್ಚಾಗಿ ಸೈನ್ಯ ದಲ್ಲಿದ್ದರು. ಹಾಗೆ ನೋಡಿದರೆ, ಕದನ-ಕಾಳಗಗಳ ಬಯಕೆ ಈವರೆಗೂ ಆಗಿರಲಿಲ್ಲ. ಕುಸ್ತಿ, ಪಹಲ್ವಾನಿ, ಈಜುವಿಕೆಯಲ್ಲಿ ಖ್ಯಾತಿ ಪಡೆಯುವದು, ಪಂಜಾ ಹೊಡೆದಾಡಿಸು ವದು, ಕತ್ತಿಯ ವರಸೆ, ಲಾಠಿ ತಿರುಗಿಸುವದು ಮತ್ತು ನನ್ನ ನನ್ಹಿಯಾಲ್‌ದವರ ಅತ್ಯಂತ ಪ್ರಿಯವಾದ ಶತರಂಜಿ ಆಟವನ್ನು ಹಿಜಡಾಗಳ ಆಟವೆಂದು ತಿಳಿಯುವದು— ನನ್ನ ದಧಿಯಾಲ್‌ನವರಿಗೆ ಮೋಜಾಗಿತ್ತು.

ಜ್ವಾಲಾಮುಖಿ ಪರ್ವತವು ಸಿಡಿದಾಗ ಲಾವಾರಸವು ಕಂದರಗಳ ಮಡಿಲಲ್ಲಿ ಇಳಿಯು ತ್ತದೆ ಎಂದು ಹೇಳುತ್ತಾರೆ. ಬಹುಶಃ ಇದೇ ಕಾರಣದಿಂದ ನನ್ನ ದಧಿಯಾಲ್‌ದವರು ನನ್ಹಿಯಾಲ್‌ದವರ ಕಡೆ ತಂತಾನೆ ಆಕರ್ಷಿತರಾಗಿ ಬಂದರು. ಈ ಮೇಳವನ್ನು

ಯಾರು ಎಂದು ಸುರು ಮಾಡಿದರು ಎಂಬುದನ್ನು ವಂಶಾವಳಿಯಲ್ಲಿ ಬರೆದಿದ್ದಾರೆ. ಆದರೆ ನನಗೆ ಸರಿಯಾಗಿ ನೆನಪಿಲ್ಲ. ನನ್ನ ದಾದಾ ಹಿಂದೂಸ್ತಾನದಲ್ಲಿ ಹುಟ್ಟಿರಲಿಲ್ಲ. ದಾದಿಮಾಗಳು ಕೂಡ ಅದೇ ಮನೆತನಕ್ಕೆ ಸಂಬಂಧಿಸಿದ್ದರು. ಆದರೆ ಒಬ್ಬ ಸಣ್ಣ ತಂಗಿ ಮದುವೆಯಾಗದೆ ಇದ್ದಳು. ಅವಳನ್ನು ಷೇಖರಲ್ಲಿಗೆ ಯಾಕೆ ಮದುವೆ ಮಾಡಿ ಕೊಡಲಾಯಿತೊ ತಿಳಿಯದು. ಬಹುಶಃ ನನ್ನ ಅಮ್ಮಾನ ದಾದಾ ನನ್ನ ದಾದಾನ ಮೇಲೆ ಯಾವುದೊ ಜಾದು ಮಾಡಿರಬೇಕು. ಅಂತೆಯೆ ಅವರು ತಮ್ಮ ತಂಗಿ ಸಮಾನ ಬಾದಷಾಹಿ ಸೋದರತ್ತೆಯನ್ನು ತರಕಾರಿ ಮಾರುವವರಲ್ಲಿ, ಕಸಾಯಿಗಳಲ್ಲಿ ಕೊಟ್ಟು ಬಿಟ್ಟರು. ತಮ್ಮ "ಸತ್ತ" ಗಂಡನಿಗೆ ಬೈಯುವಾಗ ಅವರು ಯಾವಾಗಲೂ, ಚುಗ್ತಾಯಿ ಮನೆತನದ ಗೌರವವನ್ನು ಮಣ್ಣುಪಾಲು ಮಾಡಿದ ತಮ್ಮ ತಂದೆಗೆ ಗೋರಿಯಲ್ಲಿ ನೆಮ್ಮದಿ ಸಿಗದೇ ಇರುವ ಕೆಟ್ಟ ಹರಕೆಗಳನ್ನು ಕೊಡುತ್ತಿದ್ದರು.

ನನ್ನ ಸೋದರತ್ತೆಗೆ ಮೂವ್ವರು ಅಣ್ಣತಮ್ಮಂದಿರು. ನನ್ನ ತಾಯಾ (ದೊಡ್ಡಪ್ಪ), ನನ್ನ ಅಬ್ಬಾ ಮಿಂಯಾ ಹಾಗೂ ನನ್ನ ಚಚಾ ದೊಡ್ಡವರಿಬ್ಬರೂ ಅವರಿಗಿಂತ ಹಿರಿಯರು. ಚಚಾ ಎಲ್ಲರಿಗಿಂತ ಚಿಕ್ಕವರು. ಮೂವ್ವರು ಅಣ್ಣ-ತಮ್ಮಂದಿರ ಒಬ್ಬಳೇ ಒಲುಮೆಯ ಸೋದರಿ ಯಾವಾಗಲೂ ವೈಯಾರಿ ಹಾಗೂ ಸಿಡುಕು ಸ್ವಭಾವದವಳು ಆಗಿದ್ದಳು. ಅವರು ಸದಾ ಮುವ್ವರ ಮೇಲೆ ಪ್ರಭಾವ ಬೀರುತ್ತಿದ್ದರು ಮತ್ತು ಮುದ್ದು ಮಾಡಿಸಿಕೊಳ್ಳುತ್ತಿದ್ದರು. ಪೂರ್ತಿ ಗಂಡರಾಮಿಯ ಹಾಗೆ ಬೆಳೆದರು. ಕುದುರೆ ಸವಾರಿ, ಧನುರ್ವಿದ್ಯೆ ಮತ್ತು ಕತ್ತಿಯ ವರಸೆಗಳಲ್ಲಿ ವಿಶೇಷ ಅನುಭವವಿತ್ತು. ಹಾಗೆ ನೋಡಿದರೆ ಉಬ್ಬಿ, ಕೊಬ್ಬಿ ಗುಡ್ಡೆಯಂತೆ ಕಾಣಿಸುತ್ತಿದ್ದಳು. ಆದರೂ ಪಹೆಲವಾನ್‌ರಂತೆ ಎದೆ ಸೆಟಸಿ ಅಡ್ಡಾಡುತ್ತಿದ್ದಳು. ಎದೆ ಕೂಡ ನಾಲ್ಕು ಹೆಂಗಸರಷ್ಟು ಇತ್ತು.

ಅಬ್ಬಾ ಚೇಷ್ಟೆಗೆಂದು ಅಮ್ಮಾನನ್ನು ಚುಡಾಯಿಸುತ್ತಿದ್ದರು :

"ಬೇಗಂ, ಬಾದಷಾಹಿಯ ಜೊತೆ ಕುಸ್ತಿ ಆಡುವಿಯೇನು ?"

"ಅಯ್ಯೊ, ನನ್ನ ತೋಬಾ"—ಆಲಿಮ್‌ಫಾಜಲ್ ತಂದೆಯ ಮಗಳು, ನನ್ನ ಅಮ್ಮಾ ಕಿವಿ ಮೇಲೆ ಕೈಯಿಟ್ಟು ಹೇಳುತ್ತಿದ್ದರು.

ಆದರೆ ಅವರು ಸಣ್ಣ ತಮ್ಮನ ಮುಖಾಂತರ ತಕ್ಷಣ ಚೆಲೆಂಜ್ ಕಳಿಸುತ್ತಿದ್ದರು :

"ಫೂಪಿ, ನಮ್ಮ ಅಮ್ಮಾನ ಜೊತೆ ಕುಸ್ತಿ ಆಡುವಿಯೇನು ?"

"ಹಾಂ, ಹಾಂ—ಕರೆ ನಿನ್ನ ಅಮ್ಮಾನನ್ನು .... ಸಡ್ಡು ಹೊಡೆದು ಬರಲಿ.... ಅರೆ,....ಮಣ್ಣು ಮುಕ್ಕಿಸದಿದ್ದರೆ ಮಿರ್ಜಾ ಕರೀಮ್ ಬೇಗ್ ಅವರ ಮಗಳಲ್ಲ....ಕರೆ ಆ ಮುಲ್ಲಾನ ಮಗಳನ್ನು, ತಂದೆಗೆ ಹುಟ್ಟಿದ್ದರೆ, ಕರೆ."

ನನ್ನ ಅಮ್ಮಾ ತಮ್ಮ ಲಖನೌದ ದೊಡ್ಡ ದೊಡ್ಡ ಗಿಲಾಫ್‌ವುಳ್ಳ ಪೈಜಾಮುವನ್ನು ಹಿಡಿದುಕೊಂಡು ಮೂಲೆಯಲ್ಲಿ ಅವಿತುಕೊಳ್ಳುತ್ತಿದ್ದರು.

"ಫೂಪಿ ಬಾದಷಾಹಿ, ದಾದಾ ಮಿಯಾ ಹೆಡ್ಡರಿದ್ದರಲ್ಲವೆ ? ದೊಡ್ಡ ನಾನಾ ಜಾನ್

ಅವರಿಗೆ ಆಮದ್‌ನಾಮಾ ಓದಿಸುತ್ತಿದ್ದರು." ನಮ್ಮ ಪರನಾನಾ ಅವರ ದಾದಾ ಜಾನ್ ಯಾವಾಗಾದರೂ ದಾದಾ ಮಿಂಯಾಗೆ ಸ್ವಲ್ಪ ಕಲಿಸಿರಬಹುದು. ಅಬ್ಬಾ ಮಿಂಯಾ ಅವರು ಚುಡಾಯಿಸಲೆಂದು ಮಾತು ಬದಲಾಯಿಸಿ ಹೇಳಿಸಿದರು.

"ಅರೆ, ಆ ಹೇಸಿ ಮುಂಡೇದು ನನ್ನ ಅಪ್ಪನಿಗೆ ಏನು ಕಲಿಸೀತು? ಮುಜಾವರ್ ಮಗ! ನಮ್ಮ ಭಿಕ್ಷೆಯಮೇಲೆ ಬದುಕುತ್ತಿದ್ದ." ಇದನ್ನು ಸಲೀಮ್ ಚಿಸ್ತಿ ಮತ್ತು ಅಕ್ಬರ್ ಬಾದಷಾಹ ಅವರ ಸಂಬಂಧಕ್ಕೆ ಹೊಂದಿಸಲಾಗುತ್ತಿತ್ತು. ನಾವು ಅಂದರೆ ಚುಗ್ತಾಯಿ, ಅಕ್ಬರ್ ಬಾದಷಾಹನ ಖಾಂದಾನದವರು. ಅವರು ನನ್ನ ನನ್ಹಿಯಾಲ್‌ದ ಸಲೀಮ್ ಚಿಸ್ತಿಯುವರನ್ನು ಪೀರ್ ವ ಮುರಷಿದ್ ಎಂದು ಕರೆದಿದ್ದರು. ಆದರೆ ಸೋದರತ್ತೆ ಹೇಳುತ್ತಿದ್ದುದು, "ಪೀರ್ ವ ಮುರಷಿದ್ ಎಲ್ಲಿ ಬಂತು? ಅವರು ಮುಜಾವರ್ ಇದ್ದರು ಮುಜಾವರ್."

ಮುವ್ವರು ಅಣ್ಣತಮ್ಮಂದಿರಿದ್ದರು. ಆದರೆ ಮೂವ್ವರ ಜೊತೆಯೂ ಜಗಳವಾಗಿತ್ತು. ಅವರು ಸಿಟ್ಟಿಗೆದ್ದಾಗ ಮೂವ್ವರನ್ನೂ ಚಿಂದಿಚಿಂದಿ ಮಾಡುತ್ತಿದ್ದರು. ದೊಡ್ಡ ಅಣ್ಣ ಸಾಧೂ ಸ್ವಭಾವದವರಿದ್ದರು. ಅವರಿಗೆ ತಿರಸ್ಕಾರದಿಂದ ಫಕೀರ್ ಮತ್ತು ಭಿಕಾರಿ ಎಂದು ಅನ್ನುತ್ತಿದ್ದರು. ನಮ್ಮ ಅಬ್ಬಾ ಸರ್ಕಾರಿ ನೌಕರಿಯಲ್ಲಿ ಇದ್ದರು. ಅವರಿಗೆ ದೇಶದ್ರೋಹಿ ಮತ್ತು ಇಂಗ್ಲಿಷರ ಗುಲಾಮ್ ಎಂದು ಕರೆಯುತ್ತಿದ್ದರು. ಯಾಕೆಂದರೆ, ಮುಗಲ್‌ಷಾಹಿಯನ್ನು ಇಂಗ್ಲಿಷರು ಕೊನೆಗಾಣಿಸಿದ್ದರು. ಇಲ್ಲದಿದ್ದರೆ ಇಂದು, "ಸತ್ತ", ತಿಳಿ ಬೇಳೆಯನ್ನು ತಿನ್ನುವ ನೇಕಾರ ಅಂದರೆ ನನ್ನ ಮಾಮಾನ ಬದಲು ಅವರು ಕೆಂಪು ಕೋಟೆಯಲ್ಲಿ ಜೆಬುನ್ನಿಸಾಳ ಹಾಗೆ ಗುಲಾಬಿ ಅರ್ಕದಲ್ಲಿ ಸ್ನಾನ ಮಾಡಿ ಯಾವುದೊ ದೇಶದ ಷಹಂಷಹಾನ ಮಲಕಾ ಆಗಿ ಕುಳಿತಿರುತ್ತಿದ್ದರು—ಮೂರನೆಯ ಅಂದರೆ ಚಚಾ, ದೊಡ್ಡ, ಹತ್ತು ನಂಬರ್‌ಗಳ ಬದ್ಮಾಷ್‌ರಲ್ಲೊಬ್ಬರು. ಸಿಪಾಯಿ ಹೆದರುತ್ತ ಹೆದರುತ್ತ ಮೆಜಿಸ್ಟ್ರೇಟ್ ಅಣ್ಣನ ಮನೆಗೆ ಅವರ ಹಾಜರಿ ತೆಗೆದುಕೊಳ್ಳಲು ಬರುತ್ತಿದ್ದ. ಅವರು ಎಷ್ಟೋ ಕೊಲೆ ಮಾಡಿದ್ದರು, ದರೋಡೆ ಮಾಡಿದ್ದರು. ಷರಾಬ್ ಮತ್ತು ರಂಡಿಬಾಜಿಯಲ್ಲಿ ತಮ್ಮ ಉದಾಹರಣೆ ತಾವೇ ಆಗಿದ್ದರು. ಅವರನ್ನು ದರೋಡೆಕಾರ ಎಂದು ಕರೆಯುತ್ತಿದ್ದರು. ಅವರ ಕರಿಯರ್‌ಅನ್ನು ಗಮನಿಸಿದಾಗ ನಿಸ್ಸಂಶಯವಾಗಿ ಇದು ಸಪ್ಪೆ ಶಬ್ದವಾಗಿತ್ತು.

ಆದರೆ ಅವರು ತಮ್ಮ "ಸತ್ತ" ಗಂಡನಮೇಲೆ ಸಿಟ್ಟಿಗೆದ್ದಾಗ ಹೇಳುತ್ತಿದ್ದರು: "ನಿನ್ನ ಮುಖಕ್ಕೆ ಬೆಂಕಿ ಬೀಳಲಿ. ನಾನೇನೂ ಅರಿಷ್ಟ, ಮುಖಹೀನಳಲ್ಲ. ಮೂವ್ವರು ಅಣ್ಣತಮ್ಮಂದಿರಿಗೆ ಒಬ್ಬಳೇ ಒಡುಹುಟ್ಟಿದಾಕೆ. ಅವರಿಗೆ ಗೊತ್ತಾಯಿತೆಂದರೆ ನೀನು ಭೂಮಿಯ ಮೇಲೆ ಉಳಿಯಲಿಕ್ಕಿಲ್ಲ. ಇನ್ನೇನೂ ಬೇಡ—ಸಣ್ಣವನೊಬ್ಬನಿಗೆ ತಿಳಿಯಿತೆಂದರೆ ಕ್ಷಣದಲ್ಲಿ ಕರುಳು ಬಗಿದು ಕೈಯಲ್ಲಿ ಕೊಡುವನು....ಡಾಕೂ ಇದ್ದಾನೆ ಡಾಕೂ....ಅವನಿಂದ ಬಚಾವು ಆದರೆ ನಡುವಿನ ಮೆಜಿಸ್ಟ್ರೇಟ್ ನಿನ್ನನ್ನು ಜೇಲಿನಲ್ಲಿ

ಕೊಳೆಯಿಸುವನು. ಇಡೀ ಆಯುಷ್ಯ ನಿನ್ನಿಂದ ಕಲ್ಲು ಬೀಸಿಸುವನು. ಅವನಿಂದಲೂ ಉಳಿದುಕೊಂಡರೆ ದೊಡ್ಡವನು—ಸಾಧೂ ಸ್ವಭಾವದವನಿರುವನು—ನಿನ್ನ ಪುನರ್ಜನ್ಮವನ್ನು ಹಾಳುಮಾಡುವನು. ನೋಡಿಕೊ ಮುಗಲ್‌ರ ಮಗಳಿರುವೆ, ನಿನ್ನ ಅಮ್ಮಾನ ಹಾಗೆ ಷೇಖಾನಿ, ಫತ್ತಾನಿ ಅಲ್ಲ." ಆದರೆ ಮೂವ್ವರೂ ಅಣ್ಣತಮ್ಮಂದಿರು ತಮ್ಮ ಮೇಲೆಯೇ ಕರುಣೆ ತೋರಿಸುವರೆಂದು ನನ್ನ ಮಾಮಾಗೆ ಚೆನ್ನಾಗಿ ಗೊತ್ತಿತ್ತು. ಅವರು ಮುಗುಳುನಗುತ್ತ ಇರುತ್ತಿದ್ದರು. ಅದೇ ಮಧುರ ಮಧುರ ವಿಷಯುಕ್ತ ಮುಗುಳುನಗೆ ಯಾವುದರ ಮುಖಾಂತರ ನನ್ನ ನನ್ಹಿಯಾಲ್‌ದವರು ದಧಿಯಾಲ್‌ದವರನ್ನು ಅನೇಕ ವರ್ಷಗಳಿಂದ ಉರಿಸುತ್ತ ಬಂದಿದ್ದಾರೆ.

ಪ್ರತಿ ಬಕರೀದ್ ಹಬ್ಬಕ್ಕೆ ನನ್ನ ಅಬ್ಬಾ ಮಿಂಯಾ ಗಂಡುಮಕ್ಕಳನ್ನು ಕರೆದುಕೊಂಡು ಈದ್‌ಗಾಹ್‌ದಿಂದ ನೆಟ್ಟಗೆ ಫೂಪಿ ಅಮ್ಮಾ ಅವರಲ್ಲಿಗೆ, ಬೈಗಳು ಮತ್ತು ಶಪಿಸುವುದನ್ನು ಕೇಳಲು ಹೋಗುತ್ತಿದ್ದರು. ಅವರು ತಕ್ಷಣ ಪರದೆಯಲ್ಲಿ ಹೋಗುತ್ತಿದ್ದರು ಮತ್ತು ಕೊಠಡಿಯೊಳಗಿಂದ ನನ್ನ ಜಾದೂಗಾರಿಣಿ ತಾಯಿ ಮತ್ತು ಡಾಕೂ ಮಾಮಾ ಇವರಿಗೆ ಶಪಿಸುತ್ತಿದ್ದರು. ನೌಕರನನ್ನು ಕರೆದು ಸೇವಿಗೆ ಕಳಿಸಿಕೊಡುತ್ತಿದ್ದರು. ಆದರೆ, "ನೆರೆಮನೆಯವರು ಕಳಿಸಿದ್ದಾರೆ" ಎಂದು ಅನ್ನುತ್ತಿದ್ದರು.

"ಇದರಲ್ಲಿ ವಿಷವನ್ನು ಬೆರೆಸಿಲ್ಲವಷ್ಟೆ?" ಎಂದು ಅಬ್ಬಾ ಚುಡಾಯಿಸುತ್ತಿದ್ದರು. ಬಳಿಕ ಅವರು ನನ್ಹಿಯಾಲ್‌ದವರ ಎಲ್ಲ ಹುಳುಕುಗಳನ್ನು ಹೊರಗೆಳೆಯುತ್ತಿದ್ದರು. ಸೇವಿಗೆ ತಿಂದ ನಂತರ ಅಬ್ಬಾ ಈದಿ (ಹಬ್ಬದ ಕಾಣಿಕೆ)ಯನ್ನು ಕೊಡುವರು. ಅವರು ತಕ್ಷಣ ಅದನ್ನು ನೆಲಕ್ಕೆಸೆದು, "ನಿನ್ನ ಸಾಲಾಗಳಿಗೆ ಕೊಡು, ಅವರೇ ನಿನ್ನ ರೊಟ್ಟಿಯ ಮೇಲೆ ಬದುಕಿದ್ದಾರೆ" ಅನ್ನುವರು. ಅಬ್ಬಾ ಸುಮ್ಮನೆ ಬಂದುಬಿಡುವರು. ಬಾದಷಾಹಿ ಸೋದರತ್ತೆ ಆ ರೂಪಾಯಿಗಳನ್ನು ಕಣ್ಣುಗಳಿಗೆ ಒತ್ತಿಕೊಂಡು ಗಂಟೆಗಟ್ಟಲೆ ಅಳುವರೆಂದು ಅವರಿಗೆ ಗೊತ್ತಿತ್ತು. ಅವರು ಅಣ್ಣನ ಗಂಡುಮಕ್ಕಳನ್ನು ಮರೆಯಲ್ಲಿ ಕರೆದು ಈದಿ ಕೊಡುತ್ತಿದ್ದರು.

"ಹರಾಮು-ಮಕ್ಕಳೆ, ಅಮ್ಮಾ, ಅಬ್ಬಾ ಅವರಿಗೆ ಹೇಳಿದಿರೆಂದರೆ ನಿಮ್ಮನ್ನು ತುಂಡು ತುಂಡು ಮಾಡಿ ನಾಯಿಗೆ ತಿನ್ನಿಸುವೆ."

ಅಮ್ಮಾ ಮತ್ತು ಅಬ್ಬಾ ಅವರಿಗೆ ಹುಡುಗರಿಗೆ ಎಷ್ಟು ಈದಿ ಸಿಕ್ಕಿದೆಯೆಂದು ಗೊತ್ತಿರುತ್ತಿತ್ತು. ಯಾವುದಾದರೂ ಈದ್‌ಗೆ ಏನೋ ಕಾರಣದಿಂದ ಅಬ್ಬಾ ಮಿಂಯಾ ಹೋಗದಿದ್ದರೆ, ಸಂದೇಶದ ಮೇಲೆ ಸಂದೇಶ ಬರುತ್ತಿದ್ದವು: "ನುಸರತ್ ಖಾತನ್ ವಿಧವೆಯಾದರು, ನಡೆ ಚೆನ್ನಾಗಿ ಆಯಿತು. ನನ್ನ ಮನಸ್ಸು ತಣ್ಣಗಾಯಿತು." ಕೆಟ್ಟ ಕೆಟ್ಟ ಸಂದೇಶಗಳು ಸಂಜೆಯವರೆಗೆ ಬರುತ್ತಲೇ ಇರುತ್ತಿದ್ದವು. ನಂತರ ಅವರು ಸ್ವತಃ ರಹಮಾನ್ ಭಾಯಿಯ ಕೋಠಿಯಿಂದ ಬೈಗುಳುಗಳನ್ನು ಸುರಿಸುತ್ತಿದ್ದರು.

ಒಂದು ದಿನ ಈದ್‌ದ ಸೇವಿಗೆಯನ್ನು ತಿನ್ನುತ್ತಿದ್ದಂತೆ ಯಾವುದೊ ಕಸರು ಸೇರಿ

ಹೊಟ್ಟೆ ತೊಳಸಹತ್ತಿತು. ಅಬ್ಬಾ ಮಿಂಯಾಗೆ ಶಾಂತಿಯಾಯಿತು.

"ನೋಡು ಬಾದಷಾಹಿ ಖಾನಂ, ಅಂದಿದ್ದು ಆಡಿದ್ದು ಕ್ಷಮಿಸಿಬಿಡು. ನಾವಂತು ಹೊರಟಿದ್ದೇವೆ" ಎಂದು ಅಬ್ಬಾ ಮಿಂಯಾ ನರಳುವ ಧ್ವನಿಯಲ್ಲಿ ಹೇಳಿದರು. ಸೋದರತ್ತೆ ಬೈಯ್ದುಕೊಳ್ಳುತ್ತ ಪರದೆಯನ್ನು ಕಿತ್ತೆಸೆದು, ಎದೆ ಎದೆ ಬಡಿದುಕೊಳ್ಳುತ್ತ ಹೊರಗೆ ಧಾವಿಸಿ ಬಂದಳು. ಅಬ್ಬಾ ತುಂಟತನದಿಂದ ನಗುವದನ್ನು ಕಂಡು ಹಾಗಿಂದ ಹಾಗೇ ಶಪಿಸುತ್ತ ಹಿಂದಿರುಗಿದಳು.

"ಬಾದಷಾಹಿ ನೀನು ಬಂದೆಯೆಂದು ಮೃತ್ಯುದೇವತೆಯು ಗಾಬರಿಗೊಂಡು ಓಡಿ ಹೋಯಿತು. ಇಲ್ಲದಿದ್ದರೆ ನಮ್ಮ ಕತೆ ಮುಗಿದಂತೇ ಆಗಿತ್ತು"—ಎಂದು ಅಬ್ಬಾ ಹೇಳಿದರು.

ಸೋದರತ್ತೆ ಎಷ್ಟು ಭಾರಿ ಶಾಪಗಳನ್ನು ಕೊಟ್ಟರೆಂದು ಕೇಳಬೇಡಿ. ಅಬ್ಬಾ ಅವರು ಅಪಾಯದಿಂದ ಪಾರಾದದ್ದು ನೋಡಿ ಸೋದರತ್ತೆ ಅಂದರು :

"ಅಲ್ಲಾಹ್ ಬಯಸಿದರೆ ಮಿಂಚು ಹೊಡೆಯುವದು, ನಾಲೆಯಲ್ಲಿ ಬಿದ್ದು ಸಾಯುವೆ, ಹೆಣಕ್ಕೆ ಹೆಗಲು ಕೊಡಲು ಯಾರೂ ಉಳಿಯಲಿಕ್ಕಿಲ್ಲ."

ಅಬ್ಬಾ ರೇಗಿಸಲು ಅವರಿಗೆ ಎರಡು ರೂಪಾಯಿ ಕಳಿಸಿಕೊಟ್ಟು, "ನೋಡು, ನಮ್ಮ ಖಾಂದಾನಿ ಡೋಮನಿಗಳು ಬೈಯ್ದರೆ ಅವರಿಗೆ ಬೆಲ್ (ಇನಾಮು) ದೊರೆಯಲೇ ಬೇಕಲ್ಲ" ಎನ್ನುವರು.

"ಬೆಲ್ ಕೊಡು ನಿನ್ನ ತಾಯಿ-ತಂಗಿಯರಿಗೆ"—ಎಂದು ಸೋದರತ್ತೆ ಉದ್ರಿಕ್ತಗೊಂಡು ಅಂದುಬಿಡುವರು.

ತಕ್ಷಣ ತಮ್ಮ ಮುಖಕ್ಕೆ ಹೊಡೆದುಕೊಳ್ಳುತ್ತ ತಮಗೆ ತಾವೇ, "ಏ ಬಾದಷಾಹಿ ಬಂದಿ, ನಿನ್ನ ಮುಖಕ್ಕೆ ಮಸಿ ಹತ್ತಲಿ, ನಿನ್ನ ಹೆಣವನ್ನು ನೀನೇ ಬಡಿಯುತ್ತಿರುವೆ" ಎಂದೆನ್ನುವರು.

ಸೋದರತ್ತೆಗೆ ನಿಜವಾಗಿ ವೈರವಿದ್ದುದು ಅಣ್ಣನ ಜೊತೆಗೆ ಮಾತ್ರ. ಅವರ ಹೆಸರು ಎತ್ತಿದರೆ ಬೆಂಕಿ ಇಟ್ಟಂತಾಗುತ್ತಿತ್ತು. ಹಾಗೆ ಅಮ್ಮಾ ಒಬ್ಬರೇ ಸಿಕ್ಕಾಗ ಅಪ್ಪಿಕೊಂಡು ಲಲ್ಲೆಗರೆಯುತ್ತಿದ್ದರು. ಪ್ರೀತಿಯಿಂದ "ನಿಚ್ಛೊ, ನಿಚ್ಛೊ" ಅನ್ನುವರು, "ಮಕ್ಕಳು ಚೆನ್ನಾಗಿದೆಯೆ?" ಎಂದು ವಿಚಾರಿಸುತ್ತಿದ್ದರು. ಇವೇ ಮಕ್ಕಳು, ತಾನು ಜಗತ್ತಿನ ಆದಿಯಿಂದ ಅಂತ್ಯದವರೆಗೆ ಶಪಿಸುತ್ತಲೇ ಇರುವ ಕೆಟ್ಟ ತಳಿಯ ಆ ಅಣ್ಣನವು ಎಂಬುದನ್ನು ಪೂರಾ ಮರೆತುಬಿಡುತ್ತಿದ್ದರು. ಅಮ್ಮಾ, ಅವರ ಅಣ್ಣನ ಮಗಳು ಕೂಡ. ನೋಡಿ, ಯಾವ ಪ್ರಕಾರದ ಗಡಿಬಿಡಿ ಇದೆಯೊ ಈ ನಮ್ಮ ದಧಿಯಾಲ್ ಮತ್ತು ನನ್ಹಿಯಾಲ್‌ದವರಲ್ಲಿ ಒಂದು ಸಂಬಂಧದಿಂದ ನಾನು ನನ್ನ ತಾಯಿಗೆ ತಂಗಿಯಾಗುವೆ. ಹೀಗೆ ನನ್ನ ಅಬ್ಬಾ ನನ್ನ ಭಾವನಾಗುವರು. ನನ್ನ ದಧಿಯಾಲ್‌ದವರಿಗೆ ನನ್ಹಿಯಾಲ್‌ದವರು ಏನೇನು ದುಃಖ ಕೊಟ್ಟಿಲ್ಲ? ಆತಂಕ ಬಂದದ್ದು ಯಾವಾಗ

ಎಂದರೆ ನನ್ನ ಸೋದರತ್ತೆಯ ಮಗಳು ಮುಸರತ್ ಖಾನಂ ಜಫರ್ ಮಾಮಾಗೆ ಮನ ಸೋತು ಕುಳಿತಾಗ.

ಆದದ್ದು ಹೀಗೆ: ನನ್ನ ಅಮ್ಮಾನ ದಾದಿ ಅಂದರೆ ಅಬ್ಬಾ ಅವರ ಸೋದರತ್ತೆ ಕೊನೆಯುಸಿರು ಎಳೆಯುತ್ತಿದ್ದಾಗ ಎರಡೂ ಕಡೆಯ ಜನರು ಶುಶ್ರೂಷೆಗೆ ಬಂದರು. ನನ್ನ ಮಾಮಾ ಕೂಡ ತಮ್ಮ ದಾದಿಯನ್ನು ನೋಡಲು ಹೋದರು. ಮುಸರತ್ ಖಾನಂ ಕೂಡ ತಮ್ಮ ಅಮ್ಮಾನ ಜೊತೆ ಅವರ ಸೋದರತ್ತೆಯನ್ನು ನೋಡಲು ಬಂದರು.

ಬಾದಷಾಹಿ ಸೋದರತ್ತೆಗೆ ಎಷ್ಟೂ ಭಯ-ಭೀತಿ ಇರಲಿಲ್ಲ. ನನ್ನ ನನ್ನಿಯಾಲ್ ದವರ ಬಗ್ಗೆ ತಮ್ಮ ಮನಸ್ಸಿನಲ್ಲಿ ಸಾಕಷ್ಟು ತಿರಸ್ಕಾರ ತುಂಬಿದೆ ಎಂದು ಭಾವಿಸಿದ್ದರು. ಹದಿನೈದು ವರ್ಷದ ಮುಸರತ್ ಖಾನಂಳಿಗೆ ಪ್ರಾಯವಾದರೂ ಎಷ್ಟಿತ್ತು? ಅಮ್ಮಾಳ ಹಿಂಬದಿಗೆ ಆತು ಮಲಗುತ್ತಿದ್ದರು. ಮೊಲೆ ಕುಡಿಯುತ್ತಿದ್ದಿಲ್ಲ ಎಂಬುದಷ್ಟೇ ಅಂತರ ಎತ್ತು.

ಬಳಿಕ ನನ್ನ ಮಾಮೂ ತಮ್ಮ ಕರಂಜಿ ಷರಬತ್ ತುಂಬಿದ ಕಣ್ಣುಗಳಿಂದ ಮುಸರತ್ ಜಹಾಂಳ ಬಳುಕುವ ದೇಹವನ್ನು ನಖಶಿಖಾಂತ ನೋಡಿದಮೇಲೆ ಅಲ್ಲಿಯೇ ಭದ್ರವಾಗಿ ತಳವೂರಿದರು.

ಇಡೀ ದಿನ ದೊಡ್ಡವರು, ಮುದುಕರು ಶುಶ್ರೂಷೆ ಮಾಡಿ ದಣಿದು ಬಳಲಿ ಮಲಗಿದ ಮೇಲೆ, ಈ ಆಜ್ಞಾಧಾರಕ ಮಕ್ಕಳು ತಲೆದೆಸೆಯಲ್ಲಿ ಕುಳಿತು ರೋಗಿಯ ಮೇಲೆ ಕಡಿಮೆ, ಪರಸ್ಪರರ ಮೇಲೆ ಹೆಚ್ಚು ಲಕ್ಷ್ಯವಿಡುತ್ತಿದ್ದರು. ಮುಸರತ್ ಜಹಾಂ ಬರ್ಫದಲ್ಲಿ ತೊಯ್ದ ಪಟ್ಟಿಯನ್ನು ರೋಗಿಯ ಹಣೆಯ ಮೇಲಿಂದ ಬದಲಿಸಲು ಕೈ ಚಾಚಿದರೆ ಜಫರ್ ಮಾಮೂನ ಕೈ ಮೊದಲೇ ಅಲ್ಲಿರುತ್ತಿತ್ತು.

ಮರುದಿನ ಬಡಿ ಬೀ ಪಟ್ಟೆಂದು ಕಣ್ಣು ತೆರೆದಳು. ನಡುಗುತ್ತ, ಕಂಪಿಸುತ್ತ, ದೊಡ್ಡ ದಿಂಬಿನ ಆಸರೆಯಿಂದ ಎದ್ದು ಕುಳಿತಳು. ಮನೆತನದ ಎಲ್ಲ ಹೊಣೆಗಾರ ಜನರನ್ನು ಕರೆಕಳುಹಿದಳು. ಎಲ್ಲರೂ ಕೂಡಿದ ಮೇಲೆ, "ಖಾಜಿಯನ್ನು ಕರಿಸಿರಿ" ಎಂದು ಹುಕುಂ ಆಯಿತು.

ಎಲ್ಲರೂ ಗಾಬರಿಗೊಂಡರು. ಮುದುಕಿ ಖಾಜಿಯನ್ನು ಯಾಕೆ ಕರೆಸುತ್ತಿದ್ದಾಳೆ? ಕೊನೆಯ ಗಳಿಗೆಯಲ್ಲಿ ಸೌಭಾಗ್ಯ ತುಂಬಿಸಿಕೊಳ್ಳುವಳೇನು? ಉಸಿರೆತ್ತಲು ಯಾರಿಗೆ ಧೈರ್ಯವಿತ್ತು?

"ಇಬ್ಬರ ನಿಕಾಹ್ ಓದಿಸಿರಿ." ಯಾವ ಇಬ್ಬರದು ಎಂದು ಜನರು ಗಡಬಡಿಸಿದರು. ಆದರೆ ಇತ್ತ ಮುಸರತ್ ಜಹಾಂ ತಟ್ಟನೆ ಮೂರ್ಛೆ ಹೋದರು. ಅತ್ತ ಜಫರ್ ಮಾಮಾ ಗಾಬರಿಗೊಂಡು ಹೊರಬಿದ್ದರು. ಕಳ್ಳರು ಸಿಕ್ಕರು, ನಿಕಾಹ್ ಆಯಿತು. ಬಾದಷಾಹಿ ಸೋದರತ್ತೆ ದಿಙ್ಮೂಢಳಾದರು.

ವಾಸ್ತವದಲ್ಲಿ ಯಾವದೆ ರೀತಿಯ ಅಪಾಯಕಾರಿ ಘಟನೆಯೇನೂ ನಡೆದಿರಲಿಲ್ಲ. ಇಬ್ಬರು ಕೇವಲ ಕೈಹಿಡಿದುಕೊಂಡಿದ್ದರು, ಅಷ್ಟೆ! ಆದರೆ ಬಡಿ ಬೀಗೆ ಅದೇ ಸೀಮೆ ಯಾಗಿತ್ತು.

ನಂತರ ಬಾದಷಾಹಿ ಸೋದರತ್ತೆ ಉದ್ರೇಕಗೊಂಡರು ಸರಿ ಕುದುರೆ ಮತ್ತು ಕತ್ತಿಗಳಿಲ್ಲದೆ ಅವರು ಹತ್ಯಾಕಾಂಡ ನಡೆಸಿದರು. ನಿಂತ ಕಾಲಮೇಲೆ ಮಗಳು, ಅಳಿಯನನ್ನು ಹೊರಹಾಕಿದರು. ನಿರ್ವಾಹವಿಲ್ಲದೆ ಅಬ್ಬಾ ಅಮ್ಮಾ ಮದುಮಗ ಮತ್ತು ಮದುಮಗಳನ್ನು ತಮ್ಮ ಮನೆಗೆ ಕರೆತಂದರು. ಅಮ್ಮಾ ಅಂತೂ ಚಂದ್ರನಂಥ ಭಾಭಿಯನ್ನು ನೋಡಿ ಬಹಳ ಸಂತೋಷಪಟ್ಟರು. ಒಳ್ಳೇ ಸಂಭ್ರಮದಿಂದ ವಲೀಮಾ (ಮದುವೆಯ ಔತಣ) ಮಾಡಿದರು.

ಬಾದಷಾಹಿ ಸೋದರತ್ತೆ ಆ ದಿನದಿಂದ ತಮ್ಮ ಸೋದರತ್ತೆಯ ಮುಖ ನೋಡ ಲಿಲ್ಲ. ಅಣ್ಣನಿಂದ ಪರದೆ ಮಾಡಹತ್ತಿದರು. ಗಂಡನ ಜೊತೆ ಮೊದಲಿನಿಂದಲೇ ಜಿಗುಪ್ಸೆಗೊಂಡಿದ್ದರು. ಒಂದು ವಿಷ ಅವರ ಹೃದಯ ಮತ್ತು ಬುದ್ಧಿ ಇವುಗಳಲ್ಲಿ ವ್ಯಾಪಿಸಿಬಿಟ್ಟಿತ್ತು. ಬದುಕು ಹಾವಿನ ಹೆಡೆಯ ಹಾಗೆ ಕಚ್ಚತೊಡಗಿತು.

"ಮುದುಕಿ ತನ್ನ ಮೊಮ್ಮಗನ ಸಲುವಾಗಿ ನನ್ನ ಮಗಳನ್ನು ಸಿಕ್ಕಿಸಲು ಕಪಟ ನಾಟಕವನ್ನಾಡಿದಳು" ಎಂದು ಅವರು ಪದೆ ಪದೆ ಹೇಳುತ್ತಿದ್ದರು. ಯಾಕೆಂದರೆ, ವಾಸ್ತವದಲ್ಲಿ ಆ ಮುದುಕಿ ಮತ್ತೆ ಇಪ್ಪತ್ತು ವರ್ಷದವರೆಗೆ ಜೀವಿಸಿದ್ದಳು. ಯಾರಿಗೆ ಗೊತ್ತು ಸೋದರತ್ತೆ ನಿಜವನ್ನೇ ಹೇಳುತ್ತಿರಬಹುದು.

ಸಾಯುವ ಕ್ಷಣದವರೆಗೆ ಅಣ್ಣ-ತಂಗಿ ಕೂಡಲಿಲ್ಲ. ಅಬ್ಬಾ ಮಿಂಯಾಗೆ ಅರ್ಧಾಂಗ ವಾಯುವಿನ ಆಘಾತ ನಾಲ್ಕನೆಯ ಸಲವಾದಾಗ, ಇನ್ನೇನು ತಾವು ಉಳಿಯುವ ದಿಲ್ಲವೆಂದ ಬಳಿಕ ಬಾದಷಾಹಿ ಸೋದರತ್ತೆಯನ್ನು ಕರೆಕಳಿಸಿದರು.

"ಬಾದಷಾಹಿ ಖಾನಂ, ನಮ್ಮ ಅಂತ್ಯ ಸಮಯ ಬಂದಿದೆ. ಮನದ ಅಭೀಪ್ಸೆ ಪೂರ್ತಿ ಮಾಡಿಕೊಳ್ಳುವದಿದ್ದರೆ ಬಂದು ಬಿಡು."

ಈ ಸಂದೇಶದಲ್ಲಿ ಎಂತಹ ಬಾಣಗಳು ಅಡಗಿದ್ದವೇನೊ! ಅಣ್ಣ ಎಸೆದರು; ತಂಗಿಯ ಹೃದಯದಲ್ಲಿ ತೂರಿಹೋದವು. ಬೋರಾಡುತ್ತ ಎದೆ ಬಡಿದುಕೊಳ್ಳುತ್ತ ಶ್ವೇತ ಪರ್ವತದ ಹಾಗೆ ಭೂಕಂಪವನ್ನುಂಟುಮಾಡುತ್ತ ಬಾದಷಾಹಿ ಖಾನಂ, ತಾವು ಈವರೆಗೂ ಕಾಲಿಡದಿದ್ದ ಆ ಡೆವಢಿ (ಹೊರ ಹಜಾರ) ಯಲ್ಲಿ ಪ್ರವೇಶಿಸಿದರು.

"ನೋಡು ಬಾದಷಾಹಿ, ನಿನ್ನ ಹರಕೆ ಪೂರ್ತಿಯಾಗುತ್ತಿದೆ."

ಅಬ್ಬಾ ಮಿಂಯಾ ಕಷ್ಟದಲ್ಲಿಯೂ ಕೂಡ ಮುಗುಳುನಗುತ್ತಿದ್ದರು. ಅವರ ಕಣ್ಣು ಗಳಲ್ಲಿ ಈಗಲೂ ತಾರುಣ್ಯವಿತ್ತು.

ಬಾದಷಾಹಿ ಸೋದರತ್ತೆ ಕೂದಲನ್ನು ಬಿಟ್ಟರೆ, ಬಾಲ್ಯದಲ್ಲಿ ಅಣ್ಣಂದಿರ ಜೊತೆ ಕಾದಾಡಿ ಕಾದಾಡಿ ತನ್ನ ಮಾತು ನಡೆಯಿಸಿಕೊಳ್ಳುತ್ತಿದ್ದ ಅದೇ ಮುನ್ನಿಯಂತಹ

ಬಿಚ್ಚೂ ಹಾಗೆ ಕಾಣುತ್ತಿದ್ದರು. ಅವರ ಹುಲಿಯಂತಹ ಆ ರಕ್ತ ಕಣ್ಣುಗಳು ಒಂದು ಕುರಿಮರಿಯ ಮುಗ್ಧ ಕಣ್ಣುಗಳ ಹಾಗೆ ಬೆದರಿದ್ದವು. ದೊಡ್ಡ ದೊಡ್ಡ ಕಣ್ಣೀರು ಅವರ ಅಮೃತಶಿಲೆಯ ಬಂಡೆಯಂತಹ ಕೆನ್ನೆಗಳ ಮೇಲೆ ಹರಿಯುತ್ತಿದ್ದವು.

"ನಮ್ಮನ್ನು ಶಪಿಸು ಬಿಚ್ಚೂಬಿ" ಅಬ್ಬಾ ಪ್ರೀತಿಯಿಂದ ಕೇಳಿದರು. ನನ್ನ ಅಮ್ಮಾ ಬಿಕ್ಕುತ್ತ ಬಾದಷಾಹಿ ಖಾನಂ ಅವರಲ್ಲಿ ಶಪಿಸುವ ಭಿಕ್ಷೆ ಬೇಡಿದರು.

"ಯಾ ಅಲ್ಲಾಹ್!....ಯಾ ಅಲ್ಲಾಹ್!...." ಅವರು ಗರ್ಜಿಸಬಯಸಿದರು. ಆದರೆ ಕಂಪಿಸಿ ಸುಮ್ಮನಾದರು. "ಯಾ ಅಲ್ಲಾಹ್!....ಯಾ ಅಲ್ಲಾಹ್! ನನ್ನ ಆಯುಷ್ಯವನ್ನು ನನ್ನ ಅಣ್ಣನಿಗೆ ಕೊಡು ...ಯಾ ಮೌಲಾ....ನಿನ್ನ ರಸೂಲನ ಸದಖಾ (ಪ್ರಸಾದ)...." ಅವರು ಪಾಠ ನೆನಪಿರದ ಮಗುವಿನಂತೆ ಸಿಟ್ಟಿಗೆದ್ದು ಹೇಳಿದರು.

ಎಲ್ಲರ ಮುಖಗಳು ಬಿಳಿಚಿದವು. ಅಮ್ಮಾನ ಕಾಲುಗಳ ಶಕ್ತಿ ಕುಸಿಯಿತು. ಇಂದು ಬಿಚ್ಚೂ ಸೋದರತ್ತೆಯ ಬಾಯಿಯಿಂದ ಅಣ್ಣನಿಗೆ ಒಂದು ಶಾಪವೂ ಹೊರಬೀಳಲಿಲ್ಲ.

ಕೇವಲ ಅಬ್ಬಾ ಮಾತ್ರ ಮುಗುಳುನಗುತ್ತಿದ್ದರು, ಅವರು ಶಪಿಸುವದನ್ನು ಕೇಳಿ ಮುಗುಳುನಗುತ್ತಿದ್ದ ಹಾಗೆ.

ನಿಜ, ತಂಗಿಯ ಶಾಪಗಳು ಅಣ್ಣನಿಗೆ ತಾಕುವದಿಲ್ಲ. ಅವು ತಾಯಿಯ ಹಾಲಿನಲ್ಲಿ ಅದ್ದಲ್ಪಟ್ಟಿರುತ್ತವೆ.

# ಶಬ್ದಕೋಶ

ಈ ಸಂಕಲನದಲ್ಲಿ ಬಹುವಾಗಿ ಸಂಬಂಧಸೂಚಕ ಇಲ್ಲವೆ ಆಚಾರಸೂಚಕಗಳಾದಂತಹ ಕೆಲವು ಮೂಲದ ಉರ್ದೂ ಪದಗಳನ್ನು ಅವು ಇದ್ದಂತೆಯೇ ಉಳಿಸಿಕೊಳ್ಳಲಾಗಿದೆ. ಅವುಗಳಲ್ಲಿ ಅನೇಕವು ಸುಲಭವಾಗಿ ಕನ್ನಡಕ್ಕೆ ಭಾಷಾಂತರವಾಗುವಂತಹವಲ್ಲ. ಅಲ್ಲದೆ, ಆ ಪದಗಳನ್ನು ಇದ್ದಂತೆಯೇ ಬಳಸುವದರಿಂದ ಕಥೆಗಳ ವಾತಾವರಣಕ್ಕೆ ಹೆಚ್ಚಿನ ಪುಷ್ಟಿಯು ದೊರೆಯುತ್ತದೆಂದು ಅನಿಸಿದೆ. ಅಕಾರಾದಿಯಾಗಿ ಆ ಪದಗಳ ವಿವರಣೆಯನ್ನು ಈ ಕೆಳಗೆ ಕೊಡಲಾಗಿದೆ :

ಆಪಾ : ಅಕ್ಕ.
ಆಲಿಮ್ : ಪಂಡಿತ.
ಈದಗಾಹ್ : ಈದ್ ಹಬ್ಬದ ದಿನ ನಮಾಜ ಮಾಡಲು ಹೋಗುವ ಸ್ಥಳ.
ಕಜರಿ : ಮಿರ್ಜಾಪುರ ಭಾಗದ ಹೋಳಿ ಗೀತೆ.
ಕಫನ್ : ಪ್ರೇತ ವಸ್ತ್ರ.
ಕಲಾಕಂದ್ : ಒಂದು ಸಿಹಿ ಪದಾರ್ಥ.
ಕಲೀ : ಮೂರು ಮೂಲೆಯಾಗಿ ಕತ್ತರಿಸಿದ ಬಟ್ಟೆಯ ತುಂಡು.
ಖತಾಯಿ : ಒಂದು ಬಗೆಯ ಮಿಠಾಯಿ.
ಖರಅ : ಒಂದು ವಿಷಯವನ್ನು ನಿಶ್ಚಯ ಮಾಡುವಾಗ, ಕೆಲವೊಂದು ಸಲ, ಚೀಟಿಗಳಲ್ಲಿ ಹೆಸರು ಇಲ್ಲವೆ ವಿಷಯ ಬರೆದು ಕೂಡಿ ಹಾಕಿ ಮಗುವಿನಿಂದ ಒಂದು ಚೀಟಿಯನ್ನು ಎತ್ತಿಸುವ ವಿಧಿ.
ಖಾಲಾ : ಚಿಕ್ಕಮ್ಮ, ದೊಡ್ಡಮ್ಮ.
ಖೂಬಾನಿ : ಸಕ್ಕರೆ ಬದಾಮು.
ಗಿರ್‍ಹಾ : ಒಂದು ಗಜದ ಹದಿನಾರನೆಯ ಭಾಗ.
ಗುಲ್ನಾರ : ದಾಳಿಂಬ ಜಾತಿಯ ಗಿಡ. ಇದರಲ್ಲಿ ಕೇವಲ ಕೆಂಪುಕೆಂಪಾದ ಹೂಗಳು ಅರಳುತ್ತವೆ; ಫಲವಾಗುವದಿಲ್ಲ.
ಗೋಟ್ : ಅಂಚು, ದಂಡೆ.
ಚಚಾ, ಚಾಚಾ : ಚಿಕ್ಕಪ್ಪ; ಗಂಡಸರಲ್ಲಿ ಹಿರಿಯರಿಗೆ ಸಲ್ಲುವ ಪ್ರೀತಿಸೂಚಕ ಸಂಬೋಧನೆ.
ಚಾಲಾ : ಮದುವೆಯ ನಂತರ ಮದುಮಗಳು ಗಂಡನ ಮನೆಯಿಂದ ಮೊದಲ ನಾಲ್ಕು ಸಲ ತವರುಮನೆಗೆ ಹೋಗುವ ಕ್ರಮ.

ಚೌಥಿ : ಮದುವೆಯ ಒಂದು ಆಚಾರ. ಮದುವೆಯ ಮೂರನೆಯ ದಿನ ಮಾಡುವ ಒಂದು ಕ್ರಮ. ಆ ದಿನ ಒಂದು ವಿಶೇಷ ಉಡುಪನ್ನು ವಧು ಧರಿಸುತ್ತಾಳೆ: ಅದಕ್ಕೆ ಚೌಥಿಯ ಉಡುಪು ಎನ್ನುತ್ತಾರೆ.

ಛಟ್ಟಿ : ಮಗು ಹುಟ್ಟಿದ ಆರನೆಯ ದಿನ ಮಾಡುವ ವಿಧಿ.

ಛೂಛಕ : ಬಾಣಂತಿಯ ಕೋಣೆಯ ಒಂದು ಆಚಾರ.

ಜರದಾಲೂ : ಒಂದು ಬಗೆಯ ಹಳದಿ ವರ್ಣದ ಒಣ ಹಣ್ಣು.

ಜಹೇಜ್, ದಹೇಜ್: ವಧು ತವರುಮನೆಯಿಂದ ತರುವ ಸಂಪತ್ತು.

ಡೋಮನಿ : ಪರ್ದಾ ಮಾಡುವ ಹೆಂಗಸರಲ್ಲಿ ಕುಣಿಯುವ ಹೆಣ್ಣು.

ತೊಬಾ, ತೌಬಾ : ಕೆಟ್ಟ ಕೆಲಸವನ್ನು ಮತ್ತೊಮ್ಮೆ ಮಾಡುವದಿಲ್ಲೆಂದು ಪ್ರತಿಜ್ಞೆ ಮಾಡುವದು.

ದಧಿಯಾಲ್ : ತಂದೆಯ ಕುಲ, ವಂಶ.

ದಾದಾ : ತಂದೆಯ ತಂದೆ. ಆದರಸೂಚಕ ಪದ.

ದಾದಿ : ತಂದೆಯ ತಾಯಿ.

ದಾಲಾನ್ : ದೊಡ್ಡ ಕೋಣೆ. ಅದರಲ್ಲಿ ಮೂರು ಬಾಗಿಲುಗಳಿರುತ್ತವೆ.

ದುಪ್ಪಟ್ಟಾ ಬದಲ್ ಬಹನ್ : ರಕ್ತ ಸಂಬಂಧವಿಲ್ಲದೆ, ಸ್ನೇಹದಲ್ಲಿ ದುಪ್ಪಟ್ಟಾ ಬದಲಿಸಿಕೊಂಡು ಸೋದರಿಯಾಗಿ ಇರುವಾಕೆ.

ನನ್ಹಿಯಾಲ್ : ತಾಯಿಯ ವಂಶ.

ನಾನಾ : ತಾಯಿಯ ತಂದೆ.

ನಾನಿ : ತಾಯಿಯ ತಾಯಿ.

ನಿಕಾಹ್ : ಮದುವೆ.

ಪರನಾನಾ : ತಾಯಿಯ ಅಜ್ಜ.

ಫೂಫಿ : ಸೋದರತ್ತೆ.

ಬಚ್ಚಿ : ಅಳತೆಯಿಂದ ಕತ್ತರಿಸಲ್ಪಟ್ಟ ಬಟ್ಟೆಯ ತುಂಡುಗಳು.

ಬನಾ : ಮದುಮಗ.

ಬರಾತ್, ಬಾರಾತ್: ಮದುಮಗನ ಮೆರವಣಿಗೆ.

ಬರಿ : ಮದುಮಗನು ಮದುಮಗಳಿಗೆ ಕೊಡಬೇಕಾದ ಸಾಮಾನುಗಳು—ಬಟ್ಟೆ, ಆಭರಣ, ಮಿಠಾಯಿ, ಹಣ್ಣು, ಸಕ್ಕರೆ, ದ್ರಾಕ್ಷಿ....ಮುಂತಾದವುಗಳು ಮದುವೆಯ ಹಿಂದಿನ ದಿನ ಇವುಗಳನ್ನು ಕೊಡುವ ಕ್ರಮಕ್ಕೆ ಸಾಚಕ್ ಅನ್ನುತ್ತಾರೆ.

ಬಾಚಿ : ಕೆಂಡದ ಮೇಲೆ ಸುಟ್ಟ ರೊಟ್ಟಿಯ ಸಣ್ಣ ತುಂಡುಗಳು.

| | | |
|---|---|---|
| ಬಿಸ್ಮಿಲ್ಲಾದ ದಿನ | : | ಮಗುವಿಗೆ ಅಕ್ಷರ ಕಲಿಸುವ ಶುಭ ದಿನ. |
| ಬೂವಾ | : | ಸೋದರತ್ತೆ. |
| ಮಷಾತಾ | : | ಕೇಶ ಶೃಂಗಾರ ಮಾಡುವಾಕೆ. |
| ಮಹರ್ | : | ನಿಕಾಹ್‌ದ ಸಮಯಕ್ಕೆ ಮದುಮಗನ ಜವಾಬುದಾರಿಯ ಸಂಬಂಧ ವಧುವಿಗೆ ಕೊಡಬೇಕೆಂದು ನಿರ್ಧರಿಸಿದ ಹಣ ಇಲ್ಲವೆ ಸಾಮಗ್ರಿ. |
| ಮಾಷಾ ಅಲ್ಲಾಹ್ | : | ಕೆಟ್ಟ ಕಣ್ಣುಗಳಿಂದ ದೇವರು ರಕ್ಷಿಸಲಿ. |
| ಮಿಂಯಾ | : | ಮಾವ; ಮುಸಲಮಾನರಲ್ಲಿ ಹಿರಿಯರನ್ನು ಸಲಿಗೆಯಿಂದ ಸಂಬೋಧಿಸಲು ಬಳಸುವ ಪದ. |
| ಮುಂಹ್ ಬೋಲಿ ಬಹನ್ | : | ರಕ್ತ ಸಂಬಂಧವಿಲ್ಲದ, ಸ್ನೇಹದಲ್ಲಿ ಸೋದರಿಯಾಗಿ ಇರುವಾಕೆ. |
| ಮುರಷಿದ್ | : | ಧರ್ಮಗುರು. |
| ಮುಜಾವರ್ | : | ಪೂಜಾರಿ. |
| ಯೂಸುಫ್ | : | ಹಜರತ್ ಯಾಕೂಬ್‌ರ ಮಗ. ಅಪ್ರತಿಮ ಚೆಲುವನು. |
| ರಸದ್ | : | ಆಹಾರ ಸಾಮಗ್ರಿ. |
| ಶಗುನ್ | : | ಶಕುನ; ಹೆಣ್ಣು ಕೊಡಲು ಒಪ್ಪಿರುವ ಸಂಕೇತವಾಗಿ ಹೆಣ್ಣಿನ ತಂದೆತಾಯಿಗಳು ಗಂಡಿನ ತಂದೆತಾಯಿಗಳಿಗೆ ಸಾಂಪ್ರದಾಯಿಕವಾಗಿ ಕಳಿಸಿಕೊಡುವ ಕಾಣಿಕೆ. |
| ಶಬ್ನಮಿ | : | ಬಹಳ ತಿಳುವಾದ ಬಟ್ಟೆ. |
| ಶೋಹರ್ | : | ಪತಿ. |
| ಸಲ್ಮಾ ಸಿತಾರ | : | ಒಂದು ಬಗೆಯ ಜರತಾರಿ. |
| ಸಹದರಿ | : | ಮೂರು ಬಾಗಿಲುಗಳು ಇರುವ ಕೋಣೆ. |
| ಸಾಲಾ | : | ಹೆಂಡತಿಯ ಸೋದರ. |
| ಸಾಲಿ | : | ಹೆಂಡತಿಯ ಸೋದರಿ. |
| ಸುಹಾಗ್ | : | ಸೌಭಾಗ್ಯ. |

Printed at Taj Printer, 69 Najafgarh Road Industrial Area, New Delhi